# ಮುಗಿದ ಯುದ್ಧ

ಲೇಖಕ:

**ಶಿವರಾಮ ಕಾರಂತ**



[ದ್ವಿತೀಯ ಮುದ್ರಣ]

1948







ಪ್ರಕಾಶಕರು:

ಹರ್ಷ ಮುದ್ರಣ, ಪ್ರಕಟಣಾಲಯ; ಪುತ್ತೂರು, ದ. ಕ.

ಬೆಲೆ/- **4** ರೂ.

# ಮುನ್ನುಡಿ

"ಮುಗಿದ ಯುದ್ಧ"ವನ್ನು ಬರೆದು ಸ್ವಲ್ಪ ಕಾಲವಾಯಿತು. ಈಗ ಮಹಾಯುದ್ಧವೇ ಮುಗಿದಿದೆ. ಇದು ಮುಗಿದುದು, ಇಟಲಿಯಲ್ಲಿ ಮಿತ್ರ ರಾಷ್ಟ್ರಗಳಿಗೆ ಜಯವುಂಟಾದಾಗ. ಅಲ್ಲಿಂದ ಮುಂದೆ, ಈ ಗ್ರಂಥದಲ್ಲಿ ಚಿತ್ರಿಸಿದ ನಮ್ಮಜಿಲ್ಲೆಯ 'ಅನ್ನ' ಪ್ರಶ್ನೆಯು ತುಸು ಶಿಥಿಲವಾಗಿ ಬಂದಿದೆ ಯಾದರೂ, ಕಥಾನಾಯಕನ ಅವಸಾನ ಆ ಮೊದಲೇನೆ. ಕಥಾ ಸರ ಣಿಯ ಮುಖ್ಯ ವಿಷಯವೇ, ಒಬ್ಬ ಬಡ ಉಪಾಧ್ಯಾಯನ ಜೀವನ ಚಿತ್ರ ವನ್ನು ಕೊಡುವುದು. ಈ ಮಹಾ ಯುದ್ಧಕ್ಕೆ ಶಾಲಾ ಉಪಾಧ್ಯಾಯರು ಬಲಿಯಾದಷ್ಟು ಹಾನಿಯಿಂದ, ಇನ್ನಾರೂ ಆಗಿಲ್ಲ. ಆ ಮೂಕ ಪ್ರಾಣಿ ಗಳ ಕೂಗನ್ನು ಮಾರ್ದನಿಸುವುದು ಈ ಚಿತ್ರ.

ಯುದ್ಧ ಪೂರ್ವದಲ್ಲೇ ಈ ವರ್ಗದ ಬಡತನ ಸಾಕಷ್ಟು ಇತ್ತು. ಯುದ್ಧ, ತನ್ನ ಕೊಡಲಿ ಪೆಟ್ಟನ್ನು ಹೊರಿಸಿ—ಕೆಲಸವನ್ನು ಸುಲಭ ಮಾಡಿತು. ಸಾಮಾನ್ಯನಾದ ಒಬ್ಬ ಉಪಾಧ್ಯಾಯ, ತನ್ನ ಕುಟುಂಬದ ಬಡತನ, ಹಳ್ಳಿಗಳಲ್ಲಿನ ರಾಜಕೀಯ, ಮೇಲಿನವರ ರಾಜ್ಯಭಾರಗಳನ್ನು ಹೇಗೆ ಎದುರಿಸಿದ, ಹೇಗೆ ತನ್ನ ಹಲವಾರು ಸವಿಯಾದ ಆಕಾಂಕ್ಷೆಗಳಿಗೆ ತಿಲಾಂಜಲಿ ನೀಡುತ್ತ ಬಂದ, ಕೊನೆಗೆ ಆ ಜೀವನ ಎಷ್ಟು ಬರಡೂ, ಅಸಹನೀಯವೂ ಆಯಿತು—ಎಂದು ಇಲ್ಲಿ ಹೇಳಿದ್ದೇನೆ.

ಈ ಚಿತ್ರಣವು ಯಥಾತ್ಮಿಕವಾಗುವಂತೆ ಕಾಣಲು-ನಮ್ಮಜಿಲ್ಲೆಯ ಪರಿಚಿತ ಊರುಗಳ ಹೆಸರು, ಹುದ್ದೆ, ಜಾತಿ, ಸಂಸ್ಥೆಗಳನ್ನು ಸೂಚಿಸ ಬೇಕಾಯಿತಾದರೂ, ಯಾವೊಂದು ವ್ಯಕ್ತಿಸಂಸ್ಥೆಯನ್ನು ಬೆರಳಿಟ್ಟು ತೋರಿಸಿ ಅವನ ಜಾತಿ ನೀತಿಯ ವಿಮರ್ಶೆ ಮಾಡಲು ನಾನು ಬಯ ಸಿಲ್ಲ. ಇಲ್ಲಿ ಕಂಡು ಬರುವ ಅನುಭವದ ಚಿತ್ರಣ, ನಿಮ್ಮೆಲ್ಲರ ಕಣ್ಣಿಗೆ ಅಲ್ಲಿಷ್ಟು ಇಲ್ಲಿಷ್ಟು ಬಿದ್ದುದೇ. ಅದೊಂದು ನವೀನವಲ್ಲ.

ಇನ್ನೊಂದು ಮಾತು—ಇಲ್ಲಿನ ಕಥಾನಾಯಕನ ದೌರ್ಬಲ್ಯದ ವಿಚಾರದಲ್ಲಿ, "ಹಾದರದ ಪ್ರಕರಣದಲ್ಲಿ." ಈ ಬರೆಹ ಬರೆದಾದ ಬಳಿಕ ಬರೆದು ಅಚ್ಚಾದುದು "ಹೆತ್ತಳಾ ತಾಯಿ." ಅದಕ್ಕೆ ನಾನು ಮುನ್ನುಡಿ ಯನ್ನು ಬರೆಯಲಿಲ್ಲ. ಅಲ್ಲಿಯೂ 'ಹಾದರ'ದ ಗಾಳಿ ಬೀಸುತ್ತದೆ.

ಹೀಗೆಂದು ನಮ್ಮ ಮಿತ್ರರಲ್ಲಿ ಒಬ್ಬರು, ರೇಗಿ ಬರೆದಿದ್ದಾರೆ. ಇದು ಸ್ತ್ರೀ ಜಗತ್ತಿನ ಅಪಮಾನವೆಂದೂ ತಿಳಿದಿದ್ದಾರೆ. ಅದರಂತೆ ಇಲ್ಲಿಯೂ ಅಚ್ಯುತ (ಕಥಾನಾಯಕ)ನ ಚಿತ್ರ ಕಂಡು, ಪುರುಷಲೋಕ ಕುಪಿತವಾಗಬಹುದು.

ಲೈಂಗಿಕ ಪ್ರಶ್ನೆ, ಅನಾದಿಯ ಪ್ರಶ್ನೆ. ಅನಾದಿ ಕಾಲದ ನರನಾರಿಯರೂ ಇಂದಿನ ನರನಾರಿಯರೂ ಅದರ ಭೀತಿಯಿಂದ ಮುಕ್ತರಾಗಿಲ್ಲ. ಇಂದು ಕಣ್ದೆರೆದು ನೋಡುವವನಿಗೆ, ಅದು ಪ್ರತಿಯೊಂದು ಜೀವನವನ್ನು ತಳಮಳಿಸುವುದು ಕಾಣುತ್ತಿದೆ. ಗ್ರಂಥಸ್ಥ ನೀತಿಗೂ, ಶರೀರದ ನೀತಿಗೂ ನಾವು ಮೇಳಕಾಣುತ್ತಲಿಲ್ಲ. ಮುಚ್ಚುಮರೆಯ ತೆರೆಯನ್ನು ಹೊದೆಯಿಸಿದ್ದೇವೆ. ಮೇಲೆ ಭಾವಾವೇಶದ ಕೆಂಗಾಜಿನಿಂದ-ಜಗತ್ತನ್ನು ನೋಡಿ ನಾವು ಆದರ್ಶಗಳನ್ನು ಕಲ್ಪಿಸುತ್ತಿದ್ದೇವೆ.

ಲೈಂಗಿಕ ಪ್ರಶ್ನೆ ಕಾದಂಬರಿಯಲ್ಲಿ ಬರಬಾರದೇ?-ಜೀವನವನ್ನು ಕಾಡುವ ಎಲ್ಲ ಪ್ರಶ್ನೆಗಳೂ ಬರಬೇಕು. ಯಾವುವು ತೀರ ಸೂಕ್ಷ್ಮವಾದ, ಗಹನವಾದ ವಿಷಯವೋ ಅವನ್ನು ಅಲ್ಲಗಳೆಯುವುದರಿಂದಲೂ ಹಿತವಿಲ್ಲ; ಭೇತಾಳವಾಗಿ ತೋರಿಸಿದರೂ ಹಿತವಿಲ್ಲ. ಲೈಂಗಿಕ ಪ್ರಶ್ನೆ ಆ ತೆರನದು. ಒಂದೆಡೆ ಅದು-ಆಧುನಿಕ, ಸ್ವಯಂಕೃತ 'ಮನು'ಗಳ ದಂಡದೆದುರು ನಿಂತಿದೆ. ಇನ್ನೊಂದೆಡೆ ನಿರಂಕುಶ ವಿಲಾಸಪ್ರಿಯರ ಆರಾಧನೆಗೆ ಒಳಗಾಗಿದೆ. ಇವೆರಡೂ 'ಅನೀತಿ'ಗಳೇನೆ. ಶ್ಲೀಲ, ಅಶ್ಲೀಲದ ಭೂತ ಹುಟ್ಟುವುದು ವಾಸ್ತವ ಸ್ಥಿತಿಯ ತುಚ್ಛೀಕಾರ ಇಲ್ಲವೆ ಪೂಜನೆಗಳಿಂದ.

ನನ್ನ ಕೆಲಸ-ಆ ಪ್ರಶ್ನೆಯ ಹಿಂದು ಮುಂದನ್ನು ತಿಳಿಯುವುದು. ಒಂದು ಮನೋಧರ್ಮದ ವ್ಯಕ್ತಿ, ತನ್ನ ಮುಂದಿನ ಆವರಣದಲ್ಲಿ ಆ ಪ್ರಶ್ನೆಯನ್ನು ಹೇಗೆ ಎದುರಿಸುವನೆಂದು ಪರಿಶೀಲಿಸುವುದು. ನಾನು ನನ್ನ ಬರಹದಲ್ಲಿ ಲೈಂಗಿಕ ಸಮಸ್ಯೆಯನ್ನು ತುಚ್ಛೀಕರಿಸಲಾರೆ. ಅದನ್ನು ಪೂಜಿಸಲೂ ಆರೆ. ಅದರ ಇತಿ ಮಿತಿಗಳನ್ನು ತಿಳಿದು ಚಿತ್ರಿಸುವುದು, ಒಂದು ಮುಖ್ಯ ಕೆಲಸವೇ.

ಈ ತನಕ ಕನ್ನಡ ನಾಡಿನ ಓದುಗರು ನನ್ನ ವಿಷಯದಲ್ಲಿ ತೋರಿದ ಸಹನೆಗೆ ಈ ಬರಹವೂ ತಕ್ಕುದೆಂದು ನಂಬಿ ವಿರಮಿಸುತ್ತೇನೆ.

22 - 9 - 45
ಪುತ್ತೂರು

ಇತಿ,

**ಶಿವರಾಮ ಕಾರಂತ**

# ಮುಗಿದ ಯುದ್ಧ



ಂದಣ ಸಂಜೆ ಅಷ್ಟು ಮುದ್ದಾಗಿತ್ತು; ದಿಗಂತವು ಕಡು ನೀಲವಾಗಿತ್ತು; ಎಳೆಗಾಳಿ ಬೀಸುತ್ತಿತ್ತು; ಶಿವರಾತ್ರಿಯ ಚಳಿಯು ನಡುಕಹುಟ್ಟಿಸುತ್ತಿದ್ದರೂ ಉತ್ಸಾಹಗೊಳಿಸುತ್ತಿತ್ತು. ಸುತ್ತಲಿನ ಗುಡ್ಡಗಳೆಲ್ಲ ತಲೆ ಸುಟ್ಟುಕೊಂಡಿದ್ದರೂ, ಕಣ್ಣಿಗೆ ಕ್ರೂರವಾಗಿರಲಿಲ್ಲ. ಅವುಗಳ ಮೇಲೆ ಬಿಸಿಲ್ಗುದುರೆಗಳು ಕುಣಿದಾಡುತ್ತಿರಲಿಲ್ಲ. ಮರದ ಎಲೆಗಳು ಉದುರಿ ಬೋಳಾಗಿದ್ದರೂ ಊರಿನ ಕಾಡುಗಳೆಲ್ಲವೂ ಬರಿದೆಂಬಂತಿರಲಿಲ್ಲ. ನಿನ್ನೆಯ ಸಂಜೆ, ರಾತ್ರಿಗಳು ಅಚ್ಯುತನ ಪಾಲಿಗೆ ಬತ್ತಲಾರದ ಉತ್ಸಾಹದ ಬುಗ್ಗೆಯಲ್ಲಿ ನಲಿದಾಡಿದಂತಿದ್ದುವು. ಹಾಗಿಲ್ಲವಾದರೆ ಅವನು, ಅವನ ಗೆಳೆಯನಾದ ನಾಗರಾಜ-ಇಬ್ಬರೂ ಸೇರಿ ಉಪ್ಪಿನಂಗಡಿಗೆ ಹೋಗುತ್ತಿರಲಿಲ್ಲ. ಶಿವರಾತ್ರಿಯ ಮುಖೆ*ಯು ಅಚ್ಯುತನಿಗೆ ಹಬ್ಬವಾಗಿದ್ದರೂ, ಜೈನ ಬಾಲಕ ನಾಗರಾಜನಿಗೆ ಹೆಚ್ಚಿನ ಹುರುಪನ್ನು ಅದು ಕೊಡಬೇಕಾಗಿರಲಿಲ್ಲ. ಅವರು ಹೋದ ಉದ್ದೇಶ ಬೇರೆ- ನದಿಯ ಸ್ನಾನಕ್ಕಲ್ಲ, ಜಾತ್ರೆ, ಪರಿಷೆ ನೋಡುವುದಕ್ಕಲ್ಲ. ಒಂದು ಕಾಲದ ಗೆಳೆಯ ಮಾಮುಂಜಿಯೊಡನೆ ನಲಿದಾಡಲು.

ಮಾಮುಂಜಿ ಮಾಪಿಳ್ಳೆ; ನಾಗರಾಜ ಜೈನ; ಅಚ್ಯುತರಾಯ ಬ್ರಾಹ್ಮಣ. ಆದರೇನು? ಅವರ ರಾಜ್ಯದಲ್ಲಿ ಪಾಕಿಸ್ತಾನದ ಸುಳಿವಿರಲಿಲ್ಲ. ಇತರ ಜಾತಿ, ಕೋಮುಗಳ ಗಾಳಿ ಬೀಸಿರಲಿಲ್ಲ. ಹಿಂದೆ ಕಡಬದ ಶಾಲೆಯಲ್ಲಿ ಅವರು ಸಹಪಾಠಿಗಳಾಗಿ ಓದಿದ್ದರು. ಜತೆಯಲ್ಲಿ ಕುಳಿತು ಎಂಟನೆಯ ತರಗತಿಯಲ್ಲಿ ಬರಹ ಮುಗಿಸಿದ್ದರು. ವಿಧಿಯು ಮಾಮುಂಜಿಯನ್ನು ತನ್ನ ಊರುಮನೆಗೆ ಕರೆತಂದಿತ್ತು. ಅದು ಇದ್ದುದು ಉಪ್ಪಿನಂಗಡಿ ಪೇಟೆಯಲ್ಲಿ. ಬಡತನ ಅವನ ವಿದ್ಯೆಗೆ ಮಿತಿಯನ್ನು ತಂದಿತ್ತು.

* ಒಂದು ಸ್ಥಳೀಯ ಉತ್ಸವ

ಹೀಗಾಗಿ ಅವನು ಊರಿಗೆ ಬಂದು, ಜೀವನ ನಿರ್ವಹಣಕ್ಕೆ ಆಗಲೇನೆ ಕಾಲಊರಿದ್ದನು. ಈಗ ಬೀಡಾಗಳನ್ನು ಕಟ್ಟುವುದು; ಬೀಡಿಮಾರುವುದು, ಇವು ಅವನ ಮುಖ್ಯ ಉದ್ಯೋಗ. ಚಿಕ್ಕ ಅಂಗಡಿಯೊಂದನ್ನು ಇರಿಸಿಕೊಂಡು ಬಂದ ನಾಲ್ಕು ಕಾಸಿನ ಗಳಿಮೆಯಿಂದ ತನ್ನ ತಾಯಿ, ಇಬ್ಬರು ತಂಗಿಯರ ಉದರ ಪೋಷಣೆಯನ್ನು ನಿರ್ವಹಿಸುತ್ತಿದ್ದಾನೆ.

ಅವನ ತಂದೆ ಇವರೆಲ್ಲರನ್ನು ಬಿಟ್ಟು ಘಟ್ಟವನ್ನೋ, ನಗರವನ್ನೋ ಹಿಡಿದಿದ್ದಾನೆ. ಅವನಿಗೆ ದೂರದಲ್ಲಿ ಬೇರೊಬ್ಬ ಬೇಗಮುಳೂ ಇದ್ದಾಳೆ. ಹೀಗಾಗಿ ಹದಿನಾಲ್ಕು ವರ್ಷದ ಮಾಮುಂಜಿ ಸಂಸಾರಿಗನಾಗಿದ್ದಾನೆ. ಆತ ಧೈರ್ಯದಿಂದ ಜೀವನ ಸಂಗ್ರಾಮವನ್ನು ತೊಡಗಿದ್ದಾನೆ. ಆದರೆ ಹಳೆಯ ಎಳೆತನ ಹೋಗಿಲ್ಲ, ಗೆಳೆಯರ ಮರವೆಯಾಗಿಲ್ಲ. ಈ ಬಾರಿ ನಾಗರಾಜ, ಅಚ್ಯುತರು ಗಾಡಿಯೊಂದರಲ್ಲಿ ಕುಳಿತು, ರಾತ್ರಿಯ ಪಯಣ ಮುಗಿಸಿ, ನದಿದಂಡೆಗೆ ಬಂದಾಗಲೇ ಅವನ ಭೇಟಿಮಾಡಿದ್ದರು. "ಅಚ್ಚು, ನಾಗರಾಜ, ನೀವಿಬ್ಬರೂ ಮಖೆ ಜಾತ್ರೆಗೆ ನಮ್ಮೂರಿಗೆ ಬಾರದೆ ಇರಕೂಡದು. ಗಮ್ಮತ್ತುಮಾಡಿ ಸೊಕ್ಕುವ"—ಎಂದಿದ್ದನು. ಆತ ಮಾಪಿಳ್ಳೆಯಾದರೇನು? ಊರಿನ ಹಬ್ಬ ಅವನ ಹಬ್ಬ. ಆದರೆ ಅಚ್ಯುತನಿಗೇನೆ ಹೋಗಲು ಅನುಮಾನವಾಗಿತ್ತು. ಆತನೆಂದ "ಹೂಂ, ನಾವು ಹಬ್ಬಕ್ಕೆ ಬರುವುದು. ನೀನು ಬೀಡಾ ಬೀಡಿ ಎಂದು ಕೂಗುತ್ತ ತಿರುಗಾಡುವುದು" -ಎಂದಿದ್ದ. ಮಾಮುಂಜಿ "ಅದೇನಿಲ್ಲ. ನೀವು ಬಂದರೆ ನಾನು ವ್ಯಾಪಾರವನ್ನೇ ಆ ರಾತ್ರಿ ನಿಲ್ಲಿಸುತ್ತೇನೆ. ಮಖೆ ಮೂರುಂಟು; ಪರಿಷೆ ಎಲ್ಲಾ ದಿನಗಳಲ್ಲಿದೆ. ಹಾಗೆ ಒಂದು ದಿನದ ವ್ಯಾಪಾರ ನಿಂತರೆ ನಾನು ಮುಳುಗಿಯೇನೆ?" ಎಂದಿದ್ದ.

ಆ ಕರೆಯನ್ನು ಕೇಳಿ, ಮನ್ನಿಸಿ, ಸಂಜೆಗೇನೆ ಪುತ್ತೂರಿಂದ ನಾಗರಾಜ, ಅಚ್ಯುತರು ಉಪ್ಪಿನಂಗಡಿಗೆ ಹೊರಟಿದ್ದರು. ಬಸ್ಸಿನಲ್ಲಿ ಎಡೆಯಿಲ್ಲವೆಂದೋ, ಅಚ್ಯುತನಲ್ಲಿ ಕಾಸಿಲ್ಲವೆಂದೋ ಇಬ್ಬರೂ ಕಾಲುಹಾದಿಯಿಂದ ನಡೆದು, ನದಿಯ ಸಂಗಮದಲ್ಲಿ ಪಾದಾರ್ಪಣಮಾಡಿ, ನೀರಿಗೆ ಸನ್ಯಾಸ ಕೊಡಿಸಿದ್ದರು. ಅಲ್ಲಿಯೇ ಇಷ್ಟು ತಣ್ಣೀರು ಕುಡಿದು, ಮಾಮುಂಜಿಯನ್ನು ಪತ್ತೆಮಾಡಲು ಹೊರಟರು. ಜನರ ನೂಕುನುಗ್ಗಲಿನಲ್ಲಿ, ಕತ್ತಲೆ ಬೆಳಕುಗಳ ಕಣ್ಣುಮುಚ್ಚಾಳೆಯಲ್ಲಿ 'ಮಾಮುಂಜಿ'ಯೆಂದು ಗಂಟ

ಲೊಡೆದು ಕೂಗಿದ್ದಾಯಿತು. ಅಷ್ಟರಲ್ಲಿ ರಾತ್ರಿಯ ಒಂಬತ್ತು ಘಂಟೆಯೂ ಬಾರಿಸಿತು. ನಡೆದ ಬೇಗೆಯಿಂದ, ಗೆಳೆಯನು ಸಿಗದ ನಿರಾಶೆಯಿಂದ, ಕಣ್ಣು ಬಾಡುತ್ತ ಬಂದು, "ಇನ್ನು ಸತ್ತುಕೊಳ್ಳಲಿ; ನಾವು ಒಂದು ಗಳಿಗೆ ತೊಟ್ಟಿಲಲ್ಲಿ ಕುಳಿತು ಬರುವ. ಅನಂತರ ಹೊಯಿಗೆಯಲ್ಲಿ ಪಂಚೆ ಹಾಸಿ ನಿದ್ರೆ ಹೋಗುವ" ಎಂದು ನಿರ್ಧರಿಸಿದರು. ನಾಗರಾಜನಿಗೆ ಹಬ್ಬವನ್ನು ಡೌಲಾಗಿ ಕಳೆಯಲಿಲ್ಲವಲ್ಲ — ಎಂಬ ನಿರಾಶೆಯಾಯಿತು. 'ಒಳ್ಳೆಯ ಲೆಕ್ಕ ನಿನ್ನದು, ಬಂದವರು ಒಂದು ಕಾಫಿ ಕುಡಿಯಲಿಲ್ಲ, ಒಂದು ಬೀಡಾ ತಿನ್ನಲಿಲ್ಲ, ಒಂದು ಸಿಗರೇಟು ಹಾರಿಸಲಿಲ್ಲ. ಬರಿದೆ ತೊಟ್ಟಿಲಿಂದ ಹೊಯ್ಗೆ ದಂಡೆಗೆ ವರ್ಗವಾಗಿಬಿಟ್ಟರೆ ಏನಾದ ಹಾಗಾಯಿತು? ಮಾಮುಂಜಿಯನ್ನು ಕರೆದುಕೊಂಡು ಮೂವರೂ ಸೇರಿ ಕಾಫಿ ಕುಡಿಯುವ ಎಂದು ನಾನು ಯೋಚಿಸಿದ್ದೆ' ಎಂದನು.

ಅಚ್ಚುತನ ಕೈಯಲ್ಲಿ ಬಹಳ ದಮ್ಮಡಿಗಳು ಕುಣಿದಾಡುತ್ತಿರಲಿಲ್ಲ. ಗೆಳೆಯನೊಬ್ಬನಿಂದ ನಾಲ್ಕಾಣೆ ಎರವಾಗಿ ತಂದಿದ್ದ. ಅದನ್ನು ಮುಗಿಸದೆ ಮನೆಗೆ ಹೋದರೂ ವ್ಯಥೆಯಿರಲಿಲ್ಲ-ಎಂಬ ಮನಸ್ಸು. ಅವನಿಗೇನು? ಮಂದಿಯನ್ನು ಕಂಡರೆ ಮಹೋತ್ಸವವಾಗುತ್ತದೆ. ಮಾಮುಂಜಿ ಸಿಕ್ಕಿದ್ದರೆ ತೇರು ಎಳೆದಷ್ಟು ಕಳೆ ಬರುತ್ತಿತ್ತು. ಅದೊಂದು ಕೊರತೆ ಬಾಧಿಸುತ್ತಿತ್ತಲ್ಲದೆ, ನಾಗರಾಜನಂತೆ ಬೀಡಾ ಸಿಗರೇಟುಗಳನ್ನು ಹುಡಿಹಾರಿಸಬೇಕೆಂಬ ಹಂಬಲವಿರಲಿಲ್ಲ.

ಇತ್ತ, ಗೆಳೆಯನು 'ಬೀಡಾ ತಿನ್ನಲಿಲ್ಲ, ಕಾಫಿ ಕುಡಿಯಲಿಲ್ಲ'— ಎನ್ನುವಾಗ 'ತಮ್ಮ ಗೆಳೆಯ ಅಂಗಡಿಯೊಂದಕ್ಕೆ ಅಂಟಿಕೊಂಡು ಕುಳಿತಿರಬಹುದೇ' - ಎಂಬುದನ್ನು ಶೋಧಿಸುವ ಮನಸ್ಸಾಯಿತು. ನಾಗರಾಜನೆಂದ-"ಅವನ ಆಸೆ ಬಿಡು. ಅವನೆಲ್ಲೋ ನೆಂಟರ ಮನೆಗೆ ಸತ್ತಿರಬೇಕು. 'ನೀವು ಬರುವುದಾದರೆ ನನ್ನ ಅಂಗಡಿಗಿಂಗಡಿ ಬಂದ್' ಎಂದಿರಲಿಲ್ಲವೇ? ಅದು ಮೊದಲಿನ ಬ್ಯಾರಿಯಲ್ಲ. ಈಗ ಅವನು ಸಾಹುಕಾರನಾಗಿದ್ದಾನೆ. ಎಲ್ಲೋ ಫಾಯಿದೆ ಮಾಡಲು ಇನ್ನೊಂದೂರಿಗೆ ಹೋಗಿರಬೇಕು." ಅಚ್ಚುತನಿಗೆ ಈ ಟೀಕೆ ಹಿಡಿಸಲಿಲ್ಲ. "ನಿನ್ನ ಚೇಷ್ಟೆಗೆ ಬೆಂಕಿ ಬಿದ್ದಿತು. ಒಂದು ಸಾರಿ, ಕಡೆಯ ಸಾರಿ ಹೋಗಿ ಹುಡುಕುವ" ಎಂದನು. ಇಬ್ಬರೂ ತಿರುಗಿ ಜಾತ್ರೆಯಲ್ಲಿ ಅಂಗಡಿಗಳನ್ನು ಅರಸುತ್ತ, ಇಣುಕುತ್ತ ಹೊರಟರು.

ಹತ್ತು ಹೆಜ್ಜೆ ಇರಿಸುವುದರಲ್ಲೇನೆ ಮಾಮುಂಜಿ ಸೇಟರ ‘ಬೀಡಾ,ಬೀಡಿ ಸೋಡಾ ಶಾಪು’ ಕಾಣಿಸಿತು. ಆಗ್ಬೋಟಿಯಂತೆ ಹೊಗೆ ಕಾರುತ್ತಿದ್ದ ಚಿಮಿಣಿ ದೀಪದ ಉರಿಯಲ್ಲಿ, ಅವನು ಅವಸರ ಅವಸರವಾಗಿ ಬೀಡಾ ಕಟ್ಟುತ್ತಿದ್ದ. ಇವರನ್ನು ನೋಡಿದೊಡನೆ ಅವನ ಎದೆ ದಸಲ್ಲೆಂದಿತು. ನಾಗರಾಜ-“ಅಬ್ಬಾ, ಬ್ಯಾರಿಯೇ!* ಕಾಸು ಮಾಡುವುದರಲ್ಲಿ ಬಿದ್ದಿವೆ” -ಎಂದನು. ಮಾಮುಂಜಿ-“ಏನು ಮಾಡುವುದು ಮಹಾರಾಯ! ನನ್ನ ‘ಪ್ಲೇನೆ’ಲ್ಲ ತಲೆಕೆಳಗಾಯಿತು. ನಾನು ಈ ಹೊತ್ತು ಖಂಡಿತ ವ್ಯಾಪಾರ ಬೇಡವೆಂದು ನಿರ್ಣಯಿಸಿದ್ದೆ. ನನ್ನ ತಾಯಿಗೆ ಅದು ಗೊತ್ತಾಗಬೇಕೆ? ‘ಎಲ್ಲಿ-ಅಡಿಕೆ ತಂದದ್ದು ಸಾಲದಲ್ಲ! ಇವತ್ತು ಮಜಿಯಲ್ಲವೆ!’ ಎಂದು ಕೇಳತೊಡಗಿದಳು. ನಾನು ಈ ಹೊತ್ತು ಅಂಗಡಿ ಇರಿಸುವುದಿಲ್ಲ,ಎಂದೊಡನೆ ಕಸಬರಿಕೆಯನ್ನೇ ಮುಂದೆ ತಂದಳು.‘ಕಳೆದ ಸಂತೆಯಲ್ಲಿ ಒಂದೂವರೆ ರೂಪಾಯಿ ಬಂದುದು ಮರೆಯಿತೊ? ಇಷ್ಟರಲ್ಲೇ ಈ ಸೊಕ್ಕೇ? ಇವತ್ತಿನದೇ ದೊಡ್ಡ ಪರಿಷೆ’-ಎಂದಳು. ಉಪಾಯವಿಲ್ಲದೆ ಹೊತ್ತು ಬೈಯಾಗುವಾಗ‘ಎಲ್ಲಿ ಅಡಕೆ? ಎಲ್ಲಿ ವೀಳೆಯದೆಲೆ?’ಎಂದು ಹೊರಟೆ. ನೋಡು: ಕಟ್ಟಿದ ಬೀಡಾ ಹತ್ತು ಸಹ ಇಲ್ಲಿಲ್ಲ. ಕಟ್ಟಿದ ಹಾಗೆಯೇ ಮಾರುತ್ತಿವೆ. ನಿಮಗೆ ನನ್ನ ಮೇಲೆ ಎಷ್ಟು ಸಿಟ್ಟು ಬಂದಿತೋ ಏನೋ?” ಎಂದ.

“ಸಿಟ್ಟಿಲ್ಲ. ನಿನ್ನನ್ನು, ಕಣ್ಣೆರಡು ಬಿಟ್ಟು ಹೂತುಬಿಡಬೇಕೆಂದು ಕಂಡಿತು ನನಗೆ” ಎಂದ ನಾಗರಾಜ.

ಅಚ್ಯುತ-“ನಿನ್ನ ಚೇಷ್ಟೆ ಸಾಕು. ನಾವು ಇಲ್ಲಿಯೇ ಕುಳಿತಿರುವ-” ಎಂದು ಮಾಮುಂಜಿಯ ಮೋಟು ಬೆಂಚಿನ ಮೇಲೆ ಸ್ಥಾನಬದ್ಧರಾದರು. ‘ಬೇಕಾದರೆ ನಾವೂ ಒಂದೊಂದು ಬೀಡಾ ಕಟ್ಟಿದರಾಯಿತು’ ಎಂದರು.ಎಲ್ಲಕ್ಕೂ ಮೊದಲು ಹೊಟ್ಟೆಯ ಸಂತರ್ಪಣೆಯಾಗುವುದವಶ್ಯವಾಯಿತು. ಹೊಟೇಲಿಗೆ ಮಾಮುಂಜಿ ಬರಲಾರೆನೆಂದ. ನಾಗರಾಜ ತಿಂಡಿ ತರಲು ಹೋದ. ತಾನು ಸುಮ್ಮನಿರಬಾರದೆಂದು ಅಚ್ಯುತ ಬಾಳೆ ಹಣ್ಣುಗಳನ್ನು ತರಲು ಹೋದದ್ದಾಯಿತು. ಬಾಳೆಯ ಹಣ್ಣು, ಅಂಬೋಡೆಗಳು ಬರಲು,ಮೂವರೂ ಮೆಲ್ಲತೊಡಗಿದರು. ಅವರ ಮಾತುಗಳಿಂದ ತಿಂಡಿಯು ಗಂಟಲಿಗೆ ಸಿಗದಿದ್ದುದೇ ಆಶ್ಚರ್ಯ. ತಿಂಡಿ ಮುಗಿಯಿತು.

*ಬ್ಯಾರಿ= ವ್ಯಾಪಾರಿ, ವ್ಯಾಪಾರಿಯಾದ ಮಾಪಿಳ್ಳೆ, ಮಾಪಿಳ್ಳೆ.

ಬಾಯಾರಿಕೆಯು ಯೋಚನೆಹೊರಡುವ ಮೊದಲೇ ಮಾಮುಂಜಿ ಕೆಂಪು ರಂಗಿನ ಸೋಡಾವನ್ನು ಒಡೆದುದಾಯಿತು. ಅಚ್ಯುತ 'ಬೇಡ'ವೆಂದನು. ತನ್ನ ಗೆಳೆಯನ ಲಾಭ ಕರಗುವುದು ಅವನಿಗೆ ಇಷ್ಟವಿದ್ದಿಲ್ಲ. ನಾಗರಾಜ ನಗುತ್ತ "ನಿನಗೊಂದು ಇಲ್ಲದ ದಾಕ್ಷಿಣ್ಯ. ಉಪ್ಪಿನಂಗಡಿಯಲ್ಲಿ ಹೊಳೆಯು ನೀರಿಗೆ ಬರಗಾಲವೇ? ಈ ಬ್ಯಾರಿ ಅದನ್ನು ತುಂಬಿಸಿ ಆಮೇಲೆ ಒಂದಿಷ್ಟು ಗ್ಯಾಸು ಸೇರಿಸಿದೆ—" ಎಂದನು. ಮೂವರೂ ಕುಡಿದರು. ಆ ಮೇಲೆ ಒಂದೊಂದು ಬೀಡಾ ಅಗಿದರು. ಮಾಮುಂಜಿಯ ಮನಸ್ಸು ಇವರಿಗೆ ಉತ್ತರ ಕೊಡುವುದರ ಎಡೆಯಲ್ಲಿ ವ್ಯಾಪಾರ ಮಾಡುವುದರಲ್ಲೂ ಓಡುತ್ತಿತ್ತು. ನಾಗರಾಜನಿಗೆ ಸಿಗರೇಟು ಹಾರಿಸುವ-ಎಂದು ಆಸೆಯಾಯಿತು. ಅಲ್ಲೇ ಅಂಗಡಿಯಲ್ಲಿದ್ದ ಆನೆ ಮಾರ್ಕಿನ ಸಿಗರೇಟು ಪೆಟ್ಟಿಗೆಯಿಂದ ಮೂರು ಬತ್ತಿಗಳನ್ನು ತೆಗೆದನು. ಉಳಿದವರು ಬೇಡೆನ್ನುವುದರಲ್ಲಿ ಇವನು ಒಂದನ್ನು ಹೊತ್ತಿಸಿಯೂ ಆಯಿತು. ಅಚ್ಯುತನು ನಗುತ್ತ "ಒಂದು ಸಿಗರೇಟಿನ ಅಬ್ಬರ ಕಾಣಬಹುದಿತ್ತು. ಆದರೆ ಗ್ರಹಚಾರಕ್ಕೆ ನಮ್ಮ ಕೊಂಬಾರು, ಕಡಬದವರು ಜಾತ್ರೆಗೆ ಬಂದಿದ್ದರೆ, ನನ್ನ ಬಾಯಲ್ಲಿ ಸಿಗರೇಟನ್ನು ಕಂಡು, ನಮ್ಮ ಅಮ್ಮನಿಗೆ ಹೇಳಿದರೆ, ಒಂದು ಕೊಡಪಾನ ಕಣ್ಣೀರು ಬಿಕ್ಕಲಿಕ್ಕೆ ಅಡ್ಡಿಯಿಲ್ಲ' ಎಂದು ದಾಕ್ಷಿಣ್ಯವನ್ನು ತಾಳಿದನು. "ನೀನೊಬ್ಬ! ವರ್ಷಕ್ಕೊಂದು ಸಾರಿ ಎಳೆದರೆ ಯಾರೂ ಸಾಯುಲಿಕ್ಕಿಲ್ಲ. ನೀನು ಸಿಗರೇಟು ಎಳೆಯುವುದನ್ನು ಕಾಣಲು-ಕೊಂಬಾರಿನವರು ಇಲ್ಲಿಗೆ ಬರುವಂತೆಯೂ ಇಲ್ಲ"-ಎಂದ ನಾಗರಾಜ. ಸರಿ, ತ್ರಿಮೂರ್ತಿಗಳು ಧೂಮ್ರಪಾನ ಮಾಡಿದರು. ಅದೇನು ರುಚಿಸದೆ ಹೋದರೂ, ಹೊಗೆಯ ಸುಳಿ ಸುತ್ತುವಿಕೆಯನ್ನು ಕಂಡು ಹಿಗ್ಗಿದರು- ನಡುವೆ ಕೆಮ್ಮಿದರು. ಕೊನೆಗೆ 'ಈ ಬ್ಯಾರಿಅಂಗಡಿಯ ಸಿಗರೇಟು ಯಾವ ಮಣ್ಣಿಗೂ ಬಾರದ್ದು'-ಎಂದು ನಾಗರಾಜ ತೀರ್ಮಾನಿಸಿಯೂ ಆಯಿತು.

ಇಷ್ಟೆಲ್ಲ ಸರಿಯುವಾಗ ಹದಿನೊಂದು ಘಂಟೆಯಾದರೂ ಆಗಿರಬಹುದು. ಅನಂತರ ಅವರ ಸುಖದುಃಖದ ಹಾಳುಹರಟೆಗಳು ತೊಡಗಿದುವು. ಬೆಳಗಿನ ಜಾವದ ಕೋಳಿ ಕೂಗಿದರೂ ಯಾರ ಗಂಟಲೂ ಬತ್ತಲಿಲ್ಲ. ಅವರ ಕಣ್ಣಲ್ಲಿ ನಿದ್ದೆಯ ಸುಳಿವೂ ಹಾಯಲಿಲ್ಲ. ಮೂಡಣ ಬಾನು ಕೆಂಪಡರುವಾಗ, ರಾತ್ರಿ ಸರಿದುದರ ನೆನಪಾಯಿತು. "ಹೂಂ-ಮಾಮೂ,

ಈಗ ಹೊರಡುತ್ತೇವೆ" ಎಂದನು ನಾಗರಾಜ. "ಮಹಾರಾಯ, ಒಂದು ಸ್ನಾನ ಮಾಡಿ ಹೋಗುವ" ಎಂದನು ಅಚ್ಚುತ. ಕೊನೆಗೆ ಮೂವರೂ ಸೇರಿ 'ಕಾಫಿ ಸ್ನಾನ' ಮಾಡುವುದವಶ್ಯವೆಂದು ತೀರ್ಮಾನಿಸಿ, ಬಳಿಯ ಹೊಟೇಲೊಂದರಲ್ಲಿ ಫಲಾಹಾರ ಮುಗಿಸಿದರು. ಮಾಮುಂಜಿಯು ಬಲವಂತಮಾಡಿ, ಹೊಟೇಲಿನ ವೆಚ್ಚದ ನಾಲ್ಕೈದು ಆಣೆಗಳನ್ನು ತಾನೇ ಕೊಟ್ಟನು. 'ಇವರಿಂದ ಕೊಳ್ಳಬೇಡಿ'ರೆಂದು ಅಂಗಡಿಕಾರನಿಗೂ ಹೇಳಿದ್ದನು. ಅಲ್ಲಿಗೆ ಅವರೆಲ್ಲರ ವಿಧಾಯವಾಯಿತು. ತಿರುಗಿ ಎಪ್ರಿಲಃ ರಜೆಗೆ ಊರಿಗೆ ಹೋಗುವಾಗ, ಉಪ್ಪಿನಂಗಡಿಯಲ್ಲಿ ಮೂರು ದಿನ ಇರಬೇಕೆಂದು ಮಾಮುಂಜಿಯು ಆಮಂತ್ರಣವಿತ್ತನು. ಅದಕ್ಕೆ ಅಚ್ಚುತ, ನಾಗರಾಜರು 'ಹೂಂ' ಎಂದರು.

ಆ ದಿನ ಬೆಳಗ್ಗೆ ತೂರಾಡುತ್ತ, ಊರಿಗೆ ಮರಳುವ ಜನರೊಡನೆ, ತೇಲಿ ಸರಿಯುತ್ತ, ಅಂತು ಬೆಳಗಿನ ಒಂಬತ್ತು ಘಂಟೆಗೇನೆ ಪುತ್ತೂರನ್ನು ಸೇರಿದರು. ನಾಗರಾಜ ತನ್ನ ಸಂಬಂಧಿಯೋರ್ವರಲ್ಲಿಗೆ ಹೋದನು. ಅಚ್ಚುತ ತನ್ನ ನಿವಾಸದ ಹಾಸ್ಟೆಲಿಗೆ ಹೋದನು. ಅವನಂತೆ ಮುಖೆಗೆ ಹೋದ ಉಳಿದ ಬಾಲಕರು ಯಾರೂ ಹಾಸ್ಟೆಲಿಗೆ ಮರಳಿರಲಿಲ್ಲ. ಆ ದಿನ ಅವರಿಗೆ ರಜೆ ದೊರಕಿತ್ತು. ಈತ ಸ್ನಾನ ಮುಗಿಸಿ, ಗಂಜಿ ಊಟ ಮುಗಿಸಿ ಮಲಗಿಕೊಂಡನು. ಲೋಕವನ್ನು ಮರೆಸುವ ನಿದ್ರೆ ಅವನನ್ನು ಆವರಿಸಿತು. ನಿದ್ರೆಯಲ್ಲಿ ಮುಖೆಯ ಸೊಗಸು ನೂರ್ಮಡಿ ಮಿಕ್ಕಿ ಕಣ್ಣೆದುರಿಗೆ ಕುಣಿಯುತ್ತಿದ್ದಿರಬೇಕು. ಅವನ ತುಟಿಗಳು ಆಗಾಗ ಎಳೆ ನಗೆಯನ್ನು ಸೂಸುತ್ತಿದ್ದವು. ಮಧ್ಯಾಹ್ನದ ಊಟದ ಘಂಟೆ ಬಾರಿಸುವಾಗ ಅಚ್ಚುತನು ಮಹೋರಗದಂತೆ ಉಸಿರನ್ನು ಬುಸುಗುಟ್ಟುತ್ತಿದ್ದ. ಗೆಳೆಯನೊಬ್ಬನು ಅವನನ್ನು ಚೆನ್ನಾಗಿ ಕುಲುಕಿ ಎಚ್ಚರಿಸಿದನು. ಆತ 'ಆಂ' ಎಂದು ಕಣ್ಣು ಹಿಚುಕಿಕೊಂಡು ಕುಳಿತು ಯೋಚನೆಮಾಡತೊಡಗಿದನು. ಅರ್ಥವಾಯಿತು. ತಾನು ಕೊಂಬಾರು, ಕಡಬ, ಉಪ್ಪಿನಂಗಡಿ ಗ್ರಾಮಗಳಲ್ಲಿರದೆ ಕೇವಲ ಪುತ್ತೂರು ಹಾಸ್ಟೆಲಿನಲ್ಲೇನೆ ಇದ್ದೇನೆಂಬ ಜ್ಞಾನ ಉಂಟಾಯಿತು. ಊಟದ ಮನೆಗೆ ಧಾವಿಸಿ ಹೋಗಿ ಕುಳಿತ. ಕುಳಿತ ಮೇಲೆ ಬಟ್ಟಲು ಇರಿಸಿಕೊಂಡಿಲ್ಲ- ಎಂಬ ಎಚ್ಚರವಾಯಿತು. ಆಚೀಚಿನ ಬಾಲಕರು ನಕ್ಕರು. ಈತನೂ ನಕ್ಕು, ಬಟ್ಟಲನ್ನು ತಂದಿರಿಸಿಕೊಂಡನು. ತಿರು

ಗೊಮ್ಮೆ ನೀರಿನ ಥಾಲಿಯನ್ನು ತಂದಿರಿಸಿ ಕುಳಿತುಕೊಂಡ. ಆ ದಿನದ
ಮೇಲೋಗರಗಳು ಕಾರವಾಗಿದ್ದು ಏಗುವಿಕೆಯನ್ನು ತರಿಸದೆ ಹೋಗಿ
ದ್ದರೆ, ಅವನಿಗೆ ಊಟದ ಎಚ್ಚರವೂ ಆಗದೆ ಇರುತಿತ್ತು. ಅಂತು ನೀರು
ಕುಡಿದು, ಏಗಿ, ಬಿಕ್ಕಳಿಸಿ, ಮಜ್ಜಿಗೆ ಬರುವ ಹೊತ್ತಿಗೆ–'ಇದು ಮಾಮುಂ
ಜಿಯ ಬೀಡಾ ಅಂಗಡಿಯಲ್ಲ; ಹಾಸ್ಟೆಲಿನ ಭೋಜನ ಸಾಲೆ' ಎಂಬ
ನಿಜವಾದ ಅರಿವಾಯಿತು.

ಊಟವಾಗಿ ಎದ್ದು ಬಂದು ತನ್ನ ಕೊಟಡಿಯಲ್ಲಿ ಮಂಚದ ಮೇಲೆ
ಕುಳಿತನು; ಮನಸ್ಸು ಮಳೆಯಿಂದ ತೊಯ್ದ ಬೆಟ್ಟದ ಹುಲ್ಲಿನಂತೆ ಹಚ್ಚ
ಗಾಗಿತ್ತು. ಹಿಂದಿನ ದಿನದ ಸವಿಗನಸುಗಳು ಹಾಯ್ದು ಹೋಗುತಿದ್ದುವು.
ಆಗಷ್ಟೆ ಅವನ ಹಾಸ್ಟೆಲಿನ ವಾರ್ಡನರು—ಒಂದು ಲಕೋಟೆಯನ್ನು
ಅವನ ಮಂಚದ ಕಡೆಗೆ ಎಸೆದುಹೋಗಿದ್ದರು. ಅದನ್ನು ಆತ ಎತ್ತಿ
ಹಿಡಿದ. ಅಂಚೆಯ ಚೀಟಿ, ಮುದ್ರಿಕೆಗಳಿರಲಿಲ್ಲ. ಬರಹದಿಂದ, ತಮ್ಮ
ಊರಿನ ಪರಿಚಿತರೊಬ್ಬರ ಬರಹವೆಂದೂ, ಅದು ತಾಯಿ ಹೇಳಿ ಬರೆಯಿ
ಸಿದ ಕಾಗದವಿದ್ದಿರಬೇಕೆಂದೂ ಸ್ಪಷ್ಟವಾಯಿತು. ನಗುತ್ತ ಅದನ್ನು ಒಡೆ
ದನು. ಕಾಗದವನ್ನು ಓದಿಕೊಂಡ ಬಲು ಹೊತ್ತಿನ ತನಕ ಅಲ್ಲಿ ಬರೆದಿದ್ದ
ನಾಲ್ಕಾರು ಪಂಕ್ತಿಗಳನ್ನು ಎವೆಬಿಡದೆ ನೋಡತೊಡಗಿದ. ಎಷ್ಟು ಓದಿ
ದರೂ ಅವನಿಗೆ ಅದು ಅರ್ಥವಾಗುವಂತೆ ಕಾಣಿಸಲಿಲ್ಲ. ಬಳಿಕ ಕೊಟ
ಡಿಯ ಕದವಿಕ್ಕಿಕೊಂಡು, ಹಾಸಿಗೆಯನ್ನು ದಿಂಬಾಗಿರಿಸಿಕೊಂಡು, ಕಾಗ
ದವನ್ನು ಕೈಯಲ್ಲೇ ಹಿಡಿದು ಕುಳಿತನು. ಹಿಂದಣ ದಿನದ ಸವಿನೆನಪು
ಗಳು ಒಂದೊಂದೇ ಮರೆಯಾಗುತ್ತ ಬಂದುವು. ಮುಗಿಲುಗಳು ಒಂ
ದೊಂದೇ ಮಾಯವಾಗಲು, ಕತ್ತಲಿನ ಬಾನಲ್ಲಿ ಚುಕ್ಕಿಗಳು ತಾನಾಗಿ
ಎದ್ದು ಮೂಡುವಂತೆ, ಆ ಪತ್ರದಲ್ಲಿನ ಒಂದೊಂದು ಮಾತೂ ಕಣ್ಮುಂದೆ
ಮಿನುಗತೊಡಗಿತು. ತಾಯಿ ಹೊಸತಾಗಿ ಏನನ್ನೂ ಸೂಚಿಸಿರಲಿಲ್ಲ.
“ಮಗು, ಇನ್ನು ಮುಂದುವರಿಸಲು ನಮ್ಮಿಂದ ಸಾಧ್ಯವಾಗಲಾರದು. ಈ
ವರ್ಷ ಅಕ್ಕಿಗೆ ಮೂರುವರೆ ರೂಪಾಯಿ ಬೆಲೆಯೂ ಸಿಗುವ ಹಾಗಿಲ್ಲ.
‘ಮೂರಕ್ಕೆ ಕೊಡುತ್ತೀರಾ’ ಎಂದು ಕೇಳುವವರೇ ಎಲ್ಲ. ಹೀಗಿರುವಾಗ
ನೀನು ಮುಂದಲ ತಿಂಗಳಿನಲ್ಲೋ ಅದರ ಮುಂದಲ ತಿಂಗಳಿನಲ್ಲೋ
ಊರಿಗೆ ಬರುವವನು—ಎರಡು ತಿಂಗಳ ಮುಂಚೆಯೇ ಬಂದರೇನು?”

ಎಂದಿತ್ತು. "ಉಳಿದಷ್ಟು ಹಣ ಉಳಿಯಿತು. ಕಲಿತದ್ದು ಮರವೆಯಾಗು ವಂತಿಲ್ಲ. ಹೆಚ್ಚಿಗೆ ಕಲಿಸಲು ಬ್ರಹ್ಮ ಯೋಗ್ಯತೆಯನ್ನು ಕೊಟ್ಟಿಲ್ಲ"-ಎಂದು ಆಕೆ ತಿಳಿಸಿದ್ದಳು.

ಆತನಿಗೆ ಮನೆಯ ನೆನಪು ತೀರ ಆಯಿತು; ಚೆನ್ನಾಗಿ ಆಯಿತು. ಊರಲ್ಲಿ ಯಾರಿದ್ದಾರೆ? ತಂದೆ, ತಾಯರು, ಮಾತ್ರ. ತಂದೆ ಹಾಸಿಗೆ ಹಿಡಿ ದವರು; ಸಿತ್ಯ ವಾತ, ಬೇನೆಗಳ ತವರೂರು-ಎನಿಸಿಕೊಂಡಿದ್ದರು. ನಾಲ್ಕು ವರ್ಷಕ್ಕೆ ಮೊದಲು, ಅಂದರೆ ಅವರು ಚೆನ್ನಾಗಿದ್ದಾಗ ಅವರ ಮಾತು, ನಗುಗಳಿಂದ ಅವರ ಗ್ರಾಮವೆಲ್ಲ ನಗುವಂತಿತ್ತು. ಈಗ ಅವರು, ಮೇಲೆ ಬೀಳದ ಕಾಯಿಲೆಯಿಂದ ಮಲಗಿದ್ದರು. ಮನೆಯಲ್ಲಿ ಅವರ ಚಾಕರಿಗೆ ಹೆಂಡತಿ, ಅಚ್ಯುತನ ತಾಯಿ ಮಾತ್ರ. ಬಲು ಕಟ್ಟುಮಸ್ತಾದ ಜೀವಿ. ತುಂಬ ಉತ್ಸಾಹಿ; ಎಂತಹ ನೋವನ್ನೂ ಸಹಿಸುವ ಎದೆಗಾರ್ತಿ. ಆದರೂ ಅಚ್ಯುತ ಮನೆಯಲ್ಲಿರಲಿ, ತಂದೆಯ ಈ ಅಶಕ್ತತೆಯ ಕಾಲದಲ್ಲಿ ದೂರ ಇರುವುದು ಬೇಡವೆಂಬಾಸೆ. ಇತ್ತ ತಂದೆಗೆ, 'ತನ್ನ ದಿನವಾಯಿತು. ಅವನು ಅಲ್ಲಿರಲಿ, ಅವನು ಕಲಿಯುತ್ತಿರಲಿ. ನನ್ನ ಆಯುಷ್ಯ ಮರಳುವಂತಿಲ್ಲ; ಮನೆಗೆ ಕರೆಸಿಕೊಂಡು ಅವನ ವಿದ್ಯೆಯನ್ನು ಕೆಡಿಸಬಾರದೆ'ಂಬ ಹಂಬಲ. 'ಅವನ ಮೆಟ್ರಿಕ್ಯು ಆಗಲಿ; ಮುಂದೆ ಬಿ. ಎ. ಆಗಲಿ. ಆಸ್ತಿಯು ಕರಗುತ್ತ ದಾದರೂ ಅವನೇ ಒಂದು ಆಸ್ತಿ ತಮಗೆ ಎಂಬ ವಿಶ್ವಾಸ. ಅವರ ಹುಮ್ಮ ಸದ ದಿನಗಳಲ್ಲಿ ಅವರಂತಹ ಉದಾರಿ ಯಾರಿರಲಿಲ್ಲ. ಮನೆಗೆ ಬಂದವ ರ್ಯಾರಿಗೂ ಊಟ ಉಪಚಾರಗಳನ್ನು ಸಲ್ಲಿಸದೆ ಮರಳಿಸಿದವರಲ್ಲ. ಊರಿನ ಯಾವ ವಂತಿಗೆವಾಡಗಳಿಗೂ ಪಾಲು ಸಲಿಸದವರಲ್ಲ. ಈಗ ಅಶಕ್ತಿ ಬಂದಿದೆ. ಹಾಸುಗೆಯಿಂದ ಎದ್ದೇಳಲು ಆನಿಕೆ ಬೇಕು. ಕೋಲು ಬೇಕು. ಕೋಲಿನಂತಿರುವ ಜನ ಬೇಕು. ಹಾಗಿದ್ದರೆ ಮಾತ್ರ ನಿತ್ಯ ವಿಧಿಗಳಿಗಾಗಿ ಆಚೀಚೆ ಕದಲಬಹುದು. ಶರೀರವು ಜರ್ಜರಿತವಾಗಿ ಬಿಟ್ಟಿದೆ. ಒಂದು ಕಾಲದಲ್ಲಿ ಹೆಸರಾದ ಕೊಂಬಾರಿನ ಕೃಷ್ಣರಾಯರು ಶರತಲ್ಪಶಾಯಿ ಭೀಷ್ಮನಂತಾಗಿದ್ದಾರೆ. ಅವರ ಸಿರಿವಂತಿಕೆ ಕಳಚಿಪೋಗಿದೆ. ಒಂದೆರಡು ತುಂಡು ಆಸ್ತಿಗಳು ಈಗಲೇ ಸಾಲಗಾರರ ಪಾಲಾಗಿವೆ. ಕೊಟ್ಟವರಿಗೆ ಕೊಡಲಾರೆನೆನ್ನಲಾರದೆ, ನೂರರ ಬೆಲೆಯ ಮಾಲನ್ನು ಐವತ್ತಾರಕ್ಕಾದರೂ ಮಾರಿಕೊಂಡು, ಋಣ ತೀರಿಸುತ್ತ ಬಂದರು. ಈಗ ಉಳಿದುದೆಷ್ಟು

ಹೋದುದೆಷ್ಟು ಎಂಬ ನೆನಪೂ ಅವರಿಗಿಲ್ಲ. ಹೆಂಡತಿ ಲಕ್ಷ್ಮಮ್ಮ "ಅಕ್ಕಿ ಇಲ್ಲವಲ್ಲ. ಏನು ಮಾಡಲಿ, ರುಕ್ಮಯ್ಯ ಗೌಡನ ಗೇಣಿ ಬರಲಿಲ್ಲ" ಎಂದರೆ ಅದಕ್ಕೇನು? "ನಾರಾಯಣ ಗೌಡನ ಹತ್ತಿರ ತಂದು ಹಾಕಲು ಹೇಳು. ಅವನಿಗೇನು ಧಾಡಿಯೆ, ಚಿನ್ನದಂಥ ಗದ್ದೆಗಳನ್ನು ಸಾಗುವಳಿಗೆ ಕೊಟ್ಟಿರುವಾಗ!"-ಎನ್ನುತ್ತಾರೆ. ಅವರ ಹೆಂಡತಿ ನಗುತ್ತಾ "ನಾರಾಯಣ ಗೌಡನ ಭೂಮಿಯೇ! ಚಿನ್ನದಂಥಾದ್ದನ್ನು ಹಿತ್ತಾಳಿಯ ಕ್ರಯಕ್ಕೆ ಕಳೆದ ವರ್ಷ ಮಾರಿದ್ದು ಇಷ್ಟು ಬೇಗನೆ ಮರವೆಯಾಯಿತೇ" ಎಂದರೆ, ನಗುತ್ತಾರೆ. ಆಕೆಗೆ ಚಿಂತೆ ತೊಡಗುತ್ತದೆ- "ಅದಕ್ಕೇನೆ ಮಾಣಿಯನ್ನು ಕರೆಯಿಸಿ ಬಿಡುವ; ಮನೆಯ ಗೊತ್ತುಗುರಿ ಸ್ವಲ್ಪ ಅವನಿಗೂ ತಿಳಿಯಲಿ. ವರ್ಷ ಆಗಲಿಲ್ಲವೇ? ನನ್ನಿಂದ, ಹೆಣ್ಣು ಹೆಂಗಸಿಂದ ಓಡಾಡಲು ಆಗುತ್ತದೆಯೇ? ಈ ವರ್ಷವಂತು ಮನೆಯ ಖರ್ಚಿಗೆ ದೇವರೇ ಗತಿ. ಅಕ್ಕಿಗೆ ಮೂರು ರೂಪಾಯಿ ಬೆಲೆ ಬರುವಂತಿಲ್ಲ. ಕಂದಾಯ, ಅರಿವೆ, ಅಂಚಡಿ ಎಲ್ಲವೂ ಆಗಬೇಕು. ಯಾವುದೂ ಆಗಲಾರದು. ನಾನೊಬ್ಬಳೇ ಏನು ಮಾಡಿಯೇನು?" ಎನ್ನುತ್ತಾಳೆ.

ಕೃಷ್ಣರಾಯರು ಎಲ್ಲವನ್ನು ಕೇಳುತ್ತಾರೆ. ದುರ್ಬಲವಾದ ನಗೆ ನಗುತ್ತಾರೆ. "ಲಕ್ಷ್ಮಿ, ನಮಗಿರುವುದು ಅವನೊಬ್ಬ. ಮಗಳಿದ್ದಾಳೆ-ಅನ್ನಿ. ಅವಳ ಗಂಡನ ಮನೆಯ ತಾಪತ್ರಯವೇ ಸಾಕು; ನಮ್ಮದನ್ನು ಹೊರಿಸುವುದು ಬೇಡ. ಈಗ ಮಾಣಿಯನ್ನು ಕರೆಯಿಸಿ ಅವನ ಹದಿನೈದರಲ್ಲೇ ಮನೆಯ ಹೊರೆ ಹೊರಿಸಿ, ಮೂವತ್ತರಲ್ಲಿ ಅವನ ಕೂದಲು ನೆರೆಯಬೇಕೆ? ಅಲ್ಲಿ ಇರಲಿ ಅವನು. ಮನೆಗೆ ಬಂದರೆ, ಬಂದಾಗ ಚೆನ್ನಾಗಿ ಕಣ್ತುಂಬ ನೋಡುವ. ಅವನಿದ್ದರೆ ನನ್ನ ಕಾಯಿಲೆ ಗುಣವಾಗುತ್ತದೆಯೇ? ಹೋದ ಆಸ್ತಿ ಬರುತ್ತದೆಯೇ"-ಎನ್ನುತ್ತಾರೆ.

ಮುಂದೆ ಅರೆತಾಸಿಗೆ, ಅವರಲ್ಲಿಯೂ ತನ್ನ ಮಗುವನ್ನು ಕಾಣುವ ಬಯಕೆಯು ಮೂಡುತ್ತದೆ. 'ಮಗುವಿಗೆ ಮೆಟ್ರಿಕ್ ಆದರೂ ಸಾಕಿತ್ತು. ಒಂದು ಹಂತಕ್ಕೆ ಬಂದಹಾಗೆ ಆಗುತ್ತಿತ್ತು. ಮುಂದೆ ನಾನೂ ಉಳಿಯುವುದು ಕಷ್ಟ. ಅಷ್ಟರಲ್ಲಿ ಒಂದು ಲಗ್ನ ಮಾಡಿಸಿ, ನಾನು ಕಣ್ಣು ಮುಚ್ಚುತ್ತೇನೆ' ಎನ್ನುತ್ತಾರೆ. ಬಿ. ಎ. ತನಕ ಓದಿಸಲು ತನಗೆ ಶಕ್ತಿ ಸಾಲದೆಂಬ ಪತಿಳಿವು ಅವರಿಗಿಲ್ಲ. ಅವರು ಹಿಂದೆ ಅನುಕೂಲವಿದ್ದವರು ನಿಜ, ಈಗ

ತಮ್ಮ ಭೂಮಿ ಏನಾಗಿದೆಯೆಂದು ದಿನಕ್ಕೆರಡು ಬಾರಿ ನೆನಪು ಮಾಡಿದರೂ ಮರೆತುಬಿಡುತ್ತಾರೆ. ಒಮ್ಮೊಮ್ಮೆ, ಶರೀರದ ಬೇನೆ ಬಲವಾದರೆ, ಈ ಪ್ರಪಂಚದಲ್ಲಿ ಇಲ್ಲದವರಂತೆಯೂ ನಟಿಸುತ್ತಾರೆ. ಒಮ್ಮೊಮ್ಮೆ ಅವರಿಗೆ— ತಮ್ಮ ಹುಡುಗ ಬಲಿತು, ಲಗ್ನವಾಗಿ, ಸಂಸಾರಿಯಾಗಿ, ವಕೀಲನಾಗಿ ಹೆಸರುವಾಸಿಯಾದಂತೆ ಕಾಣಿಸುತ್ತದೆ. ಹುಡುಗನನ್ನು ಕುರಿತು ಯಾವ ಅನುಮಾನ ಸಂಶಯಗಳೂ ಅವರಿಗಿಲ್ಲ. ಮೇಲೆ ಅವನ ಜಾತಕದಲ್ಲಿ ಒಳ್ಳೆಯ ಅದೃಷ್ಟ, ಗುಣ, ಸಂಸ್ಕಾರ ಹೇಳಿದೆ. ತಮ್ಮಿಂದ ಅವನಿಗೆ ಏನು ಲಾಭವಿಲ್ಲದೆಹೋದರೂ ಸ್ತ್ರೀಧನ ಸಾಕಷ್ಟು ಸಿಗುತ್ತದೆಂದು ಜಾತಕ ಹೇಳಿರುವುದರಿಂದ, ಸಿರಿವಂತ ಕುಲದಿಂದ ಸೊಸೆಯು ಬರುವ ಗಳಿಗೆಯನ್ನು ಅವರು ನಿತ್ಯವೂ ಕಾಯುತ್ತಿದ್ದಾರೆ. ಹೀಗಾಗಿ ತಮ್ಮ ಜಾತಿಯವರಲ್ಲಿನ ಕೆಲವು ಶ್ರೀಮಂತ ಮಿತ್ರರ ಮನೆಯ ಜಾತಕ ತರಿಸಿ ನೋಡಿಸಿದ್ದೂ ಉಂಟು. ಲಕ್ಷ್ಮಿಗೆ ಇವೆಲ್ಲವೂ ಒಮ್ಮೊಮ್ಮೆ ಮರುಳಾಟಿಕೆ ಎಂದೆನಿಸುತ್ತದೆ. ಆದರೆ ಮಗನು ಲಗ್ನವಾಗಿ, ಸೊಸೆ ಬಂದು, ಮನೆ ಬೆಳಗುವ ವಿಷಯದಲ್ಲಿ ಆ ತಾಯಿ ಕರುಳಿನ ಒಪ್ಪಿಗೆ ಇದ್ದೇ ಇದೆ.

ಕಳೆದ ವರ್ಷವಾಗಿದ್ದರೆ ಒಂದೆರಡು ಲಗ್ನದ ಸಂಬಂಧಗಳು ನಿಜಕ್ಕಾದರೂ ಬಂದಿದ್ದುವು. ಜಾತಕವೂ ತಕ್ಕಮಟ್ಟಿಗಿದ್ದುವು. ಅನುಕೂಲತೆಯುಳ್ಳ ಹೆಣ್ಣುಗಳೆಂದರೂ ಅನ್ನಬಹುದು. ಆದರೆ ಜಾತಕದಲ್ಲಿ ತುಂಬ ಸ್ತ್ರೀಧನದ ಭರವಸೆ ಹೇಳಿರುವಲ್ಲಿ, ಬಂದ ನಂಟರುಗಳು, ಅಷ್ಟು ವರದಕ್ಷಿಣೆಯ ಉತ್ಸಾಹದವರಾಗಲಿ, ಕೊನೆಗೆ ಹುಡುಗಿಗೆ ಮೈತುಂಬ ಚಿನ್ನವನ್ನು ತೊಡಿಸುವವರಾಗಲಿ ಆಗಿ ಕಾಣಿಸದೆ, ಅವರು ಉದಾಸೀನರಾದುದುಂಟು. ಬಂದ ಕೆಲವರು ಕೊಂಬಾರಿನಂಥ ಮಲೆಜ್ವರದ ಕೊಂಪೆಯನ್ನು ಕಂಡವರೇ ಹಿಂತಿರುಗಿದರು. ಸುಬ್ರಮಣ್ಯ ಜಾತ್ರೆಗೆ ಬಂದವರಿಗೆ ನಾಲ್ಕುದಿನ ನಿಲ್ಲಲು ಇದೊಂದು ಮನೆಯಾದೀತೆಂದು ಅವರು ಒಪ್ಪಿದರೂ ತಮ್ಮ ಮನೆಯ ಹೆಣ್ಣುಗಳು ಇಲ್ಲಿನ ಜ್ವರದಲ್ಲಿ ಉರಿದು ಹೋದಾವು ಎಂದು ಹೆದರಿಯೇ ಹೋದರು. ಈ ವರ್ಷ ಹಾಗಲ್ಲ. ಕೃಷ್ಣರಾಯರ ದೇಹಬಲ ಇನ್ನಷ್ಟು ಕುಗ್ಗಿದುದರಿಂದ ಮಗನಿಗೆ ಲಗ್ನಮಾಡುವ ಆಸೆ ಮತ್ತಷ್ಟು ಬಲವಾಗಿದೆ. ಅವನ ಮೆಟ್ರಿಕ್ಕಿಗೂ ಮೊದಲು ಲಗ್ನವಾದರೆ ಆದೀತೆಂಬ ಉತ್ಸಾಹವಿದೆ. ಆದರೆ, ಊರವರಲ್ಲಿ ಆ ಉತ್ಸಾಹವಿಲ್ಲ.

ಎರಡು ವರ್ಷಗಳಿಂದ ಹಣದ ಅಭಾವ ತಲೆದೋರಿದೆ. ಅಕ್ಕಿ, ಅಡಕೆಗಳಿಗೆ ಧಾರಣೆಯಿಳಿದು, ಸಾಲಕ್ಕಾಗಿ ಜನರೆಲ್ಲರು ಬಾಯಿ ತೆರೆದಿದ್ದಾರೆ. ಹೇಗಾದರೂ ಬದುಕಿದರೆ ಸಾಕು; ಮರ್ಯಾದೆಯಿಂದ ದಿವಸ ಕಳೆದರೆ ಸಾಕು ಎಂಬ ಹಂಬಲ ಅವರಿಗೆ. ಬಡ್ಡಿ ನಿರ್ವಹಿಸಲಾರದೆ, ಆಸ್ತಿಯನ್ನು ಕಳಕೊಂಡ ರೈತರು ಒಬ್ಬಿಬ್ಬರಲ್ಲ. ಹೆಚ್ಚೇನು-ಕೃಷ್ಣರಾಯರ ಆಸ್ತಿಯು ಒಂದು, ಉತ್ತಮ ಬಯಲು ಭೂಮಿ, ಹಾಗೇನೆ ಪರಾಧೀನವಾಯಿತು. ಅವರೇ ಬಡ್ಡಿಸಹಿಸಲಾರದೆ, ಸಾಲ ಬಾಕಿ, ಬಡ್ಡಿಗಳ ಮೌಲ್ಯಕ್ಕೆ, ಆರು ವಾರು ಅಡವು ಮಾಡಿಕೊಟ್ಟರು. ಆದರೆ ಅವರ ಮರವೆ ಬಹು ಬೇಗ. ಈ ವರ್ಷ ಲಗ್ನವಾಗಲಿ ಎನ್ನುತ್ತಾರೆ.

ಈ ಎಲ್ಲ ಮಾತುಗಳನ್ನುಕೇಳಿ ಲಕ್ಷ್ಮಮ್ಮನಿಗೆ ಮಗನನ್ನುಕರೆಯಿಸಿಕೊಳ್ಳುವ ಇಚ್ಛೆಯು ಬಲವಾಗಿ ಆಗುತ್ತಿದೆ. ಓದು ಕೊನೆಸಾಗದೆಂದು ಅವಳ ಮನಸ್ಸಿನ ನಂಬುಗೆ. ಮನೆಯಲ್ಲಿ ದಿನಗಳು ತೀರ ಕಷ್ಟತರವಾಗಿ ಬಂದಿವೆ. ಆ ವರ್ಷ ಉಳುಮೆಗೆ ಕೋಣಗಳನ್ನು ಕೊಳ್ಳಲಾಗದೆ ಸಾಗುವಳಿ ಕೆಟ್ಟು, ಮನೆಗೆ ಬರುವ ನಲವತ್ತು ಮುಡಿ ಬತ್ತದಲ್ಲಿ ಇಪ್ಪತ್ತೂ ಕೈಗೆ ಬರಲಿಲ್ಲ. ಈ ವರ್ಷ ಇನ್ನೂ ನಿಕೃಷ್ಟದ ಸ್ಥಿತಿ. ಇರುವುದೊಂದೆರಡು ಒಣಕಟಿ ದನಕರುಗಳಿಂದ, ನಿತ್ಯ ರೋಗಿಯಾದ ಗಂಡನಿಗೆ ಹಾಲಿನ ನೀರು ಸಿಗುವಂತಿಲ್ಲ. ನೆರೆಕರೆಯಿಂದ ಕೊಂಡುಕೊಳ್ಳಲು 'ಎಲ್ಲರ ಮನೆಯ ಮಡಕೆಯೂ ತೂತು' ಎಂಬ ಗಾದೆಯಂತಾಗಿತ್ತು. ಇದರಲ್ಲಿ, ತಿಂಗಳಿಗೆ ಹತ್ತುಹದಿನೈದು ರೂಪಾಯಿಗಳನ್ನು ಸಾಲವೆತ್ತಿಯೋ ಅಕ್ಕಿ ಮಾರಿಯೋ ಅಡಕೆ ಮಾರಿಯೋ ಮಗನ ವಿದ್ಯಾಭ್ಯಾಸ ನಡೆಸಲು ಬಂದೀತೆ? ಮೇಲೆ ಗಂಡನ ಮನಸ್ಸಿನ ಸ್ಥಿತಿಯೂ ತೀರ ವಿಚಿತ್ರವಾಗಿದೆ.

ನೆನಪು-ನೆನಪು-ಎಂಬುದು ಬರಿಯ ಶಬ್ದ. ಬೆಳಗ್ಗೆ ಆಡಿದ ಮಾತು ಸಂಜೆಗಿಲ್ಲ; ಸಂಜೆಗೆ ಆಡಿದ್ದು ಬೆಳಗಿಗಿಲ್ಲ. ಕಾಯವು ಬತ್ತಿ, ಎಲುಬು ಚರ್ಮಗಳ ಗೂಡಾಗಿವೆ. ದಿನಕ್ಕೆ ನಾಲ್ಕು ತಾಸು ತೈಲಹಾಕಿ ತಿಕ್ಕಿ, ತೀಡಿದರೆ ಅದೊಂದು ಶರೀರ;ಇಲ್ಲವಾದರೆ ನೋವಿನನರಕ-ಎಂಬಂತಹ ಸ್ಥಿತಿ. ಆದರೂ ಮಗುವು ಓದಬೇಕಂತೆ. ಅವನ ಅದೃಷ್ಟ ಒಳಿತಿದೆ. ಅದನ್ನು-ತನ್ನ ನೋವೆಂದು ಕೆಡಿಸಬಾರದೆಂಬ ಪ್ರೇಮ.' ಅದೆಲ್ಲ ಸರಿಯೆ. ಆದರೆ ಲಕ್ಷ್ಮಿಗೆ, ತಾನು ವಿಧವೆಯಾಗುವ ಕಾಲವು ಬಲು ದೂರವಿಲ್ಲ, ಎಂಬ

ಅಮಂಗಲಕರ ಸಂಕೇತವು ಪ್ರತಿ ನಿದ್ರೆಯಲ್ಲೂ ಕೊರೆಯುತ್ತಿದೆ. ಬೆಕ್ಕು ಓಡಿದಾಗ, ಹಲ್ಲಿ ಕೂಗಿದಾಗ, ಗಡಿಗೆ ಒಡೆದಾಗ-ಎಲ್ಲದರಲ್ಲೂ ಅವಳಿಗೆ ಕಾಣಿಸುವುದು ತನ್ನ ಕುಂಕುಮದ ನಶ್ವರತೆಯೇ! ಅವರ ಕೊನೆ ಗಳಿಗೆಯಲ್ಲಿ, ಮಗನು ಪುತ್ತೂರಲ್ಲಿ ಇದ್ದರೆ? ಇಷ್ಟೆಲ್ಲ ಮಾಡಿದುದಕ್ಕೆ ಮಗುವಿನ ಮುಖವನ್ನು ಕಂಡಾದರೂ ಸಾಯಬಾರದೆ—ಎಂಬ ಹಂಬಲ. ಹಾಗೆಂದೇ ಈ ಎಂಟು ದಿನಗಳಿಂದ-ನಿತ್ಯ ಬೋಧಿಸಿ, ನಿತ್ಯ ನೆನಪು ಹುಟ್ಟಿಸಿ, "ಹೂಂ-ನೋಡುವ. ಈ ವರ್ಷ ಮುಗಿಯಲಿ. ಮುಂದಿಗೆ ಬೇಡ. ಆದರೆ ಬೇಸಗೆಯಲ್ಲಿ ಲಗ್ನವಾಗಿ ಮಾವನ ಮನೆಯವರು ಮುಂದಕ್ಕೆ ಕಲಿಸಿದರೆ, ಹಣೆಯಲ್ಲಿ ಬರೆದಷ್ಟರ ತನಕ ಓದಲಿ"-ಎಂದು ಅಂದಿದ್ದರು. ಲಕ್ಷ್ಮಿ ಆ ಮಾತನ್ನು ತನಗೆ ಹೊಂದುವ ರೀತಿಯಲ್ಲಿ ಬಟ್ಟಿಯಿಳಿಸಿ, ಈ ಪತ್ರವನ್ನು ಮಗನಿಗೆ ಬರೆಯಿಸಿದ್ದಳು. ಅದನ್ನು ಹಿಡಿದುಕೊಂಡು ಅಚ್ಯುತನು, ಎಲ್ಲವನ್ನೂ ಊಹಿಸಲು ಯತ್ನಿಸುತ್ತಿದ್ದಾನೆ!

ಅಚ್ಯುತ ಬಲು ಹೊತ್ತಿನ ತನಕ ಹಾಗೆಯೇ ದಿಂಬಿಗೆ ಒರಗಿ ಕುಳಿತಿದ್ದನು. ಏನು ಯೋಚಿಸಿದರೂ ಮುಂದಿನ ದಾರಿ ಅವನಿಗೆ ಕಾಣಿಸದಾಯಿತು. ಬೇಸರಗೊಂಡು ಗಳಿಗೆಗೊಮ್ಮೆ ಹಾಸ್ಟೆಲಿನ ಗಡಿಯಾರವನ್ನು ನೋಡುತಿದ್ದನು. ಹಾಗೂ ಹೀಗೂ ನಾಲ್ಕು ಘಂಟೆ ಕಳೆಯಿತು. ಸರಿ, ಇನ್ನರೆತಾಸಿನಲ್ಲಿ ಸಂಜೆಯ ಉಪಹಾರ ಮುಗಿಯಿತೆಂದರೆ ಬೇಸರ ಕಳೆಯಲು ಗುಡ್ಡವನ್ನೇರಲು ಹೊರಡುವೆನೆಂದುಕೊಂಡ. ಆಯಿತು ಘಂಟೆ. ಮುಗಿಯಿತು ಫಲಾಹಾರ. ಹಾಸ್ಟೆಲಿಂದ ಹೊರಬಿದ್ದನು. ನಿತ್ಯವೂ ನಾಲ್ಕಾರು ಗೆಳೆಯರನ್ನು ಕೂಡಿಕೊಂಡು ಊರಿನ ಗುಡ್ಡಗಾಡನ್ನು ಸುತ್ತುವುದು ಅವನ ಹವ್ಯಾಸವಾಗಿತ್ತು. ಇಂದು ಹಾಗೆ ಮಾಡದೆ ತಾನೊಬ್ಬನೇ ಹೊರಟನು. ಊರಿನ ಗಡಿ ದಾಟುವುದರಲ್ಲಿ ಅವನ ಮನಸ್ಸು ಬದಲಾಯಿತು. ಒಳಗೆ ತುಂಬಿದ ಯೋಚನೆ, ವ್ಯಥೆಗಳನ್ನು ಬಚ್ಚಿಟ್ಟುಕೊಳ್ಳಲಾರದೆ ನಾಗರಾಜನ ಮನೆಯನ್ನು ಅರಸುತ್ತ ಹೊರಟ. ಆತನ ಮನೆಯನ್ನು ಸೇರುವ ಮೊದಲೇ ನಾಗರಾಜನು ಬಾಯಿ ತುಂಬ ಮಾತನಾಡುತ್ತ, ಇವನಿಗಿದಿರಾದನು. ಇಬ್ಬರೂ ಮಂಗಳೂರಿನ ರಸ್ತೆಯನ್ನು ಹಿಡಿದು ಹೊರಟರು. ನಾಗರಾಜ ಬಲು ವಾಚಾಳಿಯಂತೆ ಮಾತನಾಡುತ್ತಿದ್ದ. ಹಿಂದಿನ ದಿನದ ಉತ್ಸಾಹವು ಇನ್ನೂ ಅವನಲ್ಲಿ ತುಂಬಿ ತುಳುಕು

ತಿತ್ತು. ಉಪ್ಪಿನಂಗಡಿಯ ಜಾತ್ರೆಯ ವಿಚಾರ; ಅದರಿಂದಾಗಿ ಮಾಮುಂಜಿಯ ಸುದ್ದಿ, ಅದರಿಂದಾಗಿ ತನ್ನ ತೀರ ಹಿಂದಿನ ನೆನಹುಗಳನ್ನು ಕೆದರುತ್ತ ಹೊರಟು "ಅಚ್ಚು, ನಿನಗೆ ನೆನಪಿಲ್ಲವೇ? ಒಂದು ದಿನ ಮಾಮುಂಜಿ ಮಾವಿನ ಮಿಡಿಯನ್ನು ಕಿಸೆಯಲ್ಲಿ ತುಂಬಿಸಿ ತಂದು, ಸಂಕಪ್ಪ ಗೌಡರ ಕ್ಲಾಸಿನಲ್ಲಿ ನಮಗೆಲ್ಲ ತಿನ್ನಲು ಕೊಟ್ಟದ್ದು. ನಮ್ಮ ಬಾಯಿ 'ಮಣಮಣ' ಆಗುವುದನ್ನು ಕಂಡು ಗೌಡರು ಎದ್ದು ಬಂದು ನನ್ನ ಕಿಸೆಗೆ ಕೈಹಾಕಿದ್ದು. ಮಾಮುಂಜಿ ತನ್ನ ಬಾಯಲ್ಲಿದ್ದ ಅಂಬಟೆಗಾತ್ರದ ಮಿಡಿಯನ್ನುಒಂದೇ ಉಸಿರಿಗೆ ನುಂಗಿ ತಾನು ಸಂಭಾವಿತನಾಗಿ ಕುಳಿತುದು...."

"ಆದರೂ ಅಚ್ಚು, ನಮ್ಮ ಮಾಮುಂಜಿಗೆ ಒಂದು ಅಡಿಕೆ ತೋಟ ಇದ್ದಿರಬೇಕಿತ್ತು. ಹತ್ತು ಎಕರೆ ತೋಟಕ್ಕೆ ಅವನೊಬ್ಬನೇ ಸಾಕು. ಅರ್ಧ ಗಂಟೆಯಲ್ಲಿ ಎಲ್ಲಾ ಅಡಿಕೆ ಕೆಳಕ್ಕೆ ಇಳಿಸಿಯಾನು. ಮಂಗ ಸುಳ್ಳು, ಅವನ ಮುಂಡೆ-ಮರ ಹತ್ತುವುದರಲ್ಲಿ."

"ಆದರೂ ನೋಡು-ನಮ್ಮ ಸಂಕಪ್ಪ ಗೌಡರು ತೀರ ಪಡಪೋಶಿ ಜನ ಅಲ್ಲವೇ? ಅವರಿಗೆ ಹುಡುಗರ ಹತ್ತಿರ ದೋಸ್ತಿ ಸರಿಯೆ. ಕಲಿಸುವುದರಲ್ಲಿ ಅಷ್ಟೊಂದು ಮೋಸವೂ ಅಲ್ಲ. ಉದಾಸೀನ ಬಿಟ್ಟರೆ, ಮನಸ್ಸು ಬಂದರೆ, ಪಾಠ ಒಳ್ಳೆಯದಾಗಿ ಹೇಳುತ್ತಾರೆ. ಅವರ ಕನ್ನಡದ ಪಾಠವೆಂದರೆ ತಾಳ ಮದ್ದಲೆ ಅರ್ಥ ಇದ್ದ ಹಾಗೆ ಇರುತ್ತದೆ. ಒಂದು ಸಂಗತಿಯಲ್ಲಿ ಮಾತ್ರ ಅವರ ವ್ಯಾಪಾರ ನಾಲೀಸು...."

ಅಚ್ಚುತನಿಗೆ ಎಲ್ಲ ಮಾತುಗಳು ಕಿವಿಗೇನೋ ಬೀಳುತ್ತಿವೆ. ಆದರೆ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುತ್ತಿರಲಿಲ್ಲ. ಅದರಿಂದಲೇ ಅವನು 'ಏನು, ಯಾಕೆ'? ಎಂದು ಕೇಳುತ್ತಲಿಲ್ಲ. ಸುಮ್ಮನೆ ನಾಗರಾಜನ ಜತೆಗೆ ಸರಿಯುತ್ತಿದ್ದನಷ್ಟೆ. ನಾಗರಾಜನಿಗೆ ತನ್ನ ಸ್ವರವನ್ನು ಕೇಳಿಕೊಂಡೇ ಹುರುಪು ಬರುವ ಶೀಲ. ಹೀಗಾಗಿ ಅವನ ಉತ್ತರ ಇಲ್ಲವೆ ಪ್ರಶ್ನೆಗಳನ್ನು ಇದಿರುಕಾಯುವ ಮೊದಲೇನೆ ಮಾತು ಮುಂದುವರಿಸಿದ.

"ಸಂಕಪ್ಪ ಗೌಡರು ಮಕ್ಕಳ ಹತ್ತಿರ ನಾಲ್ಕಾಣೆ ಎರಡಾಣೆ ಕೇಳುವುದನ್ನು ಬಿಡಬೇಕು. 'ಇಲ್ಲ' ಎಂದರೆ ಕಿಸೆಗೇ ಕೈಹಾಕುತ್ತಾರೆ...ನಾಳೆ ತಕೋ, ಎನ್ನುತ್ತಾರೆ! ನಾಳೆ-ನಾಳೆಯೇ.ವಿನಾಯಕನ ಮದುವೆ ಹೀಗಾಗಿ

ಏನಾದರೂ ಅವರಿಗೆ ನಾನು ಒಂದು ವರ್ಷದಲ್ಲಿ ಎರಡು ಮೂರು ರೂಪಾಯಿ ದಂಡ ತೆತ್ತಿರಬಹುದು. ಅಂತೂ ಎಂಟನೆಯ ಕ್ಲಾಸಿಗೆ ಬರುವಾಗ ಅವರಿಗೆ ವರ್ಗವಾಯಿತು. ಬೇರೆ ಯಾರೂ ಅವರ ಹಾಗೆ ಮಕ್ಕಳಲ್ಲಿ ಸಾಲ ಕೇಳುವವರಿಲ್ಲ."

ಮುಂದೆ ಅವರ ಮಗ್ಗುಲಿಗೆ ಎತ್ತರವಾದ ಮಂಜುಳಗುಡ್ಡ ಬಂದಿತು. "ಏನು, ಹೀಗೆ ಕಬಕದ ತನಕ ವಾಕಿಂಗೋ, ಇಲ್ಲವೆ ಈ ಗುಡ್ಡದ ಮೇಲೆ ಹೋಗೋಣವೇ?" ಎಂದು ಕೇಳಿದ. ಅಚ್ಯುತನಿಗೆ ಬೆಳಗಿನ ನಡಿಗೆಯಿಂದ ಕಾಲು ಸೋತುದರಿಂದಲೋ ಏನೋ—"ಆಗಲಿ, ಇಲ್ಲೇ ತಿರುಗುವ" ಎಂದನು. ಇನ್ನು ಕೆಲವು ನಿಮಿಷಗಳ ಕಾಲ, ಇಬ್ಬರೂ ಗುಡ್ಡ ಏರುತ್ತ, ಉಸಿರುಗರೆಯುತ್ತ ಸರಿದರು. ನಾಗರಾಜ ಮಾತುಗಳನ್ನು ನಿಲ್ಲಿಸಿದ. ಗುಡ್ಡದ ಶಿಖರವನ್ನೇರಿದ್ದಾಯಿತು. ಅಲ್ಲಿನ ನೋಟಕ್ಕೆ ನಾಗರಾಜ ಬೆರಗುಗೊಂಡದ್ದಾಯಿತು. "ನೋಡಚ್ಯುತ, ನನ್ನ ಮೂಗಿನ ಸರೂತಕ್ಕೆ, ಮೂಡಲು........ಓ........ಅಲ್ಲಿ 'ಅಮ್ಮೆದಿಕಲ್ಲಿನ' ತುಸು ಬಲಕ್ಕೆ, ನಮ್ಮ ಕೊಂಬಾರು ಗುಡ್ಡೆಯಿರಬೇಕು. ಖಂಡಿತ ಅದೇನೇ; ಈಚೆ ನೆಟ್ಟಗೆ ಕಾಣಿಸುವುದು ಕುಮಾರ ಪರ್ವತವಲ್ಲವೆ? ಹಾಗಾದರೆ ಅದೇನೆ ಕೊಂಬಾರು! ಒಂದು ಎರೋಪ್ಲೇನು ಇದ್ದಿದ್ದರೆ ಅರ್ಧಘಂಟೆಯಲ್ಲಿ ನೆಟ್ಟಗೆ ನಮ್ಮ ಊರಿಗೆ ಹೋಗಿಬಿಡಬಹುದಿತ್ತು."

ಅಚ್ಯುತ ಬಾಯಿತಪ್ಪಿ ಎಂಬಂತೆ "ನನಗೂ ಊರಿಗೆ ಹೋಗಬೇಕಿತ್ತು" ಎಂದನು. ಆಗೇನೆ ಅವನು ಮೌನವನ್ನು ಕಳಚಿ ಮಾತನಾಡಿದ್ದು.

"ಅದೇನು ಈಗ ಯೋಚನೆ ಊರಿನದು? ಏರೋಪ್ಲೇನ್ನು ನಿನ್ನ ಮಾವನ ಮನೆಯವರು ಕಳುಹಿಸುತ್ತಾರಂತೇನು?"

"ನಿನ್ನ ಚೇಷ್ಟೆ ಇರಲಿ-ಊರಿಗೆ ಹೋಗಿ ಬರೋಣವೇ, ಮುಂದಿನ ವಾರ. ನಿನಗೆ ಸೈಕಲ್ ಗೊತ್ತಿದೆ, ಡಬ್ಬಲ್ ಸವಾರಿ ಮಾಡುವ. ಶನಿವಾರ ಸಂಜೆಯ ಶಾಲೆಗೆ ಕಳಪು ಹಾಕುವ. ರಾತ್ರಿ ಮನೆಯನ್ನು ಸೇರಬಹುದು. ಮಂಗಳವಾರ ಹಿಂದಿರುಗಿ ಬರುವ."

"ಹಾಂ — ಮೂವತ್ತೈದು ಮೈಲು ಸುಮಾರು ಆದೀತು. ಒಂದೇ ಘಾಟಿನಲ್ಲಿ ಸವಾರಿ ಮಾಡಿದರೆ, ಅದರಲ್ಲೂ ನಿನ್ನಂಥ ಕಡೆಗಲ್ಲನ್ನು ಕೂಡ್ರಿಸಿಕೊಂಡು ಡಬ್ಬಲ್ ರೈಡ್ ಮಾಡಿದರೆ, ನನ್ನ ಹೆಣ ಹೋದೀತು" ಎಂದ.

ಅಚ್ಯುತ ಮುಗುಳ್ನಗೆಯನ್ನು ನಕ್ಕು ಸುಮ್ಮನಾದನು. ಮುಂದೆ ಬಲು ಹೊತ್ತಿನ ತನಕ ಆತ ಮಾತನಾಡಲಿಲ್ಲ. ಆದರೆ ನಾಗರಾಜನ ನಾಲಗೆ ಕೀಲಿಕೊಟ್ಟ ಗ್ರಾಮಫೋನಿನಂತೆ ಉಸುರುತ್ತಲೇ ಇತ್ತು. ಅಚ್ಯುತ ಸುತ್ತಲಿನ ಆಕಾಶ ನೋಡುತ್ತಾನೆ. ಅದರಲ್ಲಿ ಬಿಳಿಯ ತೇಲುಮೋಡಗಳ ಚಲನೆಯನ್ನು ದೃಷ್ಟಿಯಿಂದ ಹಿಂಬಾಲಿಸುತ್ತಾನೆ. ಅವು ಮೆಲ್ಲಗೆ ಸರಿದು ಮೂಡಣದಿಗಂತದ ಅಂಚಿನಲ್ಲಿ ಕುರಿಯ ಮಂದೆಯಂತೆ ಕೂಡುವುದನ್ನು ಕಾಣುತ್ತಾನೆ. "ಅಲ್ಲಿ ಗಾಳಿ ಬೀಸುತ್ತಿರಬೇಕು-ತೀರ ಎತ್ತರದಲ್ಲಿ. ಇಲ್ಲಿ ಊರಿನಲ್ಲಿ, ಇಷ್ಟು ಎತ್ತರಕ್ಕೂ ಗಾಳಿಯ ಸುಳಿವಿಲ್ಲ" ಎಂದು ಹೇಳುತ್ತಾನೆ. ಅವನಿಗೆ ಹಿಂದಿನ ದಿನದ ಸೊಬಗು ಇಂದಿನಿಂದ ಅಷ್ಟೊಂದು ಭಿನ್ನವಾದಂತೆ ಕಾಣುತ್ತದೆ. ಇಂದೇನು ಗಾಳಿಯ ಸುಳಿವಿಲ್ಲ? ದೂರದ ಗುಡ್ಡಗಳಲ್ಲಿ,ಬಿಸಿಲಿಗೆಬಿಸಿಗಾಳಿ ನೀರತೆರೆಯಂತೆಓಡುತ್ತಿದೆಯಲ್ಲ!ನಾವಿದ್ದಲ್ಲಿ-ಗಾಳಿಯ ಸುಳಿವಿಲ್ಲ. ಎಲ್ಲ ಗುಡ್ಡದ ಕುಡಿಗಳೂ ಕರಿ ತಲೆಯವುಗಳಾಗಿವೆ. ಬೇಗೆಯಿಂದ ಕಾಡು ಪಾರಿವಾಳಗಳು ಜತೆಗಾತಿಯ ಸಲುವಾಗಿ 'ಕುಟ್ರುವಾ' ಎಂದು ನಿಡಿದ ಕೂಗನ್ನುಕೂಗುತ್ತಿವೆ. ತಿರುಗಿ ಇನ್ನೊಂದು ಬೆಟ್ಟದ ಸಂದಿನಿಂದೆಂಬಂತೆ ಹೆಣ್ಣು ಧನಿಯು ಮರುತ್ತರ ಕೊಡುತ್ತದೆ. ಅದನ್ನು ಕೇಳಿ ನಾಗರಾಜನು "ಕುಟ್ರು -- ಕುಟ್ರು" ಎಂದು ಅನುಕರಿಸಿ, ಬೇರೆ ಒಂದೆರಡು ಪಾರಿವಾಳಗಳ ಕೂಗನ್ನು ಉದ್ರೇಕಿಸುತ್ತಾನೆ. ಆ ಮರುಳಲ್ಲಿ, ಈ ಮೂಕನನ್ನು ಅಲ್ಲೇ ಬಿಟ್ಟು, ಅಚ್ಯುತ ಗುಡ್ಡದ ಎರಡನೆಯ ಶಿಖರವನ್ನು ಏರಲು ಹೋಗಿಯಾಯಿತು. ಹೋಗುವಾಗ —"ನೋಡುವಾ, ನಾನು ಅಲ್ಲಿಂದ ಕೂಗುತ್ತೇನೆ; ನೀನು ಇಲ್ಲಿಂದ ಮರುಕೂಗು" ಎಂದು ಹೇಳಿ ಹೋದನು. ಎಳೆ ಮಕ್ಕಳಂತೆ ಅವನಿಗೆ ಬೆಟ್ಟದ ಕೋಡುಗಳೆರಡರ ಮೇಲೆ ಇಬ್ಬರೂ ನಿಂತು ಆಟವಾಡುವ ಹುಮ್ಮಸವಾಗಿದೆ. ಅಚ್ಯುತನಿಗೆ ಏನೋ ಮಂಕು ಹಿಡಿದಿದೆ ಎಂಬುದು ನಾಗರಾಜನಿಗೆ ತಿಳಿಯಿತು. ಆದರೆ ಕೆಲವೊಮ್ಮೆ ಅದೇ ಅವನ ಶೀಲ ಎಂಬುದೂ ಆತನ ಅನುಭವ. 'ಹಾಗೇಕೆ ಮಾಡುತ್ತೀಯ' ಎಂದು ಕೇಳುವುದು ಇವನ ಶೀಲವಲ್ಲ. ನಾಗರಾಜ ಸಾಮಾನ್ಯವಾಗಿ ತಾನೊಬ್ಬನೇ ನಾಲ್ವರ ಕೂಟವನ್ನು ತುಂಬಬಲ್ಲವ.

ಇತ್ತ ಅಚ್ಯುತನು ಕುಳಿತಲ್ಲಿಂದ ಕದಲದೆ ಎಡಕ್ಕೆ, ಬಲಕ್ಕೆ ಕಣ್ಣು

ತಿರುಗಿಸುತ್ತಾನೆ. ತುಸು ದಕ್ಷಿಣಕ್ಕೆ, ಕೆಳಕ್ಕೆ ಅವನ ಕಣ್ಣಿಗೆ ಬೆಂಕಿಯ ಉರಿಯಂತೆ ಏನೋ ಜಾಜ್ವಲ್ಯವಾಗಿ ಕಾಣಿಸುತ್ತಿತ್ತು. ಗಾಬರಿಯಿಂದ ಅದನ್ನು ನೋಡುತ್ತ ನಿಂತು, ನಕ್ಕನು. "ಮರಳು! ಮುತ್ತುಗದ ಮರ ಹೂಬಿಟ್ಟಿದೆ"! ಎಂದು ಕೊಂಡು, ಅದನ್ನೇ ನೋಡುತ್ತ ಕುಳಿತನು. ನಿನ್ನೆ ಆ ಮರವು ಕಣ್ಣಿಗೆ ಬೀಳಲಿಲ್ಲವೇಕೆ? ಈಗ ಗುಡ್ಡಕ್ಕೆ ತಗಲಿದ ಬೆಂಕಿ ಯಂತೆ ಅದು ಕಾಣಿಸುವುದಲ್ಲನೆ—ಎಂದಂದುಕೊಂಡ. ಮರ ಮನ ಸ್ಸನ್ನು ಸೆಳೆಯಿತು. ಹಾಗೆಯೇ ಹೆಜ್ಜೆ ಸರಿಯಿಸಿ, ಅದರ ಬುಡ ಸಮೀ ಪಿಸಿದ. ಒಂದಲ್ಲ ನಾಲ್ಕಾರು ಮರಗಳ ಕೂಟವದು. ಎಲ್ಲವೂ ಬುಡ ದಿಂದ ತುದಿಯ ತನಕ ಹೂತು, ಬೆಂಕಿಯ ನಾಲಗೆಯಂತೆ ರಂಜಿಸುತ್ತಿ ದ್ದುವು. ಒಂದು ಗೊಂಚಲನ್ನು ಕಿತ್ತು ಹಿಡಿದುಕೊಂಡ. ಹುಲಿಯುಗು ರಿನಂತೆ ಬಾಗಿದ ಕ್ರೂರವಾದ ಆಕಾರ ಹೂವಿಗೆ. ಬೆಂಕಿಯಂತಹ ಉಗ್ರ ರೂಪ-ಕಾಣಿಸಿತು. ತಿರುತಿರುಗಿ ಅದನ್ನೇನೋಡಿದ. ಒಳಗೊಳಗೆ ಏನೋ ಸೌಮ್ಯ ಚೆಲುವೊಂದು ಕಾಣಿಸಿತು. ಅದನ್ನು ಹಿಡಿದುಕೊಂಡು ಗೆಳೆ ಯನ ನೆನಪಾಗಿ, ತಿರುಗಿ ಶಿಖರಕ್ಕೆ ಬಂದನು.

ಇಷ್ಟರಲ್ಲಿ ನಾಗರಾಜ ಪಾರಿವಾಳದ ಕುಟುರು ಹಾಕಿ ದಣಿದಿದ್ದ. "ಇವನ ಹೆಣ ಎಲ್ಲಿ ಹೋಯಿತಪ್ಪ?" ಎಂದು ತನ್ನ ಎದುರಿನ ಶಿಖರದಿಂದ ಇವನನ್ನು ಅರಸುವಾಗ, ಅಚ್ಯುತ ತಿರುಗಿಕಾಣಿಸಿಕೊಂಡ. ನಾಗರಾಜ, ತನ್ನ ಕೂಗು ಎದುರಿನ ಗುಡ್ಡಗಳಿಗೆ ಸಿಡಿದು ಮರುಕಳಿಸುವುದನ್ನು ಕೇಳಿ, ತನಗೆ ತಾನೇ ಎದುರು ಕುಟುರನ್ನು ಹಾಕುತಿದ್ದ. ನಾಲ್ದೆಸೆಗಳಿಂದಲೂ 'ಕುಟ್ರು ಕುಟ್ರು' ಎಂಬ ಅವನ ಧ್ವನಿಯು, ಪಾರಿವಾಳಗಳ ನಿಜ ಕೂಗು ಕರೆಗಳೊಂದಿಗೆ ಮಿಲನವಾಗಿ, ಸ್ಮಶಾನದಲ್ಲಿನ ಪ್ರೇತಗಳ ಕೂಗಿನಂತೆ ಕೇಳಿಸುತ್ತಿತ್ತು.

ಸಂಜೆಯಾಯಿತು. ಬಾನು ಕೆಂಪಡರಿ, ಕರಿಮುಗಿಲ ಚಾಪೆಯೊಂ ದರ ಹಿಂದಿನಿಂದಲೇ ಸೂರ್ಯನು ಅಡಗಿದುದರಿಂದ, ಅಚ್ಯುತ ತನ್ನ ಮುತ್ತುಗದ ಹೂವಿನ ಗೊಂಚಲನ್ನು ಮೇಲಕ್ಕೆ ಎತ್ತಿ ಹಿಡಿದು, ನಾಗ ರಾಜಗೆ ಮರಳಲು ಸಂಕೇತವಮಾಡಿದ. ಅವನ ಸವಾರಿ ಇವನನ್ನು ಶಪಿ ಸುತ್ತ ಮರಳಿತು. ತನ್ನನ್ನು ಸಮೀಪಿಸುವ ಮೊದಲೇ "ಇವತ್ತು ನಿನಗೆ ನಿನ್ನೆಯ ಅಮಲು ತಲೆಗೆ ಚೆನ್ನಾಗಿ ಏರಿರಬೇಕು. ಅಲ್ಲ! ಅಷ್ಟು 'ಕುಟ್ರು'

ಹಾಕಿದರೂ ನಿನ್ನ ಗಂಟಲು ಅದುಮಿ ಹೋಗಿರಬೇಕೇ!"—ಎಂದನು. ಅವನ ಕೈಯಲ್ಲಿ ಮುತ್ತುಗದ ಹೂವನ್ನು ಕಂಡು, ಕಿತ್ತುಕೊಂಡು "ಹೋ! ಮುತ್ತುಗದ ಹೂ! ಎಷ್ಟು ಚಂದ. ಇದನ್ನೆಲ್ಲಿಂದ ಸಂಪಾದಿಸಿದೆ ಮಹಾರಾಯ"-ಎಂದು ಕೇಳಿದ. ಆತ ಮರವನ್ನು ತೋರಿಸಿದ್ದೇ ತಡ—ನಾಗರಾಜನ ಸವಾರಿ ಅಲ್ಲಿಗೆ ಓಡಿ, ಹೊರೆಹೊರೆ ಹೂವನ್ನು ಇಳಿಸಿಯಾಯಿತು. ಅಚ್ಯುತನು "ಯಾಕೆ ನಾಗರಾಜ, ಒಂದೆರಡು ಜೊಲ್ಲೆ ಸಾಲದೇ? ಮರಕ್ಕೆ ಮರವೇ ಕೆಳಗೆಬರಬೇಕೇನು?"-ಎಂದ. "ಸರಕಾರಿ ಮಾಲಿಗೆ ಯಾರು ಕೇಳವವರು? ಯಾರಪ್ಪನ ಗಂಟು? ಏನು ಖರ್ಚು?" ಎಂದು ಕೊಯ್ದ ಜೊಲ್ಲೆಗಳನ್ನೆಲ್ಲ ಆರಿಸಿಕೊಂಡು, ಹೊತ್ತುಕೊಂಡೇ ಹೊರಟ. ಅವು ಉದುರಿ ಬೀಳುತಿದ್ದುವು. "ನೀನು ಇಷ್ಟು ಹಿಡಿದುಕೊಳ್ಳಯ್ಯ" ಎಂದು ಗೆಳೆಯನನ್ನೂ ಗದರಿಸಿದ.

"ಇಂದೇನು ಕೋಲವೋ, ನೇಮವೋ?"*

"ಕೋಲ, ನೇಮಗಳಿಗೆ ಬೇಕಾದಹೂ ಕಿಸ್ಕಾರ. ಮುತ್ತುಗದ ಹೂ ಯಾವ ಮಣ್ಣಿಗೂ ಬೇಡದ್ದು."

"ಮುತ್ತುಗದ ಹೂ ಅಷ್ಟು ಪಡಪೋಶಿಯಲ್ಲ. ಹಿಂದೆ ಈ ಮರ ಋಷ್ಯಾಶ್ರಮದ ಹತ್ತಿರ ಇರುತಿತ್ತಂತೆ. ನಮ್ಮವರಲ್ಲಿ ಉಪನಯನಕ್ಕೆ ಇದರ ದಂಟು ಬೇಕಾಗುತ್ತದೆ. ಇದೇ ಅಲ್ಲವೆ ಪಾಲಾಶ!"

"ದಂಟು-ನಾಯಿ ಹೊಡೆಯಲು ಬಂದೀತು. ಹೂವಾದರೂ ಚಂದವಿದೆ!"

ಸರಿ. ಇಬ್ಬರೂ ಗುಡ್ಡದಿಂದ ಇಳಿದರು. ನಾಗರಾಜ ಹೂವಿನ ಗೊಂಚಲುಗಳನ್ನು ಎದೆಗೇನೆ ಅಪ್ಪಿಕೊಂಡಿದ್ದನು. ಅದರಲ್ಲಿನ ಕೆಂಪಿರುವೆಗಳು ಅವನನ್ನು ಕಡಿದಂತೆ, ಒಂದೊಂದಾಗಿ ಅವನ್ನು ಕೆಡವುತ್ತ ಬಂದು, ಅವನು ರಸ್ತೆಯನ್ನು ಸೇರುವಾಗ, ಒಂದೇ ಒಂದು ಜೊಲ್ಲೆ ಅವನ ಕೈಯಲ್ಲಿರಲಿಲ್ಲ. ಅದನ್ನು ಕಂಡು, "ಬರಿಯ ಹಾಳುಗೇಡಿ!" ಎಂದ ಅಚ್ಯುತ. ತೀರ ಒಣಗಿ ಹೋಗಿದ್ದ ಅವನ ಮನಸ್ಸು ಹೂವನ್ನು ಕಂಡ ಮೇಲೆ ತುಸು ಬದಲಾಗಿತ್ತು; ತುಸು ಶಾಂತವಾಗಿತ್ತು.

ಆದರೆ ಅವನ ತೀರ್ಪು ನಾಗರಾಜನಿಗೆ ರುಚಿಸಲೊಲ್ಲದು. "ಹಾಳು

*ದೈವದ ಪೂಜೆಗಳು

ಗೇಡಿಯೇ ನಾನು, ಯಾಕೆ? ಈ ಹೂ ಬಿಸಾಡಿದುದಕ್ಕೇನು! ಅದು ಮರ ದಲ್ಲಿದ್ದರೇನು ಸಂಭ್ರಮವಾಗುತ್ತಿತ್ತು. ಕಾಸುಕೊಟ್ಟು ಕೊಂಡವರ ಹಾಗೆ ಅನ್ನುತ್ತೀಯಲ್ಲ. ಈ ಬ್ರಾಹ್ಮಣರಿಗೆ ಯಾವಾಗಲೂ ಆಸೆ ಹೆಚ್ಚು. ಕಾಸು ಕೊಡದೆ ತಂದ ಹೂವಿಗೇನೆ ಇಷ್ಟು ಆಸೆ ಮಾಡಿದ ನೀನು, ಕಾಸು ಕೊಟ್ಟು ಕೊಂಡಿದ್ದರೆ ಏನು ಮಾಡುತ್ತಿದ್ದೀ?" — ಎಂದನು. ಅಚ್ಯುತ ಬರಿದೆ ನಗಾಡಿದನು. "ನಿನ್ನ ಬಾಯಿಗೆ ಬೀಗವಿಲ್ಲ. ನೀನು ಮಾಡಿದ್ದಕ್ಕೆ ತೀರ್ಪಿಲ್ಲ"-ಎಂದ. ಇಬ್ಬರೂ ಮುಂದಕ್ಕೆ ಸರಿದರು. ಗುಡ್ಡಕ್ಕೆ ಬರುವ ವೇಳೆಯಲ್ಲಿ ನಾಗರಾಜನೊಡನೆ ಮನೆಯಿಂದ ಬಂದ ಕಾಗದವನ್ನು ಕುರಿತು ತರ್ಕಿಸಬೇಕೆಂಬ ಇಚ್ಛೆಯೊಮ್ಮೆ ಉಂಟಾಗಿತ್ತು. ನಡು ನಡುವೆ 'ಹೇಳಲೇ, ಬಿಡಲೇ' ಎಂದೂ ಅನುಮಾನ ಉಂಟಾಗಿತ್ತು. ಆದರೆ ಗುಡ್ಡ ವನ್ನೇರಿ ಮರಳಿ ಬರುವಾಗ-'ಯಾಕೆ ಅವನೊಡನೆ ಹೇಳುವುದು, ಹೇಳಿ ಆಗುವುದೇನು? ಅವನಿಗೇನು ಗೊತ್ತಾದೀತು'-ಎಂಬ ತೀರ್ಮಾನ ಮನ ಸ್ಸಿನಲ್ಲಾಯಿತು.

ನಾಗರಾಜ ಶ್ರೀಮಂತರ ಮನೆಯ ಹುಡುಗ. ತುಂಬ ಆಸ್ತಿಯಿ ದ್ದವನು. ಮನೆಯ ಇಂದಿನ ಯಜಮಾನರು ಅವನ ಮಾವಂದಿರು. ಆ ಮುದುಕರು ಈಗೋ ಇನ್ನೊಂದು ಗಳಿಗೆಗೋ ಎಂದು ದಿನ ಕಾಯು ತ್ತಿದ್ದರು. ಈತ ಒಬ್ಬನೇ ಅಳಿಯ; ತುಂಬ ಪ್ರೀತಿಯವ. ಹೀಗಾಗಿ ಅವನು ಕೇಳಿದಷ್ಟು ಹಣವನ್ನು ಕೊಡುತ್ತಿದ್ದರು. ತೀರ ಕಟ್ಟಿಲ್ಲದೆ ಬೆಳೆದ ಮಗು ಆತ. ತಾನು ಒಡ್ಡಾಟದಿಂದ ಕಲಿಯುವವನೆಂದು ಅವನಿಗೆ ತಿಳಿ ದಿರಬಹುದಾದರೂ, ತನ್ನ ಮತ್ತು ತನ್ನ ಮನೆಯವರ ನೋವು ನಾಗ ರಾಜಗೆ ತಿಳಿದೀತೇ! ತಿಳಿದರೂ ಅವನೇನು ಸಹಾಯ ಮಾಡುವುದಿ ದೆಯೇ — ಎಂಬ ಅನುಮಾನ! ಮೇಲೆ ಅವನು ಪುತ್ತೂರಿಗೆ ಬಂದುದು — ಓದುವುದಕ್ಕೋ ಅಲ್ಲವೋ ಎಂಬಷ್ಟೂ ಅನುಮಾನವೇ.

ನಾಗರಾಜ, ಮಾಮುಂಜಿ, ಅಚ್ಯುತರು ತೀರ ಆಪ್ತರು. ಬಲು ಸಮಯ ಒಂದೇ ಶಾಲೆಯಲ್ಲಿ ಒಂದೇ ತರಗತಿಯಲ್ಲಿ ಓದಿದವರು. ಮುಂದೆ ಮಾಮುಂಜಿಯು ಶಾಲೆ ಬಿಡುವಂತಾಯಿತು. ನಾಗರಾಜನಿಗೆ ತನ್ನ ತುಂಟತನ, ರಹಸ್ಯಗಳಲ್ಲಿ ಪಾಲುಗಾರರಾರಾದರೂ ಬೇಡವೇ? ಅದಕ್ಕೆ ಅಚ್ಯುತ. ಅಚ್ಯುತನಲ್ಲಿ ಹೇಳಿದ ಗುಟ್ಟು ಗಾಳಿಗೆ ಕೊಟ್ಟ ಕಸ್ತೂ

ಠಿಯಾಗದೆಂದು ಅವನಿಗೆ ಖಂಡಿತ. ಅವನು ಒಳ್ಳೆಯ ಗೆಳೆಯನೆಂಬ ಅಭಿಮಾನ. ಅವರಿಬ್ಬರು ಎಂಟನೆಯ ತರಗತಿ ಮುಗಿಸಿದ ದಿನ-“ಯಾವ ಮಣ್ಣಿಗೆ ಪುತ್ತೂರಿಗೆ ನಾವು ಹೋಗುವುದು?” ಎಂದು ನಾಗರಾಜನೇ ಎಂದಿದ್ದ. ಕಲಿಯುವಿಕೆಯಲ್ಲಿ ಅವನ ಹುಮ್ಮಸ ಕಡಿಮೆ; ಅಚ್ಚುತನಿಗೆ ಓದಿನ ಭ್ರಮೆ ತುಂಬ. ಆತನು ಪುತ್ತೂರಿಗೆ ಹೋಗಿ ವಿದ್ಯೆ ಮುಂದುವರಿಸಲು ತುಂಬ ಹಟ ತೊಟ್ಟಿದ್ದನು. ಅವನ ಗುರುಗಳಿಂದ ತಂದೆತಾಯಿಗಳಿಗೆ ಉಪದೇಶವನ್ನೂ ಮಾಡಿಸಿದ್ದನು.ಇದರಿಂದಾಗಿ “ನೋಡಬೇಕು, ಎಲ್ಲಿಂದ ಹೋಗುವುದಾದೀತು?” ಎಂದ ಅಚ್ಚುತನೇ, ಹಿಂದಿನ ವರ್ಷದ ಜೂನು ತಿಂಗಳಲ್ಲಿ, ಪುತ್ತೂರಿಗೆ ಹೋಗಲು ನಿಶ್ಚಯಿಸಿದಾಗಲೇ, ನಾಗರಾಜನಿಗೆ ನಿಜಕ್ಕೂ ಚಳಿಜ್ವರ ಉಂಟಾಯಿತಂತೆ. ಗೆಳೆಯನು ದೂರಾಗಬಾರದೆಂಬ ಬಯಕೆ ಆತಗೆ. ತಾನು ಓಂದೆರಡು ವರ್ಷಕಾಲ ಪುತ್ತೂರಲ್ಲಿ ಏಕೆ ಮೆರೆದಾಡಬಾರದೆಂಬ ಬಯಕೆ. ಎರಡೂ ಸೇರಿಕೊಂಡುವು. ಈ ಠರಾವನ್ನು ಮಾಪನ ಮುಂದಕ್ಕೂ ತಾಯಿ ಮುಂದಕ್ಕೂ ಇರಿಸಿದನು. ಅವರು ಸಮ್ಮತಿ ಕೊಡಲಿಲ್ಲ. “ಇರುವವ ನೀನೊಬ್ಬ, ಮನೆಯಿಂದ ದೂರವಾದರೆ! ನಮಗೇಕೆ ಇಂಗ್ಲಿಷು? ಕಡಬದ ಶಾಲೆಯಲ್ಲಿ ಹೇಳಿಕೊಟ್ಟದ್ದು ಇಂಗ್ಲೀಷಲ್ಲವೇ?”-ಎಂಬ ಅವರ ತರ್ಕಕ್ಕೆ, ಅವನು ಮೆಲ್ಲಗೆ “ನಾನು ಹೋಗಲೇಬೇಕು, ಇಲ್ಲವಾದರೆ ಊರು ಬಿಟ್ಟು ಓಡಿಹೋಗುತ್ತೇನೆ. ಎಂತೆಂತಹ ಬಡವರುಸಹ ಇಂಗ್ಲಿಷ್ ಕಲಿಯಬಹುದಂತೆ! ನಿಮಗೇನು ದುಡ್ಡಿನ ಆಸೆ” ಎಂದುಬಿಟ್ಟ. ನಾಗರಾಜನ ಮನೆಯವರಿಗೆ ಆಸ್ತಿ ಬಹಳ ಎಂಬುದು ಊರಿಗೇ ತಿಳಿದವಿಷಯ. ಆ ಮಾತಿಗೆ ಅವರೊಂದು ನೋಯಬೇಕಾಗಿರಲಿಲ್ಲ. ಆದರೆ ಮಹಾನುಭಾವ ಊರು ಬಿಟ್ಟು ಓಡಿಹೋಗುವ ಸ್ಥಿತಿಗಿಂತ ಪುತ್ತೂರಲ್ಲಿ ಶಿಕ್ಷಣ ಮುಂದುವರಿಸುವುದು ಲೇಸೆಂದು ತಿಳಿದರು. ಪುತ್ತೂರುಸೇರಿದ ಮೇಲೆ, ನಾಗರಾಜನು ತನಗೆ ಬೇಕಾಗುವ ಹಣಕಾಸಿನ ಏರ್ಪಾಡುಗಳನ್ನು ಹಟದಿಂದ, ಅಳುವಿನಿಂದ, ಬಾಯಿಪಠಾಕಿಯಿಂದ ಗಳಿಸಿಯೇ ಗಳಿಸುತ್ತಿದ್ದ. ಗೆಳೆಯ ಅಚ್ಚುತನಿಗೆ ಆಗಾಗ ಕಾಫಿ ಕುಡಿಯಿಸಿ, ತನ್ನ ಔದಾರ್ಯವನ್ನು ವ್ಯಕ್ತಪಡಿಸಲು ಹಿಂಜರಿಯುತ್ತಿರಲಿಲ್ಲ. ಆದರೆ ಈ ಹೊತ್ತು ಅಚ್ಚುತನಿಗೆ ಈ ಗೆಳೆಯನೊಡನೆ ತನಗೆ ಬಂದಿರುವ ಪತ್ರದ ವಿಚಾರ ತರ್ಕಿಸಲು ಮಾತ್ರ ಮನವಾಗಲಿಲ್ಲ.

ಕತ್ತಲು ಕವಿಯುವುದರಲ್ಲಿ ಇಬ್ಬರೂ ಬೇರಾದರು; ಅಚ್ಯುತ ತನ್ನ ಹಾಸ್ಟೆಲನ್ನು ಸೇರಿದನು. ಅವನ ಕಿಸೆಯಲ್ಲಿ ಕಾಗದವಿತ್ತು. ಊಟಕ್ಕೆ ಮೊದಲೂ ಅನಂತರವೂ ಅದನ್ನು ಆಗಾಗ ನೋಡುತ್ತಿದ್ದನು. ಆದರೆ 'ಯಾರನ್ನು ಕೇಳಲಿ?' ಎಂದು ನಿರ್ಧಾರವಾಗಲೊಲ್ಲದು. ಊಟ ಮುಗಿಸಿ, ಮರುದಿನದ ಓದಿನ ಸಿದ್ಧತೆ ನಡೆಯಿಸಬೇಕೆಂದು ದೀಪದ ಮುಂದೆ ಪುಸ್ತಕ ಬಿಡಿಸಿ ಕುಳಿತಾಗ ವಾರ್ಡನರ ಸವಾರಿ ಬಂದಿತು. ಅವರಾಗಿ 'ಅಚ್ಯುತ, ಆಗ ನಾನು ಮುಟ್ಟಿಸಿದ ಕಾಗದ ಎಲ್ಲಿಂದ! ಊರಿಂದಲೇನು? ಈ ತಿಂಗಳ ಹಾಸ್ಟೆಲು ಫೀಸು ಕಳುಹಿಸಿದ್ದಾರಂತೇನು?'--ಎಂದರು. ಅಚ್ಯುತನು-'ಹಣ ಕಳಿಸಿಲ್ಲ. ಅದರ ಬದಲು ಊರಿಗೆ ಬಾ, ಎಂದು ಬರೆದಿದ್ದಾರೆ' ಎಂದ! "ಏನು ಮನೆಯಲ್ಲಿ ಮದುವೆಯೋ? ಮುಂಜಿಯೋ? ಎಪ್ರಿಲಿಗೆ ಇನ್ನು ಒಂದು ತಿಂಗಳಿರುವುದು. ಅದರಲ್ಲಿಯೂ ಪಾಠಕೆಡಿಸಿ ಊರಿಗೆ ಯಾಕೆ ಹೋಗುವುದಂತೆ" ಎಂದರು.

ಅಚ್ಯುತನ ಮುಖ ಸಪ್ಪಗಾಯಿತು. 'ಹಾಗಲ್ಲ. ಇನ್ನು ಮುಂದೆ ಓದು ಸಾಕು ಎನ್ನುತ್ತಾರೆ. ಹಾಗಿದ್ದರೆ ಎಪ್ರಿಲಿನ ತನಕ ಯಾಕೆ ಓದಬೇಕು, ಎನ್ನುವುದು ಅಮ್ಮನ ಯೋಚನೆ' ಎಂದನು.

ಅಚ್ಯುತನ ವಿಷಯ ವಾರ್ಡನರು ತಿಳಿಯದವರಲ್ಲ—ಅವರ ಹಿಂದಣ ದಿನಗಳ ಸುಸ್ಥಿತಿಯೂ, ಇಂದಣ ಕಠಿಣ ಕಾಲವೂ ತಿಳಿದಿತ್ತು. ಅಲ್ಲದೆ ಆರ್ಥಿಕ ಕ್ಷೀಣತೆ ಊರಲ್ಲಿ ತಲೆದೋರಿದುದರಿಂದ ಹಲವು ಹಿರಿಯರು ತಮ್ಮ ಬಾಲಕರನ್ನು ಮನೆಗೆ ಕರೆಯಿಸಿಕೊಂಡಿದ್ದರು. ಎಂಬತ್ತು, ನೂರು ಬಾಲಕರಿಂದ ತುಂಬಿದ ವಿದ್ಯಾರ್ಥಿ ಮಂದಿರವು ಈಗ ಅರೆವಾಸಿ ಬಾಲಕರನ್ನು ಉಳಿಸಿಕೊಳ್ಳಲು ಶಕ್ತವಾಗಿಲ್ಲ. ಹೀಗಿರಲು 'ಅಚ್ಯುತನೂ ತಪ್ಪಿದರೆ ಅಷ್ಟೊಂದು ಸಂಖ್ಯೆ ಬರಿದಾಯಿತೆಂದು ತಿಳಿದರು. ಅಲ್ಲದೆ ಇತರರಂತೆ ಅಚ್ಯುತನಿರಲಿಲ್ಲ. ಓದಿನಲ್ಲಿ ಆತ ನಿಜಕ್ಕೂ ಜಾಣನಾಗಿದ್ದ. ಗುಣನಡತೆಗಳಲ್ಲಿಎಲ್ಲರಿಗೂಬೇಕಾದ ಹುಡುಗನಾಗಿದ್ದ. 'ಯಾವ ಹಾಳು ಹರಟೆಗೂ ಇಲ್ಲದ ಹುಡುಗನೆಂದು,' ಅವರು ಆದರ್ಶ ವಿದ್ಯಾರ್ಥಿಯ ಸಾಲಿಗೆ ಸೇರಿಸಿದ ಬಾಲಕನೇ ಶಾಲೆಯನ್ನು ಬಿಡುವನೆಂಬ ಸಂಗತಿಯು ಅವರಿಗೂ ತುಂಬ ವ್ಯಥೆಯನ್ನು ಉಂಟುಮಾಡಿತು.

ಅವರೆಂದರು 'ಹಾಂ-ಈ ನಡುವಿನಲ್ಲಿ ಬಿಟ್ಟುದರಿಂದ ಏನು ಬಂ

ತು? ಇಷ್ಟು ಕಲಿತುದೂ ವ್ಯರ್ಥವಲ್ಲವೇ? ಇದು V ಫಾರ್ಮ್. ಒಂದು S. S. L. C. ಯಾದರೂ ಆಗದೆ, ಓದಿ ಏನು ಮಣ್ಣಿನ ಪ್ರಯೋಜನವಿದೆ? ನಿನಗೇನು ಊರಲ್ಲಿ ಜಮೀನುದಾರಿಯೇ? ಪಟೇಲಿಕೆಯೇ. ಒಂದು S. S. L. C. ಯಾದರೆ ನಾಳೆ ಏನಾದರೂ ಮಾಡಿಕೊಂಡಿರಬಹುದು. ಕೊನೆಗೆ ಹಳ್ಳಿಯ ಮಾಸ್ತರಿಕೆಯಿಂದಲಾದರೂ ಇಪ್ಪತ್ತು, ಮೂವತ್ತು ರೂಪಾಯಿಗಳನ್ನೂ ಗಳಿಸಬಹುದು'-ಎಂದರು.

'ಯಾವುದಕ್ಕೂ ಅಮ್ಮ ಕೇಳಬೇಕಲ್ಲ! ಹಣದ ಮುಗ್ಗಟ್ಟು ಎಂದು ಬರೆದಿದ್ದಾಳೆ. ಈ ತಿಂಗಳಲ್ಲಿ ಫೀಸು ಕೊಡುವುದೇ, ಮುಂದಿನ ತಿಂಗಳಲ್ಲಿ ಕಂದಾಯ ತೆರುವುದೇ-ಎಂದು ಅವಳಿಗೆ ಯೋಚನೆ. ಅಲ್ಲದೆ ತಂದೆಯವರು ಆಚೆಯೂ ಇಲ್ಲ ಈಚೆಯೂ ಇಲ್ಲ' ಎಂದನು. ಬಾಲಕನ ಕಣ್ಣಿನಿಂದ ನೀರು ಮಿಡಿಯಿತು. ವಾರ್ಡನರು 'ಸುಮ್ಮನಾಗು. ಇರಲಿ, ನಾನು ನಿಮ್ಮ ಮನೆಗೊಂದು ಕಾಗದ ಬರೆಯುತ್ತೇನೆ. ಈ ವರ್ಷ ಹೇಗೂ ಕಳೆಯಲಿ. ರಜೆಯಲ್ಲಿ ನೀನು ಊರಿಗೆ ಹೋದರೆ ಸಾಕು. ನೋಡುವಾ-ಏನಾದರೂ ಸ್ಕಾಲರ್‌ಶಿಪ್, ಗಿಪ್ ದೊರೆಯಿಸಲು ಬಂದೀತೋ — ಎಂದು. ಕಳೆದ ವರ್ಷವಾದರೂ ಒಂದೆರಡು ಫ್ರೀಶಿಪ್ ಇರುತ್ತಿತ್ತು.... ಈ ವರ್ಷ ಕಳೆಯಲಿ........

"S. S. L. C. ಯನ್ನಾದರೂ ಮಗು, ನೀನು ಮುಗಿಸಿಯೇ ಶುದ್ಧ. ನನ್ನಿಂದ ಆದ ಸಹಾಯ ನಾನು ಮಾಡುತ್ತೇನೆ. ಪರೀಕ್ಷೆ ಬಂದಿತು; ಬೇರೆಯೇನು ಯೋಚನೆಬೇಡ. ನೀನು ಚೆನ್ನಾಗಿ ಓದಿ ಅಭ್ಯಾಸ ಮಾಡು. ದೇವರು ನಡೆಯಿಸಿದ ಹಾಗೆ ಆಗುತ್ತದೆ" ಎಂದರು.

ಅಚ್ಚುತನ ಮನಸ್ಸಿನ ಭಾರ ತುಂಬ ಇಳಿಯಿತು. ಅವನ ಎದೆ ನುಡಿಯುತಿದ್ದ ಬಯಕೆಗಳನ್ನು ವಾರ್ಡನರ ನುಡಿಗಳು ಅನುಮೋದಿಸಿದುವು. ಮೇಲೆ ತಾನು ಏನೆಂದು ತಾಯಿಗೆ ಬರೆಯಲಿ—ಎಂಬ ಸಂದಿಗ್ಧವನ್ನು ತಾವು ನಿವಾರಿಸುವುದಾಗಿ ಅವರು ಭರವಸೆ ಕೊಟ್ಟರು. ಸಾಲದುದಕ್ಕೆ ಮುಂದಿನ ವರ್ಷ ತಮ್ಮಿಂದಾದ ಸಹಾಯ ಮಾಡುವೆನಾಗಿಯೂ ಮಾತು ಕೊಟ್ಟರು. ಅವೆಲ್ಲ ನೆರವುಗಳು ಹೇಗೆ ಕೈಗೂಡುವುವು ಎಂದು ಅವನಿಗೆ ಅನುಮಾನವಾಗಿ ಕಂಡರೂ ಮನಸ್ಸು ಹಗುರವಾಯಿತು. 'ಆದೀತು. ಮುಂದೆ ಏನಾದರೂ ಆದೀತು' ಎಂದು ತೋರಿತು. ಅವನು ದೇವರ

ಮೇಲೆ ಭಾರ ಹಾಕಿದನು. ಈ ತನಕ ಪ್ರತಿ ಸೋಮವಾರ ಊರಿನ ಮಹಾಲಿಂಗೇಶ್ವರನ ಗುಡಿಗೆ ಹೋಗುತಿದ್ದವನು, ಇನ್ನು ನಿತ್ಯವೂ ದೇವರಿಗೊಮ್ಮೆ ಸುತ್ತು ಸುತ್ತಿ ಬರುತ್ತೇನೆ, ಅಂದುಕೊಂಡನು.

ಮುಂದೆ ತೆರೆದ ಪುಸ್ತಕವನ್ನು ಮಡಿಸಿದ. ವಾರ್ಡನರು ಹೊರಟು ಹೋದ ಮೇಲೆ ಅವನ ಕಣ್ಣುಗಳು ನೀರು ಸುರಿಸಿದುವು. ಆತ ದೀಪ ನೊಂದಿಸಿ ಮಲಗಿಕೊಂಡನು.



## ೨ನೆಯ ಅಧ್ಯಾಯ

ಲಕ್ಷ್ಮಿಯು ದಿನಂದಿನ ಮಗನ ಹಾದಿಯನ್ನು ಕಾಯುತಿದ್ದಾಗಲೇ ಅಂಚೆಯವನು ಪುತ್ತೂರಿನಿಂದ ಕಾಗದವನ್ನು ತಂದು ಕೊಟ್ಟನು. ಅಂಚೆಯವನು ಮನೆಗೆ ಕಾಲಿರಿಸುವುದನ್ನು ಕಂಡ ಕೃಷ್ಣರಾಯರು, ಮಂಚದಿಂದಲೇ "ಯಾರು ಟಪ್ಪಾಲಿನವನೇ? ಮಗು ಕಾಗದ ಬರೆದಿದ್ದಾನೆಯೇ? ಹಣ ಬೇಕೆಂದು ಬರೆದಿದ್ದಾನೆಯೋ ಏನೋ. ಎಲ್ಲಿಂದ ಹಣ ತರಲಿ!"-ಎಂದು ಉಸಿರಾಡಿದರು. ಅಂಚೆಯವನಿಂದ ಕಾಗದ ಕೊಂಡು "ಲಕ್ಷ್ಮೀ, ನೋಡು ಟಪ್ಪಾಲಿನವನು ಬಂದಿದ್ದಾನೆ. ಬಾಯಾರಿಕೆ ಬೇಕೋ ಏನೋ" ಎಂದರು. ಆಕೆ ಹೊರಗೆ ಬಂದು, "ಎಲ್ಲಿ, ಮಗುವಿನ ಕಾಗದ ಬಂದಿತೆ! ಏನು ಬರೆದಿದ್ದಾನೋ?" ಎಂದಳು. "ನೀನು ಮೊದಲು ಅವನಿಗೆ ಬಾಯಾರಿಕೆಗೆ ಇಷ್ಟು ಬೆರಸಿನ ಮಜ್ಜಿಗೆಯನ್ನೋ, ಬೆಲ್ಲ ನೀರನ್ನೋ ತಂದುಕೊಡು" ಎಂದರು. ಆಕೆ-"ನಾಗಣ್ಣ, ಬೆರಸಿನ ಮಜ್ಜಿಗೆಯ ಕಾಲವಾಯಿತು. ಈಗ ಹಾಲಿನ ಬೊಟ್ಟೂ ಕಣ್ಣಿನಲ್ಲಿ ಕಾಣಲಿಕ್ಕಿಲ್ಲ; ಇಲ್ಲವೆಂದರೆ ಮೂರು ದನ, ಎರಡು ಎಮ್ಮೆಗಳುಂಟು. ಎಲ್ಲಾ ಒಟ್ಟು ಸೇರಿಸಿ ಕರೆದರೂ ಎರಡು ಕುಡಿತೆ ಹಾಲು ಬೇಡವೆ. ಹೊಟ್ಟೆಗೆ ಮಾತ್ರ ಈ ಬರಗಾಲದ ದಿನದಲ್ಲೂ ಹಿಂಡಿ, ತೌಡು ಹುಲ್ಲು ಎಂದು ಗಬಗಬನೆ ಮುಕ್ಕುತ್ತವೆ' ಎಂದಳು.

ನಾಗಣ್ಣನು ನಗುತ್ತ "ಅಮ್ಮ, ಇದ್ದ ಕಾಲದಲ್ಲಿ ನೀವು ಕೊಡಲಿ

ಲ್ಲವೆ? ನಾನು ಕುಡಿಯಲಿಲ್ಲವೇ? ಈಗ ಒಂದಿಷ್ಟು ನೀರು ಕೊಡಿ. ಇನ್ನು ನಾಲ್ಕು ಗ್ರಾಮವುಂಟು-ಹೋಗದೆ ಮಾರ್ಗವಿಲ್ಲ. ಬರಿಯ ಕಾಗದವಾದರೆ ಪತ್ರಾನುಪತ್ರ ಆಗಿ ಅವರಿಗೆ ಮುಟ್ಟಿಸಬಹುದಿತ್ತು. ಇದು ರಿಜಿಸ್ಟ್ರಿ. ಹೋಗಿ ದಸ್ಕತು ಪಡೆಯದೆ ಇರಲು ನಿರ್ವಾಹವುಂಟೇ?" ಎಂದನು. ಅಷ್ಟರಲ್ಲಿ ಬಾಯಾರಿಕೆಗೆ ಬೆಲ್ಲ ನೀರು ಬಂದಿತು. ಕುಡಿದು, ನಾಗಣ್ಣ ಹೊರಡಲು ಅಣಿಯಾದನು. ರಾಯರು "ಹೊತ್ತು ನೆತ್ತಿಗೇರಿತು. ಈ ಉರಿ ಬಿಸಿಲಲ್ಲಿ ಯಾವ ಗ್ರಾಮಕ್ಕೆ ಹೋಗುವುದು? ಊಟ ಮಾಡಿ, ಒಂದಿಷ್ಟು ಒರಗಿ ಹೋಗು" ಎಂದುಪಚರಿಸಿದರು. ನಾಗಣ್ಣನಿಗೆ ಒಳಗಿನ ಧ್ವನಿ ಹಾಗೇ ಮಾಡೆಂದು ಹೇಳುತ್ತಿದ್ದುದರಿಂದ "ಹೂಂ ಆಯಿತು" ಎಂದು ಕುಳಿತ.

ರಾಯರು ಕಾಗದವನ್ನು ಬಿಡಿಸಿ ತೆಗೆದರು. ಕೊನೆಗೆ "ಲಕ್ಷ್ಮಿ, ಕನ್ನಡಕವಿಲ್ಲದೆ ಮೂರು ಗೆರೆ ಸಹ ಕಾಣುವುದಿಲ್ಲ" ಎಂದರು. ನಾಗಣ್ಣನು ಮುಗ್ಗುಲ ಸರಿಗೆಯ ಬದಲು ಹಗ್ಗ ಕಟ್ಟಿದ, ತನ್ನ ಕನ್ನಡಕವನ್ನು ಕೊಟ್ಟನು ಅದನ್ನು ತುರುಕಿಸಿಕೊಂಡು, ದಿಂಬಿಗೆ ಅರ್ಧ ಒರಗಿಕೊಂಡು "ನೋಡಿದೆಯಾ ಲಕ್ಷ್ಮಿ, ಊರಿಂದೂರೇ ಹೀಗೆ ಹೇಳುತ್ತದೆ. ಅದೇನೆ ಸಮ" — ಎಂದರು. ಲಕ್ಷ್ಮಮ್ಮ "ಯಾರು, ಏನು ಬರೆದಿದ್ದಾರೆ" ಎಂದರೆ "ಅದೋ, — ಮಗುವಿನ ಸಂಗತಿ. ಅವನ ಮಾಸ್ತರರು ಬರೆದದ್ದು. ಹುಡುಗನ ವಿದ್ಯೆ ನಡುವಿನಲ್ಲಿ ಬಿಡಿಸಬೇಡಿ. ನಿಮ್ಮ ಹುಡುಗನಷ್ಟು ಚುರುಕಿನವರು ಓದದೆ ಇನ್ಯಾರು ಓದಬೇಕು? ಕಷ್ಟ ಕಾಲ ನಿಜ; ಮುಂದೆ ಬರುವ ಕಷ್ಟ ಕಾಲವನ್ನು ಅವನಲ್ಲದೆ ಬೇರೆ ಯಾರು ಇದಿರಿಸಬೇಕು? ಓದು ಒಂದು ಹಂತವನ್ನಾದರೂ ಮುಟ್ಟಿದರೆ ಆಗುತ್ತಿತ್ತು" ಎನ್ನುತ್ತಾರೆ. ನಾಗಣ್ಣನು ಹಿಂದಿನಿಂದಲೂ ಆ ಮನೆಗೆ ಬಂದು ಹೋಗುತ್ತಿದ್ದವನು. ಅವರ ಸದ್ಯದ ದುರ್ದೆಸೆ ಅರಿತವನು. ಆದುದರಿಂದ ಹಿತವಂದಿಗನೆಂದೇ "ದೇವರ ಮೇಲೆ ಭಾರ ಹಾಕಿ, ಅವರ ವಿದ್ಯೆ ಮೆಟ್ರಿಕ್ಕಾದರೂ ಮಾಡಿಸಿ; ಆ ಮೇಲೆ ನೋಡಬಹುದಲ್ಲ. ಈಗ ಅವರಿಗೆ ಪ್ರಾಯ ಹದಿನೈದು ಹದಿನಾರು ಆದೀತು. ಅವರೇನು ಸಾಗುವಳಿ ಮಾಡಲಿಕ್ಕೆ ಬಂದೀತೆ? ಮತ್ತೆ ನಿಮ್ಮ ಮುಗ್ಗುಲಿಗೆ ಈ ಸಮಯಕ್ಕೆ ಬೇಕೆಂದೆನಿಸಿದರೆ ಆ ವಿಚಾರವಂತು ಬೇರೆ, ಈ ವಿಚಾರ ಬೇರೆ" ಎಂದನು.

"ನನ್ನ ಮುಗ್ಗುಲಿಗೇ! ನಾನು ನಾಗಣ್ಣ, ಮಂಚ ಹಿಡಿದದ್ದು ನಿಜ. ನಡೆಯಲು ನನಗೆ ಕಾಲು ಬಾರದೆಂಬುದೂ ನಿಜ. ಆದರೆ ನೋಡು, ನನ್ನ ಎದೆ ತ್ರಾಣ ಗಟ್ಟಿಯಿದೆ. ಇನ್ನು ಐದು ವರ್ಷ ಕಾಲ ಬದುಕುತ್ತೇನೆಂಬ ಭರವಸೆ ನನಗಿದೆ. ಇದು ನನಗೆ ಶನಿಕಾಲ. ಆಯಿತು, ಸ್ವಲ್ಪ ಇನ್ನೂ ನಿಕೃಷ್ಟವಾದೀತು. ಆದರೆ ಕೊನೆಗೆ ಗುರುವಿನ ಬಲವಿದೆ. ಬದುಕಿಯೇನು-ಹುಷಾರಾದೇನು. ಮಗುವಿಗೊಂದು ಲಗ್ನ ಮಾಡಿಸಿ, ಅವನೊಬ್ಬ ವಕೀಲನಾದ್ದನ್ನು ಕಂಡು ಸತ್ತೇನು"

"ಅದು ನಿಜವಪ್ಪ. ಈಗಿನ ದಿವಸಗಳಲ್ಲಿ ಓದುಬರಹ ಮುಖ್ಯ. ಈ ನಿಮ್ಮ ಆಸ್ತಿಯು ಹುಟ್ಟುವಳಿ ಸ್ಥಿತಿ ಹೇಗಿತ್ತು? ಈಗ ಏನಾಯಿತು? ಹಿಂದಿನ ಖರ್ಚಿನ ಹತ್ತುಪಾಲು ಈಗಿನ ದಿನಕ್ಕೆ ಬೇಕಾಗಿರುವಾಗ, ಮಣ್ಣು ಏನು ಕೊಟ್ಟೀತು? ನನಗೂ, ನನ್ನ ಹುಡುಗ ಈ ವರ್ಷ ಎಂಟನೆಯಲ್ಲಿ ಇದ್ದಾನೆ,ಬೇಡಿಯಾದರೂ ಅವನಿಗೆ ಮೆಟ್ರಿಕ್ಕು ಮಾಡಿಸಬೇಕೆಂಬ ಹಟ" ಎಂದನು.

ಸರಿ— ಊಟಕ್ಕೆ ಮೊದಲು ಸ್ನಾನಮಾಡಿ ಬರುವೆನೆಂದು, ನಾಗಣ್ಣ ಹಳ್ಳಕ್ಕೆ ಹೋದನು. ಅವನದೇ ಕನ್ನಡಕ ಧರಿಸಿಕೊಂಡು ಕೃಷ್ಣರಾಯರು 'ಸಂಜಯ ಉವಾಚ' ಎಂದು ಗೀತೆಯ ಶ್ಲೋಕಗಳನ್ನು ಗಟ್ಟಿಯಾಗಿ ಹೇಳಲು ತೊಡಗಿದರು. ಮನೆಯ ಒಳಗೆಲಸಗಳಲ್ಲಿ ತಿರುಗಿ ಸೇರಿಕೊಂಡ ಲಕ್ಷ್ಮಮ್ಮ "ಇದೆಂಥ ಓದುವಿಕೆ? ಗೀತೆಯನ್ನು ಅಷ್ಟು ಗಟ್ಟಿಯಾಗಿ ಊರಿಗೇ ಕೇಳುವಂತೆ ಓದುವುದೇ? ಶೂದ್ರು ಗೀದ್ರು ಕೇಳಬಾರದಂತಲ್ಲ." ಎಂದು ಆಚೀಚೆ ನಾಗಣ್ಣನಿರಬಹುದೆಂದು ಧ್ವನಿ ತಗ್ಗಿಸಿ ಆಡಿದಳು. ರಾಯರು ನಗುತ್ತ, "ನಿನಗೆ ಅಜ್ಞಾನ ಲಕ್ಷ್ಮಿ. ಗೀತೆಯನ್ನು ಪರಮಾತ್ಮ ನಡುಯುದ್ಧದಲ್ಲಿ ಎಲ್ಲ ಜಾತಿಯವರ ಮುಂದೇನೆ ಹೇಳಿದ್ದಲ್ಲವೇ? ಅದರಲ್ಲೂ ನಾಗಣ್ಣ ಕೋಟಿಯವ; ರಾಮ ಕ್ಷತ್ರಿಯರ ಜಾತಿ. ಗೀತೆ ಹೇಳಿದ್ದು ಕ್ಷತ್ರಿಯರಿಗೇ. ಹಾಗೆ ನೋಡಲು ಹೋದರೆ ಗೀತೆ— ಬಾಂಬ್ರಿಗೇ ಹೇಳಿದ್ದಲ್ಲ" ಎಂದರು. ಲಕ್ಷ್ಮಿಗೆ ನಗು ಬಂದಿತು. ತುಸು ಮುನಿಸೂ ಆಯಿತು. "ಮೈಗೆ ತ್ರಾಣವಿಲ್ಲದೆ ಹೋದರೂ, ನಾಲಿಗೆಮಾತ್ರ ಕೂಪಿನ ಹಾಗೆ ಮಸೆದು ಇಟ್ಟುಕೊಂಡಿದ್ದೀರಿ" ಎಂದಳು.

"ಹೂಂ! ಅದಾದರೂ ಒಂದು ಹರಿತವಾಗಿರಬೇಕು. ಉಣ್ಣಲು

ಬಾಯಿ ರುಚಿಯಿಲ್ಲ. ತಿನ್ನಲು ಬಾರದ ನಾಲಿಗೆ ಆಡಲು ಬರಬಾರದೇ? ನನಗೆ 'ಬಂದಿಖಾನೆಯೇನು" ಎಂದರು. ಅಲ್ಲಿಗೆ ಅಡಿಗೆಯ ನೆನಪಾಗಿ "ಇವತ್ತು ಏನು ಅಡುಗೆ ಮಾಡುತ್ತೀಯ. ಆಯಿತೇ? ಯಾಕೋ ಅಷ್ಟು ದಿನಗಳಲ್ಲಿ ಈವತ್ತು ಒಂದು ದಿನ ಮಾತ್ರ ಸ್ವಲ್ಪ ಅಗ್ನಿ ಚುರುಕಾಗಿದೆ" —ಎಂದರು.

"ಅಡಿಗೆ-ಗುಜ್ಜೆ ಪಲ್ಯ. ಗುಜ್ಜೆ ಹುಳಿ"-

"ಬೇಳೆ ಸಾರು ಮಾಡಬಹುದಿತ್ತು, ಒಳ್ಳೆಯ ಒಗ್ಗರಣೆ ಹಾಕಿ"......

"ಬೇಳೆಯನ್ನು ಕಡಬಕ್ಕೆ ಹೋಗಿ ತರುವವರು ಯಾರು? ಮೇಲೆ ಅವರು ಎಷ್ಟು ಹಣ ಬಾಕಿ ನಿಲಿಸಿಕೊಂಡಾರು"

"ಹೋ! ಅವರಿಗೆ ಇನ್ನು ಸಲುವುದು ಬಾಕಿಯುಂಟು; ಅಲ್ಲವೆ? ಈ ವರ್ಷದ ರಾಮಪತ್ರೆಯನ್ನು ಅವರಿಗೇನೆ ಹಾಕಿಸುವ. ಒಂದು ಸಾರಿ ಅವರ ಲೆಕ್ಕಾಚಾರ ಮುಗಿಯಲಿ. ಇನ್ನು ಮಳೆಗಾಲದ ಸಾಮಾನುಗಳು ಬೇಕಲ್ಲ" —

"ಹೌದು. ರಾಮಪತ್ರೆ-ಅವರಿಗೆ ಹಾಕಿದರಾಯಿತು. ಅದನ್ನು ಹೊಸಮಠದ ಇದ್ದಿನಗೆ ಕೊಡುತ್ತೇನೆಂದು ಹೇಳಿದವರು ನೀವೇ. ಹೇಳಿ ಇನ್ನೂ ಆರು ದಿನವಾಗಲಿಲ್ಲ. 'ಇದ್ದಿನೆ, ಒಂದು ಕರೆಯುವ ದನ ಎಲ್ಲಿಂದಾದರೂ ಮಾಡಿಕೊಡು ಅಗ್ಗದಲ್ಲಿ' ಅಂದವರು ಯಾರು? ಅವನು ಮಾಡಲಿ, ಬಿಡಲಿ, ಅವನಿಗೆ ಕೊಡದೆ ಇವರಿಗೆ ಕೊಡಲಿಕ್ಕೆ ಬರುತ್ತದೆಯೇ? ಹಾಗೂ ಹೀಗೂ ಬೇಳೆಯಿಲ್ಲ."

"ತೊಗರಿಬೇಳೆ ಮನೆಗೆ ಹೊಗ್ಗಿಸದೆ ವರ್ಷವಾಯಿತೆಂದು ಕಾಣುತ್ತದೆ!"

"ಶಿವರಾತ್ರಿಗೆ ಎರಡು ದಿನ ಇರುವಲ್ಲಿಯ ವರೆಗೆ ಆಗಾಗ ಮಾಡಿ ಬಡಿಸಿಲ್ಲವೆ?"

"ಈ ವರ್ಷ ಶಿವರಾತ್ರಿಯ ತನಕವೂ ಬೇಳೆಬಂದಿತ್ತೇ? ಯಾವಾಗ ತಂದದ್ದು.... ಸುಬ್ರಮಣ್ಯ ಷಷ್ಠಿಯ ಮೊದಲಿಗೆ ಅಲ್ಲವೆ-.... ನಿಮ್ಮಹತ್ತಿರ ಮಾತನಾಡುವುದು ಯಾವ ಕರ್ಮಕ್ಕೆ! ಒಂದೂ ನೆನಪಿಲ್ಲ ಅಂದರೆ! ಉಂಡದ್ದೂ ಇಲ್ಲ; ಆಡಿದ್ದೂ ಇಲ್ಲ. ಅಯ್ಯೋ ದೇವರೆ! ಹೋಗಿ ಬೇಗ ಒಂದು ಒಗ್ಗರಣೆಹಾಕುತ್ತೇನ. ಹ್ಯಾಗೆಇಲ್ಲೇ ಬಟ್ಟಲಲ್ಲಿ ತಂದು ಕೊಡಲೇ

ಅಲ್ಲ ನಿನ್ನೆಯು ಹಾಗೆ ಅಡುಗೆ ಮನೆಗೆ ಬರುತ್ತೇನೆಂದು ಹಟ ಮಾಡು ತ್ತೀರಾ?"

"ನೀನು ಹೇಳಿದ ಹಾಗೆ! ಊಟ ಪಸಂದವಾದರಾಯಿತು. ಬೆಣ್ಣೆ ಯಿದ್ದರೆ ಒಂದು ಒಗ್ಗರಣೆ ಬಿಗಿದುಬಿಡು. ವಾತದವರಿಗೆ ಬೆಣ್ಣೆ ಆಗಬಾ ರದೇದಿಲ್ಲವಲ್ಲ"

"ಲಕ್ಷ್ಮಿಯು ನಗುತ್ತ" ವಾತಕ್ಕೆ ಬೆಣ್ಣೆ ಆಗಬಾರದೆಂದಿಲ್ಲ. ಬೇಳೆ ಮಾತ್ರ ಆಗಬಹುದು! ಅದರಲ್ಲೂ ತೊಗರಿ ಬೇಳೆ ಮಹಾಪಾಪ.

ಹೊತ್ತು ನೆತ್ತಿಗೇರುವಾಗ ರಾಯರು ಮಂಚವನ್ನಿಳಿದು ಅಡುಗೆ ಮನೆಗೆ ಬರುವ ಹಟ ಮಾಡಿದರು. ಹೆಂಡತಿಯ ಬಲವಂತದಿಂದ ಕುಳಿ ತಲ್ಲಿಂದಲೇ ಭೋಜನವಾಯಿತು. ಗುಜ್ಜೆಯ ಹುಳಿಯು ಸೊಗಸಾಗಿ ತ್ತೆಂದು ಚೆನ್ನಾಗಿ ಊಟ ಮಾಡಿದರು. ಆಕೆ ಅವರ ಮುಖವನ್ನು ನೀರಿ ನಿಂದ ಸವರುವ ವೇಳೆಗೆ, ನಾಗಣ್ಣ ಸ್ನಾನ ಮುಗಿಸಿ ಬಂದ. ರಾಯರಿಗೆ ನಾಚುಕೆಯಾದವರಂತೆ "ನಾಗಣ್ಣ ಎಲ್ಲರೂ ಸೇರಿ ನನ್ನನ್ನು ಮಗುವಿನ ಸ್ಥಿತಿಗೆ ತಂದುಬಿಟ್ಟಿದ್ದಾರೆ ನೋಡು. ಉಂಡ ಬಾಯಿ ಒರಸಿಕೊಳ್ಳಲು ನನಗೆ ಬರಲಾರದೇ?"

"ಬರುತ್ತಿದೆ. ಎಲ್ಲ ಬರುತ್ತೆ. ಕೊನೆಗೆ ಎರಡು ಸಲ ಹೆಚ್ಚು ಕದಲಿ ದರೆ, ರಾತ್ರಿ ಹಗಲು ಮೈನೋವೂ ಬರುತ್ತದೆ"-ಎಂದು ಲಕ್ಷ್ಮಿ ಆಡಿಹೋ ದಳು. ಮುಂದೆ ಮನೆಯವರ ಮತ್ತು ನಾಗಣ್ಣನ ಊಟವಾಗುವುದ ರಲ್ಲಿ ತೊಡಗಿತು. ನಾಗಣ್ಣ ಗುಜ್ಜೆಯ ಹುಳಿಯನ್ನು ತುತ್ತು ತುತ್ತಿಗೂ ಬಣ್ಣಿಸಿದನು. "ಅಮ್ಮ, ಈಗ ಗುಜ್ಜೆ ನಮ್ಮ ಮನೆಯಲ್ಲಿ ಕಡಮೆಯಿಲ್ಲ. ಗಂಟೆಗೆ ಅಕ್ಕಚ್ಚು ಬೇಯಿಸಿದಂತೆ ಬೇಯಿಸುತ್ತೇವೆ. ಆದರೆ ಅದು ಅಕ್ಕಚ್ಚೇ! ಒಂದು ದಿನ ಇಂಥಾ ಹುಳಿ ಆದದ್ದೂ ಇಲ್ಲ. ಒಂದು ಸಾರಿ, ನಮ್ಮವಳನ್ನು ಕರೆದುಕೊಂಡು ಬಂದು ನಿಮ್ಮ ಅಡುಗೆ ಉಣ್ಣಿಸಿ, ಚೆನ್ನಾಗಿ ಬಯ್ಯಬೇಕೆಂದಿದೆ. ಒಯಿನಿಲ್ಲದೆ ಮಾಡಿದರೆ ಅಡಿಗೆಯಲ್ಲ!" ಎಂದನು. ತಮ್ಮ ಹೆಂಡತಿಯ ದಿವ್ಯ ಪ್ರಶಂಸೆಯನ್ನು ಕೇಳಿ ರಾಯರು ಹಿಗ್ಗುವುದ ರಲ್ಲೇ ಒಮ್ಮಿಂದೊಮ್ಮೆಗೆ ಮೈನೋವೂ ತೊಡಗಿತು. ನರಳಲು ಪ್ರಾರಂ ಭವಾಯಿತು. 'ಅಯ್ಯೋ, ಮುರಿಯೋ' ಬಿಟ್ಟು ಬೇರೆ ಧ್ವನಿ ಹೊರಡದಾ ಯಿತು. ನಾಗಣ್ಣನ ಊಟ, ಮಜ್ಜಿಗೆಗೆ ಮೊದಲೇ ವಿರಸವಾಯಿತು.

ಅವನೂ ಎದ್ದು ಬಂದು, ಏನು ಮಾಡುವುದೆಂದು ದಿಗಿಲಾಗಿ, ರಾಯರ ವೇದನೆಯನ್ನು ನೋಡುತ್ತ ನಿಂತನು. ಲಕ್ಷ್ಮಮ್ಮ ತನ್ನ ಊಟವನ್ನು ಅರ್ಧದಲ್ಲಿ ಮರೆತು ಬಂದು, ಪತಿಯ ಬಳಿಯಲ್ಲಿ ಕುಳಿತಳು. ಅವರ ಮೈಗೆ ಅಲ್ಲಲ್ಲಿ ತೈಲ ಲೇಪನಮಾಡಿ ತಿಕ್ಕತೊಡಗಿದಳು. ಈಚೆ ತಿಕ್ಕಿದರೆ ಆಚೆ, ಆಚೆ ತಿಕ್ಕಿದರೆ ಈಚೆ--ಎಂದು ನರಳುತ್ತಲೇ ಇರುವ ಆ ವೇಳೆಗೆ ಏನು ಉಪಚಾರಮಾಡಿದರೂ ಒಂದೇ ಆಗಿತ್ತು. ನಾಗಣ್ಣ ಅಲ್ಲಿ ನಿಂತಿರಲಾರದೆ, ತನ್ನ ದಿನದ ಕೆಲಸವನ್ನು ನೆನೆದುಕೊಂಡು ಗ್ರಾಮಸಂಚಾರಕ್ಕೆ ಹೋದ. ಸುಮಾರು ಮೂರು ತಾಸುಗಳ ಉಪಚಾರ ನಡೆಯಿತು ರಾಯರು ಆಯಾಸದಿಂದ ಕಣ್ಣುದೂಗಿದರು. ನಿದ್ದೆಯು ಬಂದಿತು. ಅವರನ್ನು ಅಲ್ಲಿಯೇ ಮಲಗಿಸಿ ಲಕ್ಷ್ಮಮ್ಮ ಮುಸುರೆ ಮತ್ತೊಂದುಗಳ ಸೇವೆ ನಡೆಯಿಸಲು ಸರಿದಳು.

ಆ ರಾತ್ರಿ-ತಿರುಗಿ ಎಲ್ಲ ಶಾಂತವಾಗಿತ್ತು. ಹೊಟ್ಟೆ ಹಸಿವಿಗೆ ಏನೂ ಸಿಗದ ಚಿರತೆಯೊಂದು, ಅವರ ಹಿತ್ತಿಲಿಂದ ತುಸು ದೂರದಲ್ಲಿ ಆರ್ಭಟಿಸುತಿತ್ತು, ಕೃಷ್ಣರಾಯರು 'ಲಕ್ಷ್ಮಿ ಹಟ್ಟಿಯ ತಟ್ಟಿ ಬಿಗಿದಿದೆಯೋ ನೋಡಿ ಬಾ' ಎಂದರು. ಲಕ್ಷ್ಮಿಯು ನಿತ್ಯ ಮನೆ ಕಾವಲಿಗೆ ಬರುವ ಹೊಲೆಯನನ್ನು ಕರೆದು 'ದೂಮಾ! ನೋಡು ಹಟ್ಟಿಯ ಬಾಗಿಲು ಬಿಗಿದಿದೆಯೋ ಎಂದು. ಈ ಹಾಳು ಹುಲಿಗೆ ಅಲ್ಲಿ ಕಾಡಿನಲ್ಲಿ ಹಂದಿಯೋ, ಮಿಗವೋ ಸಿಕ್ಕುವುದಿಲ್ಲವಂತೇನು?" ಎಂದುಗದರಿಸಿದಳು.

ದೂಮು ತೇಲುತ್ತ ಹಟ್ಟಿಯ ಕಡೆಗೆ ಹೋಗಿ ಬಂದ. ಮತ್ತೊ ಒಂದೆರಡು ತಾಸಿನ ತನಕ ಚಿರತೆಯ ಕೂಗು, ಸಮೀಪವೆಲ್ಲಿಂದಲೋ ಕೇಳಿಸುತಿತ್ತು. ಅದರಿಂದ ಮಲಗುವ ಮುಂಚೆ ತಾನೊಮ್ಮೆ ಹಟ್ಟಿ ನೋಡಿ ಬರುತ್ತೇನೆಂದು, ಚಿಮಿಣಿ ಹಿಡಿದು ಲಕ್ಷ್ಮಮ್ಮ ಹಿಂದಲ ಹಟ್ಟಿಯ ಸಮೀಪಕ್ಕೆ ಹೋದಳು. ಒಮ್ಮೆ ಗಾಬರಿಯಾಗಿ ದೀಪ ನಡುಗಿತು. ಸರಕ್ಕನೆ ಅವಳಿಗೆ ಕೆಲವು ಗಜ ದೂರದಿಂದಲೇ ಚಿರತೆ ಸರಿದುಹೋಯಿತು. 'ದೂಮ ಎಲ್ಲಿ ಸತ್ತೆಯೋ. ಹುಲಿ ಇಲ್ಲೇ ಸುಳಿದಾಡುತ್ತಿದೆ. ಒಂದು ಚಿಮಿಣಿ ಡಬ್ಬಿ ಬಡಿಯಬಾರದೇ? ಅವನೆಲ್ಲೋ ಬಿದ್ದುಕೊಂಡಿರಬೇಕು' ಎಂದು ಹಟ್ಟಿಗೆ ಹೋದಳು. ಹಟ್ಟಿಯ ತಟ್ಟಿ ಸಾಚಿತ್ತು. ಬಿಗಿದಿರಲಿಲ್ಲ. ಅಬ್ಬ! ದೂಮನೇ! ತಟ್ಟಿ ಬಿಗಿಯಲು ಧಾಡಿ. ನಾನು ಬಾರದೆ ಹೋಗಿ

ದ್ದರೆ, ಒಂದು ದನವೋ ಕರುವೋ ಹೋಗುತ್ತಿತ್ತಲ್ಲ'-ಎಂದು ಒಳಗಿರುವ ದನಕರುಗಳನ್ನು ಎಣಿಸಿ,ತಟ್ಟಿ ಬಿಗಿದು,ಮಗ್ಗುಲ ಬತ್ತಕುಟ್ಟುವ ಚಾವಡಿ ಯಲ್ಲಿ ಗೊರಕೆ ಹೊಡೆಯುತ್ತ ಮಲಗಿದ್ದ ದೂಮನನ್ನು ಕೂಗಿ, ಎಚ್ಚರಿಸಿದಳು. ಅವನು ಅರೆಸಿದ್ಧವಿಯಲ್ಲಿ,ಆಜ್ಞೆಯಾದಂತೆ,ಚಿಮಿಣಿ ಡಬ್ಬಿಯನ್ನು ಅಶಕ್ತ ಕೈಗಳಿಂದ ಬಡಿದನು....'ಹುಯ್ಯೊ ಹುಯ್ಯೊ'--ಎಂದು ಎರಡು ಬಾರಿ ಕೂಗಿ ಮಲಗಿಕೊಂಡನು. ಲಕ್ಷ್ಮಮ್ಮ ಅವನ ಸ್ಥಿತಿಯನ್ನು ನೋಡಿ 'ಒಂದುದಿನ ಈ ಕೂಸನನ್ನೇ ಹುಲಿ ಹಿಡಿದುಕೊಂಡುಹೋಗಲಿಕ್ಕುಂಟು. ಇವನು ಹೀಗೇನೆ ನಿತ್ಯ ಕುಡಿದು ಬಿದ್ದಿದ್ದರೆ' ಎಂದು ಮನೆಗೆ ಹೋದಳು.

ಹೋದವಳೇ ಗಂಡನೊಡನೆ 'ನೋಡಿ, ನಾನು ಹೋದುದಕ್ಕಾಯಿತು. ನನ್ನ ಮೈಯನ್ನು ಹಾದುಕೊಂಡು ಹೋದಂತೆ ಹೋಗಬೇಕಾದರೆ; ಅಬ್ಬ! ಅದರ ಸೊಕ್ಕೇ' ಎಂದಳು. ಇಬ್ಬರೂ ಮಾತನಾಡುತ್ತ ಕುಳಿತರು.ಕೃಷ್ಣರಾಯರು ಹುಲಿಯ ಮಾತಿನಿಂದ ಮಗನ ಮಾತಿಗೆ ಬಂದರು. 'ಒಟ್ಟಾರೆ ನಮ್ಮ ಹಿರಿಯರು, ಈ ಕಾಡು ಕೊಂಪೆಗೆ ಬಂದು, ಇಲ್ಲಿ ಆಸ್ತಿ ಮನೆ ಮಾಡುವ ಬದಲು, ಸ್ವಲ್ಪ ಕರಾವಳಿಗೆ ಹೋಗಿರುತ್ತಿದ್ದರೆ ಎಷ್ಟು ವಾಸಿಯಿತ್ತು. ಇಲ್ಲಿ ಯಾವ ಮಣ್ಣಿನ ಅನುಕೂಲತೆಯಂತೆ! ಒಂದು ಪಾವು ಬೇಳೆ ಬೇಕಾದರೆ ಕಡಬಕ್ಕೆ ಹೋಗಬೇಕು. ಒಂದು ಅರಿವೆ ಚೂರಿಗೆ ಉಪ್ಪಿನಂಗಡಿಯನ್ನೋ ಪುತ್ತೂರನ್ನೋ ಕಾಣಬೇಕು. ಮಗುವಿಗೆ ವಿದ್ಯಾಭ್ಯಾಸವಾಗಲು ನಾವು ಅವನನ್ನು ಬಿಟ್ಟಿರಬೇಕು'-ಎಂದರು.

'ಹಾಗಾದರೆ ಅವನು ಶಾಲೆಯಲ್ಲಿರುವುದೇ ಗಟ್ಟಿಯೆಂದ ಹಾಗಾಯಿತಲ್ಲ. ಮತ್ತೆ ನಡುವೆ ಒಮ್ಮೆ ವಾತ ತೊಡಗಿತು ಎನ್ನುವಾಗ ನೀವು ಮಾಡುವ ನಮೂನೆ ಕಂಡು ನನಗೆ ಮಾತ್ರ ಕರುಳು ತಿವಿದ ಹಾಗಾಗುತ್ತದೆ. ಅವನಿದ್ದರೆ ಇಷ್ಟಾದರೂ ಧೈರ್ಯವಾಗುತಿತ್ತು. ಅಲ್ಲ ಮನೆಯಲ್ಲಿ ಬೇರೆ ಒಬ್ಬರಾದರೂ ಇದ್ದಾರೆಯೇ? ಆಳುಗಳಿವೆ, ದೂಮನ ಹಾಗಿನವು. ಇದ್ದರೇನು? ಮುಟ್ಟಿ* ನವೇ? ಹೊರಗಿನ ಕೆಲಸಕ್ಕಾಯಿತು. ಮೈಮುಟ್ಟಿ ಉಪಚಾರಮಾಡಲು ಯಾರು'-ಎಂದಳು. ಅವಳಿಗೆ ದುಃಖವಾಗಿ ಕಣ್ಣೀರು ಬಂದಿತು. ಕೃಷ್ಣರಾಯರು ಮಿದುವಾದರು. 'ಹೋಗಲಿ. ಎಲ್ಲ ಅವನು ರಜೆಗೆ ಬಂದಾಗ ನೋಡುವ. ಇನ್ನೊಂದು ತಿಂಗಳಿದೆಯಂತಲ್ಲ.

*ಸ್ಪೃಶ್ಯರು

ಅದರಲ್ಲಿ ಪ್ರಪಂಚ ಮುಳುಗುವುದೇನು? ಆಗ ದೇವರು ನಡೆಯಿಸಿದರೆ, ಸೀತುವನ್ನೂ ಮನೆಗೆ ಕರೆಯಿಸಬೇಕು. ಅವಳೀಗ ಮನೆಗೆ ಬಾರದೆ ವರ್ಷ ನಾಲ್ಕಾಗಲಿಲ್ಲವೆ?' ಎಂದರು.

"ಎಲ್ಲಿನ ನಾಲ್ಕು ವರ್ಷ? ಹಿಂದಲ ಷಷ್ಠಿಗೆ ಇಲ್ಲಿಗೆ ಬಂದು ಹೋದದ್ದಲ್ಲವೇ? ವರ್ಷವೂ ಮೂರು ತಿಂಗಳಾಯಿತು."

"ಹಾಗಾದರೆ ಬೇಸಗೆಗೆ ಅವಳನ್ನು ಕರೆಯಿಸಿಕೊಳ್ಳುವುದು ಬೇಡವೆನ್ನುತ್ತಿಯಾ?"

"ಕರೆಯಿಸ ಬೇಡವೆಂದೆನೇ ನಾನು. ಆದರೆ ಅವಳು ಬರಬೇಕಲ್ಲ. ಕೈಯಲ್ಲಿ ಮಕ್ಕಳನ್ನು ಚಚ್ಚಿಕೊಂಡು ಬರಬೇಡವೇ? ಎಲ್ಲವರನ್ನು ಕರೆದು ತರುವುದು ಸುಲಭವೇ? ಅಲ್ಲಿ ಬಿಡುವುದು ಸುಲಭವೇ? ಅದು ನಿತ್ಯ ಜಗಳ ತುಂಬಿದ ಮನೆ. ಇವಳು ತವರಿಗೆ ಹೊರಟರೆ, ಅವಳ ಗಂಡನ ಅಣ್ಣಂದಿರ ಹೆಂಗಸರು, ತಾವೂ ತಮ್ಮತವರಿಗೆ ಹೊರಡುತ್ತಾರೆ. 'ಪಾಲಾಗುತ್ತದೆ, ಪಾಲಾಗುತ್ತದೆ' ಎನ್ನುತಿದ್ದಳಪ್ಪ. ಇನ್ನೂ ಏನು ಆದ್ದೂ ಕಾಣುವುದಿಲ್ಲ" ಎಂದಳು.

ಸೀತಮ್ಮನ ಮನೆ ಸಮೀಪದಲ್ಲಿರಲಿಲ್ಲ. ಬಂಟ್ವಾಳದ ಸಮೀಪದ ಒಂದು ಹಳ್ಳಿಗೆ ಅವಳನ್ನು ಕೊಟ್ಟದ್ದು. ಸೀತೆ ಅಚ್ಚುತನಿಗಿಂತ ಹಿರಿಯವಳು. ಅವಳಿಗೀಗ ಇಪ್ಪತ್ತನಾಲ್ಕು ವಯಸ್ಸು. ಅಚ್ಯುತನಿಗೂ ಅವಳಿಗೂ ನಡುವೆ ಎರಡು ಸಂತಾನವಾಗಿ ಎಳೆತನದಲ್ಲೇ ಮೃತ್ಯುವಿನ ಪಾಲಿಗೆ ಸಂದಿದ್ದುವು. ಹೀಗಾಗಿ ಅವರಿಗೆ ಸೀತೆ-ಅಚ್ಚುತರಿಬ್ಬರೇ ಜ್ಯೋತಿಗಳು. ಸೀತೆಯು ಕೇವಲ ವಿಪಿನವಾಸದ ಸೀತೆಯೆನಿಸಿದ್ದಳು. ಅವಳು ಗಂಡನ ಮನೆಗೆ ಹೋಗಿ ಹದಿನೆರಡು ವರ್ಷಗಳಾಗಿದ್ದುವು. ಮದುವೆಯ ಮರುದಿನದಿಂದಲೇ ಅತ್ತೆಯ ಅಡಿದಾವರೆಯ ಕೆಳಗೆ ಗೃಹಕೃತ್ಯದ ಶಿಕ್ಷಣಕ್ಕೆ ಬಲಿಯಾಗಿದ್ದಳು. ಸೀತೆಯ ಗಂಡ ನರಸಿಂಹಯ್ಯ ಕಿರಿಯರು. ಅವರಿಗೆ ಎರಡೆರಡು ವರ್ಷಗಳ ಅಂತರದಲ್ಲಿ, ಶಂಕರಯ್ಯ, ನಾರ್ಣಯ್ಯರೆಂಬ ಸೋದರರು. ಎಲ್ಲರೂ ಒಟ್ಟಿಗೆ ಒಂದೇ ಕುಟುಂಬವಾಗಿ ವಾಸ ಮಾಡುತಿದ್ದರು. ನಾರ್ಣಯ್ಯನೇ ಮನೆಯ ಯಜಮಾನ. ಅವರ ತಾಯಿ ತೀರಿಕೊಂಡು ಈಗ ಆರು ವರ್ಷವಾಯಿತು. ಅಲ್ಲಿಯ ತನಕ ಮೂವರು ಸೊಸೆಯಂದಿರು, ಒಮ್ಮತವಾಗಿದ್ದರು. ಹಾಗಿಲ್ಲದೆ ಆ ಅತ್ತೆಯ ಇದಿರು

ಕಾದಾಡುವುದು ಸಾಧ್ಯವಿರಲಿಲ್ಲ. ಈ ಆರು ವರ್ಷಗಳಿಂದ ಅವರೆಲ್ಲ ರದೂ ಬೇರೆಯೇ ಬಣಗಳಾಗಿಬಿಟ್ಟಿವೆ. ಮೂವರು ಸೋದರರಲ್ಲೂ ಸಿಕ್ಕ ಕಾಳಗಗಳು. ಮೂರು ಮಂದಿ ಗೃಹಿಣಿಯರಲ್ಲೂ ವಾಗ್ಯುದ್ಧಗಳು. ಮೇಲೆ-ತೀರ ಹಿರಿಯರಿಗೆ ನಾಲ್ವರು ಗಂಡುಮಕ್ಕಳು, ನಡುವಿನವರಿಗೆ ಒಂದೇ ಹುಡುಗಿ; ಮದುವೆಗೆ ನೆರೆದವಳು. ನರಸಿಂಹಯ್ಯಗೆ ಏಳು ಮಂದಿ ಸಂತಾನ. ಈಗ ಕಳೆದುಳಿದು ನಾಲ್ಕು ಕೂಸುಗಳಿದ್ದುವು. ಈ ದೊಡ್ಡ ಕುಟುಂಬಕ್ಕೆ ಭೂಮಿಯದೇ ವರಮಾನ. ಸುಮಾರು ಅರು ವತ್ತು ಮುಡಿ ಅಕ್ಕಿಯಷ್ಟು ಉತ್ಪನ್ನ. ಮನೆಯವರೆಲ್ಲರೂ ಬೇಸಾಯ ಮಾಡಿದರೆ ಇನ್ನೂ ಇಪ್ಪತ್ತು ಮುಡಿ ಅಕ್ಕಿ ವರಮಾನ ಸಿಗಬಹುದು. ಆದರೆ ಎರಡನೆಯ ಶಂಕರಯ್ಯನಿಗೆ ಈ ಜನಗಳ ಹಿಂಡು ಬೇಡಾಗಿದೆ. ತಾನು, ಮಗಳು, ಹೆಂಡತಿ, ಪಾಲುಮಾಡಿಕೊಂಡು ಬೇರೆಯಾಗುವ ಮನಸ್ಸು; ಒಟ್ಟಿಗಿದ್ದರೆ ಯಾರಿಗೂ ಏನೂ ತಿನ್ನಲು ಸಿಗುವಂತಿಲ್ಲ ಎಂಬ ಭೀತಿ.

ಅಂತು ಮನೆಯ ಆಸ್ತಿ ಪಾಲಾಗುವುದೆಂದು ಊರಲ್ಲಿ ಸುದ್ದಿ ಹರಡಿ ಎರಡು ವರ್ಷವಾಯಿತು. ಅದರಬಳಿಕ ಅವರ ಜಗಳಗಳಿಂದ ಪಾಲಾಗಿ ಒಡೆದ ಮಡಿಕೆಗಳ ಸಂಖ್ಯೆ ಇಪ್ಪತ್ತಾದರೂ ಆಗಬಹುದು. ಆದರೆ ಆಸ್ತಿ ಪಾಲಾದವಾರ್ತೆ ಕೃಷ್ಣರಾಯರಿಗೆ ಮುಟ್ಟಿರಲಿಲ್ಲ. ಕೃಷ್ಣರಾಯರ ಅಭಿಪ್ರಾಯ-ಅಲ್ಲಿ ದೊರೆತ ಪಾಲನ್ನು ಅಳಿಯ ವಿಕ್ರಯಿಸಿ, ಅದೇವೊಬ ಲಗನ್ನು ಕಡಬಕ್ಕೆ ಸಮೀಪವಾಗಿ ಬೇರೊಂದು ಆಸ್ತಿ ಕೊಳ್ಳುವುದರಲ್ಲಿ ಉಪಯೋಗಿಸಬಹುದೆಂದು. ಇತ್ತ ಅಳಿಯನಿಗೂ ಆ ಊರು, ಬಳಗ ಬೇಡವಾಗಿದೆ. ಆದರೆ ಪಾಲುಕೊಂಡು ಆ ಮನೆಯಲ್ಲಿರಲಾರನು. ಹೊರ ಡುವುದು ಎಲ್ಲಿಗೆ ಎಂದು ತಿಳಿಯದು. ಇಪ್ಪತ್ತು ಮುಡಿಯಷ್ಟು ಹುಟ್ಟು ವಳಿ ಭೂಮಿ ದೊರೆತರೆ, ಅದರ ಬೆಂಗಡೆಯಲ್ಲಿ ಇನ್ನೂರು ಮುನ್ನೂರು ರೂಪಾಯಿಗಳ ತಗಾದೆಯ ಸಾಲವೂ ಇದೆ. ಇತ್ತ-ಆಸ್ತಿಯನ್ನು ವಿಕ್ರ ಯಿಸುವ ಕಾಲವೂ ಅದಲ್ಲ. ಮಾರಿದರೆ ಚೆನ್ನಾದ ಬೆಲೆ ಸಿಗುವಂತೆಯೂ ಇರಲಿಲ್ಲ. ಇಲ್ಲಿ ಲಕ್ಷ್ಮಮ್ಮ ತನ್ನ ಗಂಡನೊಡನೆ ಮಗಳ ಮನೆಯ ವಿಚಾರ ಮಾತನಾಡುತ್ತಿರುವ ದಿನಕ್ಕೆ ನಾಲ್ಕಾರು ದಿನ ಮುಂಚಿತವಾಗಿ, ಅಲ್ಲಿ ಅಣ್ಣ ತಮ್ಮದಿರಲ್ಲಿ ಕಾವುಗೊಂಡು ಪಾಲಿನ ನಿರ್ಣಯವಾಗಿತ್ತು. ಕೊನೆಗೆ

ಪಾಲನ್ನುಮಾಡಿ ಒಪ್ಪಿಕೊಂಡೂ ಆಗಿತ್ತು. ಫಾಲ್ಗುಣ ಕೊನೆಯೊಳಗೆ ತಮ್ಮಂದಿರಿಬ್ಬರು ಹಿರಿಯರ ಮನೆಯನ್ನು ಅಣ್ಣನಿಗೇನೆ ವಾಸಕ್ಕೆ ಬಿಟ್ಟು ಕೊಟ್ಟು, ತಾವು ಬೇರಾಗಬೇಕೆಂದು ಗೃಹಸ್ಥರ ಮುಂದೆ ತೀರ್ಮಾನವಾಗಿ ಹೋಗಿತ್ತು. ಆ ಸಂಗತಿ ಮಾತ್ರ ಇವರಿಗೆ ತಿಳಿದಿರಲಿಲ್ಲ.

ರಾತ್ರಿ ಕೃಷ್ಣರಾಯರಿಗೆ ನಿದ್ದೆ ಕಡಮೆ. ಅದೂ ಆ ದಿವಸ ಹಗಲು ನಿದ್ದೆಯಾಗಿದ್ದುದರಿಂದ ನೋವು ಕಳೆದು, ಉಲ್ಲಾಸವಾದುದರಿಂದ ಸಹಧರ್ಮಿಣಿಯೊಡನೆ ಹರಟುತ್ತಲೇ ಇದ್ದರು. ಅವರ ಮನಸ್ಸು-ಮಗನೂ ಮಗಳೂ ಮನೆಗೆ ಬರುವ ದಿನವನ್ನು ನಿರೀಕ್ಷಿಸುತ್ತಲಿತ್ತು. ಮಗನ ಮದುವೆಯ ಪ್ರಸ್ತಾಪವನ್ನು ಅವರು ಮಾಡದೆಯೂ ಇರಲಿಲ್ಲ. "ಮೊದಲಿನ ಸ್ಥಿತಿಯಾಗಿದ್ದರೆ ಕೇಳಿದಲ್ಲಿಂದ ಹುಡುಗಿ ತರಬಹುದಿತ್ತು. ಈಗ ಹಾಗೇನು? ಹುಡುಗಿಯ ಮನೆಯವರಾದರೂ ಚೆನ್ನಾಗಿರಬೇಡವೇ? ಒಂದಲ್ಲ ಒಂದು ದಿನ, ಸೋತಕಾಲಕ್ಕೆ ಅಳಿಯನನ್ನು ಚೇತರಿಸುವ ಹಾಗಿರಬೇಡವೇ?"—ಎನ್ನುವರು. ಮರುಗಳಿಗೆಗೆ ಜಾತಕದ ಫಲದ ನೆನಪಾಗುವುದು. "ಆದೀತು, ದೇವರು ನಡೆಯಿಸಿಯಾನು. ಸ್ತ್ರೀಧನದ ಯೋಗ ತಪ್ಪಲಾರದು. ನನಗೂ ಏನು ಅವಸರ! ದೇವರು ನಾಲ್ಕು ವರ್ಷಕಾಲ ನಡೆಯಿಸಿ, ಸಂಧಿಕಾಲ ತಪ್ಪಿಸಿದರೆ, ಮುಂದೆ ಗುರು ಶುಕ್ರರ ಅನುಗ್ರಹ ಚೆನ್ನಾಗಿ ಉಂಟು"—ಎಂದು ಹಿಗ್ಗಿ, ಮಾತನಾಡುತ್ತಾ ಮಲಗಿದರು. ಲಕ್ಷ್ಮಿಗೆ ಮಾತು ಕೇಳುತ್ತ ಕೇಳುತ್ತಿರುವಾಗಲೇ ಒಂದೆರಡು ತೂಕಡಿಕೆಗಳಾಗಿ, ಕೊನೆಗೆ ಚಾವಡಿಯ ಬೇರೊಂದು ತುದಿಯಲ್ಲಿ ಹಾಸುಗೆ ಹಾಸಿ ನಿದ್ದೆ ಹೋದಳು.

ಹೀಗೆ-ತಿಂಗಳಕಾಲ ಸಂದಿತು. ಆ ತಿಂಗಳ ಅವಧಿಯಲ್ಲಿ ಬರಿಯ ನಾಲ್ಕೆಂಟು ಬಾರಿ, ರಾಯರಿಗೆ ವಾತದ ಉಬ್ಬರವಾಗಿತ್ತು. ಅಂತು ಅಷ್ಟೊಂದು ಕಷ್ಟವೆನಿಸಿರಲಿಲ್ಲ. ಕಂದಾಯ ನಿರ್ವಹಣದ ವಿಷಯದಲ್ಲಿ ಕಡಬದ ಅಂಗಡಿಯವರ ಸಾಲ ಮುಟ್ಟಿಸುವುದರಲ್ಲಿ, ಅವಳು ತನ್ನಿಂದಾದ ಸಲಹೆ ಕೊಟ್ಟಳು. ಹೊಸಮರದ ಇದ್ದಿನೆಗೆ ರಾಮಪತ್ರೆಯನ್ನು ಅಗ್ಗವಾಗಿ ಮಾರಿದ್ದೂ ಆಯಿತು. ಅಕ್ಕಿ, ಸೀಗೆ, ಅಡಿಕೆಗಳೆಲ್ಲವನ್ನು ವಿಕ್ರಯಿಸಿ ಆ ವರ್ಷದ ಖರ್ಚು ವೆಚ್ಚಗಳನ್ನು ಬಿಗಿಹಿಡಿದು, ದಿನ ಸಾಗಿಸುವ ನಿರ್ಣಯಮಾಡಿದರು. ಇದ್ದಿನೆ ಕರೆಯುವ ದನ ತಂದು ಕೊಡಲೂ ಇಲ್ಲ.

"ಅದನ್ನು ತಂದಿದ್ದರೆ ಚೆನ್ನಿತ್ತು, ಮಗಳೂ ಮಗನೂ ಮನೆಗೆ ಬಂದಾಗ ಒಂದಿಷ್ಟು ನೀರು ಮಜ್ಜಿಗೆಯಾದರೂ ಕಾಣಿಸಬಹುದಿತ್ತು-ಆದರೆ ಅದಕ್ಕಾಗಿ ನಾಲ್ಕೈದು ವರಹಗಳನ್ನು ಎಲ್ಲಿಂದ ತರಲಿ? ಈ ವರ್ಷ ಹೊಸ ವಸ್ತ್ರವನ್ನು ಸಹ ಕೊಳ್ಳುವುದು ಬೇಡವೆಂದು ಮಾಡಿದೆ"-ಎಂಬ ನಿರ್ಧಾರದಿಂದ ಸುಮ್ಮನಾಗಿದ್ದರು.

ಯುಗಾದಿಯ ವೇಳೆ ಬರಲು, ತಾಯಿತಂದೆಯರಿಬ್ಬರಿಗೂ ಮಕ್ಕಳ ಹಂಬಲ ಬಲವಾಗುತ್ತ ಬಂದಿತು. ಹುಡುಗ ಊರಿಗೆ ಬರಲು ಬರಿಯ ಹದಿನೈದು ದಿನಗಳಿದ್ದರೂ-"ರಜೆ ಬಂದ ಬಳಿಕ ಒಂದು ನಿಮಿಶವೂ ಅಲ್ಲಿರಬೇಡ"-ಎಂದು ಮಗನಿಗೆ ಪತ್ರ ಬರೆಯಿಸಿ ಹಾಕಿಸಿದರು, ಅಳಿಯ ಕುಟುಂಬದಿಂದ ಬೇರಾದ ಸಂಗತಿ ತಿಳಿದು ಬಂದಿತು. ಆತ ಬೇರೆ ಭೂಮಿ ಹುಡುಕಿಕೊಂಡು ಅಲ್ಲಿಯದನ್ನು ಕ್ರಯಕ್ಕೆ ಕೊಡುವೆನೆಂದು ಬರೆದಿದ್ದನು. ಹೀಗಾಗಿ ಅಳಿಯನ ಸಲುವಾಗಿ ಸುಮಾರು ಎರಡುಸಾವಿರಕ್ಕೆ ಒಳ್ಳೆಯ ಭೂಮಿ ಹೊಸಮಠ ಹೊಳೆಯಿಂದೀಚೆಗೆ ಸಿಗಲಾರದೇ-ಎಂದು ಕೃಷ್ಣಯ್ಯ ವಿಚಾರಿಸುತ್ತಿದ್ದರು. ಅಷ್ಟು ಹಣ ಕೊಟ್ಟಲ್ಲಿ ಸುಮಾರು ಐವತ್ತು ಮುಡಿ ವರಮಾನದ ಭೂಮಿಗೆ ಕೊರತೆ ಇಲ್ಲ. ಮನೆಯವರೇ ಸಾಗುವಳಿ ಮಾಡಿದರೆ ಯಾವ ದುರ್ಭಿಕ್ಷೆಯೂ ಬರಲಾರದು — ಎಂದುಕೊಂಡು ಮನೆಗೆ ಬಂದವರೊಡನೆ ಆಸ್ತಿಗಳನ್ನು ಕುರಿತು ಕೇಳುತ್ತಿದ್ದರು. ಅಳಿಯನೂ ಅದೇ ಕೆಲಸದಲ್ಲಿ ನಿರತನಾಗಿದ್ದ. ಅಲ್ಲಿನ ಭೂಮಿಯನ್ನು ಬರಿಯ ಸಾವಿರದ ಐನೂರಕ್ಕೆ ಮಾರುವುದೂ ಕಷ್ಟವಾಗಿತ್ತು. ಅಲ್ಲದೆ, ಅಡಚಣೆಯಿಂದ ಮಾರಿದರೆ, ಅಷ್ಟೂ ಸಿಗಲಾರದೆಂದು ತಿಳಿದಿತ್ತು. ಆದುದರಿಂದ ಆತನು — ಯುಗಾದಿಗೆ ಸಮ್ಮನಾಗಿ, ತನ್ನ ಕುಟುಂಬವನ್ನು ಮಾವನ ಮನೆಗೇನೆ ಸಾಗಿಸಿಬಿಟ್ಟನು, ತಾನು ಮಾತ್ರ ಭೂವಿಕ್ರಯ, ಭೂ ಅನ್ವೇಷಣೆಗಳಲ್ಲಿ ಅಲೆದಾಡುತ್ತಿದ್ದನು.

ಕೃಷ್ಣರಾಯರ ಮನೆತುಂಬ ಈಗ ಗದ್ದಲವೆಂದರೂ ಚಿಂತೆಯಿಲ್ಲ. ಸೀತೆ ತಾಯಿಗೆ ಮನೆಕೆಲಸದಲ್ಲಿ ನೆರವಾಗುತ್ತಿರುವಳಾದರೂ, ಅವಳೆರಡು ಎಳೆಗೂಸುಗಳು ಕೈಗೂಸುಗಳೇ. ಒಂದು ಹುಟ್ಟಿ ವರ್ಷವಾಯಿತು. ಇನ್ನೊಂದು ಮೂರು ವರ್ಷದ ಮಗುವೆನಿಸಿದರೂ, ಬೆಳವಣಿಗೆಯಿಲ್ಲದ, ಸದಾ ಹಟಮಾರಿಯಾದ ಕೂಸು. ಮೊಲೆಗೂಸನ್ನು ಬಿಟ್ಟಾ

ಪರೂ ಅದನ್ನೇ ಎತ್ತಿ ಉಪಚರಿಸಬೇಕು. ಕೆಲಸವಿದೆಯೆಂದು ನೆಲದ ಮೇಲಿಟ್ಟರೆ ಅದು ಬಡಿದವರಂತೆ ಕಿರುಚತೊಡಗುವುದು. ಹೀಗಾಗಿ ಸೀತೆಯಿಂದ ಮನೆಗೊಂದು ಗೆಲವೆಂಬಂತೆ ಇರಲಿಲ್ಲ. ಅವಳ ಹಿರಿಯೆರಡು ಮಕ್ಕಳು ಹೆಣ್ಣುಗಳು. ಒಂದು ಆರು ವರ್ಷದ್ದು. ಇನ್ನೊಂದು ಎಂಟು ವರ್ಷದ್ದು. ಅವೆರಡು ಕುಟುಂಬದ ಮನೆಯಲ್ಲಿ ನಿತ್ಯ ಹಂಗಿಸಿಕೊಂಡು ಬೆಳೆದುಪಾದುದರಿಂದ ಚಾಚು ಇಲ್ಲದೆ ಬಿದ್ದಿರುವ ಜೀವಿಗಳು. ನಡುವಿಗೆ ಗೇಣುದ್ದದ ಸೀರೆಯ ತುಣುಕನ್ನು ಬಿಗಿದುಕೊಂಡು-ಆಡುತ್ತಿರುವುವು. ತಾಯಿ ಏನು ಕೆಲಸ ಹೇಳಿದರೂ ಮಾಡುತ್ತಿದ್ದುವು. ಅವಕ್ಕೆ ನಿತ್ಯ ಬೆಳಗಿನ ಕೆಲಸವೆಂದರೆ ಹಟ್ಟಿಯ ಸೆಗಣಿಯಿಂದ ಉಂಡೆಗಳನ್ನು ಮಾಡಿ-ಬೆರಣಿ ತಟ್ಟುವ ಆಟ. ಅಜ್ಜ ಬೇಡವೆಂದರೂ ಸೀತೆ ಕೇಳುವವಳಲ್ಲ. "ನಾಳೆಗೆ ಅವಕ್ಕೆ ತಿಳಿಯಬೇಡವೇ? ಈ ಊರಲ್ಲಿ ಕಟ್ಟಿಗೆಗೆ ದುರ್ಭಿಕ್ಷವಿಲ್ಲ. ಆದರೆ ನಾಳೆ ಎಲ್ಲಿ ಬರೆದಿದ್ದಾನೆಯೋ ನೀರಿನ ಋಣವನ್ನು. ಮಾಡಲಿ ಕೆಲಸ ಮಾಡಲಿ-" ಅನ್ನುತ್ತಾಳೆ.

ಒಂದು ದಿನ ಹಾಗೇನೆ ಕೈತುಂಬ ಸೆಗಣಿ ಅದ್ದಿಕೊಂಡು ಹಿರಿಯಾಕೆ ಮಾಲಕ್ಷ್ಮಿ, ಅಜ್ಜನ ಎದುರು ಬಂದು ನಿಂತಳು. ಏನೋ ಹೇಳಲು ಬಂದು "ಅಜ್ಜ"-ಎಂದು ಉಸಿರುಗೆರೆಯಲು ಕಸುವಿಲ್ಲದೆ ನಿಂತಳು. ಅಜ್ಜನು "ಏನು ಬೆಪ್ಪಿ-ಏನು ಬಂದೆ! ಇದೇನು ಕೈಯಲ್ಲಿ ಸೆಗಣಿ" ಎಂದು ವಿಸ್ಮಯ ಪಟ್ಟರು. ಆಕೆ ಬಲು ಸಾಹಸದಿಂದ "ಮಾವ ಬರುತ್ತಾನೆಂದು ಕಾಣುತ್ತದೆ" ಎಂದಳು. ಕೃಷ್ಣರಾಯರು ಹಿಗ್ಗಿ ಕೇಳಿದರು "ಏನು ಮಾಣಿ, ಬಂದನೇ ಮಾಣಿ" ಎಂದು ಕೂಗಿದರು. ಅಂಗಳದಿಂದಲೇ ಅಚ್ಯುತನು "ಬಂದೇ ಅಪ್ಪ" ಎಂದು ಬಂದು ಇದಿರಾದನು.

ಮಗನ ಮುಖದರ್ಶನದಿಂದ ರಾಯರು ಉತ್ಸಾಹಿತರಾದರು. ನಿಜವಾದ ವಸಂತಋತು ಆಗತಾನೇ ಮನೆಯಲ್ಲಿ ಕಾಲಿರಿಸಿದಂತಾಯಿತು. ಸೀತೆಯೂ ಬಂದಳು. ಲಕ್ಷ್ಮಿಯು "ಮಗು, ಹೇಗೆ ಬಂದೆ? ಬಸ್ಸು ಇಲ್ಲವಲ್ಲ!" ಎಂದಳು. "ನಾನೇ-ನಿನ್ನೆ ಉಪ್ಪಿನಂಗಡಿಗೆ ಬಂದೆ. ಸಾಯಂಕಾಲ ಉಪ್ಪಿನಂಗಡಿಗೆ ನಡೆದು ಬಂದೆ. ಮುಂದೆ ಎರಡಾಣೆ ಕೊಟ್ಟು ಗಾಡಿಯಲ್ಲಿ ಕುಳಿತು ಹೊಸಮಠಕ್ಕೆ ಬಂದೆ; ಅಲ್ಲಿಂದ ಬೆಳಗ್ಗೆ ಎದ್ದು ನಡೆದೆ ತಿರುಗಿ!"-ಎಂದನು. "ಅಯ್ಯೋ ಮಗುವೇ; ಮೋಟರು

ಸರ್ವಿಸು ಇರುವಾಗ ನಡೆದು ಬಂದೆಯೇಕೆ?" ಎಂದರು ತಂದೆ. "ಎಷ್ಟೆಂದರೂ ಅಚ್ಯುತನ ಕಾಲು ಗಟ್ಟಿ"ಯೆಂದಳು ಅಕ್ಕ. ತಾಯಿಗೆ ಮಗನು ದಣಿದು ಬಂದುದಕ್ಕೆ ವ್ಯಥೆಯಾದರೂ, ಅವನು ಮೋಟರಿಗಾಗಿ ಹಣ ವ್ಯಯಿಸಲಿಲ್ಲ, ಹಿಂದುಮುಂದಿನ ಜ್ಞಾನ ತನ್ನ ಮಗನಿಗಿದೆಯಲ್ಲಾ--ಎಂಬ ಹಿಗ್ಗುಂಟಾಯಿತು. ಮಗನನ್ನು ಕರೆದು "ಮಗು ಗಂಜಿಯಾಗಿದೆ. ಮಿಂದು ಊಟ ಮಾಡುತ್ತೀಯಾ, ಏನಾದರೂ ಬೇರೆ ತೃಷೆ ಮಾಡಿಕೊಡಲೇ"-ಎಂದು ಕೇಳಿದಳು. "ತೃಷೆ-ನೀರು. ನಾನು ಹೊಸಮಠದಲ್ಲಿ ಮಿಂದೂ ಆಗಿದೆ. ಆದರೆ ಚೆನ್ನಾಗಿ ಮೈತೊಳೆದುಕೊಳ್ಳಬೇಕು — ಏನು ಸೆಕೆ"— ಎಂದು ಬಚ್ಚಲು ಮನೆಗೆ ಹೋದನು.

ಮುಂದಿನ ಕೆಲ ದಿನಗಳೆಲ್ಲ ಮನೆಯಲ್ಲಿ ನಗುವಿನಿಂದ ಕಳೆದುವೆಂದರೂ ಚಿಂತೆಯಿಲ್ಲ. ಸೀತೆಯ ಗಂಡನು ಇನ್ನೂ ಬರಲಿಲ್ಲ. ಅವರು ಅಲ್ಲಿ ಇಲ್ಲಿ ಎಂದು ಆಸ್ತಿಮಾರುವ ಗಲಭೆಯಲ್ಲಿಯೇ ಇದ್ದರು. ಮುಂದಿನ ಮನೆ, ತಾವು ನಿಶ್ಚಯವಾಗುವ ತನಕ ಸೀತೆಯು ಮಕ್ಕಳೊಂದಿಗೆ ತವರಲ್ಲಿಯೇ ಇರುವ ನಿಶ್ಚಯವಾಗಿತ್ತು. ಈಗ ಅಚ್ಯುತನು ಹೇಗೂ ರಜೆ ಮುಗಿಯುವ ತನಕ ತೊಡಕಿಲ್ಲದೆ ಊರಲ್ಲಿರಬಹುದಲ್ಲ.

ಅಚ್ಯುತನ ಮನಸ್ಸು ಹಗುರವಾಗಿತ್ತು. ಪುತ್ತೂರಿನ ಅಚ್ಯುತನಿಗೂ ಊರಿನ ಅಚ್ಯುತನಿಗೂ ಅಷ್ಟು ವ್ಯತ್ಯಾಸ! ಅಲ್ಲಿ ಅವನು ಮಾತಾಡುವುದೇನೆ ಅಪೂರ್ವ. ಅಷ್ಟು ನಗು ಸಂತೋಷ ತೋರಿದವನಲ್ಲ. ಹೆಚ್ಚಿನ ಸಮಯ ವ್ಯಾಸಂಗದಲ್ಲಿ ಕಳೆಯುತ್ತಿದ್ದನಾದರೂ, ಬಿಡುವಿನಲ್ಲಿ ಉಲ್ಲಾಸವಾಗಿರುತ್ತಿರಲಿಲ್ಲ. ಎಳೆಯನಾದರೂ ಮನೆಯವರ ಯೋಚನೆ ಅವನಿಗೆ ತಪ್ಪಿದ ದಿನವಿಲ್ಲ. ತಂದೆಯ ಬೇನೆ ಬೇಸರಿಕೆಗಳನ್ನು ನೆನೆನೆನೆದು ತಾನೇ ಸೊರಗುತ್ತಿದ್ದನು. ಅದರಿಂದಲೇ ಮೊದಲ ದಿನ ಗಂಜಿಯೂಟಕ್ಕೆ ಕುಳಿತಾಗಲೇ, ತಾಯಿ "ಮಗು, ಅಲ್ಲಿನ ಊಟ ನಿನಗೆ ಹಿಡಿಸುವುದಿಲ್ಲವೆ? ಶರೀರ ತುಂಬ ಬಚ್ಚಿ ಹೋಗಿದೆ. ಕಳೆದ ರಜೆಗೆ ಬಂದಾಗಿರುವಷ್ಟೂ ಈಗ ನೀನಿಲ್ಲ"-ಎಂದಳು.

"ಅಲ್ಲಿನ ಊಟ, ಇಲ್ಲಿಗಿಂತ ಚೆನ್ನಾಗಿದೆ."

"ಮತ್ತೇನು?"

"ಪರೀಕ್ಷೆಯಿಂದ ಹಾಗಾಗಿರಬಹುದು. ರಾತ್ರಿ ಹಗಲು ಓದ

ಬೇಕಿತ್ತು. ನಿದ್ದೆ ಕಡಿಮೆಯಾದುದಕ್ಕೊ ಏನೋ"-

"ಹಾಗಾದರೆ ಇಲ್ಲಿ ನಾಲ್ಕು ದಿನ ಸೊಂಪಾಗಿ ನಿದ್ದೆ ಮಾಡು. ನಾಲ್ಕು ದಿನ ನಿತ್ಯ ಎಣ್ಣೆ ಹಾಕಿ ಸ್ನಾನಮಾಡು. ಅಕ್ಕ ನಿದ್ದಾಳೆ, ನೀರೆರೆಯುತ್ತಾಳೆ. ಈಗ ಶರೀರದ ವಿಷಯದಲ್ಲಿ ಉದಾಸೀನವಾಗಿರಬಾರದು". ತಾಯಿ ಅಂದುದೆಲ್ಲದಕ್ಕೆ 'ಹೂಂ' ಎನ್ನುವವ ಅವನು. ಅವನಿಗೆ ಈಗ ವಿರಾಮ ಸಾಲದು. ನಾಲ್ಕು ಗಳಿಗೆ ತಾಯಿಯೊಡನೆ ಇದ್ದರೆ, ಅಪ್ಪನು ನೋವಿಂದ. 'ಅಯ್ಯೋ' ಎಂದರೆ ಅಲ್ಲಿಗೆ ಓಡಿ "ಏನಾಗುತ್ತದೆ?" ಎಂದು ಕೇಳುತ್ತಾನೆ. "ಏನಿಲ್ಲ ಮಗು, ಅಯ್ಯೋ ಮುರಿಯೋ ಎಂಬುದು ಚಟವಾಗಿ ಬಿಟ್ಟಿದೆ. ನೀನು ಸುಮ್ಮನೆ ಗಾಬರಿಯಾಗಬೇಡ" ಎಂದು ಅವರು ಅವನಿಗೆ ಧೈರ್ಯ ಹುಟ್ಟಿಸುತ್ತಿದ್ದರು.

ಮಗುವನ್ನು ಮುಂದೆ ಕುಳ್ಳಿರಿಸಿಕೊಂಡು ರಾಯರು ಕುಳಿತರೆಂದರೆ, ಅವರೆದುರಿಗೆ ಸ್ವಪ್ನರಾಜ್ಯವೇ ಕಾಣುತ್ತದೆ. ಒಮ್ಮೆ-ಅವನು ವಕೀಲನಾದಂತೆ, ಲಗ್ನವಾದಂತೆ, ಸಂಸಾರದಲ್ಲಿ ಸುಖಿಯಾಗಿ ನಲಿದಂತೆ ಕಾಣುತ್ತಾರೆ-ಇನ್ನೊಮ್ಮೆ ಕ್ಷೀರ ಭೀಕರ ಚಿತ್ರಗಳು ಅವರೆದುರು ಸುಳಿಯುತ್ತವೆ. ತಾನು ಕಾಯಿಲೆಗೆ ತುತ್ತಾಗಿ, ಹೆಂಡತಿಯನ್ನೂ ಮಗನನ್ನೂ ತಬ್ಬಲಿಯಾಗಿ ಮಾಡಿ,ಓಡಿಹೋದಂತೆ! ಅವರು ಸಾಲಗಾರರ ಕಾಟಕ್ಕೆ ಸಿಲುಕಿ, ಆಸ್ತಿ ಮನೆ ಕಳೆದುಕೊಂಡು,ಅನಾಥರಾದಂತೆಯೂ ಕನಸುಗಾಣುತ್ತಾರೆ. ಕುಳಿತಲ್ಲಿಂದಲೇ ಕಣ್ಣೀರು ಉದುರುವುದು. "ಅಯ್ಯೋ! ಇಷ್ಟು ಗುಣವಾಗಿದ್ದರೆ ನಾಲ್ಕು ಹೆಜ್ಜೆ ತಿರುಗಾಡುವ ಶಕ್ತಿ ಬಂದಿದ್ದರೆ, ಮಗುವಿಗೊಂದು ಲಗ್ನಮಾಡಿಸಿ ಒಂದು ದಡಕ್ಕೆ ಮುಟ್ಟಿಸುತ್ತಿದ್ದೆ—"ಎಂದುಕೊಳ್ಳುತ್ತಾರೆ. ಕೊನೆಗೆ ಅನುಮಾನವಾಗುತ್ತದೆ. "ಮದುವೆ--ಒಂದು ದಡವೇ! ಯಾರು ಬಲ್ಲರು? ಶ್ರೀಮಂತ ಮಾವನಮನೆ ಸಿಗುವುದೆಂದು ಜಾತಕದಲ್ಲಿ ಹೇಳಿದುದರಲ್ಲಿ ಎಷ್ಟೆಲ್ಲ ಸುಳ್ಳಾಗಿಲ್ಲ? ಕೊನೆಗೆ ನರಳುವ ಇಬ್ಬರ ಜತೆಗೆ ಇನ್ನೊಂದು ಜೀವವನ್ನು ನಾನು ಕಟ್ಟಿ ಹೋಗಬೇಕೆ?" ಎಂದೂ ಅಂದುಕೊಳ್ಳುವರು.

ಮನಸ್ಸು ಅಸ್ಥಿರವಾಗಿ ಯಾವುದಕ್ಕೂ, ಮಾಣಿಯನ್ನು ಕುಳ್ಳಿರಿಸಿಕೊಂಡು ತರ್ಕಿಸುವೆನೆಂದು ಯೋಚಿಸುವರು. ಒಂದು ದಿನ ಅಚ್ಯುತನು ತನ್ನ ಸೊಸೆಯರನ್ನು ಕೂಡಿಕೊಂಡು ಗೇರುಮರದಿಂದ ಹಣ್ಣು ಇಳಿಸು

ವುದರಲ್ಲಿದ್ದ. ಮರವೇರಿ ಅಲುಗಾಡಿಸುತ್ತಿದ್ದಂತೆ, “ಮಾಣಿ” ಎಂಬ ಚೀತ್ಕಾರ ಕೇಳಿಸಿತು. ಸರಿ, ಚೀತ್ಕಾರವೇ ಅದು. ಕರೆಯಲ್ಲ! ಸುಮ್ಮನೆ ವೇದನಾತರಂಗಗಳಿಗೆ ಎಚ್ಚೆತ್ತು, ರಾಯರು ಮಗನನ್ನು ನೆನಪಿನಿಂದ ಕೂಗಿದರು. ಅಚ್ಯುತ ಗಾಬರಿಯಿಂದ ತಾನು ಹಿಡಿದ ಕೊಂಬೆಯ ಕೈ ಬಿಟ್ಟು ಬೀಳದಿದ್ದುದೇ ಆಶ್ಚರ್ಯ.

ಬೇಗ ಬೇಗನೆ ಮರದಿಂದಿಳಿದು-“ಅಪ್ಪಾ ಕರೆದೆಯೋ ಏನು? ಬಂದೆ”- ಎಂದು ಧಾವಿಸಿದ. ಆ ಸ್ವರವನ್ನು ಕೇಳಿ ಗಾಬರಿಯಾಗಿ ಮಗಳೂ ಬಂದಳು. ಲಕ್ಷ್ಮಮ್ಮ ‘ಹುಲ್ಲು ಹೆರೆಯುವೆ’ನೆಂದು ಬಯಲಿಗೆ ಹೋಗಿದ್ದಳು. ಮೊದಲು ಬಂದವಳು ಸೀತೆ. ಅವಳನ್ನು ಕಂಡು “ಯಾರು ಸೀತೆಯೋ! ಏಕೆ ಬಂದೆ”—ಎಂದು ಕೇಳಿದರು. “ನೀನು ಕೂಗಿದೆಯಲ್ಲವೆ? ಏನಾಯಿತು? ಯಾಕೆ ಕರೆದೆ”-ಎಂದಳು. “ನಾನು ನಿನ್ನನ್ನು ಕರೆಯಲಿಲ್ಲ. ಮಾಣಿಯನ್ನು ಕರೆದದ್ದಲ್ಲವೆ!”-ಎಂದರು. ಅಷ್ಟರಲ್ಲಿ ಅಚ್ಯುತನೂ ಬಂದನು. ತಂದೆಯನ್ನು ನೋಡುವಾಗ ಅವರಿಗೆ ವೇದನೆ ಇರುವಂತೆ ಕಾಣಿಸಲಿಲ್ಲ. “ಏನಾಗಬೇಕು ಯಾಕೆ ಕರೆದೆ?” ಎಂದ. “ಏನಿಲ್ಲ, ನಿನ್ನ ಹತ್ತಿರ ಮಾತನಾಡುವ ಎಂದು ಕಂಡಿತು” ಎಂದರು. ಸೀತೆಗೆ ಆಶ್ಚರ್ಯವಾಯಿತು. ಆಕೆಯು ಅಲ್ಲಿರದೆ ಹಿಂದಕ್ಕೆ ಸರಿದಳು. ಹಾಗೆಯೇ ಕುತೂಹಲದಿಂದ ಗೋಡೆಗೆ ಒರಗಿಕೊಂಡು ಮರೆಯಲ್ಲಿ ನಿಂತಳು.

‘ಮಗು, ಕೊನೆಗೆ ಓದು ಏನು ಮಾಡುವುದೆಂದು ಮಾಡಿದ?’ ಎಂದರು.

‘ಅಪ್ಪಾ, ನನಗೇನು ಗೊತ್ತು? ನೀನು ಬೇಡವೆಂದರೆ ಬೇಡ; ಇರಲಿ ಎಂದರೆ ಇರಲಿ. ಎಷ್ಟು ಸಾರಿ ಅದನ್ನೇ ಅದನ್ನೇ ಕೇಳುತ್ತೀ? ಈಗಂತು ನಿನಗೆ ತುಂಬ ಮರವೆಯಲ್ಲವೆ!? ಸಮಯವೂ ಹೋಗುವುದಿಲ್ಲ ಅಲ್ಲವೇ?’ - ಎಂದ.

‘ಹೌದು ಮಗು! ಗಳಿಗೆ, ಘಂಟೆ ಎಣಿಕೆ ಹಾಕುವುದಾಗಿದೆ. ನೀನೇನೊ ಹೇಳಿದ್ದೀ. ನನಗೂ ನೀನು ಓದಬೇಕೆಂದೇ ಇದೆ. ಆದರೆ ಇನ್ನೊಂದು ವರ್ಷವೆಂದರೆ ಇನ್ನೂರು ರೂಪಾಯಾದರೂ ಬೇಡವೇ? ಅಷ್ಟು ಹಣ ತರುವುದೆಲ್ಲಿಂದ ಎಂದು ನಿನ್ನಮ್ಮ ಹೇಳುತ್ತಾಳೆ. ನನಗೆ ಕೈಕಾಲು ಗಟ್ಟಿಯಿರುತ್ತಿದ್ದರೆ, ಏನಾದರೂ ಸಾಲಗೀಲ ಮಾಡಿ ತರುತಿದ್ದೆ.

ಇನ್ನೂರು ಏನು ಮಹಾ.....! ಆದರೆ ಈಗ ಯಾರು ಕೊಡುತ್ತಾರೆ? ಅಲ್ಲದೆ ಈ ವರ್ಷದ ಕಂಗಾಲು ಹೇಳುವುದಲ್ಲ. ಎಂಥೆಂಥವರೂ ನೂರು ರೂಪಾಯಿಗೆ ಬಾಯಿಬಿಡುವ ಕಾಲವಾಗಿಬಿಟ್ಟಿದೆ- ಅದಲ್ಲದೆಯೂ, ಸಾಲ ಮಾಡಬಾರದು ಇನ್ನು. ಒಮ್ಮೆ ಮಾಡಿದ್ದನ್ನು ಮುಗಿಯಿಸಿಕೊಂಡರೆ ಸಾಕಾಗಿದೆ.'

'ಮಾಡಿದ್ದೆಲ್ಲ ತೀರಿಸಿಯಾಯಿತಲ್ಲ. ಇನ್ನೆಲ್ಲಿಯ ಸಾಲ!'

'ಉಂಟಂತೆ; ನಿನ್ನಮ್ಮ ಹೇಳುತ್ತಾಳೆ. ಅಲ್ಲಿ, ಇಲ್ಲಿನ ಕೈಕಡವಂತೆ; ಯಾವುದೋ ಆರುವಾರಿನ ಸಾಲವಂತೆ; ಅದು ಆಸ್ತಿ ಹೋದಂತೇನೆ ಅನ್ನುತ್ತಾಳೆ. ಅದನ್ನೆಲ್ಲ ಕೇಳುವಾಗ; ಕೊನೆಗೆ ನಿನ್ನ ವಿದ್ಯೆಯಾದರೂ ಆಗಿದ್ದರೆ, ಆಪತ್ತಿಗೆ ಬಂದೀತಲ್ಲ ಅನಿಸುತ್ತದೆ.'

ಏನು ಮಾಡಲಿ ಮಗು. ನಾನು ತುಂಬ ಹುಡುಕಿಸಿ ನೋಡಿದೆ. ಯಾರೂ ಸಹಾಯ ಮಾಡುವವರಿಲ್ಲ. ನಿನ್ನನ್ನು ಅಳಿಯನನ್ನಾಗಿ ಮಾಡಿಕೊಂಡು ಮುಂದಿನ ವಿದ್ಯಾಭ್ಯಾಸ ನಡೆಯಿಸುವವರಿದ್ದರೆ.'

ಅಚ್ಯುತನಿಗೆ ಗಾಬರಿಯಾಯಿತು. ಈ ಮಾತಿನ ಸರಣಿ ಅವನಿಗೆ ಮೊದಲ ಬಾರಿಗೆ ವಿಸ್ಮಯ ಹುಟ್ಟಿಸಿತು. ಇನ್ನೂ ಹದಿನಾರು ತನಗಾಗಿಲ್ಲ. ತಂದೆಗೆ ತನ್ನ ಲಗ್ನದ ಭ್ರಮೆಯುಂಟಾಗಿದೆಯೇ ಎಂದೆನಿಸಿತು. ಆದರೆ ತಂದೆಯೆದುರು ಏನೇನೂ ಮಾತನಾಡಲಿಲ್ಲ. ಅವರು ಉತ್ಸಾಹವಾಗಿಯೇ ಮಾತನಾಡುತಿದ್ದರು. 'ಪಂಜದ ಪುಟ್ಟಯ್ಯನವರಿಗೆ ಒಂದು ಮಗಳುಂಟು; ಅವರಿಗೇನೂ ದಾಡಿಯಿಲ್ಲ. ನನ್ನಂತೆ ಒಂದು ಹೆಣ್ಣು; ಒಂದು ಗಂಡು'-ಎಂದರು. ಅಷ್ಟರಲ್ಲಿ ಸೀತೆ ಬಾಯಿ ಹಾಕಲು ಬಂದಳು. 'ಅಪ್ಪಯ್ಯನಿಗೆ ಮರುಳೇ. ಆ ಹುಡುಗಿಗೆ ಅಚ್ಯುತನ ಪ್ರಾಯ. ನಾಳೆ ಹೆಂಡತಿಯನ್ನು ಆಳಬೇಡವೆ! ಲಗ್ನವಾದರೆ ಸಾಕೇ? ಅಲ್ಲದೆ ಈ ವರ್ಷವಂತು ಲಗ್ನದ ಸುದ್ದಿ ಖಂಡಿತಕ್ಕೂ ಬೇಡ. ಲಗ್ನವೆಂದರೆ ಮುನ್ನೂರು ನಾನೂರು ರೂಪಾಯಿಯಿಲ್ಲದೆ ಆಗುವ ಬದುಕೇ? ಅದನ್ನೆಲ್ಲ ಸಾಲ ಮಾಡಿ ಲಗ್ನ ಮಾಡುವುದೆಲ್ಲಿ ಬಂತು.' 'ಲಗ್ನದ ಖರ್ಚನ್ನು ಪುಟ್ಟಯ್ಯ ವಹಿಸಿ ಕೊಳ್ಳುತ್ತೇನೆಂದು ಹೇಳಿದ್ದಾರೆ. ಅಲ್ಲದೆ ಮುಂದೆ ಮಗುವಿನ ಓದಿಗೂ ಹಣ ಕೊಟ್ಟಾರು. ನನ್ನ ಆಸ್ತಿಯ ಚೂರು ಉಳಿದು, ಇನ್ನು ಅವನ ಸಂಸಾರ ನಡೆದೀತೆ? ಯಾರಾದರೂ ಅವನನ್ನು ನೋಡಿಕೊಳ್ಳುವ

ಗಂಡಸರು ಬೇಡವೇ? ಮಗಳನ್ನು ಕೊಟ್ಟ ಅಭಿಮಾನದಿಂದ ಅವರಾ ದರೂ ಸಹಾಯ ಮಾಡಿಯಾರು. ಪುಟ್ಟಯ್ಯ ಚಿನ್ನದಂಥ ಮನುಷ್ಯ' ಎಂದರು.

ಇದು ಆ ದಿನದ ಅವರ ಹೊಸ ಕನಸು. ಯಾರೋ ಗೆಳೆಯರಿಂದ ಮಾತನಾಡಿಸಿ, ಗುಟ್ಟಾಗಿ ಸುದ್ದಿ ತರಿಸಿಕೊಂಡು, ಅನುಮಾನದಿಂದ ಧೃಡಕ್ಕೆ ಬಂದು ಈ ಪ್ರಸ್ತಾಪವನ್ನು ಅವರು ಎತ್ತಿದ್ದರು. ಅಚ್ಯುತನ ಮನಸ್ಸು ವಿಹ್ವಲವಾಯಿತು. 'ಮದುವೆ'ಯೆಂದೊಡನೆ ಅವನಿಗೆ ಬೆದರಿಕೆಯಾಯಿತು. ತಂದೆಯ ಬೇನೆ, ತಮ್ಮ ದೀನತೆ, ಸಾಳಿನ ವಿದ್ಯೆ-ಇವುಗಳ ಎಡೆಯಲ್ಲಿ ತನ್ನಂತಹ ಹುಡುಗ, ತನ್ನ ಸಮವಯಸ್ಸಿನ ಹುಡುಗಿಯನ್ನು ಕಟ್ಟಿಕೊಂಡು ಏನು ಮಾಡಲಿ-ಎಂದು ಕಂಗಾಲಾದ. ಆದರೆ ತಂದೆಯೆದುರು 'ಹಾಂ ಹೂಂ' ಎನ್ನುವ ಧೈರ್ಯವಿಲ್ಲ. ಅಷ್ಟು ಮಮತೆ, ಭೀತಿ ಅವರಲ್ಲಿ. ಬೇನೆಯಿಂದ ಅವರು ಅರೆಮರುಳಾಗಿರುವರೆಂದು ಅವನು ತಿಳಿಯ. ಸುದೈವಕ್ಕೆ ಸೀತೆಯ ಮೂರನೆಯ ಕೂಸು ಒಳಮನೆಯಿಂದ ಕಿರುಚಿತು. ಅದನ್ನು ಎತ್ತಿಕೊಳ್ಳುವೆನೆಂಬ ನೆಪದಿಂದ ಆ ಸ್ಥಳ ಬಿಟ್ಟು ಓಡಿಬಿಟ್ಟ. ತಿರುಗಿ ಅವರು ಕರೆದರೆ ಕೇಳಿಸದಂತೆ, ಗೇರು ಮರಗಳ ಎಡೆಯಲ್ಲಿ ನಲಿಯತೊಡಗಿದನು.

ತಂದೆ, ಮಗಳು ಸೇರಿ ತರ್ಕವೆಸಗಿದರು. ಬಯಲಿನಿಂದ ಲಕ್ಷ್ಮಮ್ಮ ಮನೆಗೆ ಬರುವ ತನಕವೂ ತರ್ಕವಾಯಿತು. ಹೆಂಡತಿಯೊಡನೆಯೂ ಉತ್ಸಾಹ ಭರಿತರಾಗಿ ಕೃಷ್ಣರಾಯರು ಮದುವೆಯ ಸುದ್ದಿ ಹೇಳಿದರು. ಅವಳು 'ಆ ಮಗುವೇ? ಹುಡುಗಿ ಚೆನ್ನಾಗಿದ್ದಾಳೆ. ಆದರೆ ನಮ್ಮ ಮಗುವಿಗೆ ತಕ್ಕದಲ್ಲ. ಅಷ್ಟು ನೆರೆದ ಹುಡುಗಿಯನ್ನು ತಂದರೆ ಯಾರಾದರೂ ನಕ್ಕಾರು'-ಎಂದಳು. ಆದರೆ ಆ ದಿನದ ಸಭೆಯಲ್ಲಿ ಏನೂ ತೀರ್ಮಾನವಾಗಲಿಲ್ಲ. ತಾಯಿ ರಾತ್ರೆಯಲ್ಲಿ ಮಗುವಿನ ಮನಸ್ಸು ತಿಳಿಯೋಣವೆಂದು, 'ಮಾಣೀ' ಎಂದಳು. ಏಕೆಂದು ಅವನಿಗೆ ತಿಳಿಯಿತು. ಅವನು ಬಿಕ್ಕಿ ಬಿಕ್ಕಿ ಅತ್ತನು. ಅವನ ಅಕ್ಕ ಬಂದು, ಬಲು ಹೊತ್ತು ಬುದ್ಧಿ ಹೇಳಿ, 'ನಿನಗೆ ಇಷ್ಟವಿಲ್ಲವಲ್ಲಿ ಲಗ್ನಮಾಡಿಸುವುದಿಲ್ಲ'--ಎಂದು ಆಣೆ ಹಾಕಿದ ಮೇಲೆ ಅಚ್ಯುತನ ಕೊರಗು ನಿಂತಿತು. ಮಾಣಿ ಮಲಗಿಕೊಂಡ ಮೇಲೆ ತಾಯಿಮಗಳಿಬ್ಬರೂ ರಾಯರ ಬಳಿ ಕುಳಿತು 'ಇನ್ನು ಆ ಮಗುವನ್ನು

ಗೋಳಿಡಿಸಬೇಡಿ. ಅವನ ಮನಸ್ಸಿಗೆ ಬಾರದ ಯಾವ ಕೆಲಸವೂ ಬೇಡ. ಯಾರಿಗಾಗಿ ನಾವು ಇಷ್ಟೆಲ್ಲ ಮಾಡುವುದು?' ಎಂದರು. ಕೃಷ್ಣರಾಯರಿಗೆ ಈಗ ಬೇರೆಯೇ ಮನೋಭಾವ. 'ನನಗೇನು? ನಾನೇನು ಬಲವಂತ ಮಾಡುವವನೇ. ಪುಟ್ಟಣ್ಣಯ್ಯನವರು ತಿಳಿಸಿದ್ದರು. ನನಗೊಮ್ಮೆ ಆಗಲಿ ಎಂದು ತೋರಿತು. ಈಗ ಬೇಡವಾದರೆ ಬಿಡುವ. ಅಚ್ಚುತನಿಗೆ ಮನಸ್ಸಿಗೆ ಬಾರದ ಯಾವ ಕೆಲಸವಾದರೂ ನಾನು ಮಾಡಿಯೇನೆ?' ಎಂದರು.

ವಿಷಯ ಮಗನಿಂದ ಅಳಿಯನ ಕಡೆಗೆ ಹರಿಯಿತು. 'ಸೀತೆ, ನಿನ್ನ ಗಂಡನಿಗೆ ಎಲ್ಲಿ ಭೂಮಿ ಸಿಗಬೇಕಂತೆ? ಎಂದು ಅವನು ಬರುತ್ತಾನಂತೆ?' -ಎಂದು ಮಾತನಾಡಿಸಿದರು. ಲಕ್ಷ್ಮಿಯು "ಅವಳಿಗೇನು ಗೊತ್ತುಂಟು-ಎಂದು ಮಾತನಾಡಿಸುತ್ತೀರಿ. ಅವಳಿಗೆ ಇಲ್ಲಾದರೂ ಸಮ. ಆದಷ್ಟು ನಮಗೆ ಹತ್ತಿರವಾಗಿದ್ದರೆ, ಬಂದು ನೋಡಿಕೊಳ್ಳಲು ಆದೀತಲ್ಲ ಎಂದಿದೆ. ಆದರೆ ಅವನಿಗೆ-ಈ ಮೂಲೆಯಲ್ಲಿ ಸೇರಿಕೊಂಡು, ನಿತ್ಯ ಜ್ವರ, ಸಂಕಟವೆಂದು ಸಾಯಬೇಕು ಏಕೆ? ಅತ್ತ ಮೂಡಿಗೆ ಮೂಡೂ ಅಲ್ಲ; ಇತ್ತ ಪಡುವಿಗೆ ಪಡುವೂ ಅಲ್ಲ-ಅಂಥ ಜಾಗ ಸಿಕ್ಕಿದರೆ ಆಗಬಹುದು ಎಂದಿದೆ. ಯಾವುದಕ್ಕೂ ಅಲ್ಲಿನ ಆಸ್ತಿಯನ್ನು ಮಾರಾಟಮಾಡಬೇಕು, ಇಲ್ಲಿ ಆ ಮೇಲೆ ಕೊಂಡುಗಬೇಕು" ಎಂದರು.

"ಕೊಂಡು ಆಗುವವರೆಗೆ ಸುಮ್ಮನಿರಲು ಬಂದೀತೇ ಅಮ್ಮ. ಈ ವರ್ಷ ಊಟ ಬೇಡವೇ? ಚೈತ್ರ ಕಳೆಯುವುದರೊಳಗೆ ಎಲ್ಲಾದರೂ ಚಾಲಗೇಣಿ ಗದ್ದೆಯನ್ನಾದರೂ ಹಿಡಿದು, ಒಂದಿಷ್ಟು ಬೇಸಾಯಮಾಡದೆ ಹೋದರೆ, ಮುಂದಿನ ವರ್ಷ ಉಣ್ಣುವುದು ಬೇಡವೇ? ಹಾಗೆ ಗದ್ದೆಯನ್ನು ಈ ವರ್ಷವೇ ಕೊಂಡುಕೊಳ್ಳುವ ಎಂದರೆ, ಅದು ಕೇಳಿದೊಡನೆ ಸಿಗುವ ಮಾಲೇ?

"ಹಾಗಿದ್ದರೆ ಸೀತಾ, ನಿನ್ನ ಗಂಡನಿಗೆ ತಿಳಿಸು. ಇಲ್ಲೇ ಕುಂತೂರಿಂದ ಈಚೆ ಹೊಸಮಠದಿಂದ ಆಚೆ, ಒಳ್ಳೆಯ ಜಾಗವಿದೆ. ಕ್ರಯಕ್ಕೆ ಕೊಡಲಾರರು. ಆದರೆ ಈಗ ಅದನ್ನು ಚಾಲಗೇಣಿಗೆ ಮಾಡಿಕೊಂಡು ಕ್ರಮೇಣ ಮೂಲಗೇಣಿಗೂ ಪಡೆಯಬಹುದು. ಜಾಗ ಉಪ್ಪಿನಂಗಡಿ ರಾಮಣ್ಣಯ್ಯನವರದು. ಅವರಿಗೆ ಬೇಕಾದ್ದು ಗೇಣಿ. ಯೋಗ್ಯ ಒಕ್ಕಲಿಲ್ಲದೆ ಅವರು ಒದ್ದಾಡುತ್ತಿದ್ದಾರೆ"-ಎಂದರು ಕೃಷ್ಣರಾಯರು.

ಸೀತೆಯ ಮನಸ್ಸಿಗೆ ಆ ತಾವು ಬಂದಿತು. ಅದರ ವಿಷಯವಾಗಿ ನಾಲ್ಕಾರು ಮಾತುಗಳಾಗಿದ್ದುವು. ಸೀತೆಯ ಗಂಡ ಎಲ್ಲಿ ಸಂಚರಿಸುತ್ತಿದ್ದಾರೆಂದು ತಿಳಿಯದು. ಆದರೂ ಅವನ ಊರಿನ ವಿಳಾಸಕ್ಕೆ ಮರುದಿನ ಪತ್ರ ಬರೆಯಿಸುವುದು ಎಂದು ನಿರ್ಣಯವಾಯಿತು.

ಈ ಎಲ್ಲ ಮಾತು ಮುಗಿಯುವ ಗಳಿಗೆಗೆ ಹದಿನೆರಡರ ಮೇಲೆ ಇನ್ನೆರಡು ಘಂಟೆಯಾದರೂ ಆಗಿರಬೇಕು. ಅಚ್ಯುತನಿಗೆ ಒಂದು ನಿದ್ರೆ ಆಗಿತ್ತು. ತಿರುಗಿ ಎಚ್ಚರವಾಗಿ ಬೆಳದಿಂಗಳಲ್ಲಿ, ಹೊರಕ್ಕೆ ಬಂದು ತಿರುಗಿ ಒಳಕ್ಕೆ ಹೋಗಿ ಮಲಗಿದ. ತನ್ನಷ್ಟಕ್ಕೆ "ಈ ಅಪ್ಪಯ್ಯ ಹೀಗೆ ಮಾತನಾಡಿ ದಣಿಯುತ್ತಾರೇತಕ್ಕೆ?" ಎಂದೆನಿಸಿತು. ಆದುದರಿಂದ ಮಾತು ಮುಗಿಸಿ, ತಾಯಿ ಒಳಕ್ಕೆ ಬಂದೊಡನೆಯೇ "ಅಮ್ಮ, ಅಕ್ಕ-ಅದೆಷ್ಟು ಮಾತನಾಡುವುದು. ಅವರಿಗೆ ದಣಿವಾಗುವುದಿಲ್ಲವೇ?." ಎಂದು ಕೇಳಿದ. "ಅಲ್ಲ ಮಗು, ಅವರಿಗೆ ಬೇಗನೆ ನಿದ್ರೆ ಬರುವುದಿಲ್ಲ. ಹಗಲು ಆಚೆ ಈಚೆ ನೋಡಿ ಹೊತ್ತು ಹೋಗುತ್ತದೆ, ಎನ್ನುತ್ತಾರೆ. ರಾತ್ರಿ ಎಷ್ಟು ಹೊತ್ತು ಮೂಕರಂತೆ ಕುಳಿತಾರು. ಬೆಳಗಿನ ಜಾವಕ್ಕೆ ಇಷ್ಟು ಕಣ್ಣು ಬಾಡುತ್ತದೆ ಅವರಿಗೆ. ಅಲ್ಲಿಯವರೆಗೆ ಏನು ಮಾಡುವುದು ಅವರು? ಮಾತಿನಿಂದ ಬೇಸರವಾದರೂ ಹೋದೀತಲ್ಲ" ಎಂದಳು ತಾಯಿ.

ನಿದ್ದೆಯಿಂದ ತಾಯಿಗೂ ಮಗಳಿಗೂ ಆಕಳಿಕೆ ಬಂದಿತ್ತು. ಮಲಗಿಕೊಂಡರು. ಒಂದು ತಾಸು ಪೂರ್ಣ ಕಳೆಯಲಿಲ್ಲ. ಕೃಷ್ಣರಾಯರ ಒಂದು ನಿದ್ದೆಯು ಮುಗಿದು "ಲಕ್ಷ್ಮೀ, ಬಿಸಿ ನೀರಿದೆಯೇ" ಎಂದು ಕರೆದು ಕೇಳಿದರು. ಆಗ "ಬಿಸಿ ಇಲ್ಲ, ಕಾಯಿಸಿಕೊಡುತ್ತೇನೆ" ಎಂದಳು. "ಬೇಡ ಬಿಡು ,ಅಂತಹ ಬಾಯಾರಿಕೆಯೇನಿಲ್ಲ"—ಎಂದರು ತಿರುಗಿ. "ಲಕ್ಷ್ಮೀ, ಮಗುವಿಗೆ ನಿದ್ದೆ ಬಂದಿತೇ?" ಎಂದು ಕೇಳಿದರು.

"ಯಾರಿಗೆ? ಮಾಣಿಗೇನು! ಹೌದು."

'ಲಕ್ಷ್ಮೀ, ನಮ್ಮ ಮಗುವಿನದು ಚಿನ್ನದಂಥ ಗುಣ ಅಲ್ಲವೇ?'

'ಹೌದು, ನೀವು ಈಗ ಮಲಗಿಕೊಳ್ಳಿ. ಇವತ್ತು ತುಂಬ ದಣಿದಿದ್ದೀರಿ.'

'ಇವತ್ತು ನನಗೆ ಅಷ್ಟೊಂದು ಉಲ್ಲಾಸವಾಗಿದೆ. ಮಗು ಮನೆಗೆ ಬಂದ ಮೇಲೆ ನನಗೆ ಕಾಯಿಲೆ ನೂರಕ್ಕೆ ನಾಲ್ವತ್ತರಷ್ಟು ಆಗಿದೆ. ಗುಣ

ವಾದೇನು ಬೇಗ. ಆ ಮೇಲೇನೆ ಲಗ್ನಗಿಗ್ನ; ಈಗ ಬೇಡ, ದೇವರು ನಡೆಯಿಸುತ್ತಾನೆ' ಎಂದರು.

ಲಕ್ಷ್ಮಿಯು 'ನೀವು ಸುಮ್ಮನೆ ಮಲಗಿಕೊಳ್ಳಿ' ಅಂದಳು.

'ನಿನಗೆ ಆಯಾಸವಾಗಿರಬೇಕು, ಬೈಲಿಗೆ ಹೋಗಿದ್ದೆ, ಎಂದೆಯಲ್ಲ ಹುಲ್ಲಿಗೆ. ಈ ಸಮಯದಲ್ಲಿ ಬಿಸಿಲಲ್ಲಿ ಹೆಚ್ಚು ತಿರುಗಬಾರದು. ಬೇಸಗೆಯ ಬಿಸಿಲು ಮಹಾ ಅರಿಷ್ಟ' ಎಂದರು ಕೃಷ್ಣರಾಯರು.

'ಆಯಿತು, ಈಗ ನಿಮಗೆ ಬಿಸಿನೀರು ಕಾಯಿಸಿ ಕೊಡಲೇ'ಎಂದು ಹೆಂಡತಿಯು ಕೇಳಲು 'ಬಿಸಿ ನೀರೇ? ಬೇಡ. ಗಾಳಿ ತಂಪಾಗಿ ಬೀಸುತ್ತದಲ್ಲ. ಆಗ ಸೆಕೆಯಿತ್ತು, ಈಗ ತಂಪಿದೆ'-ಎಂದರು.

ಮುಂದೆ ಯಾರೂ ಮಾತನಾಡಲಿಲ್ಲ. ಅವರವರ ತಾವಿನಲ್ಲಿ ಅವರವರು ಮಲಗಿಕೊಂಡರು. ಕೃಷ್ಣರಾಯರು ಮಲಗಿ, ಗೊರಕೆ ಹೊಡೆಯತೊಡಗಿದರು. ಮನೆಯೆಲ್ಲವೂ ಗೊರಕೆಯಲ್ಲೇ ಮುಳುಗಿತ್ತು. ಎಲ್ಲರೂ ತಡವಾಗಿ ಮಲಗಿದವರಾದುದರಿಂದ ಇಳಿಯ ಎಚ್ಚರ ಯಾರಿಗೂ ಇರುವಂತಿರಲಿಲ್ಲ.

ಬೆಳಗಿನ ಕೋಳಿ ಕೂಗುತ್ತಲೇ, ಕಾವಲಿನ ದೂಮನು ಕೊಟ್ಟಿಗೆಯಿಂದ ಎಚ್ಚತ್ತು ಕುಳಿತನು. ಸಂಜೆ ಬೇಯಿಸಿ ಹರವಿದ ಬತ್ತವನ್ನು ಕುಟ್ಟಿಸುವಹೊಣೆ ಅವನದಾದುದರಿಂದ,ಅವಸರವಾಗಿ ಮನೆಗೆ ಸರಿದು, ಮನೆಯ ಹೆಂಗೆಳೆಯರನ್ನು ಕರೆದುತಂದ. ಅವರು ಕೊಟ್ಟಿಗೆಯಲ್ಲಿ ರಾಗ ಮಾಡುತ್ತ ಬತ್ತ ಕುಟ್ಟತೊಡಗಿದರು. ಅವರ ಗೀತದ ದನಿಗೆ ತಾಯಿ, ಮಗಳು ಎಚ್ಚತ್ತು, ಪಾತ್ರೆಗಳನ್ನು ಹೊರಕ್ಕೆ ತಂದು ಹಾಕಿದರು. ಲಕ್ಷ್ಮಿಯು ಪತಿಯ ಬಳಿಯ ಪಿಕದಾನಿಯನ್ನು ತೆಗೆದೊಯ್ಯಲು ಬಂದಳು. ರಾಯರು ಮಲಗಿಯೇ ಇದ್ದರು. ಗೊರಕೆಯಿರಲಿಲ್ಲ, ಗೊರಕೆಯಿಲ್ಲದೆ ನಿದ್ದೆಮಾಡುವವರು ಅವರಲ್ಲ. ಆದುದರಿಂದ 'ಎಚ್ಚರವಿದೆಯೇ' ಎಂದು ಕೇಳಿ, ಪಾತ್ರೆಯನ್ನು ಕೊಂಡು, ತೊಳೆಯಲು ಕೊಟ್ಟು ಬಂದಳು. ತಿರುಗಿ ಪತಿಯ ಬಳಿ ಕುಳಿತು ಮೈ ಸವರಿದಳು. ಒಮ್ಮೆಗೇ ಚಿತ್ಕಾರಿಸಿದಳು. 'ಮಾಣೀ, ಬಾ ಮಗು' ಎಂದಳು. ಅಚ್ಚುತ ಗಾಬರಿಯಿಂದ ಬಂದನು. ಬತ್ತಕುಟ್ಟುವ ಆಳುಗಳೂ ಓಡಿ ಬಂದರು. ಆದರೇನು? ಕೃಷ್ಣರಾಯರ ಹೃದಯದ ಮಿಡಿತ ನಿಂತು ಎರಡು ತಾಸಾಗಿ ಹೋಗಿತ್ತು.

.......... ..................

## ೩ನೆಯ ಅಧ್ಯಾಯ

ಈಗ ಕೃಷ್ಣಯ್ಯನವರು ತೀರಿಕೊಂಡು ಹದಿನೈದು ದಿನಗಳಾಗಿವೆ. ಅಳು, ನರಳುವಿಕೆ, ಗಳಿಗೆಗಳಿಗೆಯು ಸಂಗೀತದ ಬದಲು ಎಲ್ಲ ನೆನಪಿನ ಮರುಕಳಿಕೆಯಾಗಿದೆ. ಮನೆಗೆ ಯಾರಾದರೂ ಬಂದಾಗಲೆಲ್ಲ, ಅವರು ಬಳಸಿದ ಅರಿವೆ ಅಂಚಡಿ, ಪಾತ್ರೆ ಕೈಗೋಲು ಸಿಕ್ಕಿದಾಗಲೆಲ್ಲ ಲಕ್ಷ್ಮವ್ವ ನಿಗೆ ಕತ್ತು ಉಬ್ಬುವುದು; ಕಣ್ಣ ಹನಿ ಉದುರುವುದು. ಆದರೆ ಆಕೆ 'ಗೋಳೋ' ಎಂದು ಪತಿಯ ಮೃತ್ಯುಶಯ್ಯೆಯ ಬಳಿಯಲ್ಲೂ ಅತ್ತಿಲ್ಲ. ಕಾರಣ-ಅವರು ಹಾಸಿಗೆ ಹಿಡಿದು ನಾಲ್ಕೈದು ವರ್ಷಗಳಾಗಿರುವಾಗ, ಪ್ರತಿ ದಿನವೂ ಮುಂದಿನ ಅಮಂಗಳಕ್ಕೆ ಎದೆಯನ್ನು ಹದಮಾಡಿ ಕೊಂಡೇ ಬರುತ್ತಿದ್ದಳು. ಹಾಗೆ ಹೇಳಹೋದರೆ-ಅವಳು ತನ್ನ ವೈಧವ್ಯ ಚಿಂತನೆಯಿಂದ ಕನಸಿನಲ್ಲಿ ಅತ್ತಷ್ಟು ಕೂಡ ಈಗ ಅಳುತ್ತಲಿಲ್ಲ. ಆದ ರೇನು? ಎದೆಮರುಕ ಬತ್ತಲಾರದು. ಅದು ಉಕ್ಕಿದಂತೆ ಬಾಯಿ ಬಿಗಿ ಹಿಡಿದರೂ, ಮಗನ ಮುಖ ನೋಡಿದೊಡನೆ ಜುಮ್ಮೆಂದು ಕಾರಂಜಿ ಚಿಮ್ಮಿದ ಹಾಗೆ ಚಿಮ್ಮುತ್ತದೆ. ಆದರೆ ಮುಖ ತಿರುವಿಕೊಂಡು, ಕೆಲ ಸದ ನೆಪಮಾಡಿಕೊಂಡು ಅತ್ತ ಸರಿದು ಹೋಗುತ್ತಾಳೆ. ಹಿಂದೆ — ಮಾಂಗಲ್ಯವಿದ್ದಾಗ, ಮೂಗುತಿ, ಕರಿಮಣಿ ಕುಂಕುಮ ಅರಸಿನಗಳಿಂದ ಮುತ್ತೈದೆಯಾಗಿ ಓಡುತ್ತಿದ್ದಾಗ, ತುಂಬಿ ಕಾಣಿಸಿದ ಜೀವ, ಆ ಮನೆ ಗೊಂದು ಗೆಲವು ಹುಟ್ಟಿಸಿದ ಜೀವ, ಈಗ ಮನೆಯ ಕೊರಗನ್ನು ಸೂಚಿ ಸುವ ರೂಪ ತಾಳಿದೆ. ಕಣ್ಣು ಕಳೆಗುಂದಿದೆ! ಕಪೋಲ ಬಾಡಿದೆ! ತಲೆಯ ಮೇಲೆ ಸೀರೆಯ ಸೆರಗು ಏರಿ, ಅಮಂಗಳ ವ್ಯಥೆಗಳ ಹೆಗ್ಗುರುತಾಗಿದೆ. ತನ್ನ ತಾಯಿಯ ಈ ವೇಷಪಲ್ಲಟವನ್ನು ಅಚ್ಯುತನಿಗೆ ಕಣ್ಣೆತ್ತಿ ಕಾಣುವು ದಾಗದು. ಅಮ್ಮನ ಕಾಲಿನ ಬೆರಳು ನೋಡುತ್ತ ಅವನು ಮಾತನಾಡು ತ್ತಾನೆ. ಅವಳ ಮುಖವನ್ನು ನೋಡುವ ಧೈರ್ಯ ಅವನಿಗೆ ಬರುವಂತಿಲ್ಲ.

ಆಗಾಗ ಅಚ್ಯುತ, ತಾಯಿಯ ಕೊರಗನ್ನು ತಗ್ಗಿಸಲು ಸಮಾಧಾನ ಪಡಿಸುತ್ತೇನೆ, ಎಂದೇನೊ ಯೋಚಿಸುತ್ತಾನೆ. ಆದರೆ ಬಳಿ ಸಾರಿದಾಗ ಲೆಲ್ಲ, ತಾನೇ ಕರಗಿ ಸೂಸಿಬಿಡುತ್ತಾನೆ. ಆಕೆ ಬಡಿಸುವುದಕ್ಕೆ ಬರುವು ದಿಲ್ಲ. ಅಡುಗೆಗೂ ಇಲ್ಲ. ಎಲ್ಲ ಒಳಗೆಲಸಗಳನ್ನು ಸೀತೆಯು ನಡೆಯಿಸಿ

ಕೊಂಡು ಹೋಗುತ್ತಾಳೆ. ಈಕೆ, ಬಿಸಿನೀರು ಒಟ್ಟುವುದು, ತರಗೆಲೆ ಸೇರಿಸುವುದು, ಇವೆ ಒಂಟಿತನದ ಕೆಲಸಗಳಲ್ಲಿ ನಿರತಳು. ರಾತ್ರಿ ಮಲಗುವಾಗ ತಾಯಿ, ಮಗ ಒಂದೇ ಚಾವಡಿಯಲ್ಲಿ ಮಲಗುತ್ತಾರೆ. ಸೀತೆ, ಅವಳ ಗಂಡ ಒಳಗಿರುತ್ತಾರೆ. ಹೀಗಾಗಿ ತಾಯಿ ಮಗನ ಸಂಭಾಷಣೆಗೆ ಆತಂಕವೇನೂ ಇಲ್ಲ. ಕತ್ತಲಿನ ತೆರೆಯು ಇಬ್ಬರ ಮುಖದ ನಡುವೆ ಕುಣಿಯುತ್ತಿರುವುದರಿಂದ, ಮುಖ ನೋಡಿ ಮನ ಕುಗ್ಗುವುದೆಂಬ ಧೈರ್ಯವಿಲ್ಲ. ಈಗ ತಾಯಿಯನ್ನು ಹೇಗೇಗೋ ಮಾತನಾಡಿಸಲು ಯತ್ನಿಸುತ್ತಾನೆ. ನೇರಾಗಿ, ಮನೆಯ ವಿಚಾರವೊಂದನ್ನು ಬಿಟ್ಟು, ಉಳಿದೇನನ್ನಾದರೂ ಮಾತನಾಡುತ್ತಾನೆ. ಅವಳು ಸಹ ಊರಿನ ಸುದ್ದಿಯನು ಹೇಳುತ್ತಾಳೆ. ಇಷ್ಟು ಅಭ್ಯಾಸವಾಗುವುದಕ್ಕೆ ಹದಿನೈದು ದಿನವಾದರೂ ಕಳೆದುಹೋಗಿರಬೇಕು. ನಿನ್ನೆ ನಿನ್ನೆಯ ತನಕ ಸೂತಕದ ಭೀಕರ ಕ್ರಿಯೆಗಳೆಲ್ಲ ಸೇರಿ ಅಚ್ಯುತನ ದಿನವನ್ನೂ ರಾತ್ರಿಯನ್ನೂ ಆವರಿಸಿದ್ದುವು. ಹಗಲಿಗೂ, ಆತನು ತಂದೆಯು ಪ್ರೇತವಾಗಿ ಎಲ್ಲೋ ವೈತರಣಿ ದಾಟಲಾರದೆ ಅಲೆಯುತ್ತಿರಬೇಕು, ಈ ಪಿಂಡ ಸಲಿಸಿದ ಮೇಲೆಯೂ ಅವರ ಪಾರುಗಡೆಯಾಗುತ್ತದೆಯೋ ಇಲ್ಲವೋ-ಎಂಬ ಅನುಮಾನದಲ್ಲಿ ಅಲೆಯುತ್ತಿದ್ದನು.

ಈಗ ವೈಕುಂಠ ಸಮಾರಾಧನೆಯೂ ಕಳೆಯಿತು. ತುಸು ನೆಮ್ಮದಿ ಮನಸ್ಸಿಗೆ ಬಂದಿದೆ. ತಾಯಿಯನ್ನು ಕತ್ತಲಿನ ಮುಸುಕಿನೊಳಗಿಂದ ಮಾತನಾಡಿಸುವ ಸಾಹಸವಾಗಿದೆ. ಒಂದು ರಾತ್ರೆ, ಎಷ್ಟು ಹೊತ್ತು ಸಂದಿತ್ತೋ ತಿಳಿಯದು-'ಅಮ್ಮ' ಎಂದ. ಆಕೆಗೆ ಕೆಲವು ದಿನಗಳಿಂದ ನಿದ್ರೆ ಎಚ್ಚರಗಳು ಬೆರತು ಬರುತ್ತಿವೆ. ಮಗನ ಕರೆಗೆ 'ಹಾಂ' ಎಂದರೂ ಉಸಿರಿನ ಗೊರಕೆ ಕೇಳಿಸುತ್ತಲೇ ಇರುವುದು. ತಿರುಗಿ 'ಅಮ್ಮ' ಎಂದನು. 'ಆಂ' ಎಂದು ಉತ್ತರ ಬಂದಿತು. ಹೀಗೆ ಮೂರು ನಾಲ್ಕಾವೃತ್ತಿಯಾದ ಬಳಿಕ 'ಏನು? ಕರೆದೆಯೋ ಮಗು' — ಎಂದಳು. ಮಗುವು ಮೆಲ್ಲನೆ 'ಅಮ್ಮ, ಬೀಜ ಬಿತ್ತಿಸುವ ಸಮಯವಾಗಲಿಲ್ಲವೇ? ಗದ್ದೆ ಹೂಟೆಯಾಗ ಬೇಡವೇ? ಮಳೆ ಎಂದು ಬರುತ್ತದೆಯೋ, ಆದರೂ ಅಗೆಗೆ ತಯಾರು ಮಾಡದೆಹೋದರೆ?' ಎಂದನು.

ತಾಯಿ 'ಅಗೆ, ಹೂಟೆ — ಎಲ್ಲ ಆಯಿತು, ಇನ್ನು ನಾವು ಸಾಗುವ?

ಮಾಡಿ ಆದೀತೆ? ಹೂಟೆಗೆ ಎತ್ತು, ಕೋಣ ಬೇಡಿಯಾಗಬೇಕು ಇಷ್ಟು ದಿನ ಅವರ ಹಂಗಿಗೆ ಶೇಷ ಗೌಡ ಬಂದು ಹೂಡುತ್ತಿದ್ದ. ಇನ್ನೇನು ಮಾತನಾಡುತ್ತಾನೆಯೋ? ಇನ್ನು ಹೇಗೆಯೋ? ಬೀಜಕ್ಕೆ ತೆಗೆದಿರಿಸಿದ ಬತ್ತವಿದೆ. ಅವಲಕ್ಕಿ ಮಾಡಿಸಿ ಬಿಡುವುದು. ಗದ್ದೆಯನ್ನು ಅವನೇ ಗೇಣಿಗೆ ಕೇಳಿದ್ದಾನೆ; ಅವನಿಗೆ ಕೊಟ್ಟುಬಿಡುವುದು. ಮಗು, ನಿನ್ನಿಂದ ನನ್ನಿಂದ ಸಾಗುವಳಿ ಕೆಲಸ ನೋಡಿಕೊಳ್ಳಲು ಬಂದೀತೆ? ಈಗ ಸೀತೆಯ ಗಂಡ ಬಂದಿದ್ದಾನೆ; ಸೀತೆ ಅಡುಗೆ ಮಾಡುತ್ತಾಳೆ. ಅವರು ಹೋದ ಮೇಲೆ? ನಾನು ಹೊರಗೆ ಇಷ್ಟು ಬೇಗ ತಿರುಗಾಡಲು ಬಂದೀತೆ? ಅವರು ಎಷ್ಟು ದಿನ ಇದನ್ನೆಲ್ಲ ನೋಡಿಕೊಂಡು ತಮ್ಮ ಕೆಲಸ ಮರೆತು ಬಿಟ್ಟಾರು?

‘ಭಾವನನ್ನು ದಾಕ್ಷಿಣ್ಯಕ್ಕೆ ಹಾಕುವುದು ಬೇಡ. ನಾನಿದ್ದೇನಲ್ಲ; ಕೂಡಿದಷ್ಟು ದುಡಿಯುತ್ತೇನೆ. ಆದಷ್ಟು ಆಗುತ್ತದೆ. ನಾಳೆಗಾದರೂ ನಾನೇ ಕಲಿಯಬೇಕಲ್ಲ.’

‘ನೀನು ಈ ವರ್ಷ ಏನೂ ಮಾಡಬೇಡ. ಅವರಿಗೆ ನೀನು ಓದು ಮುಗಿಯಿಸಬೇಕೆಂಬ ಇಚ್ಛೆ ಬಹಳವಾಗಿ ಇದ್ದಿತು. ನೀನು ಬುದ್ಧಿವಂತನಾದುದನ್ನು ನೋಡಿ ಸಾಯುವ ಎಂದು ಹಂಬಲಿಸಿದ್ದರು. ಏನೂ ಆಗಲಿ, ಈ ವರ್ಷ ನೀನು ಓದು ಮುಗಿಯಿಸು. ನಾಳಿನ ಪಾಡು ದೇವರು ನಡೆಯಿಸುತ್ತಾನೆ.’

ಅಚ್ಯುತನಿಗೆ ಮನಸ್ಸು ಉದ್ವೇಗಗೊಂಡಿತು. ತಾಯಿಯು ಬಿಸಿಯುಸಿರು ಗರೆಯದೆ ಈ ಮಾತನ್ನು ಆಡಿಲ್ಲ. ಮಾತನಾಡುವಾಗ— ಗಂಡ, ಸಾಯುವ ಮೊದಲು ಬಿಸಿನೀರಿನ ನೆಪದಿಂದ ಮಗನ ಕುರಿತು, ಹೇಳಿದ ಮಾತುನೆನಪಾದುವು. ಮಗನ ವಿಚಾರದಲ್ಲವರು ಕಟ್ಟಿಕೊಂಡ ಕನಸು ಅವಳಿಗೆ ಕಾಣಿಸದೆ ಇರಲಿಲ್ಲ. ‘ದೇವರೇ ಕೊಟ್ಟ ಮಗು’ ಎಂದು ಅವರೂ ತಿಳಿದಿದ್ದರು, ಅವಳೂ ತಿಳಿದಿದ್ದಳು. ಈ ಮಾತು ಅಚ್ಯುತನಿಗೆ ತಿಳಿಯದಾದರೂ, ತಾಯಿತಂದೆಯರು ಅವನ ಮೇಲೆ ಇರಿಸಿದ ಮಮತೆಯ ಹೊರೆ, ಅವನು ಮನಗಾಣದವನಲ್ಲ.

ಅದರಿಂದಾಗಿ ‘ಅಮ್ಮ, ಅಪ್ಪ ಬೇಗ ಹೋಗುತ್ತಾರೆಂದು ನಾನು ತಿಳಿದಿರಲಿಲ್ಲ. ನೊಂದುವ ದೀಪಕ್ಕೆ ಪ್ರಕಾಶ ಹೆಚ್ಚು ಎಂಬ ಹಾಗೆ ಆ ಸಂಜೆ ಎಷ್ಟೆಲ್ಲ ಮಾತನಾಡಿದರು. ನನಗೇಕೋ–ಅವರಿಗೆ ಆಯಾಸವಾ

ಗದೇ ಅನಿಸಿತು. ಆದರೆ ಅಂದು ವರ್ಷದ ಮಾತುಗಳನ್ನು ಒಂದೇ ದಿನದಲ್ಲಿ ಆಡಿ ಮುಗಿಸಿ ಬಿಡುತ್ತಾರೆಂದು ಯಾರು ಬಲ್ಲರು?

ಲಕ್ಷ್ಮಿಗೆ ದುಃಖ ಉಕ್ಕಿ ಬಂದಿತು. ಆದರೂ ತಡೆದು, 'ಮಗು, ಅವರ ದಿನವಾಯಿತು. ಕೊನೆಯ ದಿನಗಳನ್ನಷ್ಟು ಅವರು ಸುಖವಾಗಿ ಕಳೆದರು. ನಿತ್ಯದ ನರಳುವಿಕೆ, ನೀನು ರಜೆಗೆ ಬಂದಲಾಗಾಯಿತು, ಇಲ್ಲವೆನ್ನಬೇಕು, ನೀನು ಊರಲ್ಲಿಲ್ಲದಾಗ, ಅವರೊಬ್ಬರೇ ಇದ್ದಾಗ, ಅವರು ಪಟ್ಟ ಯಾತನೆ ಅಷ್ಟಿಷ್ಟೇನು? ನಾನೇ 'ಈ ಯಾತನೆ ಎಂದು ಮುಗಿದೀತು'ಎಂದು ಮೊರೆಯಿಟ್ಟಿದ್ದೆ. ಅವರ ಸಾವನ್ನು ನೆನೆಯುತ್ತಿದ್ದೆ. ಸಾವು ಸುಖ, ಈ ಯಮಯಾತನೆಗಿಂತ. ಗಟ್ಟಿ ಮುಟ್ಟಾಗಿ ಓಡಾಡಿದವರಿಗೆ, ತಮ್ಮ ಪ್ರತಿಯೊಂದು ಕೆಲಸಕ್ಕೂ ಪರರ ಆಶ್ರಯವನ್ನು ಬಯಸಲು ವ್ಯಥೆಯಾಗುವುದಿಲ್ಲವೇ? ಮೈ ನೋವಿಗಿಂತ ಆ ನೋವು ಹೆಚ್ಚಿನದು. ಆಯಿತು ಬಿಡು............ನೆನೆದೇನು ಬಂದೀತು ಹೇಳು.'

ಬಲು ಹೊತ್ತು ಯಾರೂ ಮಾತನಾಡಲಿಲ್ಲ. ಅಚ್ಯುತ ತನ್ನ ಹಿಂಗಡೆಯಲ್ಲಿ ಎಷ್ಟೆಲ್ಲ ನೊಂದಿರಲಾರನು–ಎಂಬುದನ್ನು ನೆನೆಯಿಸಿಕೊಂಡು, ಅಳತೊಡಗಿದನು. ಬಾಯಿಂದ ಧ್ವನಿ ಹೊರಡದು; ಆದರೆ ಕಣ್ಣಿನ ನೀರು ಕಪೋಲವನ್ನೂ ದಿಂಬನ್ನೂ ತೊಯ್ಯುತ್ತಲೇ ಇತ್ತು. ಎಷ್ಟು ಹೊತ್ತು ಹೀಗೆ ಸರಿದಿರಬಹುದೊ! ಆದರೆ ಬಲು ಹೊತ್ತಿನ ಬಳಿಕ ತಾಯಿ 'ಅಚ್ಯುತ, ಒಂದು ಯೋಚನೆ ಕೇಳುತ್ತೇನೆ. ನಿನ್ನ ಹತ್ತಿರ ಕೇಳುವ ಅನಿಸುತ್ತದೆ.' ಎಂದಳು.

'ಏನಮ್ಮ, ನಮ್ಮ ಮನೆ ಗದ್ದೆಗಳನ್ನು ಈ ವರ್ಷ ನಾವು ಸಾಗುವಳಿ ಮಾಡುವುದು ಬೇಡ'. ಒಂದೂ ಗೇಣಿಗೆ ಕೊಡುವ........

'ಗೇಣಿ ಸಮನಾಗಿ ವಸೂಲಾಗದೆ ಹೋದರೆ, ಮನೆಯ ಖರ್ಚಿನ ಅಕ್ಕಿಗೆ ಮೋಸವಾಗದೇನಮ್ಮ; ಶೇಷ ಗೌಡನಿಗೆ ತನ್ನ ಹೊಲ ನೋಡಿಕೊಂಡು ಇದನ್ನೂ ಮಾಡಿಕೊಳ್ಳುವ ಆಳು, ಕೋಣ ಉಂಟೇನು? ಗೊಬ್ಬರಕ್ಕೆ ಎಲ್ಲಿಗೆ ಹೋಗುತ್ತಾನೆ? ಸುಮ್ಮನೆ ತನ್ನ ಯೋಗ್ಯತೆಗೆ ಮೀರಿದ ಕೆಲಸ ಮಾಡಿ, ಕಡೆಗೆ ಬೆಳೆಯೇ ಬರಲಿಲ್ಲ, ಎಂದು ಅಂಗಳದಲ್ಲಿ ಬಂದು ಕೈಕಟ್ಟಿ ನಿಂತರೆ–ಏನು ಮಾಡಬೇಕು.'

'ಅದಕ್ಕೆ ನನಗೊಂದು ಉಪಾಯ ಕಾಣುತ್ತದೆ ಮಗು. ಸೀತೆಯ

ಗಂಡನನ್ನು ಈ ವರ್ಷ ಇಲ್ಲಿಯೇ ಇರಿಸಿಕೊಳ್ಳುವ. ಅವನು ಊರಿನ ಆಸ್ತಿಯನ್ನು ಯಾರಿಗೋ ಗೇಣಿಗೆ ಕೊಟ್ಟುಬಂದಿದ್ದಾನೆ. ಸರಿಯಾದ ಕ್ರಯ ಬಾರದೆ ಅದನ್ನು ಮಾರುವುದಿಲ್ಲವಂತೆ. ಇಲ್ಲಿ ಇನ್ನೊಂದು ಭೂಮಿಯನ್ನು ಗೇಣಿಗೆ ಮಾಡಿಕೊಂಡು ಅವಸರ ಅವಸರವಾಗಿ ಮನೆಹೂಡಲು ಸಾಧ್ಯವೇ? ಬೇಸಗೆ ಬಂದಾಯಿತು, ಇನ್ನು ಯಾವ ಗದ್ದೆಯೂ ಗೊತ್ತಾಗಿಲ್ಲ; ಹೊಸಮಠವೋ, ಕಡಬವೋ, ಉಪ್ಪಿನಂಗಡಿಯೋ — ಎಂದು ಹುಡುಕುವುದರಲ್ಲಿಯೇ ದಿನಹೋಯಿತು. ಹಾಗಾಗಿ ಇದ್ದುದನ್ನು ಇಲ್ಲಿ ಸೇರಿ ಉಣ್ಣುತ್ತಾರೆ. ಅಲ್ಲಿಂದಲೂ ಒಂದು ಇಪ್ಪತ್ತು ಮುಡಿ ಹುಟ್ಟುವಳಿಯುಂಟಲ್ಲ. ಕೊನೆಯ ಪಕ್ಷ ನಿನ್ನ ಶಾಲೆ ಮುಗಿದು, ನೀನು ಒಂದು ಗಡಿಗೆ ಮುಟ್ಟುವ ತನಕ, ಅವರು ಇಲ್ಲಿ ಇರಲಿ ಎಂದು ನನಗೆನಿಸುತ್ತದೆ.'

'ಹಾಗೆಂದರೆ ಇನ್ನೂ ಮೂರು ವರ್ಷ ಕಳೆಯಬೇಕಾದೀತಮ್ಮ. ಅವರು ತಮ್ಮ ಯೋಜನೆಗಳನ್ನು ಬಿಟ್ಟು ಹೀಗೆ ಅಂತರ ಪಿಶಾಚಿಯ ಹಾಗೆ ಇದ್ದಾರೆಯೇ? ಬದಲು ಸಮೀಪದಲ್ಲೆಲ್ಲಾದರೂ ಆಸ್ತಿಮಾಡಿಕೊಂಡಿದ್ದರೆ, ಇಲ್ಲಿಗೂ ಆಗಾಗ್ಗೆ ಬಂದು ಹೋಗಬಹುದು; ಮೇಲ್ವಿಚಾರ ತೆಗೆದುಕೊಳ್ಳಬಹುದು.'

'ನಿನ್ನ ಓದಿಗೆ ಮೂರು ವರ್ಷಬೇಕೆ? ಇದು ಕಡೆಯ ವರ್ಷ ಅಂದೆಯಲ್ಲ.'

'ಪಾಸಾದರೆ ಕಡೆಯ ವರ್ಷ ನಿಜ. ಆದರೆ–ನನ್ನ ಓದು ಮುಗಿಯುವಾಗ, ಪ್ರಾಯ ಹದಿನಾರು ಮುಗಿಯುತ್ತದೆ. ವರ್ಷ ಹದಿನೆಂಟಾಗದೆ ಎಲ್ಲಾದರೂ ಚಾಕರಿ ಕೊಡುತ್ತಾರೆಯೇ? ಹಾಗೆಂದು ಮಂಗಳೂರಲ್ಲಿ, ಓದು ಮುಂದುವರಿಸಲು ನಮ್ಮಿಂದ ಸಾಧ್ಯವೇ? ವಿಪರೀತ ಖರ್ಚು ವೆಚ್ಚ. ಈ ವರ್ಷವೇ ಮುಂದೆ ಸಾಗುವುದು ಕಷ್ಟ. ಬೇಡ, ಹಣೆಯಲ್ಲಿ ಬರೆದಂತೆ ಆಗುತ್ತದೆಯಮ್ಮ. ಮನೆಯಲ್ಲಿದ್ದು ಬಿಡುತ್ತೇನೆ. ಸರಕಾರಿ ಕೆಲಸವೆಂದರೆ ಊರ ಮನೆಯಲ್ಲಿ ಅದು ಸಿಗುತ್ತದೆಯೇ? ಊರೂರು ಸುತ್ತಬೇಕು. ಆಗ ನೀನು ಇಲ್ಲೇನು ಮಾಡಬೇಕು ಹೇಳು. ಇಷ್ಟು ಓದಿದ್ದೇ ನನ್ನ ಅದೃಷ್ಟ....'

ಈ ಮಾತು ತಾಯಿಗೆ ವಾಸ್ತವವಾಗಿ ಕಂಡರೂ ಒಂದು ವಿಷಯ

ದಲ್ಲಿ ಅವಳು ದೃಢ ನಿಶ್ಚಯಕ್ಕೆ ಬಂದಿದ್ದಾಳೆ. ತನ್ನ ಅವರ ಚಿನ್ನದಂಥ ಮಾಣಿಗೆ ಪುತ್ತೂರಿನ ಓದನ್ನು ಮುಗಿಸಿಯೇ ಬಿಡಬೇಕೆಂದು. ಮುಂದೇನು ಆದೀತು? ಅದರಿಂದ ತಹಶೀಲಿಕೆ ಬರುತ್ತದೆಂದಲ್ಲ-ಅವರಿಗೆ ಆ ಬಯಕೆಯಿತ್ತು. ಅವರ ಮನಸ್ಸು ತಣಿಯಲಿಲ್ಲ. ಇನ್ನೊಂದು ಲೋಕದಿಂದಲಾದರೂ-ತಮ್ಮ ಮಗ ಓದಿ ಬುದ್ಧಿವಂತನಾಗಿದಾನೆಂಬ ಹೆಮ್ಮೆ ಉಳಿಯಲಿ' ಎಂಬುದರಿಂದ.

ಆದುದರಿಂದ ಆಕೆ—'ಬಿಡು. ರಾತ್ರಿ ಹೊತ್ತು ಮೀರಿತು. ಮಲಗುವ; ನಾಳೆ ಸೀತೆಯ ಗಂಡನನ್ನು ಕೇಳುವ. ಒಬ್ಬೊಬ್ಬರೇ ಮಾಡಿ ಮುಗಿಸುವ ಯೋಚನೆಯಲ್ಲ. ಸೀತೆಯ ಮನಸ್ಸು ಹೇಗೋ ಅವಳ ಗಂಡನ ಮನಸ್ಸು ಹೇಗೋ. ಸಾವಿಗೆ ಬಂದವರನ್ನು ಇಲ್ಲಿಯೇ ಕಟ್ಟಿಹಾಕಿದರು ದಾಕ್ಷಿಣ್ಯಕೆ. ಎಂದು ಯಾರ ಬಾಯಿಯಿಂದಲೂ ಮಾತು ಬರಬಾರದಲ್ಲ' ಎಂದಳು.

ಬೆಳಗಾಗುತ್ತಲೇ, ನಿತ್ಯದಂತೆ ಬತ್ತಕುಟ್ಟುವ ಹೊಲತಿಯರ ರಾಗ ಕೇಳಿ ಬಂದಿತು. ಮೊದಲ ಬಾರಿಗೆ, ಸಾವು ಕಳೆದ ಮೊದಲ ಬಾರಿಗೆ, ಲಕ್ಷ್ಮಿಯು ಉದಯರಾಗವನ್ನು ಹಾಡಿಕೊಂಡು ಪಾತ್ರೆಗಳನ್ನು ಬೆಳಗಲು ಗದ್ದೆಯ ಬಳಿಯ ನೀರಿನ ಕುಣಿಗೆ ಹೋದಳು. ಬೆಳಕೇರುವ ಮೊದಲೇ ಕುಂತೂರಿಗೆ ಹೊರಡುವೆನೆಂದು, ನರಸಿಂಹಯ್ಯ ಎದ್ದುಕೊಂಡು ಬಾವಿ ನೀರು ಜಗ್ಗಿ, ಕಚಕಚ ಮಾವಿನ ಎಲೆಯಿಂದ ಹಲ್ಲುಜ್ಜುತ್ತಿದ್ದರು. ಮುಖ ತೊಳೆದು ಬಾಯಿ ಮುಕ್ಕುಳಿಸುವದರ ಎಡೆಯಲ್ಲೇ, 'ಅತ್ತೇ ಎಂದು ಕರೆದರು. ಅವಳ ಸ್ವರ ಕೇಳಿಸದುದರಿಂದ 'ಓ ಇವಳೇ ನೋಡು ನಿನ್ನ ಅಮ್ಮ ಎಲ್ಲಿಗೆ ಹೋದರು' ಎಂದು ಕೇಳಿದರು. ಸೀತೆಯು ಗಂಡನಹೇಳಿಕೆಯಂತೆ ತಾಯಿ ಇರುವಲ್ಲಿಗೆ ಹೋಗಿ, ಅಳಿಯನ ಕರೆಯನ್ನು ತಿಳಿಸಿದಳು. ಲಕ್ಷ್ಮಿಯು ಬಂದು 'ಏನು ಮಗು?' ಎಂದಳು.

'ಅತ್ತೆ, ನಾನು ಒಂದು ನಾಲ್ಕು ದಿನ ಬರುವುದಿಲ್ಲ. ಪುತ್ತೂರು ತನಕ ಹೋಗಿ ಬರುತ್ತೇನೆ' ಎಂದರು. ಅವರ ಉದ್ದೇಶ ಅದಾಗಿರಲಿಲ್ಲ. ಆದರೆ ನಿಜವಾಗಿ ಎಲ್ಲಿಗೆ ಹೊರಡುತ್ತೇನೆಂದು ಹೇಳಿ, 'ಯಾಕೆ, ಏನು' ಎಂದು ಆರಂಭದಲ್ಲಿ ಕೇಳಿದರೆ ಅಮಂಗಲವಾದೀತೆಂದು ಹೀಗೆ ಹೇಳಿದರು.

'ಬೇಗ ಬರುತ್ತೀಯಲ್ಲ; ಅಂದರೆ ಮಗುವನ್ನು ಪುತ್ತೂರಿಗೆ ಶಾಲೆಗೆ ಕಳಿಸುವ ಮೊದಲು ನಿನ್ನ ಹತ್ತಿರ ಒಂದು ಯೋಚನೆ ಕೇಳುವ ಎಂದಿದೆ' ಎಂದರು.

'ಯಾವ ಮಗುವಿಗೆ ಶಾಲೆ? ಅಚ್ಯುತನಿಗೇ-'

'ಮತ್ತಾರಿಗೆ? ಇನ್ನೆಷ್ಟು ಮಕ್ಕಳು ಈ ಮನೆಯಲ್ಲಿದ್ದಾರೆ?'

'ಹೂಂ-ನಿಮಗೆ ಬುದ್ಧಿಯಿಲ್ಲ. ಶಾಲೆ ಓದಿ ಬರುವುದೇನು? ನಾವೆಲ್ಲ ಓದಿ ಮಾಡಿ ಉದ್ಧರಿಸುವುದೇನು? ಓದಿ, ಕಡೆಗೆ ಗದ್ದೆ ಬೇಸಾಯವೂ ಇಲ್ಲ, ಇತ್ತ ಚಾಕರಿಯೂ ಇಲ್ಲ. ಕಚ್ಚೆ ಮೇಲಕ್ಕೆತ್ತಿಕೊಂಡು ಕೆಸರು ತುಳಿಯಲು ಡೌಲು ಸಾಲದು; ಕಚ್ಚೆ ಹಾಕಿ ತಿರುಗಿದರೆ ಅನ್ನ ಸಿಗದು-ಹೀಗಾಗಬೇಕೆ?' ಎಂದರು.

'ಅದೊಂದೂ ನನಗೆ ತಿಳಿಯದು. ಅವರ ಮನಸ್ಸು ಅಷ್ಟು ಮಾಡಿಸಬೇಕೆಂದಿತ್ತು. ಮಾಡಿಸುತ್ತೇನೆ. ಮುಂದೆ ಹಾಳಾಗುವುದು ಒಳ್ಳೆಯದಾಗುವುದು ಪರಮಾತ್ಮ ಎಣಿಸಿದ ಹಾಗೆ ಇದೆ. ಅವನ ಮಾಸ್ತರು — ಒಳ್ಳೆ ಹುಷಾರಿ ಹುಡುಗ, ಶಾಲೆ ಬಿಡಿಸಬೇಡಿ, ನಮ್ಮಿಂದಾದ ಸಹಾಯ ಮಾಡುವ ಮುಂದಿನ ವರ್ಷ-ಎಂದು ಅವರಿರುವಾಗ ಬರೆದಿದ್ದರು. ಯಾಕೆ ಅವರ ಇಚ್ಛೆಯನ್ನು ನಾವು ಕೆಡಿಸಬೇಕು? ಕಷ್ಟವಾದೀತು, ಆಗುತ್ತದೆ. ಈಗ ಮನೆಯ ಖರ್ಚು ಕಡಮೆಯಾಯಿತಲ್ಲ. ಮದ್ದಿಗೆ-ಹಾಲಿಗೆ ತೆರುತಿದ್ದದ್ದು-ಅವರದ್ದೇ ಋಣ ಅವನಿಗೆ ಸಲ್ಲುತ್ತದೆ' ಎಂದಳು.

ನರಸಿಂಹಯ್ಯ ಮಾವನಿರುವಾಗ ಅತ್ತೆಯೊಡನೆ ಬಹಳವಾಗಿ ಮಾತನಾಡಿದವರಲ್ಲ. ತಾವು ಬಹಳ ಬಲ್ಲವನೆಂಬ ಹೆಮ್ಮೆ ಅವರಿಗೆ ಮೊದಲಿನಿಂದಲೂ ಇತ್ತು. ಈಗ ತಮ್ಮ ತೀರ್ಮಾನಕ್ಕೆ ಇದಿರಾಗಿ ಬರುವುದೂ ಅವರಿಗೆ ಇಷ್ಟವಾಗಿರಲಿಲ್ಲ. ಆದರೆ ಮೊದಲ ಬಾರಿಗೆ ಅತ್ತೆಯೊಡನೆ ತರ್ಕಕ್ಕೆ ನಿಲ್ಲಲು ಧೈರ್ಯವಾಗಲಿಲ್ಲ. ಆದುದರಿಂದ 'ಹೂಂ' ಎಂದು ಮಾತನ್ನು ಮುಗಿಸಿ, 'ಹೆಣ್ಣೇ ಇಲ್ಲಿ ಬಾ' ಎಂದರು. ಹೆಂಡತಿಯು ಬರಲು 'ಅತ್ತೆಗೆ ಹೇಳಿದ್ದೇನೆ, ನಾನು ನಾಲ್ಕು ದಿನ ಇಲ್ಲವೆಂದು. ಮನೆಯ ವಿಷಯ ಜಾಗ್ರತೆ ಇರು. ಮಕ್ಕಳು ನೀರಿನ ಕುಣಿಯ ಬಳಿಗೆ ಹೋಗದೆ ಇರಲಿ....' ಎಂದು ಮುಂದುವರಿಸಿದರು. ಅತ್ತೆ ತಿರುಗಿ ತಮ್ಮ ಕೆಲಸಕ್ಕೆ ಹೋದುದನ್ನು ಕಂಡು 'ಹೆಣ್ಣೇ-ನಮ್ಮ ಭಾವನಿಗೆ ಈ ಸಮಯದಲ್ಲೂ

ಕ್ಕೆ ಮುರಿದುಕೊಂಡ ಮೇಲೂ, ಇಂಗ್ಲಿಷ್ ಆಗಬೇಕಂತೆ. ಏನು ಅವರಿಗೆ? ಸಾವಿರಾರು ಮುಡಿ ಹುಟ್ಟುವಳಿ ಇದೆ. ನಾಳೆ ಕಲೆಕ್ಟರಿಯೇ ಸಿಗುತ್ತದಂತೆ. ಹೀಗಿರುವಾಗ ನಮ್ಮಂಥ ಬಡವರು ಹೇಳಿದ ಮಾತು ಸಾಟೀತೇ, ಎಂದರು. ಅವಳಿಗೆ ಈ ಮಾತಿನ ತಲೆಬುಡವಾಗಲಿಲ್ಲ. ಅಲ್ಲದೆ ಅಷ್ಟೊಂದು ಕಟುವಾದ ಟೀಕೆಯ ಕಾರಣವೂ ತಿಳಿಯಲಿಲ್ಲ. ಆದರೆ ಪತಿದೇವರ ರೌದ್ರ ಬಲ್ಲವಳಾದುದರಿಂದ ಸುಮ್ಮನೆ ಕೇಳಿಕೊಂಡು ನಿಂತಳು. 'ಹೂಂ! ನಾನು ಎಂದು ಬಂದರೂ ಬಂದೆ. ಯಾರಿಗೂ ಹೇಳುವುದು ಬೇಡ. ನಿನ್ನ ಅಮ್ಮನ ಹತ್ತಿರ ಪುತ್ತೂರಿಗೆ ಹೋಗುತ್ತೇನೆ ಅಂದಿದ್ದೆ. ಕೇಳಿದರೆ ನೀನೂ ಹಾಗೆ ಅಂದು ಬಿಡು. ಅಂತು ಬಂದ ಒಂದೆರಡು ದಿವಸದಲ್ಲಿ ನಾವು ಹೊರಡಬೇಕಾದೀತು.'

'ಬಿಡಾರ, ಜಾಗ ಗೊತ್ತುಮಾಡಿಯಾಯಿತ್ತು ಹಾಗಾದರೆ.....'

'ಗೊತ್ತು ಆದ ಹಾಗೆಯೇ. ಒಳ್ಳೆ ಗಳಿಗೆಯನ್ನು ನೋಡಿಕೊಂಡು ಹೊರಡಬೇಕು. ಆ ಸುದ್ದಿ ನಿನ್ನ ಅಮ್ಮನ ಹತ್ತಿರ ಈಗ ಬೇಡ' ಎಂದರು. ಸರಿ ಅವರ ಸವಾರಿ ಬೀಸುಗಾಲಿನಿಂದ ಕಳಕ್ಕೆ ಬಂದು ತಡಮೆ ದಾಟಿ ಮರೆಯಾಗಿಬಿಟ್ಟಿತು.

ಹಾಸುಗೆಯಲ್ಲಿ ಅಚ್ಚುತ ಹೊರಳಾಡುತ್ತಿದ್ದ. ಅವನಿಗೆ ತನ್ನ ಭಾವನ ಮಾತುಗಳು ಕೇಳಿಸಿದುವು. ಅದರೊಳಗಿನ ಕಟುದನಿಯು ಪರಿಚಯವಾಗಿತ್ತು. ಏಕೆ, ಅವರಿಷ್ಟು ರೇಗಿರಬಹುದೆಂದು ಊಹಿಸಲಾರದೆ, ನೇರಾಗಿ ಮುಖ ತೊಳೆಯಲು ಹೊರಬಿದ್ದವನೇ ತಾಯಿ ಏನು ಕೆಲಸದಲ್ಲಿರಬಹುದೆಂದು ಆಚೀಚೆ ಇಣಿಕಿ ನೋಡಿದನು. ಅಕ್ಕ ಮನೆಗುಡಿಸಿ ಸಾರಿಸುವುದರಲ್ಲಿದ್ದಳು. ಅಚ್ಚುತನ ಹಿರಿಯ ಸೊಸೆ ಮಾಲಕ್ಷ್ಮಿ ಅಂಗಳವನ್ನು ಗುಡಿಸುತ್ತಿದ್ದಳು. ಈತನು ಮೆಲ್ಲಗೆ 'ಅಮ್ಮಾ ಅಮ್ಮಾ' ಎಂದು ಮ್ಯಾಂಗುಟ್ಟುತ್ತ ಗದ್ದೆಯ ಬಳಿಗೆ ಹೋದ. ತಾಯಿ ಪಾತ್ರೆಯನ್ನು ಬೆಳಗುತ್ತಿದ್ದಳು. ಅಲ್ಲೇ ನೀರಿನ ಕುಣಿಯ ದಂಡೆಯ ಮೇಲೆ ಕುಳಿತು 'ಅಮ್ಮಾ—ಭಾವನಿಗೆ ಸಿಟ್ಟು ಬಂದಿತೇಕೆ?' ಎಂದನು. ಆಕೆಗೆ ಆಶ್ಚರ್ಯವಾಯಿತು. 'ಸಿಟ್ಟೇ? ಯಾಕೆ?' ಎಂದು ಅವಳೂ ನುಡಿದಳು. 'ಹೀಗೆ ಹೀಗೆ ಅಂದು ಹೋದರು. ಪ್ರಾಯಶಃ ಅವರಿಗೆ ನನ್ನ ವಿದ್ಯೆ ಮನಸ್ಸಿಗೆ ಬರಲಿಲ್ಲ. ಅಲ್ಲದೆ ಅವರು ಬೇರೆ ಜಾಗ ಗೊತ್ತುಮಾಡಿಕೊಂಡಿರಬೇಕು.

ಅದಕ್ಕೇನೇ ಹೋಗಿದ್ದಾರೆ. ಬಂದವರೇ ಬಿಡಾರ ಸಾಗಿಸುವುದೆಂದು ಅಕ್ಕನೊಡನೆ ಹೇಳುತ್ತಿದ್ದರು. ಆದರೆ ಅಕ್ಕನ ಹತ್ತಿರ 'ನಿನ್ನ ಅಮ್ಮನಿಗೆ ಈ ಸುದ್ದಿ ಬೇಡ' — ಎಂದಿದ್ದಾರೆ. ಯಾಕೆ ಹಾಗೆನ್ನಬೇಕು? ನಾವೇನು ಅವರನ್ನು ಕಟ್ಟಿ ಹಾಕುತ್ತೇವೆಯೇ'.

ಲಕ್ಷ್ಮಮ್ಮನಿಗೆ ತುಂಬ ನೋವಾಯಿತು. ಅಳಿಯನ ಮನಸ್ಸು ತಮ್ಮಿಂದ ಭಿನ್ನವಾಗಿದೆಯೆಂದೂ, ಅವರ ಸ್ವಂತ ಮನೆಯಲ್ಲಿ ಪಾಲಾದುದಲ್ಲವಾದರೆ ಅವರು ಅಲ್ಲಿಗೆ ಬರುವುದು ದುರ್ಲಭವೆಂದು ಅವಳು ಬಲ್ಲಳು. ಅವನಿಗೆ, ನಾಳೆ ತಾನೂ ಅಚ್ಯುತನೂ ತನ್ನ ಮೇಲೆ ಹೊರೆಯಾಗಿ ನಿಂತೇವೆಯೇ ಎಂದು ಅನುಮಾನವಾಗಿರಬೇಕೆಂದು ತಿಳಿದಳು. 'ಮಗು, ನಿನ್ನ ಭಾವನಿಗೆ ನಾವು ಗಂಜಿಗೂ ಗತಿಯಿಲ್ಲದೆ ಇದ್ದೇವೆ. ನಾಳೆ ನಮ್ಮನ್ನು ಹೊರುವ ಭಾರವೂ ತಮ್ಮ ಮೇಲೆ ಬಿದ್ದೀತು — ಎಂಬ ಭಯ ಉಂಟಾಗಿರಬೇಕು. ಸಹಜ ಅಲ್ಲವೆ? ನಾಲ್ಕು ಮಕ್ಕಳನ್ನು ಕಟ್ಟಿಕೊಂಡು ಅವನ ಸಂಸಾರವೇ ಅವನ ಕುತ್ತಿಗೆಗೆ ಬಂದಿರುವಾಗ. ಆದರೆ ದೇವರು ಬರಿಯ ಗಂಜಿ ನೀರಿನ ಮಟ್ಟಿಗಾದರೂ ಇರಿಸಿದ್ದಾನೆ. ಅಷ್ಟು ಸೋಲಿನಲ್ಲಿ ನಾವಿಲ್ಲ. ನಮ್ಮ ಅನ್ನ ನಮಗೆ ಸಾಕಾದೀತು ಎಂದು ಅವನು ತಿಳಿಯ. ಯಾಕೆ? ಅವರು ಹೋದಂದಿನಿಂದ, ಇವತ್ತಿನ ವರೆಗೆ, ನಮ್ಮ ಸಾಲವೇನು, ಅಡವೇನು-ಎಂದು ಅವನು ನನ್ನನ್ನು ಕೇಳಲಿಲ್ಲ. ಬದಲು ಶೇಷಗೌಡ, ನಾಗಪ್ಪ, ನಾರಾಯಣ — ಹೀಗೆ ಒಕ್ಕಲುಗಳನ್ನು ಕೇಳುತಿದ್ದಾನಂತೆ. ಅವೂ ನಮ್ಮ ಸ್ಥಿತಿಯನ್ನು ಕಂಗಾಲುಗಾಣಿಸಿ ಹೇಳಿರಬೇಕು'.

'ಹೋಗಲಿ. ನಮಗೇಕೆ ಅವರ ವಿಚಾರ — 'ಅವರವರ ತಲೆಗೆ ಅವರವರ ಕೈ' ಎಂಬ ಗಾದೆ ಸುಳ್ಳಲ್ಲ -- ಎಂದಳು. ಅಚ್ಯುತನು ಯೋಚನೆಯಲ್ಲಿ ಮುಳುಗಿದಂತೆ ನಿಟ್ಟುಸಿರುಬಿಟ್ಟನು. 'ಅಮ್ಮ, ನಾನೊಂದು ಹೇಳಲೇ? ನನ್ನ ಇಗ್ಲೀಷು ಸಾಕು. ಯಾರ ಮನಸ್ಸಿಗೂ ಬಾರದ ಕೆಲಸ ನಾವೇಕೆ ಮಾಡಬೇಕು? ಭಾವನಿಗೆ ಮನಸ್ಸಿಗೆ ಬಾರದ ವಿಷಯ ಮಾಡಿದರೆ, ನಾಳೆ ವೈರಕಟ್ಟಿಕೊಂಡರೂ ಕೊಂಡಾರೇ. ಅವರ ಸ್ವರ ಕೇಳಿಯೇ ನನಗೆ ಬೇಸರವಾಯಿತು.

ಅಷ್ಟರಲ್ಲಿ ಸೀತೆಯು ನೆಲ ಉಜ್ಜಿದ ಕೊಳೆ ಅರಿವೆಯನ್ನು ಹಿಡಿದುಕೊಂಡು ಅಲ್ಲಿಗೇನೆ ಬಂದಳು. ಅಕ್ಕನಿಂದಲೂ ಮೌನವಾಗಬೇಕೆಂಬ

ತೊಡಕಿಗೆ ಅಚ್ಯುತ ಗುರಿಯಾದನು. ಮಾತನ್ನು ಬದಲಿಸಿದನು. ಒಮ್ಮೆಗೆ ಸಿದ್ಧವಾದ ಪ್ರಸ್ತಾಪಗಳು ಕಾಣದೆ—'ಅಮ್ಮ, ಶೇಷಗೌಡಬೇಡವಾದರೆ ಮೈದುಕುಟ್ಟಿ*ಗೆ ಗೇಣಿಗೆ ಕೊಡಬಹುದಲ್ಲ ಗದ್ದೆಯನ್ನು'—

'ಯಾರು! ಗಾಡಿ ಮೈದುಕುಟ್ಟಿಯೇ? ಅವನ ಬಾಯಿ ಮಾತು ನಂಬಿ ಕೊಟ್ಟರೆ ಇವನಿಗಿಂತಲೂ ಮೋಸ.'

'ಮೈದು ದುಡಿಯುವುದರಲ್ಲಿ ಕಡಮೆಯಲ್ಲಮ್ಮ. ಅವನು ಮಾಡಿಕೊಂಡ ಆಗಮೆಯನ್ನು ನೋಡಿಲ್ಲವೇ ನೀನು. ತೆಂಗಿನ ಸಸಿ ಫಲಬಿಡಲಿಕ್ಕಾಯಿತು. ಬಾಳೆಯಿಂದ ವರ್ಷಕ್ಕೆ ಇಪ್ಪತ್ತು ಇಪ್ಪತ್ತೈದಕ್ಕೆ ಕಡಮೆ ಲಾಭವಿಲ್ಲ.'



'ದುಡಿಯುವುದರಲ್ಲಿ ಅವನು ಕಡಮೆಯಲ್ಲ. ಆದರೆ ಗೇಣಿ ವಸೂಲು ಅವನಿಂದ ಮಾಡಿಕೊಳ್ಳುವವರಾರು? ಅವನು ಈ ವರೆಗೆ ಯಾರಿಗಾದರೂ ಗೇಣಿ ಸಮನಾಗಿ ಕೊಟ್ಟವನೆ?'

'ನಮಗೆ ಹಾಗೆ ಮಾಡಲಾರನಮ್ಮ. ಹಿಂದೆ ಅಪ್ಪಯ್ಯನಿಂದ ಅವನಿಗೆ ಎಷ್ಟೆಲ್ಲ ಉಪಕಾರವಾಗಲಿಲ್ಲ. ಈಗಲೂ ನನ್ನನ್ನು ಕಂಡರೆ 'ಪುಟ್ಟ ಧನಿಯರು ಯಾವಾಗ ಬಂದಿರಿ?' ಎಂದು ಅರೆಗಳಿಗೆ ಮಾತನಾಡಿಸದೆ ಬಿಡುವುದಿಲ್ಲ.'

'ಮಗು! ಮನುಷ್ಯ ತನ್ನ ಬಾಯಿಯಂತಿದ್ದರೆ, ಊರು ಅಮರಾವತಿಯಾಗುತ್ತಿತ್ತು. ಆದರೆ ಜನಕ್ಕೆ ಮಾತು ಎಲ್ಲೋ, ಮನಸ್ಸು ಎಲ್ಲೋ'—

ಸೀತೆಯು ಕೇಳುತ್ತ ನಿಂತವಳು ಮಾತಿನ ಸರಣಿ ಹಿಡಿದು-'ಅಮ್ಮ, 'ಗೇಣಿ ಗೇಣಿ'ಯೆಂದು ಯಾಕೆ ಬೇರೆಯವರ ಕೈಗೆ ಇದ್ದುದನ್ನು ಬಿಡಬೇಕು. ನಾಳೆಗೆ ಗೇಣಿ ಬಾರದೆ ಹೋದರೆ, ಕೋರ್ಟಿನ ವರೆಗೆ ಓಡುವವರ್ಯಾರು? ಆಸ್ತಿ ಸ್ವಾಧೀನ ಬರಲಿಕ್ಕೆ ಕಷ್ಟವಾದೀತು. ಅಚ್ಯುತ ನೋಡಿಕೊಂಡಾನು. ಬೇಕಾದರೆ ನಾಲ್ಕು ಆಳು ಹೆಚ್ಚಿಗೆ ಕರೆಯಿಸಿಕೊಂಡು ಕೆಲಸಮಾಡಿಸಿದ. ಹಟ್ಟಿಯಲ್ಲಿ ಗೊಬ್ಬರವಿದೆ; ಕೊಪ್ಪದಲ್ಲಿ ದೂಮನ ಮನೆಯವರು ಇದ್ದಾರೆ. ಆಳಿಗೂ ಬರಗಾಲವಿಲ್ಲ. ನಾವು ನಾವು ಮಾಡಿದರೇನೆ ಚಂದ........ಅಚ್ಯುತನಿಗೆ ಶಾಲೆ ಸಾಕು'—ಎಂದಳು. ಮೇಲೆ

*ಒಬ್ಬ ಮಾಪಿಳ್ಳೆ.

ಗುಬ್ಬಿ ತಿನ್ನುವ ಹಣ್ಣು' ಎಂದ.

'ಏನು, ನಿನ್ನ ಧನಿಯವರಿಗೆ ಸಾವಿರ ಮುಡಿ ಹುಟ್ಟುವಳಿಯಿದೆಯೆಂದು ಮಾಡಿದೆಯಾ? ಏನಿಲ್ಲವಾದರೆ ಮೇಲೋಗರ ಮಾಡಿ ತಿನ್ನಬಹುದಲ್ಲ. ಮಧ್ಯಾಹ್ನ ಬರುತ್ತೇನೆ, ಕೊಯ್ಯುವ' ಎಂದನು ಅಚ್ಯುತ.

'ಅಯ್ಯ' ಈ ರಾವಣಸಂಘ ಮರವನ್ನು ಹತ್ತುವವರು ಯಾರು? ಮಕ್ಕಳು ಬಡ್ತಿಗೆ ಬಿಸಾಡುವುದು ಕಾಣುವುದಿಲ್ಲವೇ!

'ನೋಡುವ, ದೂಮನನ್ನು ಕರೆದುಕೊಂಡು ಬರುತ್ತೇನೆ' ಎಂದ ಅಚ್ಯುತ. ಗೌಡನ ಬಾಯಿಚಳಕ ವ್ಯರ್ಥವಾಯಿತು. ಮಾತನ್ನು ಬೇರೆ ಕಡೆಗೆ ತಿರುಗಿಸಿ 'ಅಯ್ಯ, ಅಮ್ಮನ ಹತ್ತಿರ ಹೇಳಿದ್ದೆ ನಾನು. ಮನೆಯ ಗದ್ದೆ ನನಗೆ ಕೊಡಲಿ ಎಂದು. ಬೇರೆ ಯಾರಿಗೂ ಅದು ದೂರನಾಯಿತು. ನೀವು ಹೇಗೂ ಸಾಗುವಳಿ ಮಾಡುವುದಿಲ್ಲಎಂದರು ಅಮ್ಮ. ನನಗೆ ಬಿತ್ತಿಗೆ ನಾಲ್ಕು ಮುಡಿ ಬತ್ತ ಕೊಟ್ಟರೆ, ಒಂದು ಕೈ ನೋಡುತ್ತೇನೆ ಒಡೆಯ'-- ಎಂದ.

ಅಚ್ಯುತನು ಅವನೊಡನೆ ಯಾವ ನಿರ್ಧಾರದ ಮಾತುಗಳನ್ನು ಆಡುವುದು ಒಳಿತಲ್ಲವೆಂದು ಮನೆಗೆ ಹಿಂತಿರುಗಿದ. ಆ ದಿನ ಮಧ್ಯಾಹ್ನ ದೂಮನನ್ನು ಕರೆದುಕೊಂಡು, ಮಾವಿನಕಾಯಿ ಕೊಯ್ಯಿಸಿದ. ಶೇಷಗೌಡನಿಗೆ ತೀರ ನಿರಾಶೆಯಾಗದಂತೆ, ಕೆಲವೊಂದು ಗೆಲ್ಲುಗಳನ್ನು ಉಳಿಸಿ ಮನೆಗೆ ಮರಳಿದ.

ಆ ವಾರವೆಲ್ಲ, ಹೀಗೆ ಒಂದಿಲ್ಲೊಂದು ಮನೆಕೆಲಸದ ನೆಪದಿಂದ ಸಮಯವನ್ನು ಕಳೆಯುತ್ತಿದ್ದ. ಅಕ್ಕನೊಡನೆಯೂ ಮಾತನಾಡಲಿಲ್ಲ. ಭಾವನ ಸವಾರಿಯೂ ಮನೆಗೆ ಬಂದಿರಲಿಲ್ಲ. ಇತ್ತ ತನಗೆ ಬುದ್ಧಿ ತೋರಿದಂತೆ, ತನ್ನ ಹಾಸ್ಟೆಲಿನ ವಾರ್ಡನರಿಗೊಂದು ಪತ್ರ ಬರೆದ. ಅವರ ಉಪಕೃತಿಯನ್ನು ಸ್ಮರಿಸಿ, ತನಗೆ ಬಂದ ವಿಪತ್ತನ್ನು ತಿಳಿಸಿ, ಮುಂದೆ ತನ್ನ ವಿದ್ಯಾಭ್ಯಾಸದ ಹಂಚಿಕೆ ಬಿಡಬೇಕಾಗಿದೆ ಎಂದು ಬರೆದ. ಇತ್ತ ತಾಯಿಯೊಡನೆ, ಆಗಾಗ ಸಾಗುವಳಿಯ ವಿಚಾರವಾಗಿ ಸಂಧಾನ ನಡೆಯಿಸತೊಡಗಿದ. ತಾಯಿಯ ಬಳಿಗೆ ಶೇಷಗೌಡನೂ ಮೈದುಕುಟ್ಟಿಯೂ ಬಂದು-ಗೇಣಿಗೆ ತಾನು ಮುಂದೆ ತಾನು ಮುಂದೆ-ಎಂದು ಅನುವಾದರು. ಆಕೆ, ಯಾರ ಬೆಂಬಲವೂ ಬೇಡವೆಂದು, ತಾನೇ ಸಾಗುವಳಿಗೆ ಕೈಯಿ

ಕ್ಕುವ ನಿಶ್ಚಯಮಾಡಿದಳು. ಹಿಂದಿನಿಂದ ನಟ್ಟು ಬೆಳೆಯಿಸಿದ ಹೊಲ ಗಳವು. ಏನೋ, ಈ ವರ್ಷ ವೈಧವ್ಯ ಮೆರೆಯಿಸುವಂತೆ ಬಯಲಲ್ಲಿ ತಿರುಗಾಡಬಾರದು ಎಂಬ ಯೋಚನೆಯಿಂದ, ಗೇಣಿಗೆ ಕೊಡುವ ಎಂದು ನಿರ್ಧರಿಸಿದುದು. ಆದರೆ ಒಂದೆರಡು ಮಳೆಗಳು ಬಂದು ಬಡಿದ ಮೇಲೆ, ಯೋಚನೆಗೆ ವಿರಾಮವಿಲ್ಲದಾಯಿತು. ಬೀಜ ಬಿತ್ತಲೇ ಬೇಕು-ಎಂದು ಥಟ್ಟನೆ ನಿರ್ಧಾರಮಾಡಿದಳು. ಅದನ್ನು ಕಂಡು ಅಚ್ಯುತ ತನಗೆ ಮುಂದೆ ಮನೆಯ ಪಾಸ ಖಂಡಿತವೆಂದು ನಿರ್ಧರಿಸಿ, ಜೀರಾವ ಗೊಂದಲವಿಲ್ಲದೆ ಕುಳಿತನು. ಗದ್ದೆಯ ಕೆಲಸ ಮುಂದುವರಿಯಿತು, ಬೇಲಿಯ ಸರಬರಾಜು ನಡೆಯಿತು. ಯಾರನ್ನಾದರೂ ಬೇಡಿ, ಕಾಡಿ ಈ ವರ್ಷದ ಉಳುಮೆ ಮಾಡಿಸುವುದಾಗಿ ತಾಯಿ ಹಟತೊಟ್ಟಳು.

ಇತ್ತ ಸೀತೆ, ಒಂದೇ ಸವನೆ ಗಂಡನ ಬರವನ್ನು ಕಾಯುತ್ತಿದ್ದಳು. ನಾಲ್ಕು ದಿನದ ಮಾತಿಗೆ ಹೋದವರು, ದಿನ ಹತ್ತು ಕಳೆದರೂ ಬಾರದಿದ್ದುದಕ್ಕೆ ವ್ಯಥೆಗೊಂಡಳು. 'ಮಳೆ ಬಿದ್ದಾಯಿತು. ಇನ್ನು ಈ ವರ್ಷ ಒಕ್ಕಲು ಹೋಗಿ ಸಾಗುವಳಿ ಮಾಡಲು ತಮಗೆ ಸಾಧ್ಯವೇ' ಎಂದು ನಿರಾಶೆಗೊಂಡಳು.

ಒಂದು ದಿನ ಅಚ್ಯುತನಿಗೆ ಗೆಳೆಯ ನಾಗರಾಜನ ನೆನಪಾಯಿತು. ಅವನು ಜೂನಿನಲ್ಲಿ ಸಾಲೆ ಸೇರುವುದರೊಳಗಾಗಿ ಒಮ್ಮೆ ನೋಡಿ ಬರುತ್ತೇನೆಂದು ಅವನ ಊರಿಗೆ ಹೋದ. ಅವನ ಮನೆಯಿರುವುದು ಅಲ್ಲಿಂದ ಮೂರು ನಾಲ್ಕು ಮೈಲಿ ದೂರದಲ್ಲಿ. ಬೆಳಿಗ್ಗೇನೆ ಹೊರಟು ಅವನ ಮನೆಯನ್ನು ಸೇರಿದ. ಅಚ್ಯುತನ ತಂದೆಯ ಮರಣವಾರ್ತೆಯನ್ನು ಕೇಳಿ ನಾಗರಾಜ-'ಈಗ ನಿನ್ನ ತಂದೆ ಲಿಸ್ಟಿಗೆ ದಾಖಲಾದರೋ? ನಮ್ಮ ಮಾವನೂ ಹಾಗೇ-ತಯಾರಿ! ಆಚೆಯೂ ಅಲ್ಲ, ಈಚೆಯೂ ಅಲ್ಲ. ಈ ವರ್ಷ ನಾನೂ ಊರು ಬಿಡಬಾರದೆಂದು ತಾಯಿಯ ಒತ್ತಾಯ. ಆದರೆ ನಾನು S. S. L. C. ಮಾಡದೆ ಬಿಡುವವನಲ್ಲ. ಸಾಯುವವರ ಜತೆನೆ, ಬದುಕುವವರು ಪ್ರಾಣಬಿಡುವುದೇ' ಎಂದು ಲಘುವಾಗಿ ನುಡಿದ.

'ನಾನಂತು ಓದು ಇಲ್ಲಿಗೇ ನಿಲ್ಲಿಸಿದೆ. ಇನ್ನು ಮುಂದೆ ಮನೆಬದುಕಾಯಿತು. ನಾನಾಯಿತು. ಒಂದು ಜತೆ ಹೂಡುವ ಕೋಣ ಸಿಗದೆ ತೊಂದರೆಯಾಗಿದೆ. ಈ ವರ್ಷಕೊಳ್ಳುವ ಧೈರ್ಯವೂ ಇಲ್ಲ. ಬೊಜ್ಜ-

ಬೊಳಂಬ ಎಂದು ಮುನ್ನೂರು ರೂಪಾಯಿಗಳ ಸಾಲವಾಯಿತು. ಕೊಂಡುದು ಭಾವನಿಂದಲಾದರೂ, ಅವರು ಒಕ್ಕಲು ಹೊರಡುವಾಗ, ಕೊಡದೆ ಮಾರ್ಗವಿಲ್ಲ. ಮುಂದಿನ ವರ್ಷ ಏನಾದರೂ ಮಾಡಬೇಕು' ಎಂದು ಮನೆವಾರ್ತೆ ವಿಚಾರಗಳ ಮಾತಿಗೆ ತೊಡಗಿದ.

'ಅಚ್ಚು, ನಿನಗೆ ಮರುಳು. ಗಟ್ಟಿ ಮನಸ್ಸು ಮಾಡುವ. ನೆಟ್ಟಗೆ ಪುತ್ತೂರಿಗೆ ಹೋಗುವ. ನಿನಗೆ ಹಾಗೆ ಹಣ ಕಡಮೆ ಬಿದ್ದರೆ, ಪಟಾಕಿ ಹಾರಿಸಿ, ಅಮ್ಮನಿಂದ, ಮಾವನಿಂದ ನಾಲ್ಕು ರೂಪಾಯಿ ಜಾಸ್ತಿ ತರಿಸಬಹುದೆಂಬ ಧೈರ್ಯವಿದೆ. ಸಾಗುವಳಿ ಎಲ್ಲ ಪುತ್ತೂರಿಂದ ಬಂದ ಮೇಲೆ. ಆ ಮೇಲೆ ನಾನೂ ಊರಲ್ಲಿಯೇ! ನೀನೂ ಊರಲ್ಲಿಯೇ! ಒಂದು ಸಾರಿ ಬೀಗದ ಕೈ ನನಗೆ ಬಂದರೋ, ನಿನಗೆ ಒಂದಲ್ಲ ನಾಲ್ಕು ಜತೆ ಕೋಣಗಳನ್ನು ತೆಗಿಸಿಕೊಟ್ಟೇನು. ಈಗ ಇಬ್ಬರಿಗೂ ಈ ಹಾಳೂರು ಬೇಡ. ಹೋಗುವ ಪುತ್ತೂರಿಗೆ!"

"ಪುತ್ತೂರು ನೋಡುವ ತನಕ ಕಡಬದ ಪೇಟೆಯೇ ಇಂದ್ರಲೋಕವೆನಿಸಿತು. ಥುತ್, ಈಗ ಕಡಬದ ಪೇಟೆಯೂ ಬೇಸರ, ಏನಿದೆ ಇಲ್ಲಿ? ನಮ್ಮದೆಲ್ಲ ಶಾಲೆ ಮುಗಿದು ಬಂದ ಮೇಲೆ ಕಡಬವನ್ನು ಸಿಟಿಯಾಗಿ ಮಾಡಬೇಕು. ಒಂದೊಂದು ಸೈಕಲ್ ಕೊಂಡುಕೊಳ್ಳುವ. ನಿತ್ಯ ಸಂಜೆಗೆ ಕಡಬದ ಪೇಟೆಯಲ್ಲಿ ಆಫೀಸು ಮಾಡುವ. ಒಂದು ಬೆಡ್‌ಮಿಂಟನ್ ಕೋರ್ಟು, ಒಂದು ಕ್ಲಬ್--ಇಷ್ಟು ಹುಡಿ ಹಾರಿಸಬೇಕು. ಈ ನಮ್ಮ ಊರವಕ್ಕೆ ಅಂಗಳ, ಮನೆಗಳಲ್ಲೇ ಸಮಯ ಹೋಗುತ್ತದೆ. ಇಲ್ಲಿ, ಉಪ್ಪಿನಂಗಡಿಯ ತನಕ ತಿರುಗಾಡಿದರೂ ಒಂದು ರಿಮುಜಾನ್ ಕಾಫಿಗೂ ಗತಿಯಿಲ್ಲ' ಎಂದ.

ಯಾವ ಬಗೆಯಿಂದ ಅಚ್ಚುತನನ್ನು ಪುಸಲಾಯಿಸಿದರೂ ಆತ ಪುತ್ತೂರಿನ ವಿಷಯದಲ್ಲಿ ನಿರಾಶೆ ತಾಳಿದುದನ್ನು ಕಂಡು ತಾನೂ ನಿರಾಶೆಗೊಂಡ ನಾಗರಾಜ.

ಆ ದಿನ ಮಧ್ಯಾಹ್ನ ಅಚ್ಚುತನಿಗೆ ನಾಗರಾಜನ ಮನೆಯಲ್ಲಿ ಅವಲಕ್ಕಿ ಬಾಳೆಹಣ್ಣುಗಳ ಫಲಹಾರವಾಯಿತು. ಊರು ಮನೆಯಾದುದರಿಂದ ಅಲ್ಲಿ ಉಣ್ಣುವ ಧೈರ್ಯ ಅಚ್ಚುತನಿಗೆ ಆಗಲಿಲ್ಲ. ನಾಗರಾಜನೂ ಬಲವಂತ ಮಾಡಲಿಲ್ಲ. ಊಟಮಾಡಿ ಹೊತ್ತು ತಿರುಗಿದ ಬಳಿಕ ಅಚ್ಚು

ತನು ತನ್ನ ಮನೆಯ ಹಾದಿಯನ್ನು ಹಿಡಿದನು. ನಾಗರಾಜನು ಸರಕಾರಿ ರಸ್ತೆಯ ತನಕ ಹರಟೆ ಹೊಡೆಯುತ್ತ ಜತೆಗೆ ಬಂದ. ತಿರುಗಿ ಬೀಳ್ಕೊಡುವಾಗ—'ನೋಡು, ಇನ್ನೊಂದು ಮನಸ್ಸು ಮಾಡಿ ಬಿಡು; ಇಪ್ಪತ್ತು ದಿವಸವಿದೆಯಲ್ಲ ಶಾಲೆ ಶುರುವಿಗೆ' ಎಂದು ಉಪದೇಶಿಸಿದ.

ಅಚ್ಯುತನು 'ಆಗಲಿ. ಈಗ ನೀನು ನಮ್ಮ ಮನೆಗೆ ಬರುವುದೆಂದು? ನನಗೂ ಒಬ್ಬಂಟಿಗನಾಗಿ ಬೇಸರವಾಗುತ್ತದೆ. ರಜೆಯ ಮೊದಲು ನಿನಗೇನು ಕೆಲಸ? ನಾಳೆ ನಾಡಿದ್ದು ಬಾ ನೋಡುವ, ಕೊಂಬಾರಿಗೆ' ಎಂದ.

'ಬಂದರೆ ಬರಬಹುದು. ನಮ್ಮ ಜಾನಸನ್ ಮಾಸ್ತು ಆ ಕಡೆಗೆ ಒಂದು ಶಿಕಾರಿಗೆ ಹೊರಟರಾಗಬಹುದು ಎಂದಿದ್ದಾರೆ. ನಮ್ಮ ಮನೆಯವರಿಗೆ ತಿಳಿಯದ ಹಾಗೆ ಒಂದು ದಿವಸ ಫೇರಿಬಿಡುವುದು. ಅವರ ಹತ್ತಿರ ಲೈಟ್, ಕೋವಿ ಎಲ್ಲ ಇವೆ.'

ಅಚ್ಯುತನು 'ನಿನಗೇಕೆ ಶಿಕಾರಿ? ಜಾನ್‌ಸನ್ ಮಾಸ್ಟರರು—ನಾಯಿ, ನರಿ, ಹುಲಿ-ಕಂಡದ್ದನ್ನು ಗುಂಡು ಹಾಕಿ ಕೊಂದಾರು; ಹಾಗೂ ತಿಂದಾರು. ನಿನಗೇಕೆ ಶಿಕಾರಿ! ನೀನೇನು ತಿನ್ನುವಂತಿದೆಯೇ? ಸುಮ್ಮನೆ ಕೊಂದ ಪಾಪ ಯಾಕೆ ಕಟ್ಟಿಕೊಳ್ಳಬೇಕು. ನೋಡು—ಈ ಮಾಷ್ಟ ಮರ್ಜಿ ಎಲ್ಲ ಸರಿ. ನನಗೆ ಅವರ ಈ ಶಿಕಾರಿ ಮಾತ್ರ ಹಿಡಿಸುವುದಿಲ್ಲ. ಯಾಕೆ-ಪಾಪದ ಮಿಗ, ಬರ್ಕ ಕೊಲ್ಲಬೇಕು? ಒಂದು ಹುಲಿಯನ್ನೋ, ಕಾಟಿಯನ್ನೋ ಹೊಡೆದರೆ ಊರವರಿಗಾದರೂ ಉಪಕಾರವಾಗುತ್ತಿತ್ತು. ಅವರದ್ದು ಲೈಟಿನ ಶಿಕಾರಿ. ಗುಂಡು ಬಿದ್ದ ಮೇಲೆಯೇ ತಾನು ಹೊಡೆದಿದ್ದೇನೆ ಎಂದು ತಿಳಿಯಬೇಕು. ಅಲ್ಲದೆ ಅವರಿಗೆ ಸಿಗುವ ಇಪ್ಪತ್ತು ರೂಪಾಯಿ ಸಂಬಳದಲ್ಲಿ, ಬಂದ ಕಾಸೆಲ್ಲ, ಜೆರೆ, ಗುಂಡು, ಕೇಪು ಎಂದು ಖರ್ಚುಮಾಡುತ್ತಾರೆ. ನಾಳೆ ಮದುವೆಯಾಗಿ ಗಟ್ಟಿ ಸಂಸಾರವೊಂದು ಕೊರಳಿಗೆ ಬಿದ್ದರೆ ಏನು ಮಾಡುತ್ತಾರೊ?'

'ಹೋ! ಅಚ್ಯುತ. ಒಂದು ಸಂಗತಿಯನ್ನು ನಿನಗೆ ಹೇಳಲೇ ಇಲ್ಲವೆ. ಈಗ ನಮಗೂ ಒಂದು ಮದುವೆ ಕಾದು ಕುಳಿತಿದೆ! ಅಮ್ಮನ ವರಾತ, ಮಾವನ ಬಲವಂತ ಜೋರಾಗಿ ಬಿಟ್ಟಿದೆ. ಮೇಲೆ, ಬಂದವರೆಲ್ಲರೂ ಹೇಳುತಿದ್ದಾರೆ ಹುಡುಗಿ ಅಪರಂಜಿಯಂತೆ!'

'ನಿನಗೇ? ನೆಗೆದುಬಿದ್ದೆ! ಎಲ್ಲಿನ ಹುಡುಗಿಯಂತೆ? ಯಾವಾಗ ಲಗ್ನ?

ಏನು ಅಷ್ಟು ಅವಸರ? ನಿನಗೀಗ ನನಗಿಂತ ಹೆಚ್ಚಿನ ಪ್ರಾಯವೇ?'

'ಏ ಮಗು, ಲಗ್ನವೆಂದರೆ ಸುಮ್ಮನಲ್ಲ. ವೇಣೂರಿನ ಚಂದ್ರನಾಭಯ್ಯನವರ ಪ್ರಥಮ ಕನ್ನಿಕೆಯನ್ನು ಬುದ್ಧ ಕುಡುಮಲೆಯ ಶಾಂತಿನಾಥಯ್ಯನವರ ಅಳಿಯ ನಾಗರಾಜಯ್ಯನವರಿಗೆ ಕೊಟ್ಟು, ಇದೇ ಸಲುವ ಯಾವುದೊ...ನೆನಪಿಗೆ ಬಾರದ ಲಗ್ನದಲ್ಲಿ ವಿವಾಹ ಮಾಡಿಕೊಡುವುದೆಂದು ನಿಶ್ಚಯಿಸಲಾಗಿದೆ. ಶ್ರೀ ಜಿನೇಶ ಪ್ರಸನ್ನಃ'

'ಹೂಂ! ನೀನು ಬೇಸರದಲ್ಲಿಲ್ಲ.'

'ಬೇಸರವೇನು! ಮದುವೆಯೆಂದರೆ ಅದೇನು ಶ್ರಾದ್ಧವೆ-ಬೇಸರ ಪಡಲಿಕ್ಕೆ! ಮೇಲೆ ಮಗು, ನಿನ್ನಷ್ಟೆ ಪ್ರಾಯ ನನಗೆಂದು ತಿಳಿದಿದ್ದಿ ನೀನು. ರಿಕಾರ್ಡಿನಲ್ಲಿ ನಿನಗೂ ಹದಿನೈದು; ನನಗೂ ಹದಿನೈದು. ಅಲ್ಲಲ್ಲ,ನಿನಗೂ ಹದಿನಾರು. ನನಗೂ ಹದಿನಾರು. ಆದರೆ ನಿನಗಿಂತಲೂ ನಾಲ್ಕು ವರ್ಷ ಮೊದಲು ಹುಟ್ಟಿದವನು ನಾನು. ಶಾಲೆಗೆ ಸೇರಿದ್ದು ತಡ, ಪಾಸಾದುದು ಮೆಲ್ಲಗೆ—ಹೊರತು, ಈಗಾಗಲೇ ಪ್ರಾಯ ಬಂದಿದೆ, ಒಂದು ಸಾರಿಗೆ ರಿಜಿಸ್ತ್ರಿ ನೋಟಿಸನ್ನು ಒಕ್ಕಲಿಗೆ ಬಿಡಲು ಬಂದೀತು!'

'ಹುಡುಗಿ ಮನೆಯವರು ಅನುಕೂಲದವರೇ? ಹುಡುಗಿ ಹೇಗಿದೆ....'

ಚಂದ್ರನಾಭಯ್ಯನೆಂದರೆ ಆ ಊರಿಗೇನೆ ಶ್ರೀಮಂತರು; ಒಳ್ಳೆ ಆಸ್ತಿ, ಮನೆ. ಎರಡೇ ಹೆಣ್ಣು ಮಕ್ಕಳು. ನಾನು ಮದುವೆಯಾಗುವಾಕೆ ಹಿರಿಯವಳು.'

"ಹೋ ಇದು ಡಬ್ಬಲ್ ಕಿಫಾಯತಿಯ ವ್ಯಾಪಾರ."

"ಹಾಗನ್ನಿ."

ಮಾತು ಮುಗಿದು, 'ಅನುಕೂಲವಾದರೆ ಶಿಕಾರಿ ಮಾಸ್ತ್ರ ಕೂಡ ಒಂದೆರಡು ದಿವಸದಲ್ಲಿ ಬಂದರೂ ಬಂದೆ' ಎಂದು ನಾಗರಾಜನು ಭರವಸೆಯನ್ನು ಕೊಟ್ಟು ಮರಳಿದನು. ಅಚ್ಯುತನು ನೇರಾಗಿ ಉರಿಬಿಸಿಲಲ್ಲಿ, ಧೂಳು ತುಂಬಿ, ಕಾದು ಕುದಿಯುವ ನೆಲವನ್ನು ಮೆಟ್ಟುತ್ತ ಮನೆಗೆ ಓಡಿದನು.

ನಾಗರಾಜನ ರೀತಿ, ಹಗುರತನ ಅವನಿಗೆ ವಿಸ್ಮಯವನ್ನು ಉಂಟು ಮಾಡುತಿತ್ತು. ಆಕಾಶ ಕಳಚಿ ತಲೆ ಮೇಲೆ ಬಿದ್ದರೂ ಏನೋ ಒಂದು

ಕಸ ಎಂದು ತಿಳಿಯುವ ಅವನ ಸ್ವಭಾವವನ್ನು ಕಂಡು ತನ್ನಷ್ಟಕ್ಕೆ ನಗುತ್ತ, 'ಇನ್ನೂ ಭಾರ ಬಿದ್ದು ಗೊತ್ತಿಲ್ಲ. ಬಿದ್ದರೆ ಎಲ್ಲ ಹಾರಾಟ ತಣಿಯುತ್ತದೆ' ಎಂದುಕೊಂಡ. ಅವನು ಮನೆಯನ್ನು ಸೇರುವಾಗ ಹೊತ್ತು ಮುಳುಗಲು ಬರಿಯ ಒಂದೆರಡು ಗಳಿಗೆ ಉಳಿದಿತ್ತು. ಅಂಗಳಕ್ಕೆ ಕಾಲಿರಿಸುವಾಗ, ಮನೆಯ ಮುಂಗಡೆಯ ಕಿರಿ ಹಂದರದ ಜಗುಲಿಯ ಮೇಲೆ, ತನ್ನ ತಾಯಿ ಯಾರೊಡನೆಯೋ ಮಾತನಾಡುತಿದ್ದ ಧ್ವನಿಯು ಕೇಳಿಸಿತು. ಒಳಕ್ಕೆ ಬಂದು ನೋಡುತ್ತಾನೆ: ಪುತ್ತೂರಿನ ಪಾರ್ಡನ್ ಸುಬ್ರಾಯರು-ಅಲ್ಲಿಗೂ ಬಂದಿದ್ದಾರೆ.

"ಏನು ಅಚ್ಯುತ"-ಎಂದು ನೀರಿನ ಥಾಲಿ ಇಳಿಸುತ್ತ ಅವರು ಅನ್ನುತ್ತಿರುವಾಗಲೇ ಅಚ್ಯುತನು "ಎಲ್ಲಿಂದ ಬಂದಿರಿ ಸರ್! ಬಸ್ಸಲ್ಲೂ ಬಂದ ಹಾಗಿಲ್ಲವಲ್ಲ! ಎಲ್ಲಿಗೆ ಹೋಗಿದ್ದೀರಿ? ನಾನು ಇಲ್ಲಿಯೇ ನಾಗರಾಜನನ್ನು ನೋಡದೆ ಬಲು ದಿನವಾಯಿತು. ನೋಡಲು ಹೋಗಿ ಬಂದೆ" ಎಂದನು. ಸುಬ್ರಾಯರು ನಗುತ್ತ "ಮುಖ, ಕಾಲು ತೊಳೆದುಕೊಂಡು ಬಾ. ಎಲ್ಲ ಹೇಳುವ: ನಾನು ಸುಬ್ರಮಣ್ಯದಿಂದ ಬಂದೆ. ಯಾಕೂ ಬೇಡದ ಆರೆಂಟು ಮೈಲು ನಡೆದು ಬರಲು ಇಷ್ಟೆಲ್ಲ ಕಂಗಾಲಾಯಿತು!" ಎಂದರು.

"ಸುಬ್ರಮಣ್ಯಕ್ಕೆ ಹೋಗಿದ್ದಿರಾ?" ಎಂದು ಕೇಳಿ ಕಾಲು ತೊಳೆಯಲು ಹೋದ. ಲಕ್ಷ್ಮಮ್ಮ ಅಲ್ಲಿ ನಿಂತವಳು "ನೋಡಿ ಸ್ವಾಮಿ, ದೇವರು ಇದೊಂದನ್ನು ತಂದು ಹಾಕಿದ. ಈಗ ಅನುಭವಿಸದೆ ಗತಿಯಿಲ್ಲ. ಆದರೆ ಅವರ ಅದೊಂದು ಇಚ್ಛೆಯನ್ನು ನಡೆಯಿಸಿ ಕೊಟ್ಟಿದ್ದರೆ, ನನಗೆ ಯಾವ ಬೇಸರವೂ ಇಲ್ಲ. ಮನುಷ್ಯರಾಗಿ ಹುಟ್ಟಿದವರು ಅಜರಾಮರವಾಗಿರುತ್ತಾರೆಯೇ! ನಿನ್ನೆ ಅವರ ಕಾಲ ಸಂದಿತು; ನಾಳೆ ನನ್ನದು ಸಲ್ಲುತ್ತದೆ. ಅದು ಇದ್ದೇ ಇದೆ. ಇರುವಷ್ಟು ದಿನ, ಚಂದವಾಗಿ ಹೋದರೆ ಸಾಕು-ಎಂದು ಮನಸ್ಸು" ಎಂದಳು.

ಅವಸರ ಅವಸರದಿಂದ ಅಚ್ಯುತನು ಕಾಲು ತೊಳೆದುಕೊಂಡು, ಬಾವಿಯಿಂದಲೇ ನೀರು ಸೇದಿ, ಗಟಗಟ ಕುಡಿದು, ಸುಬ್ರಾಯರ ಬಳಿಗೆ ಬಂದನು. "ಇವತ್ತು ಇಲ್ಲಿದ್ದೀರಲ್ಲ, ಕತ್ತಲೆಯಾಯಿತು. ಮೋಟರು ಸಾಯಂಕಾಲ ಬರುವುದಿಲ್ಲ. ಕತ್ತಲು ಹುಲಿ ಕಾಟಿ ತಿರುಗುವ ದಾರಿ"-ಎಂದು ಬಿಟ್ಟ. ಅವರು ನಗುತ್ತ "ಇಲ್ಲಿ ಇದ್ದು ನಿಮ್ಮನ್ನು ಕಂಡು ಹೋ

ಗೋಣವೆಂದೇ ಬಂದದ್ದು. ನಿನ್ನ ಕಾಗದ ಕಂಡ ಮೇಲೆ ಬರುವ ಮನಸ್ಸು ಗಟ್ಟಿಯಾಯಿತು. ನನಗೆ ಸುಬ್ರಮಣ್ಯಕ್ಕೆ ಹೋಗಿಬರುವ ಕೆಲಸವಿತ್ತು. ಹೋಗಲು ಇದೊಂದು ದಾರಿಯಲ್ಲವೇ—ಎಂದು ಬಂದೆ ಮಗು"— ಎಂದರು.

ತಾಯಿ "ಇನ್ನು ನೀವೂ ಅವನು ಮಾತಾಡಿಕೊಂಡಿರಿ. ನಾನು ಬಿಸಿನೀರು ಕಾಯಿಸುತ್ತೇನೆ. ಕರೆಯುವುದು, ಮಾಡುವುದು ಇದ್ದೇ ಇದೆಯಲ್ಲ" ಎಂದು ಕೆಲಸಕ್ಕೆ ಹೊರಟು ಹೋದಳು. ಅಚ್ಯುತನು ಸುಬ್ರಾಯರೊಡನೆ "ಇಲ್ಲಿಯೇ ಕುಳಿತರೆ ಸೆಕೆ. ನಿಮಗೆ ಆಯಾಸವಾಗಿಲ್ಲವಾದರೆ, ನಮ್ಮ ಮನೆಯ ಗುಡ್ಡವನ್ನು ಸುತ್ತಾಡಿ ಬರುವ" ಎಂದು ಅವರನ್ನು ಕರೆದುಕೊಂಡು ಹೋದ. ಗುಡ್ಡಕ್ಕೆ ಬಲು ದೂರ ನಡೆಯಬೇಕಾಗಿರಲಿಲ್ಲ. ಮನೆಗೆ ಹಿಂಗಡೆಯಲ್ಲಿ ಬರಿಯ ನೂರು ಗಜದಲ್ಲಿ, ಎತ್ತರವಾದ ಗುಡ್ಡವಿತ್ತು. ಅವರಿಬ್ಬರೂ ಗುಡ್ಡವನ್ನೇರಿ ಅದರ ತುದಿಯನ್ನು ಸೇರಿ ಕುಳಿತರು. ತಗ್ಗಿನಲ್ಲಿ ಬೀಸದ ಗಾಳಿ ಅಲ್ಲಿ ಬೀಸುತಿತ್ತು. ಪಡುವಣದಿಂದ, ತುಸು ಬಿಸಿಯೆನಿಸಿದರೂ, ಭರದಿಂದಲೇ ಅದು ಬೀಸುತಿತ್ತು.

ಸುಬ್ರಾಯರು ಅನುತಾಪದಿಂದ ಹುಡುಗನೊಡನೆ ಮಾತನಾಡತೊಡಗಿದರು. ತಂದೆ ತೀರಿಕೊಂಡ ಕತೆಯನ್ನು, ಮನೆಯ ತಂಟೆತೊಡಕುಗಳನ್ನು ತಾಯಿಯಿಂದ ಅವರು ಕೇಳಿಕೊಂಡಾಗಿತ್ತು. ಇತ್ತ ಮಗನ ಪತ್ರದ ಅಭಿಪ್ರಾಯಕ್ಕೆ ಸರಿ ವಿರುದ್ಧವಾದ ಯೋಚನೆ ತಾಯಿಗೆ ಇತ್ತೆಂದು ಅವರು ತಿಳಿದಾಯಿತು. ಹೀಗಾಗಿ "ಅಚ್ಯುತ, ನೀನು ಹಾಗೇಕೆ ಕಾಗದ ಬರೆದೆ? ಹಿಂದೆ ನಿನ್ನ ತಾಯಿಯ ಮನಸ್ಸು ಬೇಡವೆಂದು ಇದ್ದರೂ, ಬೇಕೆಂದು ತಂದೆಯ ಮನಸ್ಸು-ಎಂದಿದ್ದರೂ, ಈಗ ಆಕೆಗೆ ಆ ವಿಷಯವಾಗಿ ಹಟವೇ ಇದೆ. ಸುಮ್ಮನೆ ಅವರ ಮಾತನ್ನು ನೀನು ಮೀರಬೇಡ. ಒಂದು ವರ್ಷದ ಖರ್ಚಲ್ಲವೆ? ಸಂಬಳದ ಮಟ್ಟಿಗೆ ನಾಲ್ಕಾರು ದೊಡ್ಡವರನ್ನು ಕೇಳಿದರೆ, ಸಹಾಯ ಸಿಗಬಹುದು. ಒಮ್ಮೆ ಹಾಸ್ಟೆಲು ಫೀಸಿಗೆ ತೊಂದರೆಯಾದರೂ ನಮ್ಮ ಬಡ ವಿದ್ಯಾರ್ಥಿ ಫಂಡಿನಿಂದ ಸಾಲ ಕೊಡಿಸಬಹುದು"-ಎಂದರು.

"ಸಾಲ ಬೇಡ. ಸಾಲದ ತಂಟೆಯೇ ಬೇಡ. ಇದ್ದರೆ ಊಟವಾ

ಡಿದ, ಇಲ್ಲವಾದರೆ ಬಿಟ್ಟ" ಎಂದ.

"ಹೋಗಲಿ-ಏನೂ ಇರಲಿ. ನೀನು ಜೂಸಿಗೆ ಬಾರದೆ ಇರಬೇಡ"-- ಎನ್ನಲು "ಬರುವುದು ಸರಿಯೆ: ಮುಖ್ಯ ನಮ್ಮ ಭಾವನವರಿಗೆ ಅದು ಇಷ್ಟವಿಲ್ಲ. ನಿಮ್ಮಿಂದ ಅವರಿಗೆ ಹೇಳಿಸಬಹುದಿತ್ತು. ಆದರೆ ನಾಲ್ಕು ದಿನಕ್ಕೆಂದು ಹೋದವರು ಇನ್ನೂ ಬಂದಿಲ್ಲ." ಎಂದು ತಿಳಿಸಿದನು. ಅವ ನಿಂದ ಭಾವನ ವಾರ್ತೆಯನ್ನು ತಿಳಿದ ಕೂಡಲೆ-"ನಾಳೆ ಅವರ ಹಂಗು ನಿನಗಿದೆಯೇ? ನಿನ್ನ ಕಾಲಿನ ಮೇಲೆ ನೀನು ನಡೆಯಬೇಡವೇ? ಅವರು ನಾಲ್ಕು ದಿವಸಕ್ಕೆ ಬಂದವರು. ಹಾಗೆ ಏನಾದರೊಂದು ಅಭಿಪ್ರಾಯ ಪಟ್ಟರೂ ಏನು ಮಾಡಲು ಬರುತ್ತದೆ?" ಎಂದರು ಸುಬ್ರಾಯರು.

"ಹಾಗಲ್ಲ ಸರ್, ಈ ವರ್ಷ ಇನ್ನು ಅವರು ಎಲ್ಲಿಗೂ ಹೋಗು ವಂತಿಲ್ಲ. ಬೇರೊಂದು ಕಡೆಯಲ್ಲಿ ಆಸ್ತಿಕೊಂಡೋ ಗೇಣಿಗೆ ಪಡೆದೋ ನೆಲೆಸುವ ಎಂದು ಯೋಚನೆ ಮಾಡಿದ್ದರು. ಆದರೆ ಬೀಜ ಬಿತ್ತುವ ಸಮಯವೂ ಮೀರಿಹೋದುದರಿಂದ ಮಳೆಗಾಲವನ್ನು ನಮ್ಮಲ್ಲೇ ಕಳೆ ಯಬೇಕು. ಕೊನೆಗೆ-ಮನೆಯಲ್ಲಿರುವ ನಾಲ್ಕು ದಿವಸ, ಅಮ್ಮನ ಮೇಲೆ ಉರಿದು ಬೀಳಬಾರದಲ್ಲ."

"ಅಂಥ ಸ್ವಭಾವವೇ ಅವರದ್ದು!"

"ಯಾಕೋ ಸ್ವಲ್ಪ ಸಿಡುಕಿನವರೆಂದು ಕಾಣುತ್ತದೆ. ನನಗೂ ಅವರ ಪರಿಚಿತಿ ಕಡಮೆ. ಮದುವೆಯಾದ ಮೇಲೆ ನಾಲ್ಕೆಂಟು ಸಾರಿ ಅವರು ಮನೆಗೆ ಬಂದಿರಬಹುದು. ಈಗ ಅವರಲ್ಲಿ ಹಿಸೆಯಾದುದರಿಂದ ಬಂದಿದ್ದಾರೆ."

ಎಷ್ಟೆಂದರೂ ಸುಬ್ರಾಯರು ಮಾತಿನಿಂದ ಅಚ್ಯುತನನ್ನು ಕಟ್ಟಿ ದರು. ಅಚ್ಯುತನಿಗೆ ಅದು ಪ್ರಿಯವಾಗಿತ್ತು. ತಾಯಿಯ ಒಲವೂ ಆ ಕಡೆಗೆ ಇತ್ತು ಎಂದು ಹಿಗ್ಗಿದನು. ಒಂಟಿಯಾಗಿ ತಾಯನ್ನು ಬಿಡಲು ಮನಸ್ಸು ಬರುವುದು ದುಸ್ಸಾಧ್ಯವಾಗಿತ್ತಾದರೂ, ಸುಬ್ರಾಯರೊಡನೆ ಬರುವೆನೆಂದು ಮಾತುಕೊಟ್ಟ. ಬಂದ ವಾರ್ಡನರು ತಮ್ಮ ಕೆಲಸ ಸಫ ಲಿಸಿತೆಂದು ಹಿಗ್ಗಿ ಹೋದರು. ಅವರಿಗೆ ಮೊದಲಿಂದಲೂ ಈ ಹುಡುಗ ನಲ್ಲಿ ತುಂಬ ವಿಶ್ವಾಸ ಪ್ರೀತಿಗಳಿದ್ದುದರಿಂದ ಅವನ ಮನೆಯ ತನಕ ಬರುವ ಕೃಪೆ ತೋರಿಸಿದರು.

ನಾಲ್ಕಾರು ದಿವಸ ಕಳೆಯಿತು — ನರಸಿಂಹ ಭಾವನ ಸವಾರಿಯು ಒಂದು ಸಂಜೆಗೆ ಮಾತ್ರ ಮನೆಯ ಕಡೆಗೆ ಮುಖ ತೋರಿಸಿತು. ಆಗಲೂ ಮಡದಿಯೊಡನೆ ಯಾವ ಮಾತನ್ನೂ ಸಮನಾಗಿ ಆಡಲಿಲ್ಲ. ಬೆಳಗಿನ ಜಾವಕ್ಕೇನೆ ಹೊರಟರು — "ಇನ್ನು ಒಂದು ವಾರದಲ್ಲಿ ಎಲ್ಲ ನಿರ್ಧಾರ ವಾದೀತು" ಎಂದು ಹೇಳಿ ಹೋದರು. ಇದರಿಂದ ಮಳೆಗಾಲದ ಮಟ್ಟಿಗೆ ಮನೆಯಲ್ಲಿ ಜನವಿದೆ; ಒಂಟಿಯಾಗಿರಬೇಕಿಲ್ಲ— ಎಂದು ಲಕ್ಷ್ಮಮ್ಮ ತಿಳಿದುಕೊಂಡಳು. ಸೀತೆಗೆ-ಮುಂದಿನ ಗತಿಗೋತ್ರವೇನೆಂದು ತಿಳಿಯದೆ ಮನಸ್ಸು ಅಶಾಂತವಾಯಿತು. ಆದರೆ ತಾಯಿಮನೆ, ತಾಯಿಗೆ ಹೊರೆಯಾಗೆನಷ್ಟೆ ಎಂಬ ಧೈರ್ಯದಿಂದ, ತನ್ನ ಮನೆಯೆಂದೇ ಕಜ್ಜ ಕೆಲಸಗಳಲ್ಲಿ ವೇಳೆ ಕಳೆಯತೊಡಗಿದಳು.

ನರಸಿಂಹಯ್ಯ ಬಂದು ಹೋದ ಬೆಳಿಗ್ಗೇನೆ, ಅವರ ಮನೆಯಂಗಣದಲ್ಲಿ ಜಾನ್‌ಸನ್ ಮಾಸ್ತರರ ಸ್ವರ ಕೇಳಿಸಿತು. ಅಚ್ಯುತ ಹಾಸುಗೆಯಿಂದ ಪೂರ ಎದ್ದಿರಲಿಲ್ಲ. ಜಾನ್‌ಸನ್ ಮಾಸ್ತರರ ಕಾಲು ತುಂಬ ಧೂಳೇ! ಅಂಗಿ ಅರಿವೆಗಳೆಲ್ಲ ಹರಿದು ಕೀತಾಗಿದ್ದುವು. ನಾಗರಾಜ ಖಾಕಿ ಉಡುಗೆ ಧರಿಸಿ, ತಾನೂ ಒಂದು ಕೋವಿ ಹಿಡಿದುಬಂದಿದ್ದ. ಅವರ ಶಿಕಾರಿ ಮಂಡಲವು ಈಗಷ್ಟೆ ಚೆದರಿ, ಇವರಿಬ್ಬರು ಮಾತ್ರ ಅಚ್ಯುತನ ಮನೆಗೆ ಕಾಲಿರಿಸಿದ್ದರು.

ಅಂಗಳದಿಂದಲೇ "ಹೋ ಅಚ್ಯುತ, ಸತ್ತಿದ್ದೀಯೋ ಬದುಕಿದ್ದೀಯೋ ಎಂದು ನೋಡಬಂದಿದ್ದೇವೆ" ಎಂದು ಕೂಗುಹಾಕಿದರು. ಈ ಬಗೆಯ ಶೈಲಿಯು ಅವರ ನಿತ್ಯದ ಭಾಷೆ. ಆದರೆ ಮಾತನಾಡಿದ ಮರುಗಳಿಗೆಗೆ ಆ ಮನೆಯಲ್ಲಾದ ಸಾವಿನ ನೆನವರಿಕೆಯಾಗಿ ಬಾಯಿಮುಚ್ಚಿಕೊಂಡರು. 'ಯಾರಾದರೂ ಕೇಳಿದರೇನು ಗತಿ' ಎಂಬ ಭೀತಿಯಾಯಿತು. ಆದರೆ ಪುಣ್ಯಕ್ಕೆ ಯಾರೂ ಕೇಳಲಿಲ್ಲ. ಅಚ್ಯುತ ಎದ್ದು ಹೊರಕ್ಕೆ ಬಂದನು. "ಕೊನೆಗೂ ಮಾಸ್ತ್ರು ಬಂದರು — ಈ ಗ್ರಾಮಕ್ಕೆ. ಹೋ! ಶಿಕಾರಿ ಮುಗಿಸಿಯೇ ಬಂದರೆಂದು ಕಾಣುತ್ತದೆ. ಸರ್, ಇದೇನು — ಅಂಗಿ ಪೂರ್ಣ ಸೂರ್ಯಚಂದ್ರರು" ಎಂದು ನಗುತ್ತ ಕೇಳಿದನು.

ಜಾನ್‌ಸನ್ ಮಾಸ್ತರರು ಇಂಗ್ಲೀಷ್ ಮಾತಾಡುವುದರಲ್ಲಿ ಅಪ್ರಮರು. ಅವರು ಕಲಿತುದು ಬರಿಯ ಒನೆಯ ಫಾರ್ಮಾದರೂ ಸೇಕಡಾ

ಐವತ್ತರಷ್ಟು ಇಂಗ್ಲೀಷ್ ಬೆರಕೆಯಿಲ್ಲದೆ ಮಾತನಾಡಿಯೇ ಗೊತ್ತಿಲ್ಲ- ಮಿತಿಮೀರುವ ಸಿಟ್ಟು ಬಂದರೆ, ಇಂಗ್ಲೀಷಲ್ಲಿ ತೊಡಗಿ ಕನ್ನಡದಲ್ಲಿ ವಾಕ್ಯ ಮುಗಿಸುತ್ತಾರೆ. ಈಗ ಅವರು ಬೇಟೆ ಕಳೆದ ನಿರಾಶೆಯಿಂದ ತುಂಬಿ ಬಂದಿದ್ದಾರೆ. ಮೇಲೆ ಅಮಂಗಳದ ಮಾತನಾಡಿ ಬೆರಳು ಕಚ್ಚಿದ್ದಾರೆ. "Excuse me mister· ಅಂಗಿಯ ವಿಷಯ ಕೇಳಿದೆಯಾ? Summer Heat ಅಲ್ಲವೇ; ಹವಾ ಸಂಚಾರಕ್ಕೆ Very good ಎಂದು, ಈ ಕಿಟಿಕಿ ಬಾಗಿಲು ಇಡೋಣಾಗಿದೆ. Latest health fashion ಇದು" ಎಂದರು. ಅಚ್ಯುತ ಗೊಳ್ಳೊ ಎಂದು ನಕ್ಕನು.

ಅವರಿಬ್ಬರನ್ನು ಸ್ವಾಗತಿಸಿ, ಕಾಲು ತೊಳೆಯಲು ನೀರುಕೊಟ್ಟನು. "ಮಾಸ್ತರರೇ ಮುಖ ತೊಳೆಯುತ್ತೀರಾ? ರಾತ್ರಿ ನಿದ್ದೆಯಿಲ್ಲದವರಂತೆ ಕಾಣುತ್ತದೆ, ಮಲಗುತ್ತೀರಾ?--ಶಿಕಾರಿ ಚೀಲ ಬರಿದಾಗಿ ಕಾಣುತ್ತದೆ. ಏನು ನರಿ, ಬರ್ಕ ಯಾವುದೂ ನಿಮಗೆ ಸಿಗಲಿಲ್ಲವೇ?"

ನಾಗರಾಜನು ನಗುತ್ತ-"ನರಿ ತಿನ್ನುತ್ತಾರೋ ನಮ್ಮ ಮಾಸ್ತರರು. ಅವರು ಹೋದದ್ದು ಕಾಟಿ ಶಿಕಾರಿಗೆ"— ಎಂದನು.

"Silence you ಮರುಳು! ಅಚ್ಯುತ, ಶಿಕಾರಿಯ ವಿಚಾರವೆಲ್ಲ ಪ್ರೈವೇಟ್ ಸಂಗತಿ. ಬ್ರಾಹ್ಮಣರ ಮನೆಯಲ್ಲಿ that is all ಮೈಲಿಗೆ. So dont ask. ಮುಖ ತೊಳೆಯುವುದು ಮತ್ತೆ; ಮಲಗಿಕೊಳ್ಳುವುದು ಮಧ್ಯಾಹ್ನದ ಮೇಲೆ; ಈಗ very hungry· ಮೊದಲಿಗೆ ರಿಮುಜಾನ್ ಕಾಫಿಯಾಗಲಿ" ಎಂದರು ಮಾಸ್ತರರು.

"ಕಾಫಿ ಬೀಜ ತಂದದ್ದು ಇಲ್ಲ. ಕಷಾಯ ಆಗದೇ? ಅವಲಕ್ಕಿ ಮತ್ತು ಕೊತ್ತಂಬರಿ ಕಷಾಯ ಮಾಡುವ" ಎಂದನು ಅಚ್ಯುತ.

"That is excellant; ಕಷಾಯ is ತಂಪು. ಅದೇ ಆಗಲಿ" ಎಂದರು.

ಸರಿ,ಉಪಾಧ್ಯಾಯರ ಉಪಹಾರ ಮುಗಿಯಿತು.ಅವರಿಗೆಹೊಟ್ಟೆಗೆ ತುಸು ತಂಪಾದರೆ ಹೇಳಲಾರದ ಉತ್ಸಾಹ. ಅದರಿಂದ ಒಮ್ಮೆಗೇ ಗುರು ಪದೇಶವನ್ನು ತೊಡಗಿಬಿಟ್ಟರು. "ನೋಡು ಅಚ್ಯುತ.... This VI form Graduate no good. ನನ್ನನ್ನು ನೋಡಬಾರದೇ? ನಾಗರಾಜನಂದ ನೀನು Discontinue ಮಾಡುತ್ತೀಯೆಂದು No do it. ಅವನಿಗೂ

ಹೇಳಿದ್ದೇನೆ.ಅವನ ಮನೆಯವರಿಗೂ ನಾನು half an ounce lecture ಮಾಡಿ ಬಂದೆ. ಬೇಕಾದರೆ ಒಂದು dose lecture ನಿನ್ನ ಮನೆಯವರಿಗೂ ಹೇಳುತ್ತೇನೆ-no charge. For good's sake, make S. S. L. C.-" ಎಂದು ಉಪದೇಶಿಸಿಬಿಟ್ಟರು,

ಅವರ ಇಂಗ್ಲೀಷನ್ನು ಕೇಳಿಯೇ ಅಚ್ಯುತ ತೃಪ್ತನಾದ. ಹಳೆಯ ಗುರುಗಳಿಗೆ ಮಾತುಕೊಟ್ಟು ಆಯಿತು. ಅವರಂತೆ ಇಂಗ್ಲೀಷಿನಲ್ಲಿ "I shall deeply consider" ಎಂದ. "ಖಂಡಿತಕ್ಕೂ ಆಳವಾಗಿ ಯೋಚಿಸು"—ಎಂದು ಜಾನ್ಸನರೂ ನುಡಿದರು. ಅನಂತರ ಅವರದ್ದೊಂದು ನಿದ್ರೆಯಾಯಿತು. ನಾಗರಾಜ ನಂಟರ ಮನೆಯಿರುವ ಬೊಗ್ಗಾಡಿಗೆ ಹೋದನು. ಗುರುಗಳು, ಮಧ್ಯಾಹ್ನ ಊಟ ಮುಗಿಸಿ ತಮ್ಮ ಊರಾದ ಕಡಬಕ್ಕೆ ತೆರಳಿದರು. ಹೋಗುವಾಗಲೂ, "ಆಳವಾಗಿ consider ಮಾಡು" ಎಂದು ಉಪದೇಶಿಸಿಯೇ ಹೋದರು.

ಅಚ್ಯುತ 'Thanks' ಎಂದು ಅವರನ್ನು ಬೀಳ್ಕೊಟ್ಟನು.



## ೪ನೆಯ ಅಧ್ಯಾಯ

ಅಚ್ಯುತ ಜೂನ್ ತಿಂಗಳ ಮೊದಲ ವಾರದಲ್ಲಿ, ವಿದ್ಯಾಭ್ಯಾಸ ಮುಂದುವರಿಸಲು ಹೊರಡುವವನು. ಮಳೆಗಾಲವೇ ತುಸು ನಿಧಾನಿಸಿ ಬರುವಂತಿತ್ತು. ಹೀಗಾಗಿ, ತನ್ನ ಗೆಳೆಯ ನಾಗರಾಜನನ್ನು ಕೂಡಿಕೊಂಡು ಬಸ್ಸಿನಲ್ಲಿ ಕುಳಿತು ಪಯಣ ಮಾಡುವೆನೆಂದು ಮನೆಯಿಂದ ಹೊರಬಿದ್ದನು. ಅದಕ್ಕೊಂದು ದಿನ ಮುಂಚಿತವಷ್ಟೆ, ಅವನ ಭಾವಂದಿರಾದ ನರಸಿಂಹಯ್ಯನವರು ಮನೆಯನ್ನು ಸೇರಿದ್ದರು. ಅವನು ಚಿಕ್ಕವನಾದುದರಿಂದ, ಅವರನ್ನು ತಾನಾಗಿ ಮಾತನಾಡಿಸುವ ಹವ್ಯಾಸ ಇರಿಸಿಕೊಂಡಿರಲಿಲ್ಲ. ನರಸಿಂಹಯ್ಯನೂ ಹೆಚ್ಚಿಗೆ ಅವನ ಹತ್ತಿರ ಮಾತಾಡುವವರಲ್ಲ. ಅವರು ಮನೆಯಲ್ಲಿ ಇರುವುದಿಲ್ಲವೆಂದೇ ಊಹಿಸಿ ತಾಯಿ, ಮಗ ಇಬ್ಬರೂ ಸೇರಿ, ಆ ವರ್ಷದ ಬೇಸಾಯದ ಕೆಲಸ ತೊಡಗಿಸಿದ್ದರು. ಮಳೆಗಾಲ

ಎಂದು ತೊಡಗುತ್ತದೆಂದು ತಾಯಿ ಹಾದಿ ಕಾದಿದ್ದರೆ, ಪುತ್ತೂರಿಗೆ ಎಂದು ಹೊರಡುವುದೆಂದು ಈತ ದಾರಿ ಕಾಯುತ್ತಿದ್ದ. ಇತ್ತ ಅವನ ತಾಯಿ ಲಕ್ಷ್ಮಿಯು ಅಳಿಯನೊಡನೆ—'ಏನಾಯಿತು. ನೀನು ಹೋದ ಕೆಲಸ? ಎಂದು ವಿಚಾರಿಸಲಿಲ್ಲ. ಹೇಗಾದರೂ ಮಗಳ ಮೂಲಕ ಸಂಗತಿಗಳು ತಿಳಿಯುತ್ತವೆ ಎಂದು ಅವಳು ಸುಮ್ಮನೆ ಇದ್ದಳು. ಆದರೆ ಇದರಿಂದ ನರಸಿಂಹಯ್ಯನಿಗೆ, ತನ್ನನ್ನು ಈ ಮನೆಯಲ್ಲಿ ಕೇಳುವವರಿಲ್ಲ ಎಂಬ ಅಭಿಪ್ರಾಯವೇನೋ ಆಯಿತು. ಅವರು ತೀರ ತಾಳ್ಮೆಯಿಲ್ಲದವರಂತೆ ಆಚೀಚೆ ತಿರುಗುತ್ತಿದ್ದರು. ಬೇಸರವಾದಾಗ ಚಾವಡಿಯಲ್ಲಿ ಕುಳಿತು ಎಲೆ ಅಡಿಕೆ ಮೆಲ್ಲುತ್ತಿದ್ದರು. 'ಮನೆ ಬೇಸಾಯ ಏನು ಮಾಡಿದಿರಿ?' ಎಂದು ಅವರೂ ಕೇಳಲಿಲ್ಲ. ಕಣ್ಮುಂದೆ ಆಳುಗಳು ಬಂದು ಹೋಗುವುದು, ಲಕ್ಷ್ಮಮ್ಮ ತನಗೆ ತಿಳಿದುದನ್ನು ಅವರೊಡನೆ ಹೇಳಿ ಮಾಡಿಸುವುದೂ ಕಾಣಿಸುತಿತ್ತು. ಅದರಿಂದಾಗಿ, ತಾತ್ಕಾಲಿಕವಾಗಿಯಾದರೂ ಆ ಮನೆಯ ಪಟ್ಟ ತನಗೆ ಬರಲಿಲ್ಲ, ಎಂಬ ಬೇಸರವೂ ಅವರ ಮನಸ್ಸಿನಲ್ಲಿತ್ತು. ತಾನಾಗಿ ಅವರ ಬೆಂಬಲಕ್ಕೆ ಹೋಗುವ ವ್ಯಕ್ತಿಯೂ ಅವರಲ್ಲ. ಇತ್ತ ತನ್ನ ಮಕ್ಕಳಲ್ಲಿ ಯಾವುದಾದರೊಂದು ಕಿರುಚಿದರೆ, ಹೆಂಡತಿಯನ್ನು ಗದರಿಸಿ—ಮಗುವನ್ನು ಎತ್ತಿಕೊಳ್ಳಲು ನಿನಗೇನು ಸಂಕಟ' ಎಂದು ಬೆದರಿಸುವರು. ಅದರ ಅರ್ಥ--ಸೀತೆಯೇ ಆ ಕೆಲಸ ಮಾಡಬೇಕೆಂಬುದಾಗಿರಲಿಲ್ಲ. ಅತ್ತೆಯಾಗಲಿ, ಭಾವನಾಗಲಿ, ತಮ್ಮ ಕೆಲಸಗಳನ್ನು ಬದಿಗಿರಿಸಿಕೊಂಡು ಸದಾ ಕಿರುಚಾಂಬಿಕೆಯಾಗಿದ್ದ, ತಮ್ಮ ಮೂರನೆಯ ಮಗಳನ್ನು ಉಪಚರಿಸಲೆಂಬುದು; ಅದರಿಂದ ಅಳಿಯನಾದ ತನಗೊಂದು ಗೌರವವೆಂದು. ಆದರೆ ಮಳೆಗಾಲ ನಾಳೆ-ಎನ್ನುವಾಗ, ಮನೆಯವರಿಗೆ ವಿರಾಮವೆಲ್ಲಿ? ಮಳೆಗಾಲದ ಕಾಳುಕಡ್ಡಿಗಳನ್ನೊ, ಕಟ್ಟಿಗೆ ಹುಲ್ಲನ್ನೊ, ಹಪ್ಪಳ ಸಂಡಿಗೆಯನ್ನೋ—ಇದ್ದುದರಲ್ಲೇ ಒಯಿನವಾಗಿ ಕೂಡಿಡಬೇಕಲ್ಲ. ಅಪೂರ್ವಕ್ಕೆ ಕೂಗುವ ಮಗುವನ್ನು ಯಾರಾದರೂ ಸಮಾಧಾನಪಡಿಸಬಹುದು. ಇದು ಕೂಗಾಟ ನಿತ್ಯ ಧರ್ಮವೆನಿಸಿದ ಕೂಸು.

ಯಾರೂ ಅದರ ಉಪಚಾರಕ್ಕೆ ಬಾರದೆ ಹೋದರೆ, ಧರ್ಮಪತ್ನಿಯು ಅವರ ಬಯ್ಗಳನ್ನು ಕೇಳಿ, ಅಡುಗೆ ಮನೆಯನ್ನು ಬಿಟ್ಟು, ಮಗುವಿನ ಶುಶ್ರೂಷೆ ಮಾಡಿ ಪತಿಗೆ ವಿಧೇಯತೆ ಸಲ್ಲಿಸಬೇಕು. ನರಸಿಂಹಯ್ಯ

ಇಂಥ ಮನೋವೃತ್ತಿಯಲ್ಲಿರುವಾಗಲೇ ಅಚ್ಯುತ, ಊರು ಬಿಡುವುದು ನಾಳೆಯಾದರೆ, ಇಂದು ಅರಿವೆಗಳನ್ನು ಒಗೆದು, ಒಣಗಿಸಿ, ಕೈ ಇಸ್ತ್ರಿ ಹಾಕಿ, ಮಡಿಸಿಡುವ ಗಳಿಗೆಯಲ್ಲಿ-ಭಾವ ಚಾವಡಿಗೆ ಬಂದರು. 'ಏನು, ಹಬ್ಬಹುಣ್ಣಿಮೆಯೇ?ಅಚ್ಯುತ, ಏನು ಅರಿವೆಗಿರವೆ ಮಡಿಸಿ ಇರುಸುತ್ತೀ' —ಎಂದರು.

'ಇಲ್ಲ. ನಾಳೆ ಪುತ್ತೂರಿಗೆ ಹೋಗಬೇಕು.; ಅದಕ್ಕೆ.'

'ನಾಳೆ ಯಾಕೆ ಪುತ್ತೂರಿಗೆ? ಬೇಸಾಯದ ಕೆಲಸ ಮುಗಿಯಿತೇ?'

'ಬೇಸಾಯದ ಕೆಲಸ ಅಮ್ಮ ನೋಡಿಕೊಳ್ಳುತ್ತಾಳಂತೆ. ನಾನು ಶಾಲೆಗೆ ಹೋಗಬೇಕಲ್ಲ.'

ಹೀಗೆಂದುದೇ ಸರಮದ್ದಿಗೆ ಬೆಂಕಿ ಕೊಟ್ಟಂತೆ! ನರಸಿಂಹಯ್ಯ ಸ್ಫೋಟವಾದರು. ತನ್ನ ಅಸಮಾಧಾನ ತಿಳಿದಿದ್ದರೂ, ತಾನು ಹಿರಿಯ ನಾಗಿದ್ದರೂ— ಮಾತು ಮೀರಿ, ಅಚ್ಯುತ ಓದನ್ನು ಮುಂದುವರಿಸಿಯೇ ಬಿಡುವನೆಂದು ಅವರಿಗೆ ಕೋಪವಾಯಿತು. 'ಹೂಂ! ಅವರು ಸತ್ತು ತಿಂಗಳೆರಡೂ ಕಳೆಯಲಿಲ್ಲ. ಮನೆಕೆಲಸ ನೋಡಿಕೊಂಡಿರುವ ಯೋಚನೆಯಿಲ್ಲದೆ ಪುತ್ತೂರು ಪೇಟೆ ಅಳೆಯಲು ಹೋಗಬೇಕಲ್ಲವೇ--ಮತ್ತೆ, ಅಲ್ಲಿ ಓದುವುದೆಲ್ಲ ಗೊತ್ತೇ ಇದೆ. ಒಮ್ಮೆ ಪೇಟೆ ರುಚಿ ಹಿಡಿದರೆ, ನಾಳೆ ಹಳ್ಳಿಯ ಮನೆ, ತಾಯಿ, ಅಕ್ಕ ಯಾರಿಗೆ ಬೇಕಾಗುತ್ತಾರೆ...ಹೂಂ ನಮಗೇನು? ಪ್ರಾಯ ಬಂದವರು! ತಿಳಿದ ಹಾಗೆ ಮಾಡುತ್ತಾರೆ'--ಎಂದರು. ಅಚ್ಯುತ ಮಾತನಾಡಲಿಲ್ಲ.

ತಿರುಗಿ ನರಸಿಂಹಯ್ಯ 'ಹಾಗಾದರೆ,ಹೋಗಿಯೇ ಬಿಡುತ್ತೀರೋ? ನನ್ನ ಹತ್ತಿರ ಏನೂ ಸಹಾಯ ಕೇಳಬಾರದು. ಹೋಗಿ ಉದ್ಧಾರವಾಗುವುದನ್ನು ಕಂಡು ಸಂತೋಷಪಡಬಹುದಲ್ಲ. ಹೆಂಗುಸರಿಗೆ ಪಾರುಪತ್ಯ ಬಂದರೆ ಹೀಗೇನೆ! ಬಡವನಿಗೆ ಐಶ್ವರ್ಯ ಬಂದರೆ ಮಧ್ಯರಾತ್ರೆಯಲ್ಲಿ ಕೊಡೆ ಹಿಡಿಯುತ್ತಾನೆ-ಎಂದ ಹಾಗೆ.'

ಅಚ್ಯುತನಿಗೆ ಸಹಿಸದಾಯಿತು. ತನ್ನನ್ನು ಬಯ್ಯುವುದರ ಜತೆಗೆ, ಈಗಾಗಲೇ ನೋವುಗೊಂಡ ತಾಯನ್ನು ಬಯ್ಯುವುದರ ಕಾರಣ ಅವನು ತಿಳಿಯದಾದ. ಆದರೂ ಸಮಾಧಾನದಿಂದ 'ನೀವು ಯಾಕೆ ಇಷ್ಟು ಸಿಟ್ಟಾಗುತ್ತೀರಿ?'-ಎಂದ.

'ಹೋ. ನನಗೆ ಎದುರು ಮಾತನಾಡಲಿಕ್ಕೂ ಕಲಿತಿದ್ದಾನೆ, ಇಲ್ಲ. ಸ್ವಾಮಿ ಭಾವಯ್ಯನವರೇ, ನಾನು ತಮ್ಮ ಹತ್ತಿರ ಮಾತನಾಡಿದ್ದಲ್ಲ... ನನ್ನಷ್ಟಕ್ಕೆ-ಹೇಳಿದ್ದು'--ಎಂದರು. ಆತನಿಗೆ ದುಃಖ ಹಿಡಿಸದಾಯಿತು. ಅವನು ಕಣ್ಣೀರು ಬಿಕ್ಕುತ್ತ ಅಲ್ಲಿಂದ ಹೊರಟುಹೋದ. ಗಂಡನ ಈ ಅವತಾರವೆಲ್ಲ ಒಳಗೆ ಕೆಲಸ ಮಾಡುತ್ತಿದ್ದ ಸೀತೆಗೆ ತಿಳಿಯಿತು. ಅವಳು ಹೊರಕ್ಕೆ ಬಂದು, 'ಅಲ್ಲ. ನೀವು ಯಾಕೆ ಆ ಮಾಣಿಯೊಡನೆ ಜಗಳ ಕಾಯುವುದು? ಏನೋ ಅಪ್ಪಯ್ಯನ ಇಚ್ಛೆ ಹಾಗಿತ್ತೆಂದು ಅಮ್ಮ ಹಟ ಮಾಡಿ, ಅವನಿಗೆ ಶಾಲೆಗೆ ಹೋಗಿಬಾ ಎಂದದ್ದು. ಮನೆಗೆ ಬಂದಬಂದ ವರೆಲ್ಲ 'ಮಗು, ಈ ವರ್ಷ ಓದು ಮುಗಿಸು. ಅರ್ಧದಲ್ಲಿ ಬಿಟ್ಟು ಏನು ಪ್ರಯೋಜನ?' ಎನ್ನುತ್ತಾರೆ. ನೀವೂ, ನಾನೂ ನಾಲ್ಕು ದಿನದ ಮಾತಿಗೆ ಬಂದವರು. ಅವರ ಮನೆಯ ವಹಿವಾಟಿನಲ್ಲಿ ಯಾಕೆ ಬಾಯಿ ಹಾಕು ವುದು'-ಎಂದಳು. ಸಾಮಾನ್ಯವಾಗಿ ಗಂಡನೊಡನೆ ಅಷ್ಟು ಮಾತನಾ ಡುವಾಕೆ ಸೀತೆಯಲ್ಲ. ಗಂಡನಿಂದಾಗಿ ಆ ಮನೆಯಲ್ಲಿ ಅನಾವಶ್ಯಕವಾದ ವಿರಸವಾದೀತಲ್ಲ--ಎಂದು ಬೆದರಿ ಹಾಗೆ ನುಡಿದಳು. ಅದು ಉರಿಗೆ ಗಾಳಿ ಬೀಸಿದಂತಾಯಿತು!

'ಹೋ ನೀನು ತವರುಮನೆಯ ಪಕ್ಷ ಹಿಡಿದುಬಿಟ್ಟೆಯೋ! ನೀರಿನ ಗುಣ. ಇರಲಿ-ನೀನನ್ನುವುದೇನು? ನಾವು ಈ ಮನೆಯಲ್ಲಿ ಇರಬೇ ಕೆಂದೋ ಬೇಡವೆಂದೋ'-ಎಂದರು ಉಗ್ರ ನಾರಸಿಂಹಯ್ಯ.

'ನಾವು ಹೇಗೂ ಇನ್ನೊಂದು ಜಾಗ ಹುಡುಕಿ ಹೋಗುವುದಿಲ್ಲವೇ? ಅವರಿಗೆ ತಿಳಿಯುವಂತೆ ಅವರು ಮಾಡಲಿ ಎಂದದ್ದು ನಾನು. ಯಾರ ಪಕ್ಷವನ್ನು ವಹಿಸಿ ಮಾತನಾಡಿದ್ದಲ್ಲ. ನಾವು ಒಳ್ಳೆಯದಕ್ಕೆ ಹೇಳಲಿ, ಯಾವುದಕ್ಕೇನೆ ಹೇಳಲಿ-ಅವರು ಬೇರೊಂದು ಅರ್ಥ ಮಾಡಬಾರ ದಲ್ಲ'-ಎಂದಳು.

ನರಸಿಂಹಯ್ಯನ ಉಗ್ರ, ಹೆಂಡತಿಯ ಮೇಲೆ ಕಟುವಾಗಿ ಪರಿಣ ಮಿಸಿತು. ಯಾವೆಲ್ಲ ಬಯ್ಗುಳಿಂದ ಅವಳನ್ನು ಮರ್ಯಾದಿಸಬೇಕೋ ಅಷ್ಟೆಲ್ಲ ಮಾಡಿ, ಅವಳಿಗೂ ಕಣ್ಣೀರು ತರಿಸಿ, ಎದುರಿಗೆ ಬಂದ ತಮ್ಮ ರಡು ಕೂಸುಗಳನ್ನು ನಿಷ್ಕುರವಾಗಿ ಹೊಡೆದು, ಬೆಳಗ್ಗೆ ಮನೆ ಬಿಟ್ಟು ಹೋದವರು, ಆ ದಿನ ಊಟಕ್ಕೇನೆ ಮರಳಲಿಲ್ಲ

ಮನೆಯವರಿಗೆ ಮಧ್ಯಾಹ್ನ ಊಟವಾಯಿತು. ಅಳಿಯ ಬಂದಾನೆಂದು ಕಾದುಕಾದು ದಣಿದು ಅಚ್ಯುತ, ಲಕ್ಷ್ಮಿ ತಮ್ಮ ಊಟವಮಾಡಿದರು. ಸೀತೆ ಮಾಡದೆ ಕುಳಿತಳು. ಯಾರೂ ಏನೂ ಹೇಳಲಿಲ್ಲ. ಗಂಡ ಬೈದಿರಬೇಕು. ಅದಕ್ಕೆ ಮಗಳು ಮೂಕಿಯಾಗಿರಬೇಕೆಂದು ತಾಯಿ ತಿಳಿದಳು. ಆದರೆ ರಾತ್ರೆ ಮಗನೊಡನೆ ತಾಯಿಯು 'ಮಗು, ಬಸ್ಸು ನಸುಕಿಗೇನೆ ಬರುತ್ತದೆ. ಬೇಗ ಎದ್ದು ಹೋಗಿ ರಸ್ತೆಯ ಹತ್ತಿರ ನಿಲ್ಲಬೇಕಲ್ಲ' -ಎಂದೊಡನೆ ಆತ, ಅಳುತ್ತ, 'ಅಮ್ಮ, ಬೇಡ ನಾನು ಹೋಗುವುದಿಲ್ಲ'- ಎಂದುಬಿಟ್ಟ. ಮುಂದೆ ಅವನು ಮಾತನಾಡಲಿಲ್ಲ. ತಾಯಿ ಕಕ್ಕಾಬಿಕ್ಕಿಯಾದಳು. ಆಗ ಕಾರಣವನ್ನು ಸೀತೆ ತನ್ನ ಅಳುವಿನ ಪ್ರವಾಹದೊಂದಿಗೆ ಹೇಳುವಂತಾಯಿತು. ಲಕ್ಷ್ಮಿಯೂ ಒಂದು ಗಳಿಗೆ ಮೌನವಾದಳು. ಕೊನೆಗೆ-"ಮಗು ಹೋಗುವುದೆಂದು ಮಾಡಿದ ಮೇಲೆ ಹೋಗಿಯೇಬಿಡು" ಎಂದಳು.

"ಯಾಕೆ? ನಾಸಿಲ್ಲದಾಗ ಭಾವ ನಿನ್ನನ್ನು ಗಳಿಗೆಗಳಿಗೆಗೆ ಹಂಗಿಸಲಿಕ್ಕೇನು?" ಎಂದನು ಅಚ್ಯುತ.

"ನನ್ನನ್ನು ಯಾರೂ ಹಂಗಿಸುವುದಿಲ್ಲ. ಯಾಕೆ ಹಂಗಿಸುತ್ತಾರೆ? ನಾನು ಯಾರಿಗೇನು ಮಾಡಿದ್ದೇನಂತೆ? ನೀನು ಬೇಗ ಮಲಗಿಕೋ, ಬೆಳಿಗ್ಗೆ ಏಳಿಸುತ್ತೇನೆ ಬೇಗ." ಅಚ್ಯುತನಿಗೆ ಸಮಾಧಾನವಾಗಿ ಮಲಗಿಕೊಂಡ. ರಾತ್ರೆ ಬಲುಹೊತ್ತಿನ ಬಳಿಕ ಭಾವನಾಡಿದ ಮಾತನ್ನು ತಾಯಿಗೆ ಹೇಳಿದ. "ನಾಳೆ ನೀನು ಅವರ ಬಾಯಿಬಾಯ್ಗುಳ ತಿನ್ನಬೇಕಾಗುತ್ತದಲ್ಲವೇ! ಅವರಿಗೆ ತಮ್ಮ ಯಜಮಾನಿಕೆ ನಡೆಯಲಿಲ್ಲವೆಂದು ಬೇಸರವಾಗಿದೆ"ಯೆಂದು ವಿವರಿಸಿದ. ತಾಯಿ ಅದೊಂದನ್ನೂ ಹಚ್ಚಿಕೊಳ್ಳದೆ— "ಮಗು, ನಿನಗೆ ಅದೆಲ್ಲ ಬೇಡ. ಹೀಗೆ ಸಿಟ್ಟು, ಶಠ ಅವನ ಸ್ವಭಾವ, ಅನ್ನುತ್ತಾನೆ. ಅವನಿಗೇನು ನಮ್ಮ ಮೇಲೆ ವೈರವೇ'-ಎಂದು ಉಪದೇಶಿಸಿ ತಾನೂ ನಿದ್ದೆಹೋದಳು.

ಮರುದಿನ ಅಚ್ಯುತನು ಬೇಗನೆ ಎದ್ದು ಅವಲಕ್ಕಿ ಮೊಸರನ್ನು ತಿಂದು, ಮೋಟರನ್ನು ಹಿಡಿದು ಪುತ್ತೂರಿಗೆ ಹೋದನು. ಹಾದಿಯಲ್ಲಿ ನಾಗರಾಜಯ್ಯನ ಸಂಗಮವೂ ಆಯಿತು. ಉಪ್ಪಿನಂಗಡಿಯಲ್ಲಿ ಒಂದು ಕ್ಷಣಕ್ಕೆ ಮಾಮುಂಜಿಯ ದರ್ಶನವೂ ಆಗಿ, ಒಂದೆರಡು 'ಬೀಡಾ'ಗ

ಳನ್ನು ತಿಂದು ಬೀಳ್ಕೊಟ್ಟದ್ದೂ ಆಯಿತು.

ಶಾಲೆಯ ಪ್ರಾರಂಭವೂ ಊರಲ್ಲಿ ಬಿರುಮಳೆಯ ಪ್ರಾರಂಭವೂ ಏಕಕಾಲದಲ್ಲಿ ಮೇಳವಿಸಿತು. ಅಚ್ಚುತ ಮಳೆಯಿದ್ದ ದಿನಗಳಲ್ಲಿ ಸಂಜೆ ಹೊರಗೆ ತಿರುಗಾಡುವುದಕ್ಕೆ ಹೋಗುತ್ತಿರಲಿಲ್ಲ. ಸದಾ ಪುಸ್ತಕಗಳಿಗೆ ಅಂಟಿರುತ್ತಿದ್ದ. ಹೇಗಾದರೂ ಮಾಡಿ ಈ ವರ್ಷ ತನ್ನ ವಿದ್ಯೆಯನ್ನು ಸಫಲವಾಗಿ ಕೊನೆಗಾಣಿಸಬೇಕೆಂಬ ಹಟ. ಸುಬ್ರಾಯರ ಬೆಂಬಲದಿಂದ ಅವನಿಗೆ ಯಾವ ಹೆಚ್ಚಿನ ಆರ್ಥಿಕ ತೊಡಕೂ ಬರಲಿಲ್ಲ. ಅವರು ತಮ್ಮ ಉಪಾಧ್ಯಾಯ ಗೆಳೆಯರಿಂದ ಅವನ ವೇತನವನ್ನು ದೊರಕಿಸಿಕೊಟ್ಟರು. "ಯಾರು ಅಚ್ಚುತನೇ! ಅವನಿಗೆ ಸಹಾಯ ಮಾಡದೆ ಇನ್ನಾರಿಗೆ?" ಎನ್ನುವವರೇ ಎಲ್ಲರೂ.

ನಿಜಕ್ಕೂ-ಆ ವರ್ಷ ಹೇಗೆ ಮುಗಿಯಿತು ಎಂದು ಅಚ್ಚುತನಿಗೂ ತಿಳಿಯಲಿಲ್ಲ. ಒಂದೆರಡು ಬಾರಿ ಊರಿಗೂ ಆತ ಹೋಗಿ ಬಂದಿದ್ದ. ಮನೆಯ ಯೋಗಕ್ಷೇಮ ತಿಳಿದುಕೊಂಡುದೂ ಆಯಿತು. ತಾಯಿಯ ಬಾಯಿಂದ "ಎಲ್ಲ ಚೆನ್ನಾಗಿದೆ ಮಗು; ಬೆಳೆಯೂ ಚೆನ್ನಾಗಿದೆ; ನೀನಾವ ಯೋಚನೆ ಮಾಡಬೇಕಿಲ್ಲ" ಎಂದು ಕೇಳಿದ್ದೂ ಆಯಿತು.

ಒಂದು ವಿಷಯದಲ್ಲಿ ಅಸಮಾಧಾನವೆಂದರೆ ನಾಗರಾಜಯ್ಯನಿಗೆ. ಅವನೊಡನೆ ಹಿಂದಲ ವರ್ಷ ಹರಟೆಗೆ ಬಂದಷ್ಟು ವೇಳೆ ಈ ವರ್ಷ ಅಚ್ಚುತ ಬರುತ್ತಿರಲಿಲ್ಲ. ಕಾರಣ S. S. L. C. ಪರೀಕ್ಷೆಯೆಂಬುದು ಬೃಹದ್‌ಬೇತಾಳವಾಗಿ ಅವರ ಮುಂದೆ ನಲಿಯುತ್ತಿತ್ತು. ಅದರಲ್ಲಿಯೂ ಆಯ್ಕೆಯಿಂದ ಪರೀಕ್ಷೆಗೆ ಕಳಿಸುವುದಂತೆ. ಮದ್ರಾಸಿನಿಂದ ಬರುವ ಪ್ರಶ್ನೆಪತ್ರಗಳೂ ಯಾವುದೋ ಊರಿಗೆ ಹೋಗುವ ಉತ್ತರ ಪುಸ್ತಕಗಳೂ-ಎಂದು ಒಂದು ವಿಚಿತ್ರವಾದ ದೆವ್ವನ ರೂಪ ಆ ಪರೀಕ್ಷೆಗೆ ಬಂದಿದೆ. ಅಚ್ಚುತ ಇತರ ಬಾಲಕರಂತೆ ಈ ದೆವ್ವನ ಭೀತಿಗೆ ಒಳಗಾಗಿದ್ದ. ಅವನೇನು ದಡ್ಡನಲ್ಲ. ತುಸುವೆ ಶ್ರಮದಿಂದ ತನ್ನ ಪಾಠ ನಿರ್ವಹಿಸಲು ಶಕ್ತನಾಗಿದ್ದ. ಈ ಗುಂಪಿಗೆ ಸೇರದವನೆಂದರೇ ನಾಗರಾಜ. ಅವನು ಎಂದೂ ಪುಸ್ತಕವನ್ನೂ ಪರೀಕ್ಷೆಯನ್ನೂ ದೇವರೆಂದು ತಿಳಿದವನಲ್ಲ. ಬೇತಾಳವೆಂದೂ ಬೆದರಿದವನಲ್ಲ. "ಅಲ್ಲ, ಒಂದು ಪಕ್ಷ ಫೇಲಾಯಿತು; ಅದರಿಂದೇನು ಪ್ರಪಂಚ ತಲೆಕೆಳಗಾಗುವುದು?"—

ಎಂದು ಅಣ್ಣನ ಸ್ವಭಾವ. ಆದರೆ ದಶಂಬರ ತಿಂಗಳಲ್ಲಿ ಯಾರಾರನ್ನು ಪರೀಕ್ಷೆಗೆ ಕಳುಹುವುದು ಎಂದು ನಿರ್ಣಯಿಸುವ ಕಾಲ ಬಂದಾಗ ಮಾತ್ರ ನಾಗರಾಜನಿಗೆ ತುಂಬ ಕಳವಳವಾಯಿತು. ತನ್ನನ್ನು ಕಳುಹಿಸ ದಿದ್ದರೆ-ಎಂಬ ಅನುಮಾನ ಅವನಿಗೂ ಬಂದಿತು. ಮನೆಯಿಂದೇನೋ ಪರೀಕ್ಷೆಗೆ ಕಟ್ಟಲು ಹಣ ಬೇಕೆಂದು ಹತ್ತು ರೂಪಾಯಿಗಳನ್ನು ಹೆಚ್ಚಿ ಗೇನೆ ತರಿಸಿಕೊಂಡಿದ್ದ. ಆದರೆ-ದರಿದ್ರ ಸರಕಾರಕ್ಕೆ ಅವನ ಹಣ ಬೇಡ ವಾಯಿತೆ? ಅವನನ್ನೂ ಅವನ ಜೊತೆಗಾರರಾದ ಇನ್ನು ಆರು ಹುಡುಗ ರನ್ನೂ ನಿಲ್ಲಿಸಿದರು. ಅದರಿಂದ ನಾಗರಾಜನಿಗೆ ವ್ಯಥೆಯಾಯಿತು. ಏನು! ತನ್ನನ್ನು ಉಳಿಸಿದರಲ್ಲ-ಎಂಬುದರಿಂದಲ್ಲ. "ಎಂಥೆಂಥ ಬುರ್ನಾಸುಗ ಳನ್ನು ಕಳುಹಿಸಿ, ತನ್ನನ್ನು ಕಳುಹಿಸದಿದ್ದುದಕ್ಕೆ". "ಏನು-ಕನ್ನಡದಲ್ಲಿ ನನಗೆ ಪಿಂಟೋಗಿಂತ ಕಡಮೆ ಮಾರ್ಕೇನು? ಎಲಿಮೆಂಟ್ರಿಯಲ್ಲಿ ನಾನು ನಾಗಪ್ಪನಷ್ಟು ಹೆಡ್ಡನೇ? ಏನೋ ಇಂಗ್ಲಿಷಿನಲ್ಲಿ ತುಸು ವೀಕು. ಆದರೆ ಪರೀಕ್ಷೆಗೆ ಇನ್ನೂ ಮೂರು ತಿಂಗಳಿಲ್ಲವೇ? ಇವರೀಗ ಭಾರಿ ಬುದ್ಧಿ ವಂತರೆಂದು ಕಳುಹಿಸಿದವರೆಲ್ಲರೂ ಅಲ್ಲಿ ಪಾಸಾಗಿ ಬರುತ್ತಾರೆಯೆ! ನೋಡುವ. ಸೇಕಡ ಐವತ್ತಕ್ಕಿಂತ ಹೆಚ್ಚು ಮಂದಿ ಇಲ್ಲಿಂದ ಪಾಸಾಗಲಿ. ಈ ಮಾಸ್ತ್ರುಗಳ ಡೌಲಿಗೇನು ಬರಗಾಲವಿಲ್ಲ" ಎಂದುಕೊಂಡ.

ಅಂದಿನಿಂದ ಮುಂದೇನು ಮಾಡುವುದೆಂದು ತೋಚದು. ಆ ವರ್ಷದ ಓದು ನಿಂತುದರಿಂದ ಊರಿಗೆ ಮರಳುವುದು ಸಮನಾದ ದಾರಿಯೆಂದು ಅವನು ಒಪ್ಪಲಾರ. ಫೈಲಾಗಲಿ, ಪಾಸಾಗಲಿ-ಊರಿಗೆ ಹೋಗುವುದು ರಜೆಗೇನೆ ಎಂದು ನಿರ್ಧರಿಸಿ ಬಿಟ್ಟ. ಊರಿಗೆ, ಫೈಲು ಪಾಸುಗಳ ವಿಚಾರವೊಂದನ್ನೂ ಬರೆಯದೆ,ತಿಂಗಳು ತಿಂಗಳಿನ ಖರ್ಚಿನ ಹಣಕ್ಕೆ ಮಾತ್ರ ಬರೆಯುತ್ತಿದ್ದನು. ಮುಂದಿನ ಜೂನು ತಿಂಗಳಲ್ಲಿ, ಹಿರಿ ಯರ ಮುಂದೆ, "ಯಾವ ದರಿದ್ರದವನ ಕೈಗೆ ನನ್ನ ಇಂಗ್ಲೀಷಿನ ಪೇಪ ರು ಹೋಯಿತೋ — ಎರಡೇ ಎರಡು ಮಾರ್ಕು ಕತ್ತರಿಸಿ ನನ್ನನ್ನು ಕೊಂದುಬಿಟ್ಟ"-ಎಂದು ಪತಾಕಿ ಹಾರಿಸಿಬಿಟ್ಟ.

ಇತ್ತ ನಾಗರಾಜನಿಗೆ ದೊಡ್ಡ ರಜೆ ಬರುವ ತನಕ ಸಮಯ ಹೋಗುವುದು ಕಷ್ಟವಾಯಿತು. ಆದರೂ ಕ್ಲಾಸಿನಲ್ಲಿ ಬಂದು ಕುಳಿತಿ ರುವೆನೆಂದುಕೊಂಡು ಶಾಲೆಯ ವಠಾರದಲ್ಲಿ ಬಂದು ಸುಳಿದಾಡುತ್ತಿದ್ದ.

ಸಂಜೆ ತಪ್ಪದೆ ಅಚ್ಚುತ ಇರುವಲ್ಲಿಗೆ ಬಂದು 'ಬಾ ಮಹಾರಾಯ ತಿರುಗಾಡಲು ಹೋಗುವ' ಎನ್ನುತ್ತಾನೆ. ಅಚ್ಚುತನಿಗೆ ಪರೀಕ್ಷೆಯ ದೆವ್ವ ಹಿಡಿದಿತ್ತೆಂದು ಅವನಿಗೇನು ಗೊತ್ತು? ನಾಗರಾಜ "ಏ ಮಹಾರಾಯ, ನೀನು ಓದುವುದು ನೂರರೊಳಗಿನ ಮಾರ್ಕಿಗೆ ಸಾಕು. ಜಾಸ್ತಿ ಓದಿದರೆ ನೂರರಲ್ಲಿ ನೂರಐವತ್ತು ಕೊಡುತ್ತಾರೆಂದು ತಿಳಿದಿದ್ದೀಯಾ?" ಎನ್ನುವ. ಅಂತು ಬರಿಯ ಒಂದೆರಡು ದಿನ, ಗೆಳೆಯನ ದಾಕ್ಷಿಣ್ಯಕ್ಕೆ ಅಚ್ಚುತ ಅಲೆದಾಡಲು ಹೋದುದುಂಟು. ಹಾಗೆ ಹೋದೊಡನೆಯೆಲ್ಲ 'ಬೇಗ ಮನೆಗೆ ಹೋಗುವ' ಎಂದು ಅವನು ಅಂಗಲಾಚುವುದನ್ನು ಕೇಳಿ ಬೇಸರಗೊಂಡುದೂ ಉಂಟು. ಅಂತು ಒಂದು ವಾರದ ಪರೀಕ್ಷೆಯಲ್ಲಿ ಅಚ್ಚುತನ ತೂಕ, ನಾಗರಾಜನ ದೃಷ್ಟಿಯಲ್ಲಿ, ಬಲು ಕಡಮೆಯಾಯಿತು. "ತೀರ ಸ್ವಾರ್ಥಿ ಅವನು. ನಾನು ಅವನಿಗೆಷ್ಟೆಲ್ಲ ಸಹಾಯ ಮಾಡಿದ್ದೇನೆ; ಎಲ್ಲ ಮರೆತಿದ್ದಾನೆ. ಈಗ ಕರೆದರೆ ಸಮನಾಗಿ ಮಾತಾಡುವುದಿಲ್ಲ"-ಎಂದು ಸಾರಿದನು.

ನಾಗರಾಜ ತನಗೆ ತಕ್ಕವರಾದ ಬೇರೆಯೇ ಗೆಳೆಯರನ್ನು ಕಾಣಬೇಕಾಯಿತು. ಸರಿ, ತನ್ನಂತೆ ಪರೀಕ್ಷೆಗೆ ತಡೆಯಾದವರು ಇದೇ ಇರುವರಲ್ಲ! ಲೂಯಿಸ, ರಾಮಣ್ಣ, ಅಪ್ಪಯ್ಯ-ಎಂದು ಮೂವರನ್ನು ಕೂಡಿಸಿಕೊಂಡು ಒಂದೆರಡು ದಿನ ಕಾಲ ಶಾಲೆಯ ಸುಳಿದಾಟ ನಡೆಸಿದನು. ಮುಂದೆ ಅವನ ತರಗತಿಯನ್ನು ಓದಲು ಬಿಟ್ಟುದರಿಂದ, ಆ ನೆಪವೂ ಸಾಧಿಸದೆ, ತಮ್ಮದೇ ಸ್ವತಂತ್ರ ವಾಕಿಂಗ್ ಕ್ಲಬ್ ಜರಗಿಸಿದನು. ಊರಿನ ಗುಡ್ಡಗಳಿಗೆ ದಿನಕ್ಕೆರಡು ಬಾರಿ ಸಂದರ್ಶನ ನಡೆಯಿತು. ಅಲ್ಲಿ, ಬೆಳಗ್ಗೆ, ಸಂಜೆ ಇಸ್ಪೀಟಿನ ಟೂರ್ನಮೆಂಟುಗಳೇ ಜರಗಿಸಲ್ಪಟ್ಟವು. ಗೆದ್ದವರಿಗೆ ಸೋತವರು ಕಾಫಿ ಕುಡಿಸುವ ಭರದಲ್ಲಿ ನಾಲ್ಕೈದಾವೃತ್ತಿಯಾದರೂ ಉಪಹಾರವಾಗುತಿತ್ತು. ಹೀಗೆ ಸುಖಸಂತೋಷವಾಗಿ ಕಾಲವನ್ನು ಕಳೆಯುತಿದ್ದರು--ಎಂಬಲ್ಲಿಗೆ ಅಚ್ಚುತನ ಪರೀಕ್ಷೆ ಮುಗಿದು, ಮಾರ್ಚು ತಿಂಗಳು ಮುಕ್ತಾಯಗೊಂಡಿತು. ಕೊನೆಯ ಪರೀಕ್ಷೆ ಮುಗಿದ ದಿನ ವೇನೆ, ಆತ ನಾಗರಾಜನ ಮನೆಗೆ ಓಡಿಹೋದ. ಅವನನ್ನು ಅರಸಿ ಅರಸಿ ದಣಿದ. ಮೂರು ದಿನಗಳ ಬೇಟೆಯಲ್ಲಿ ಕಾಣುವಂತಾಯಿತು. ಆದರೆ ಇಸ್ಪೀಟು ಮತ್ತನಾದ ಗೆಳೆಯನು ಮಾತನಾಡಲು ಅನುವಾಗಬೇಕೆ!

ನಾಗರಾಜನು ಕಂಡರೂ ಕಾಣದಂತೆ ಆಡುತ್ತಲಿದ್ದ. ಈತ, ಆಟ ನಿಲ್ಲುವ ತನಕ ಕಾಯ್ದು, "ಮುಗಿಯಿತು ಮಹಾರಾಯ. ನೀನು ನನ್ನ ಮೇಲೆ ಎಷ್ಟು ಬೇಸರಪಟ್ಟೆಯೋ ಏನೋ, ಆದರೆ ನನಗೆ ಹೆದರಿಕೆ—ಪಾಸ ತಪ್ಪುವುದೊಂದು. ಪರರ ದುಡ್ಡಿನಲ್ಲಿ ಓದುವವನಿಗೆ ಇಷ್ಟು ತಿರುಗಾಟವೇ ಎಂದಾರೆಂಬ ಭೀತಿಯೊಂದು" ಎಂದನು.

"ನಾಗರಾಜನು-ಹೂಂ! ಆಯಿತಲ್ಲ ನಿನ್ನ ಪರೀಕ್ಷೆ. ಮತ್ತೇನು! ನಿನಗೆ ನಮ್ಮಂಥ ಹೆಡ್ಡರ ಸಹವಾಸ ಏತಕ್ಕೆ? ನಾಳೆ ನೀನು ಬಿ. ಎ. ಗೆ ಮಂಗಳೂರಿಗೋ ಮದ್ರಾಸಿಗೋ ಹೋಗುವವ. ನಾವು ಮದ್ದಾಳ ದಲ್ಲಿ ಗದ್ದೆ ಉಳುವವರು. ನಮುಗೂ ನಿಮುಗೂ ಎಲ್ಲಿನ ಜತೆ!" ಎಂದನು. ನಾಗರಾಜನ ಗೆಳೆಯರು ಈ ಪರಿಹಾಸ್ಯವನ್ನು ಕೇಳಿ ತುಂಬ ನಕ್ಕರು. ನಾಗರಾಜನು ಗೆದ್ದವನಂತೆ ಹಿಗ್ಗಿ ಕತ್ತು ಬಾತಿಸಿಕೊಂಡು ಕುಳಿತ. ಕಿಸೆ ಯಿಂದ ಒಂದು ಸಿಗರೇಟಿನ ಪೆಟ್ಟಿಗೆ ತೆಗೆದು ಗೆಳೆಯರ ಮುಂದಿರಿಸಿದ. ಅವರೆಲ್ಲರೂ ಹೊಗೆ ಹಾರಿಸುತ್ತ, ನಗುತ್ತ, ಸಮಯ ಕಳೆಯುವುದನ್ನು ಅಚ್ಯುತ ನೋವಿನಿಂದ ನೋಡುತ್ತ ಕುಳಿತ. "ತಾನು ನಾಗರಾಜನನ್ನು ತುಂಬ ನೋಯಿಸಿದ್ದೇನೆ; ನನ್ನ ಸ್ವಾರ್ಥವೇ ಅಷ್ಟೆಲ್ಲಕ್ಕೆ ಕಾರಣವಾ ದುದೇ?" ಎಂದು ಚಿಂತೆಗೊಳಗಾದ. ರಾತ್ರಿ ಹಾಸ್ಟೆಲಿಗೆ ಹೋಗಿ ಮಲ ಗಿದವನಿಗೆ ಒಂದು ಕ್ಷಣವಾದರೂ ನಿದ್ದೆ ಬರಲಿಲ್ಲ.

ಮರುದಿನ ಬೆಳಗ್ಗೆ ಎದ್ದು ಊರಿಗೆ ಹೊರಡಲು ನಿಶ್ಚಯಿಸಿದ. ಹಾಗೆಯೇ ವಾರ್ಡನರ ಬಳಿಗೆ ಹೋಗಿ ಅನುಮತಿಯನ್ನು ಪಡೆದ. "ಪಾಸಾದರೆ ಇಂಟರ್ ಮಾಡುತ್ತೀಯಲ್ಲ" ಎಂದರು. "ಎಲ್ಲಿನ ಇಂಟರು? ದೇವರು ಇದೊಂದು ಮುಗಿಸಿ ಕೊಟ್ಟರೆ?"-ಎಂದ ಅಚ್ಯುತ. "ಹೌದಪ್ಪ, ಅವರಲ್ಲಿ ನಿನಗೇನು ಅಂಜಿಕೆ? ಇಂಟರು ಮಾಡುವುದಕ್ಕೇನೋ ಕಷ್ಟದ ಸಮಯ' ಎಂದರು. "ಅಲ್ಲದೆ ಮನೆಯಲ್ಲಿ ಅಮ್ಮನೊಬ್ಬಳನ್ನೇ ಬಿಟ್ಟು ದೂರ ಇರುವುದಾದರೂ ಹೇಗೆ?" ಎಂದನು ಅಚ್ಯುತ. "ಆಗಲಿ ಹೋಗು ಮಗು. ಪರೀಕ್ಷೆಯ ಫಲ ತಿಳಿಯಲು ಬಂದಾಗ ನಮ್ಮಲ್ಲಿಗೂ ಬಂದು ಹೋಗುತ್ತೀಯಲ್ಲ"-ಎಂದು ಬಹುದೂರದ ತನಕ ಅವನ ಜತೆಗೆ ಮಾತ ನಾಡುತ್ತ ಬಂದರು.

ಅಚ್ಯುತ ತನ್ನ ಪೆಟ್ಟಿಗೆ ಹೊರಿಸಿಕೊಂಡು ಪೇಟೆಗೆ ಬಂದನು.

ಬಸ್ಸಿನ ವೇಳೆ ಮತ್ತೂ ಮುಂದಿತ್ತು. "ಇನ್ನೊಮ್ಮೆ ನಾಗರಾಜನನ್ನು ಕಾಣುತ್ತೇನೆ. ಊರಿಗೆ ಅವನೂ ಬರುವುದಕ್ಕೆ ಸಾಕು. ಅಲ್ಲದೆ ನಿನ್ನೆಯ ಸಿಟ್ಟಿನಿಂದ ಶಾಂತನಾಗಿರಲೂ ಸಾಕು" ಎಂದು ಎಣಿಸಿ, ನೇರಾಗಿ ಅವನಿರುವ ಮನೆಗೆ ಹೋದನು. ಅಲ್ಲಿ ಅವನು ಇದ್ದುದರಿಂದ ಸಂತೋಷವಾಯಿತು. "ನಾಗರಾಜ, ನಾನು ನಾಲ್ಕರ ಬಸ್ಸಿಗೆ ಹೋಗುತ್ತೇನೆ. ನೀನು ಯಾವಾಗ?" — ಎಂದು ಕೇಳಿದನು. ನಾಗರಾಜನಿಗೆ ಒಮ್ಮೆಗೆ ಎದೆ ದಡಲ್ಲಾಯಿತು — ತಾನೂ ಊರಿಗೆ ಹೋಗಬೇಕಲ್ಲ ಎಂದು. ಅಚ್ಯುತ ಊರನ್ನು ಸೇರಿ, ತಾನು ಪರೀಕ್ಷೆಗೆ ಕಳುಹಲ್ಪಡದ ವಿಚಾರವನ್ನು ಇಸ್ಪೀಟಿನ ವಿಚಾರವನ್ನೂ ಹೇಳಿದರೆ, ಮನೆಯವರಿಗೆ ಗಾಬರಿಯಾದೀತಲ್ಲ-ಎಂದು ತೋಚಿತು. ಹಿಂದಣ ದಿನದ ಬಣ್ಣವನ್ನು ಬದಲಿಸಿ "ಮಹಾರಾಯ, ಊರಿಗೆ ಹೋಗಿ ನನ್ನ ಮರ್ಯಾದೆ ತೆಗಿಯಬೇಡ"ಂದು ಅಂಗಲಾಚಿದನು. ಅಚ್ಯುತನಿಗೆ ಇದೇಕೆ ಇವನು ಹೀಗೆ ನುಡಿಯುವನೆಂದು ತಿಳಿಯಲಿಲ್ಲ. "ನಾನೇನು ನಿನಗೆ ಮಾಡಿದ್ದೇನೆ? ನನ್ನ ಮೇಲೆ ನಿನಗೇಕೆ ಸಂಶಯ? ನಿನ್ನ ದೂರನ್ನು ಯಾರೊಡನೆ ಹೇಳಿದ್ದೇನೆ?" ಎಂದ. ಆಗಲೂ ಅಚ್ಯುತನ ಮೊಗ ನೊಂದು, ಕಂದಿತ್ತು. ಅದನ್ನು ಕಂಡೂ ತನ್ನದೇ ಹಿತಡಸಲುವಾಗಿಯೂ ಆತನು "ನೀನು ದೂರಿದ್ದು ಎಂದಲ್ಲ. ನಾನು ಒಂದು ಹಿಕ್‌ಮತ್ ಮಾಡಿದ್ದೆ. ನನ್ನನ್ನು ಪರೀಕ್ಷೆಗೆ ಕಳುಹಿಸಲಿಲ್ಲವೆಂದು ಹೇಳಿರಲಿಲ್ಲ. ಹೇಳಿದ್ದರೆ ಆಗಲೇ ಊರಿಗೆ ಹೋಗಬೇಡವೇ? ಅಲ್ಲೇನು ಮಾಡುವುದು ಎಂದು ಇಲ್ಲಿ ಇದ್ದೇನೆ" — ಎಂದ. ಅಚ್ಯುತ — "ನಾನು ಯಾರ ಹತ್ತಿರವೂ ಹೇಳುವ ಗೋಜಿಗೆ ಹೋಗುತ್ತೇನೆಯೇ"-ಎಂದು ಸಮಾಧಾನಪಡಿಸಿ, "ಅದಿರಲಿ ನೀನು ಇವತ್ತು ಬರಬಾರದೇ"-ಎಂದ. ನಾಗರಾಜನು ಇನ್ನೂ ಹದಿನೈದು ದಿವಸಗಳ ಮೊಕ್ಕಾಂ ಕಲ್ಪಿಸಿ ಕುಳಿತಿದ್ದಾನೆ. ಹೀಗಿರಲು ಗೆಳೆಯನು ಊರು ಸೇರಿದ ಬಳಿಕ, ತಾನು ಹೋಗದೆ ಉಳಿದರೆ. ಮನೆಯವರು ತಿಳಿದು ಸಿಟ್ಟಾಗುವರು — ಎಂದು ಯೋಚನೆ ಮಾಡಿ "ಆಯಿತು. ನೋಡುತ್ತೇನೆ-ಕಡೆ ಗಳಿಗೆಗೆ ಬಂದರೂ ಬಂದೆ. ತಪ್ಪಿದರೆ ನಾಳೆ" ಎಂದನು.

ಸಂಜೆ ನಾಲ್ಕು ಘಂಟೆಯ ವೇಳೆಗೆ ನಾಗರಾಜನು ಬಸ್ಸಿನ ಬಳಿಯಲ್ಲಿದ್ದ ·ಹಿಂದಣ ದಿನದ ಇಸ್ಪೀಟು ಕೂಟದವರೆಲ್ಲ ಬೀಳ್ಕೊಡಲು ಬಂದಿ

ದ್ದರು. ಅವರು "ಏನಾಗುತ್ತದೆ ಇನ್ನೊಂದು ನಾಲ್ಕು ದಿವಸ ಇದ್ದರೆ"-ಎಂದು ಬಲವಂತ ಪಡಿಸುತ್ತಿದ್ದರು. ಅಂತು ನಾಗರಾಜನು ದಾಕ್ಷಿಣ್ಯದಲ್ಲಿ ಆಚೆಯೂ ಈಚೆಯೂ ತೂಗಾಡಿ ತನ್ನ ಗೆಳೆಯನೊಂದಿಗೆ ಪಯಣ ಹೊರಟೇಬಿಟ್ಟನು. ಬಸ್ಸಿನ ಚಲನೆಯೊಂದಿಗೆ ನಾಗರಾಜನ ಹಳೆಯ ನಾಲಗೆಯು ಚಲಿಸತೊಡಗಿತು. ಅಚ್ಯುತ ತಿರುಗಿ ತಾಯ ಮಡಿಲಲ್ಲಿ ಸೇರಿದಂತಾಯಿತು. ಶಿಕ್ಷಣದ ದೆಸೆಯಿಂದ ಮೂರು ವರ್ಷಗಳ ಕಾಲ ಅವನು ಊರಿಂದ ದೂರವಾಗಿದ್ದ. ಇನ್ನು ತಾಯನ್ನು ಅಗಲಿರುವ ಪ್ರಸಂಗವೇ ಬರಲಾರದೆಂದು ಆತ ತಿಳಿದನು.

ಆ ರಾತ್ರಿ ಅವನು ಊಟ ಮುಗಿಸಿ, ತಾಯಿಯೊಡನೆಯೂ ಅಕ್ಕನೊಡನೆಯೂ ಎಷ್ಟು ಸಮಯವನ್ನು ಮಾತನಾಡುತ್ತ ಕಳೆದನೋ ಯಾರಿಗೂ ತಿಳಿಯದು. ಅಂತು ಬೆಳಗ್ಗೆ ಅವನು ಹಾಸುಗೆಯಿಂದೇಳುವಾಗ ಹೊತ್ತು ಉದಯಿಸಿ ಬಲು ಸಮಯ ಕಳೆದಿತ್ತು. ಮುಖವನ್ನು ತೊಳೆದು ಅಂಗಳ, ಗುಡ್ಡ, ಬಯಲು ಎಂದು ತನ್ನ ಮನೆಯ ಆವರಣವನ್ನುಸುತ್ತಿಕೊಂಡುಅದರ,ಪರಿಚಯವನ್ನುಮಾಡಿಕೊಂಡುದಾಯಿತು. ಆ ಮಧ್ಯಾಹ್ನವೇ ಶೇಷಗೌಡನ ಮನೆಯ ತನಕ ಹೋಗಿ, ತನ್ನ ಪ್ರಿಯವಾದ ಮಾವಿನ ಮರ ಹೂತಿದೆಯೇ, ಮಿಡಿಗೊಂಡಿದೆಯೇ ಎಂದು ತಿಳಿದುಕೊಂಡ. ಕಡುಬೇಸಗೆ; ಬೇಸಾಯದ ಯೋಚನೆಗೆ ಇನ್ನೂ ಸಮಯವಿದ್ದುದರಿಂದ ಮನೆಯ ಯೋಚನೆ ಮಾಡಬೇಕಾಗಿರಲಿಲ್ಲ, ಅವಕಾಶವಿದ್ದರೆ ಒಂದು ದಿನ ನಾಗರಾಜನ ದರ್ಶನಕ್ಕೋ, ಒಂದು ದಿನ ಜಾನ್ಸನ್ ದೊರೆಗಳ ದರ್ಶನಕ್ಕೋ ಹೋಗಿ ಬರೋಣವೆಂದು ಹವಣಿಸಿದನು. ಇತ್ತ ಮನಸ್ಸಿನಲ್ಲಿ 'ಹಳ್ಳಿಯಲ್ಲಿ ಸಮಯ ಹೀಗೆ ವ್ಯರ್ಥವಾಗಿ ಹೋಗುತ್ತದಲ್ಲ—ಏನು ಮಾಡಲಿ, ಎಂಬ ಯೋಚನೆ ಅವನಿಗೆ ಉಂಟಾಗುತಿತ್ತು. ವಿದ್ಯಾರ್ಥಿಯಾಗಿ ಓದಿನಲ್ಲಿ ದಿನಕಳೆಯುತಿತ್ತು. ಇಲ್ಲಿ ಏನನ್ನು ಓದಬೇಕು? ಊರಿಗೆ ಒಂದು ಪತ್ರಿಕೆಯಾದರೂ ಬರುವಂತಿಲ್ಲ. ಸರಿಯಾದ ಒಂದೇ ಒಂದು ಪುಸ್ತಕ ಕಾಣ ಸಿಗುವಂತಿಲ್ಲ. ಯಾಕೆ—ತಾವೆಲ್ಲರೂ ಸೇರಿ, ಒಂದು ವಾಚನಾಲಯವನ್ನೋ ಪುಸ್ತಕ ಭಂಡಾರವನ್ನೋ ತೆರೆಯಬಾರದು? ಇಲ್ಲಿಯೇ ಇದ್ದರೆ ತಿರುತಿರುಗಿ ಪೇಟೆಯದೇ ಹಂಬಲವಾದೀತು. ನಾಗರಾಜನಂಥವರು ಹಳ್ಳಿಗೆ ಬೇಸರಿಸುವುದು

ಸುಮ್ಮನಲ್ಲ — ಎನಿಸಿತು.

ಹಿಂದೆ ಅವನ ಗೆಳೆಯನೇ ಹೇಳಿದಂತೆ ಒಂದು-ಕ್ಲಬ್ಬನ್ನು ತೆರೆಯೋಣವೇ-ಎಂದೆನಿಸಿತು. ಅವನ ಊರಿನಲ್ಲಂತೂ ಅದು ಜನ್ಮತಾಳದು. ಒಮ್ಮೆಯಾದರೂ ನಾಲ್ಕು ಮಂದಿ ಕಲೆಯುವುದಾದರೆ ಕಡಬ ಅದಕ್ಕೆ ಯೋಗ್ಯ ಸ್ಥಳ. ಆದರೆ ತಾನು ಅಲ್ಲಿಗೂ ಆರು ಮೈಲು ದೂರವಿದ್ದೇನೆ-ಹೀಗಿರಲು ಏನು ಪ್ರಯೋಜನವಾದೀತು ಎಂದು ಯೋಚಿಸಿ ನಿರಾಶನಾಗುತ್ತಾನೆ.

ಮನೆಗೆ ಬಂದ ನಾಲ್ಕಾರು ದಿನಗಳ ಕಾಲ ಸುಮ್ಮಗೇ ಸರಿಯಿತು. ಒಂದೆರಡು ಬಾರಿ ನಾಗರಾಜನ ಮನೆಯ ತನಕ ಹೋಗುವೆನೆಂದು ಎಣಿಸಿಕೊಂಡ. ಕೊನೆಗೆ 'ನಾನಿಲ್ಲದಾಗ ತಾಯಿಗೆ ಬೇಸರವಾಗದೇ? ಇನ್ನೂ ಎರಡು ದಿನ ಸರಿಯಲಿ' ಎಂದು ಸುಮ್ಮನಾದ.

ಊರಲ್ಲಿ ಬೇಸಗೆಯ ಬೇಗೆ ಅತಿಶಯವಾಗುತ್ತ ಬಂದಿತು. ದಿನ ರಾತ್ರಿಗಳೆರಡೂ ಉರಿಯೇರ ಹತ್ತಿತು. ಸಾಲದುದಕ್ಕೆ ಅಲ್ಲಿ ಇಲ್ಲಿನ ಬೆಟ್ಟುಗಳಲ್ಲಿ ಬೆಣಗಳಲ್ಲಿನ ಕರಡ ಹುಲ್ಲಿಂದ ಕಾಡ್ಗಿಚ್ಚು ಉಂಟಾಗಿ ಬೇಗೆಯನ್ನು ಮತ್ತಷ್ಟು ಹೆಚ್ಚಿಸಿತು. 'ಈ ವರ್ಷ ಬೇಗನೆ ಮಳೆ ಬಂದೀತು' ಎಂದು ಎಲ್ಲರೂ ಹವಣಿಸತೊಡಗಿದರು. ಅಂತು ಎಪ್ರಿಲು ಎರಡನೆಯ ವಾರ ಮುಗಿಯುವುದರೊಳಗಾಗಿ ನಾಲ್ಕೆಂಟು ಮಳೆಗಳು ಚೆನ್ನಾಗಿ ಬಡಿದುವು. ಆ ಮೇಲೆ ಬಲು ದಿನಗಳ ತನಕ ಬಿಳಿ ಮುಗಿಲುಗಳು ಉರುಳಿ ಕುಮಾರ ಪರ್ವತದ ಬಳಿ ಕಲೆತು ಸುಬ್ರಮಣ್ಯ ಪ್ರಾಂತದವರಿಗೆಲ್ಲಾ ಗುಡುಗು, ಮಿಂಚು, ಮಳೆಗಳ ಅಭಿಷೇಕವನ್ನು ಮಾಡಿದುವು. ಮಳೆಯ ನೀರಿನ ಹನಿಗಳೊಡನೆ, ಮುಂದಿನ ಬೇಸಾಯದ ನೆನಪು ಕೂಡಿತು. ಮನೆಯ ಹೊಲಗಳನ್ನು ಹಿಂದಿನ ವರ್ಷದಂತೆ ತಾವೇ ಉಳುಮೆಮಾಡುವುದಂತೂ ಸರಿಯೇ, ಇನ್ನೂ ಎರಡು ಮುಡಿ ಹೆಚ್ಚಿಗೆ ಬೇಸಾಯವನ್ನು ತಾವೇಕೆ ಮಾಡಿಸಬಾರದೆಂದು ತಾಯಿಗೆ ತೋರಿತು. ಅವರ ಒಬ್ಬ ಗೇಣಿಯ ಒಕ್ಕಲು ಅದೇ ಕೆಡ್ಡಾಸಕ್ಕೆ ಮಡಿದು ಹೋದನಂತೆ. ಅವನ ಮನೆಯವರಿಗೆ ಬೇಸಾಯದ ತ್ರಾಣವಿಲ್ಲ. ಇನ್ನು ಹೊಸ ಗೇಣಿ ಸಾಧ್ಯವಾಗಲಾರದು. ಆದುದರಿಂದ ತಾವೇ ಅದರ ಉಳುಮೆಯ ಸಿದ್ಧತೆ ಮಾಡಬೇಕಾಗಿ ತಾಯಿ ಹೇಳಿದಳು. ಅಚ್ಯುತನಿಗೆ ಈ ವಿಚಾರದ ತಿಳಿವು

ಸಾಲದು. ತಮ್ಮ ಜಾನುವಾರುಗಳಿಂದ ಆ ಕೆಲಸ ಸಾಗೀತೇ? ಮನೆಗೆ ಸಮೀಪವಲ್ಲದ ಆ ನೆಲವನ್ನು ಸಾಗು ಮಾಡುವುದು ತಮಗೆ ಸುಲಭವಾದೀತೆ?-ಎಂದು ಅವನು ತಿಳಿಯನು. ಆದುದರಿಂದ "ಅಮ್ಮ, ಅದೆಲ್ಲಿರುವುದೆಂದು ನನಗೆ ಗೊತ್ತಿಲ್ಲ. ನಾನು ಜಾಗ ನೋಡಿಕೊಂಡು ಬರುತ್ತೇನೆ. ನೀನು ಮನೆಯ ಭೂಮಿಯನ್ನು ನೋಡಿಕೊಂಡರೆ, ನಾನು ಅವನ್ನು ನೋಡಿಕೊಳ್ಳುತ್ತೇನೆ" ಎಂದು ಹುಮ್ಮಸದಿಂದ ನುಡಿದನು. ಆ ಮಧ್ಯಾಹ್ನವೇ ತಾಯಿಮಕ್ಕಳಿಬ್ಬರೂ ಕೊಂಬಾರಿನ ಕಡೆಬಯಲಿನ ಕಡೆಗೆ ಸಾಗಿದರು. ಕಡೆಬಯಲು ಅವರ ಮನೆಯಿಂದ 'ಎರಡು ಮೈಲು' ಎಂದು ವಾಡಿಕೆ. ಆದರೆ ಹೋಗಲು ಒಂದು ತಾಸು ಹಿಡಿಯುತ್ತಿತ್ತು. ಬರಿಯ ಒಂದೆರಡು ಗುಡ್ಡಗಳನ್ನು ಹತ್ತಿ ಇಳಿಯಬೇಕಷ್ಟೆ.

ಆ ಬಯಲನ್ನು ನೋಡಿ ಅಚ್ಯುತನಿಗೆ ತುಂಬ ಆನಂದವಾಯಿತು. ಅವನದೇ ಆದ ಜಮೀನಿನ ಭಾಗ; ಅವನು ಈ ತನಕವೂ ನೋಡಿರಲಿಲ್ಲ. ಆ ಬಯಲಿನ ಕೆಳಗಡೆ ಹತ್ತೆಂಟು ಮುಡಿ ಭೂಮಿಯಲ್ಲಿ ಬತ್ತ ಈಗಷ್ಟೆ ಕೊಯಿಸಿದ್ದರು. 'ಮೂರನೆಯ ಬೆಳೆಯೇ?' ಎಂದು ಅಚ್ಯುತ ಕೇಳಿದ. 'ಇಲ್ಲ-ಸುತ್ತಲೂ ಕಾಡನ್ನು ನೋಡಬಾರದೇ? ಇದು ಕಂಪ; ಮೊದಲ ಬೆಳೆ ಆಗುವಂತಿಲ್ಲ. ಹಾಗೆ ನೆಟ್ಟರೆ ನಡು ಮಳೆಗಾಲಕ್ಕೆ ನಟ್ಟು ಎರಡು ಬೆಳೆ ತೆಗೆಯಬಹುದು" ಎಂದಳು ತಾಯಿ. ಬಲು ಸುಂದರ ತಾವು' ಎಂದ ಅಚ್ಯುತ. ಅದು ಬರಿಯ ಕಣ್ಣಿನ ನೋಟಕ್ಕೆ! ನಾಲ್ಕು ಸುತ್ತಲೂ ಎಂಬ ಹಾಗೆ ಅದಕ್ಕೆ ಕಾಡೇ ಮೇರೆ. ಬಯಲಿನ ಬದಿಯಲ್ಲಿ ಮೂರು ನಾಲ್ಕು ರೈತರ ಮನೆಗಳಿವೆ. ಇವರು ತಮ್ಮ ಒಕ್ಕಲಗಿತ್ತಿಯನ್ನು ನೋಡಹೋದರು. ಮನೆ ಖಾಲಿಯಾಗಿತ್ತು. ಹಾಗೆಂದು ನೆರೆಮನೆಯವರಲ್ಲಿಗೆ ಹೋಗಿ ಕೇಳಿದರು. ಒಳಗೆ ಯಾರೋ ನರಳುವ ಸ್ವರ ಕೇಳಿತ್ತು. ಮನೆಯಲ್ಲಿ ಮಲೆಜ್ವರದ ಮೂರು ಹಾಸಿಗೆಗಳಿದ್ದುವು. ಅದೊಂದರಿಂದ ಒಬ್ಬ ಮುದುಕ ತೆವಳುತ್ತ ತೇಲುತ್ತ ಹೊರಗೆ ಬಂದು,'ಯಾರು ಕೊಂಬಾರಿನ ಧನಿಗಳೇ, ನಿಮ್ಮ ಒಕ್ಕಲಗಿತ್ತಿ ನೋಡಲು ಬಂದಿರೆಂದು ಕಾಣುತ್ತದೆ. ಅವು ಒಕ್ಕಲು ಹೋಗಿಯಾಯಿತು. ಅವನು, ಮಂಜಣ್ಣ ಸತ್ತ; ಅದರಿಂದ ಗದ್ದೆ ಹಡಿಲುಬೀಳುತ್ತಿದೆ. ಇವುಗಳ ಕೈಯಲ್ಲಿ ಇನ್ನು ಸಾಗುವಳಿ ಸಾಧ್ಯವೇ? ಎಲ್ಲಿಗೆ ಹೆದರಿ ಓಡಿದುವೋ ಏನೋ".

"ಓಡಿಹೋದುವೇ ಹೆದರಿ! ಗೋಣಿಯೂ ಆಗಬೇಕಿತ್ತು." ಎಂದಳು ಲಕ್ಷ್ಮೀ!

"ಗೋಣಿ ಇನ್ನು ಕೈಗೆ ಬಂದಾಯಿತು. ಅದರ ಹೆದರುವುದು ಯಾವ ಮಣ್ಣಿಗೆ? ಏನು? ಪಡುವಿನ ಊರಿಗೆ ಹೋದರೆ ಸಾವು ತಪ್ಪುತ್ತದೆಂತೇನು? ನಾವಿಲ್ಲವೇ ಇಲ್ಲಿ—ಐವತ್ತು ವರ್ಷಗಳಿಂದ. ಬರುತ್ತೆ ಜ್ವರ—ಹೋಗುತ್ತೆ. ಎಂಟು ದಿವಸ ಏಳುವುದು, ಹದಿನೈದು ದಿವಸ ಮಲಗುವುದು" ಎಂದನು ಒಕ್ಕಲು.

ಅಚ್ಯುತನಿಗೆ ಆ ಬಯಲಿನ ಚೆಲುವನ್ನೂ, ಅಲ್ಲಿನ ಗೋಳನ್ನೂ ಕೇಳಿ, ಹಿಗ್ಗು, ಕುಗ್ಗು ಒಂದೇ ಕಾಲದಲ್ಲಿ ಉಂಟಾಯಿತು. ಆತ ಮೆಲ್ಲಗೆ 'ಹೌದಾ, ಇವನೆ, ನಾವೇ ಈ ವರ್ಷ ಬೇಸಾಯ ಮಾಡಿದರೆ ಹೇಗೆ? ನೀವು ಅಚೀಚಿನವರು ಸ್ವಲ್ಪ ಸಹಾಯಮಾಡಬೇಕು' ಎಂದನು.

ಅವನ ತಾಯಿ 'ಇಲ್ಲ ಮಗು. ಇಲ್ಲಿ ನಾಲ್ಕು ಸುತ್ತಲೂ ಬೇಲಿಯಾಗಬೇಕು. ಅಂತಿಂಥ ಬೇಲಿಯಿದ್ದರೂ ಪ್ರಯೋಜನವಿಲ್ಲ. ಇನ್ನು ಪೈರು ಬಂದಾಗ ರಾತ್ರಿ ಕಾವಲು ಬೇಕು. ಇಲ್ಲೇ ಇರುವವರಿಂದ ಆಗಬೇಕೆ ವಿನಾ, ನಾವು ಮನೆಯಿಂದ ಬಂದು ಹೋಗುವುದರಲ್ಲಿ ಬೆಳಗಾದೀತು' ಎಂದಳು.

'ಅದು ಹೌದಮ್ಮ. ಇಲ್ಲಿ ಒಬ್ಬ ಒಕ್ಕಲನ್ನು ನಿಲ್ಲಿಸಿಯೇ ಆಗಬೇಕು' ಎಂದನು ಅಚ್ಯುತ.

'ನಿನಗೆ ಅದನ್ನು ಮಾಡಿಕೊಳ್ಳಲು ಸಾಧ್ಯವಾಗದೇ? ಅಲ್ಲದೆ ಹೋದರೆ ನಿನ್ನ ಗುರುತಿನೊಳಗೆ ಯಾರಾದರೂ ಸಿಗಲಾರರೇ? ಹೇಗೂ ನಮ್ಮ ಮನೆಗದ್ದೆಗಳಷ್ಟು ಬೇಗ ಇಲ್ಲಿ ಬಿತ್ತಿ ನಡುವ ಅವಸರವಿಲ್ಲವಲ್ಲ' ಎಂದಳು ಲಕ್ಷ್ಮೀ.

'ಅದೆಲ್ಲ ಸಮನೆ. ನಾನು, ಧನಿಯೇ, ಮಾಡಿಕೊಳ್ಳುವುದು ಹೇಗೆ? ಆಳಿಲ್ಲ; ಕೋಣವಿಲ್ಲ. ನನ್ನೆರಡು ಉಳುವ ಜತೆ ಈಗಲೋ ಇನ್ನೊಂದು ಗಳಿಗೆಗೋ ಅನ್ನುತ್ತಿವೆ. ಇದ್ದ ಮೂರು ಮುಡಿ ಬಯಲಿಗೇ ನಾನು ಕಂಗಾಲಾಗಿದ್ದೇನೆ. ಇನ್ನೆರಡು ಸೇರಿಸಿಕೊಂಡರೆ—ದೇವರೇ ಗತಿ!'—ಎಂದ ಮುದುಕ. ಸರಿ. ಅವನ ಬಾಯಿಯಿಂದ ಇತರ ಹೊಸ ಒಕ್ಕಲುಗಳ ಮಾತು ಹೊರಡಲಿಲ್ಲ. ಅವರಿಬ್ಬರೂ ಮನೆಗೆ ಹಿಂದಿರುಗಿದರು.

ಹಿಂತಿರುಗುವಾಗ ತನ್ನ ಹಳೆಯ ಗುರುತಿನ ಮೈದುಕುಟ್ಟಿ ಅದನ್ನು ಸಾಗುವಳಿ ಕೊಂಡಾನು'-ಎಂದ ಅಚ್ಯುತ.'ಮೈದುಕುಟ್ಟಿ ಈ ನಾಲೆಗೆ ಬರುವ ಮಗನಲ್ಲ. ಇಲ್ಲಿ ಯಾರಾದರೂ ಪಾಪದವರು ಬಂದು ಆಗ ಬೇಕು. ಯಾವುದಕ್ಕೂ ಈ ವರ್ಷದ ಮಟ್ಟಿಗೆ, ನಾವೇ ತಲೆಯಲ್ಲಿ ಹೊರುವ ಹೊರೆ. ಇಲ್ಲವಾದರೆ ಬಂಜರು ಬಿದ್ದು, ಮುಂದಿನ ವರ್ಷ ಮತ್ತಷ್ಟು ಹಾಳುಗೆಡೆದೀತು' ಎಂದಳು ತಾಯಿ.

'ನಮ್ಮಿಂದದಾದೀತೇ?'--ಎಂದ ಅಚ್ಯುತ--ಉದ್ದವಾದ ಉಸಿರೆಳೆಯುತ್ತ.

'ಮಗು, ಸಾಲ ಮಾಡಿಯಾದರೂ ಒಂದು ಜತೆ ಕೋಣ ಕೊಳ್ಳದೆ ಮಾರ್ಗವಿಲ್ಲ. ದಿನೇ ದಿನೇ ಖರ್ಚು ಏರುತ್ತಿದೆ. ಈ ವರ್ಷದ ಅಕ್ಕಿ ಅಲ್ಲಿಂದಲ್ಲಿಗೆ ಬರುವುದು ಕಷ್ಟವಾಗಿದೆ.

'ನೀನು-ಒಳ್ಳೆಯ ಬೆಳೆಯಾಗಿದೆ. ಶೇಷಗೌಡನ ಗೇಣಿಯೂ ಬಂದಿದೆ-ಎಂದಿದ್ದೆಯಲ್ಲ.'

'ಅಹುದು. ಮನೆಯದು ನಲವತ್ತು ಮುಡಿ, ಅವನದು ಹತ್ತು ಬಂದಿತು. ಇದೊಂದು ಆರೆಂಟು ಮುಡಿಯಾದರೂ ಬರುವುದು ಹೋಯಿತಲ್ಲ........

'ಪೂರಾ ಖರ್ಚಾಯಿತೇ? ಈಗ ಅಕ್ಕಿಗೆ ದರ ಹೇಗಿದೆ?'

'ಅಕ್ಕಿಗೆ ದರವೆ-ಎರಡು ಮೂರು ವರ್ಷವಾಯಿತಲ್ಲ. ಮೂರು ನಾಲ್ಕರ ಒಳಗೇನೆ. ಅದಕ್ಕಿಂತ ಅಕ್ಕಿ ಮಳೆಗಾಲದಲ್ಲಿರಿಸಿಕೊಂಡು ಹೊಲಿಗೆ ಕೊಟ್ಟರೆ ಪ್ರಯೋಜನವಿದೆ. ಈ ವರ್ಷ ಮಳೆಗಾಲದ ಖರ್ಚಿಗೂ ಬರಲಾರದು ಮಗು'—

'ಅದೇನಮ್ಮ?'

'ಏನೆಂದು ಕೇಳುತ್ತೀ ಮಗು. ಮನೆಯಲ್ಲಿ ಎಷ್ಟು ಜನರಿಲ್ಲ. ಪ್ರತಿಯೊಂದನ್ನು ನಾನೇ ನೋಡಬೇಡವೆ? ನಿನ್ನ ಭಾವ ಯಾವ ಯೋಚನೆಯೂ ಇಲ್ಲದೆ ಅಲೆಯುತ್ತಿದ್ದಾನೆ. ಹೊರೆಯೆಲ್ಲ ನಮ್ಮ ಮೇಲೆ. ಅವಳಿಗೂ, ಮಕ್ಕಳಿಗೂ ಉಡಲು ಅರಿವೆ ಸಹ ಕೊಟ್ಟಿಲ್ಲ. ಅವಳೇನಾದರೂ —ಜಾಗ ಬೇರೆ ಹುಡುಕಿದ್ದೀರಾ--ಎಂದು ಕೇಳಿದರೆ, ಏನು ಮಾಡಲಿ? ಒಂದು ಗೇಣಿ ಜಾಗ ಮಾಡಿ ಕೂಡ್ರುವ ಎಂದರೆ, ಗಾಣಕ್ಕೆ ಕೈಕೊಟ್ಟು

ಸಿಕ್ಕಿಬಿದ್ದೆ ಎನ್ನುತ್ತಾನೆ.'

'ಹಾಗೆಂದರೇನಮ್ಮ'

"ಅದೆಲ್ಲ ನಮ್ಮ ಮೇಲಿನ ದೂರು ಮಗು. ನಿನ್ನಪ್ಪ ಸಾಯು ವಾಗ ಇನ್ನೂರು ರೂಪಾಯಿ ಅವನಿಂದ ಸಾಲಕೊಂಡಿದ್ದೆ; ಅದರಿಂದಾಗಿ ತಮ್ಮ ಹೊಸ ಮನೆ ಹೂಡಲು ತೊಡಕಾಗಿದೆ, ಎಂದು ನೆಪ. ನಾನು 'ನಿನಗೆ ಬೇಕಾದಾಗ ಕೇಳು' ಎಂದೂ ಇದ್ದೆ. ಆದರೆ ನನಗೆನಿಸುತ್ತದೆ. ಅವನು ಸದ್ಯ ಇಲ್ಲಿಂದೇಳುವ ಹಾಗಿಲ್ಲ. ನೊನ್ನೆ ನಮ್ಮ ಆಲಂಗಾರು ಶಿವಣ್ಣ ಬಂದಿದ್ದ. ಅವನು 'ಎಲ್ಲಿ ಆಸ್ತಿಕೊಂಡಿರಿ' ಎಂದು ಕೇಳಿದರೆ, 'ಮಾವನ ಮನೆಯ ವಹಿವಾಟು ನರಿನಾಯಿ ತಿನ್ನುತ್ತದೆ. ಅಲ್ಲಿ ಬೇರೆ ಗಂಡಸರು ಯಾರಿದ್ದಾರೆ? ಎಲ್ಲ ತನ್ನ ತಲೆಯ ಮೇಲೆ ಬಿದ್ದಿದೆ' ಎನ್ನು ತ್ತಾನಂತೆ. ಅಂತು ಒಬ್ಬೊಬ್ಬರ ಮುಂದೆ ಒಂದೊಂದು ಹೇಳುತ್ತಿದ್ದಾನೆ. ಮಗು ತನ್ನದಿಷ್ಟು ಚಿನ್ನವಿದೆಯಲ್ಲ. ನೂರಿನ್ನೂರು ಬೆಲೆ ಬಂದೀತು. ಅದನ್ನು ಮಾರಿ ಅವರ ಹಣ ಮುಟ್ಟಿಸಿ ಬಿಡುವ; ಮೇಲೆ ರಾಮುಪತ್ರೆ ಸೀಗೆ, ಇದೆ. ಈ ಮೂರು ತಿಂಗಳು, ಕಾಡೆಲ್ಲ ಸುತ್ತಿ ಒಟ್ಟು ಮಾಡಿ ದ್ದೇನೆ. ಏನಾದರೂ ಮಾರಾಟಮಾಡಿ, ಸಿಕ್ಕಿದರೆ, ಒಂದು ಜತೆ ಕೋಣ ಕೊಳ್ಳುವ" ಎಂದಳು ತಾಯಿ.

ಅಚ್ಯುತನ ಮನಸ್ಸು ಹಿಂದಕ್ಕೆ ಓಡಿತು. ತಾನು ದೂರವಾಗಿದ್ದ ಈ ಒಂದು ವರ್ಷ ತಮ್ಮ ಭಾವನವರಿಂದ ತಾಯಿಗೆ ಎಷ್ಟೆಲ್ಲ ಹಿಂಸೆ ಯಾಗಿರಬಹುದೆಂದು ಊಹಿಸಿತು. ಆದರೆ ತಾಯಿ ಅದೊಂದೂ ವಿಷ ಯವನ್ನು ತನಗೆ ತಿಳಿಸಿರಲಿಲ್ಲವಲ್ಲ ಎಂದೆನಿಸಿತು. ಆದುದರಿಂದ ತಿಳಿ ಯಲು ಕುತೂಹಲವಾಗಿ 'ಅಮ್ಮ, ಭಾವ ಇಲ್ಲೇ ಇರುತ್ತಿದ್ದರೇ ಏನು?'

'ತಿಂಗಳಲ್ಲಿ ಹದಿನೈದು ದಿನ ಇಲ್ಲಿರುವುದು. ಇನ್ನು ಹದಿನೈದು ದಿವಸ ಎಲ್ಲಿಗೆಂದಿಲ್ಲ—ಹೋಗುವುದು.'

'ಮನೆಕೆಲಸದಲ್ಲಿ ಏನಾದರೂ ಸಹಾಯವಿತ್ತೇ?'

'ಮನೆಕೆಲಸದಲ್ಲಿ? ಪಾಪ ಅದೊಂದು ದನವಿಲ್ಲವೇ: ಮಕ್ಕಳನ್ನು ಸಮಜಾಯಿಸಿಕೊಂಡು ನನ್ನೊಂದಿಗೆ ದುಡಿಯಲು. ಅವನು ಇವತ್ತಿನ ತನಕ ಈ ಮನೆಯಲ್ಲಿ ಒಂದು ದೀಪ ಇದೆಯೋ; ಎಣ್ಣೆಯಿದೆಯೋ ಎಂದ ವನಲ್ಲ. ಸುಮ್ಮನೆಯೇನು ಅವರ ಕುಟುಂಬದ ಮನೆಯಲ್ಲಿ ಹಿಸೆಯಾ

ಯಿತು. ಹೀಗಿದ್ದರೆ ಯಾರು ಕೇಳಿಯಾರು?'

'ಹಾಗಾದರೆ ಚಿನ್ನ ಮಾರಿ, ಅವರ ಸಾಲ ಮುಟ್ಟಿಸಿದರೆ, ಅವರು ಹೋಗುತ್ತಾರೇನು?' ಹೋಗಲಿ ಬಿಡಲಿ, ನಮ್ಮಿಂದಾಗಿ ತಾವು ಕೆಟ್ಟೆವು ಎಂಬ ಮಾತು ಬೇಡವಷ್ಟೆ.'

ಆ ರಾತ್ರೆ ತಿರುಗಿ ತಾಯಿಮಕ್ಕಳ ಸಭೆಯಾಗಿ, ಅಚ್ಯುತ ನಗವನ್ನು ಒತ್ತೆ ಇರಿಸಿಯೋ ಮಾರಿಯೋ ಇನ್ನೂರು ರೂಪಾಯಿ ತರುವುದೆಂದೂ, ಮನೆಯಲ್ಲಿ ಕೂಡಿಟ್ಟ ರಾಮಪತ್ರೆ ಸೀಗೆಗೆ ಗಿರಾಕಿ ಹುಡುಕುವುದೆಂದೂ ನಿರ್ಣಯವಾಯಿತು.

'ಆ ಹೊಸಮಠದ ಬ್ಯಾರಿ ಬಂದು ಕೇಳಲಿಲ್ಲವೇ?'-ಎಂದ ಅಚ್ಯುತ.

'ಅವನೇ! ಮಣಕ್ಕೆ ರೂಪಾಯಿ, ಎಂಟಾಣೆ ಅನ್ನುವುದರಲ್ಲಿದ್ದಾನೆ. ಉಪ್ಪಿನಂಗಡಿಯಲ್ಲಿ ಒಳ್ಳೆಯ ದರ ಉಂಟು ಎನ್ನುತ್ತಾರೆ. ನೀನು ಉಪ್ಪಿನಂಗಡಿಯ ತನಕ ಹೋಗಿ ವಿಚಾರಿಸು' ಎಂದಳು ಲಕ್ಷ್ಮಮ್ಮ.

ಇನ್ನೊಂದೆರಡು ದಿವಸಗಳಲ್ಲಿ, ತಿರುಗಿ 'ಭಾವೋ' ದಯವಾಗುವುದರೊಳಗೆ ತಾನು ಇನ್ನೂರು ರೂಪಾಯಿ ಗಳಿಸಬೇಕು. ಮೊದಲು ನಾಗರಾಜನ ಮನೆಗೇನೆ ಹೋಗಿ ಅವನ ಹಿರಿಯರಿಂದ ಏನಾದರೂ ಕೇಳುವ. ಅಲ್ಲಿ ಏನೂ ಸಾಧ್ಯವಾಗದೆ ಹೋದರೆ, ಸುಬ್ರಾಯರನ್ನು ಹಿಡಿದು, ಪುತ್ತೂರಲ್ಲಿ ಸಾಲದೊರಕಿಸುವ ಎಂದು ಯೋಚಿಸಿದ. ಉಪ್ಪಿನಂಗಡಿಯಲ್ಲಿ ಮಾಮುಂಜಿಯ ನೆರವಿನಿಂದ, ತಮ್ಮ ರಾಮಪತ್ರೆ ಸೀಗೆಗಳನ್ನು ವಿಕ್ರಯಿಸಲು ಯೋಚಿಸಿದನು. ಯೋಚನೆಯ ಬೆಂಗಡೆಯೇ ಕಾರ್ಯದ ಸಿದ್ಧತೆಯಾಯಿತು.

ನಾಗರಾಜನ ದರ್ಶನಕ್ಕೆಂದು ಅವನು ಹೋದಾಗ, ನಾಗರಾಜ ಅಂಗಳದಲ್ಲಿ ನಿಂತುಕೊಂಡು ಸಿಳ್ಳುಹಾಕುತಿದ್ದ. 'ಹೋ! ನೀನು ಬಂದುದು ಸಂತೋಷವಾಯಿತು' ಎಂದು ಅಚ್ಯುತನನ್ನು ಸ್ವಾಗತಿಸಿದ ನಾಗರಾಜ ಈ ನಿಸ್ಸಾರ ಹಳ್ಳಿ ಜೀವನವನ್ನು ಬಣ್ಣಿಸಿ 'ಊರಲ್ಲಿ ಹೇಗೊ ಒಂದು ಕ್ಲಬ್ಬು ಮಾಡಿದರೆ, ಮರ್ದಾಳದಲ್ಲಿ ಮಾಡಿದರೆ ನನಗನುಕೂಲ, ನಿನಗೆ ದೂರ'--ಎಂಬ ಪ್ರಸ್ತಾಪ ತೆಗೆದನು. ಅಚ್ಯುತನ ಮನಸ್ಸಿನಲ್ಲಿ ಕ್ಲಬ್ಬಿಗಿಂತ, ಹಣ ಅವಶ್ಯವಾಗಿತ್ತು. ಹಾಗಾಗಿ ಅರೆ ಮನಸ್ಸಿನಿಂದ 'ಅಹುದು. ನೋಡುವ ನಿಧಾನ. ನನಗೂ ಹಾಗೆನಿಸುತ್ತದೆ'-ಎನ್ನುತ್ತಲೇ

ಇದ್ದ. ಕೊನೆಗೆ 'ನೀನು ಬರುವ ವರ್ಷ ಓದು ಮುಂದರಿಸುವುದಿಲ್ಲವೇ'- ಎಂದು ಕೇಳಿದ.

'ಬರುವ ವರ್ಷದ ವ್ಯಾಪಾರ ಸಂಬುಗೆಯಿಲ್ಲ.'

'ಅದೇನು?'

'ನಮ್ಮ ಮಾವ ಇವತ್ತೋ ನಾಳೆಯೋ. ನಿನ್ನೆಯಿಂದ ಉಸಿರು ಎಳೆಯುತ್ತದೆ. ಈ ಸಾರಿ ಮೇಲೆ ಬೀಳುವಂತೆ ಇಲ್ಲ. ಅವರು ಹೋದರೆ ಇಲ್ಲಿ ಯಾರು?'

ಈ ಮಾತನ್ನು ಕೇಳಿದ ಬಳಿಕ ಅಚ್ಯುತ ಅಲ್ಲಿಗೆ ಬಂದುದರಲ್ಲಿ ತನ್ನ ಕಾರ್ಯವಾಗದೆಂಬುದನ್ನು ಅರಿತು, ಹೇಗಾದರೂ ಕಡಬಕ್ಕೆ ಹೋಗಿ ಅಲ್ಲಿಂದ ಪುತ್ತೂರಿಗೆ ಹೋಗುವೆನೆಂದುಕೊಂಡ. ಒಂದೆರಡು ದಿನ ಕಾಯ್ದು, ಒಂದು ಗಾಡಿಯಲ್ಲಿ ಹೇರನ್ನು ಹೊರಿಸಿಕೊಂಡು ಉಪ್ಪಿನಂಗಡಿಗೆ ಪಯಣ ಬೆಳೆಯಿಸಿದ. ಇವನು ಗಾಡಿಯಿಂದ ಇಳಿವಾಗಲೇ 'ಹೋ, ಯಾರ ಗಾಡಿಯದು? ರಾಮ ಪತ್ರೆಯೇ, ಕೊಡುವುದೋ'- ಎಂಬ ಸ್ವರ ಕೇಳಿಸಿತು. ಕಣ್ಮುಚ್ಚಿಕೊಂಡೇ ಗಾಡಿ ಇಳಿಯುವುದರೊಳಗಾಗಿ ಮಾಮುಂಜಿ ದರ್ಶನವಾಗಬೇಕೆ? ಮಾಮುಂಜಿಗೆ ನಗುಬಂದಿತು. 'ಈಗ ನಾನು ರಾಮಪತ್ರೆ ದಲಾಲಿ ಮಾಡುತ್ತಿದ್ದೇನೆ. ಅದಕ್ಕೆಂದು ಬಂದಿದ್ದೆ. ನೀನು ಸಿಕ್ಕಿದ್ದು ಒಳ್ಳೆಯದಾಯಿತು. S. S. L. C. ಪರೀಕ್ಷೆ ಮುಗಿದ ಕೂಡಲೇ ಬರುವೆಯೆಂದು ತಿಳಿದಿದ್ದೆ. ಆದರೆ ನೀನು ಸೀದಾ ಪರಾರಿ. ನಾಗರಾಜನೂ ಊರಲ್ಲಿ ಇದ್ದಾನೆಯೇ'- ಎಂದು ಮುಂತಾಗಿ ಉಪಚರಿಸಿ ಅವನು ಬಂದ ಕಾರಣವನ್ನು ತಿಳಿದುಕೊಂಡನು. ಮುಂದೆ ಅಚ್ಯುತನಿಗೆ ಯಾವ ತೊಂದರೆಯೂ ಆಗಲಿಲ್ಲ. ಮಾಮುಂಜಿ ಕೂಡಲೇ ತನ್ನ ಗೆಳೆಯನಿಗೆ ಕಾಫಿ ಕುಡಿಯಿಸಿ ಉಪಚರಿಸಿದನು. ತನ್ನ ಪರಿಚಿತರಲ್ಲಿಗೆ ಹೋಗಿ, ಅಚ್ಯುತನ ಪತ್ರೆಗೆ ಒಳ್ಳೆಯ ದರ ದೊರೆಯುವಂತೆ ಮಾಡಿದ. ಒಟ್ಟಿಗೆ ಐವತ್ತೈದು ರೂಪಾಯಿಗಳ ಗಳಿಮೆಯನ್ನು ಕಂಡು ಅಚ್ಯುತನಿಗೆ ಹಿಗ್ಗುಂಟಾಯಿತು. 'ಮಹರಾಯ, ನಿನ್ನಿಂದ ಒಂದು ಜತೆ ಕೋಣ ಸಿಗುವಂತಾಯಿತು'—ಎನ್ನುವುದರೊಳಗೆ 'ಏನು ಕೋಣ ಬೇಕೆ, ನಾನು ಕೊಡಿಸುತ್ತೇನೆ. ನಲುವತ್ತಕ್ಕೆ ಚಿನ್ನದಂಥ ಜತೆ ಇದೆ' ಎಂದ ಮಾಮುಂಜಿ.

ಎಳೆಯ ಮಾಮುಂಜಿ ಈಗ ಎಲ್ಲದರ ದಲಾಲಿಯನ್ನೂ ಮಾಡು ತ್ತಾನೆ. ಬೀಡಾ ಬೀಡಿ ಉದ್ಯೋಗಕ್ಕಿಂತ ಅದೇ ಲಾಭದಾಯಕವೆಂದು ತಿಳಿದಿದ್ದಾನೆ. ಗೆಳೆಯನಿಗೆ ಸಹಾಯ ಮಾಡುವ ಹುಮ್ಮಸವೂ ಬೇರೆ ಯಿದೆ. ಅಚ್ಯುತನಿಂದ ಅವನು ಯಾವ ಲಾಭ ಬಯಸಿರಲಿಲ್ಲ. ಆದರೆ ಅಚ್ಯುತನಿಗೆ, ತಾಯಿಗೆ ತಿಳಿಸದೆ ಕೋಣಕೊಳ್ಳಲು ಧೈರ್ಯವಿಲ್ಲ. ಮಾಮುಂಜಿ ಎನ್ನುತ್ತಾನೆ,'ನೋಡು.ನೀನು ಹಣ ಊರಿಗೆ ಹೋಗಿ ಕಳು ಹಿಸು. ಕೋಣ ಬೇಡವಾದರೆ ಹಿಂತಿರುಗಿ ಹೊಡೆಯಿಸು. ನನ್ನ ಮಾತು ಕೇಳು. ಇಷ್ಟು ಒಳ್ಳೆಯ ಮಾಲು ಈ ಕ್ರಯಕ್ಕೆ ಸಿಗಲಾರದು-'ಎಂದು ಬಲವಂತ ಪಡಿಸಿ, ಅವನ ಸಲುವಾಗಿ ಕೋಣ ಕೊಂಡೂ ಆಯಿತು. ಅಚ್ಯುತನಿಗೆ ನಗು, ಭೀತಿಗಳು — ಮಾಮುಂಜಿಯ ಪ್ರತಾಪ ನೋಡಿ!

ಕೋಣಗಳನ್ನು ಪುತ್ತೂರಿಗೆ ಹೋಗಿಬಂದು ಸಾಗಿಸುವೆನಾಗಿ ಹೇಳಿದ. 'ಅಲ್ಲಿಗೇಕೆ ಹೋಗಬೇಕು? ಇನ್ನೇನುಬೇಕು ಎಂದು ಹೇಳಲು ಬಲವಂತಪಡಿಸಿದ. ಕಾರಣ ತಿಳಿದುಕೊಂಡು 'ಇಲ್ಲೇ ಬ್ಯಾಂಕಿಲ್ಲವೇ'- ಎಂದ. ಅಲ್ಲಿನ ಬ್ಯಾಂಕಿಗೆ ಹೋಗಿ ನಗ ತೋರಿಸಿ ಇನ್ನೂರನ್ನು ಪಡೆದು ಬಂದುದಾಯಿತು. ಆದುದರಿಂದ ಆ ರಾತ್ರಿಯೇ ಅಚ್ಯುತನು ಬಂದ ಗಾಡಿ ಯಲ್ಲೇ ಮರಳುವುದು ಸಾಧ್ಯವಾಯಿತು. ಮರುದಿನ ಜಾವದ ಹೊತ್ತಿಗೆ ಸಮನಾಗಿ, ಮನೆಗೆ ಮಗರಾಯನು ಒಂದು ಜತೆ ಕೋಣಗಳನ್ನು ಕೊಂಡೇಬಂದುದನ್ನು ಕಂಡು ತಾಯಿಗೆ ಸೋಜಿಗವಾಯಿತು.'ಇವನ್ನು ನಿತಕ್ಕೆ ತಂದೆ ನನ್ನೊಡನೆ ಕೇಳದೆ' ಎಂದು ತಾಯಿ ಗದರಿಸುವಳು ಎಂದು ಅವನು ತಿಳಿದಿದ್ದ. ಆದರೆ ತಾಯಿ 'ಎಷ್ಟು ಕೊಟ್ಟೆ? ಸತ್ಯ ಹೇಳು' — ಎಂದು ಕೇಳಲು, ಧೈರ್ಯವಾಗಿ 'ನೀನೆ ಬೆಲೆ ಕಟ್ಟು'-ಎಂದ. ತಾಯಿ 'ಐವತ್ತನ್ನು ಕಳ್ಳ ಕೊಟ್ಟಾನು' ಎಂದಳು.

'ನಾಲ್ವತ್ತು' ಎಂದು ಕೇಳಿ ಅವಳಿಗೆ ತುಂಬ ಆನಂದವಾಯಿತು. 'ರೂಪಾಯಿಗೇನು ಮಾಡಿದೆ'-ಎನ್ನಲು, ಅಚ್ಯುತ ತನ್ನ ಗೆಳೆಯನ ಕತೆ ಹೇಳಿ, ಆತನಿಂದ ತನ್ನ ಕೆಲಸಗಳು ಒಂದೇ ದಿನದಲ್ಲಿ ಹೇಗೆ ಮುಗಿಯಿ ತೆಂದು ತಿಳಿಸಿದನು. ನಗವನ್ನು ಅಡವು ಮಾಡಿ ಹಣವೂ ದೊರಕಿತು- ಒಮ್ಮೆ ಅಳಿಯನ ಋಣದಿಂದ ಬಿಡುಗಡೆಗೊಳ್ಳುವೆನೆಂದು ಅವಳು ತುಂಬ ಹರ್ಷ ತಾಳಿದಳು.

ಆ ವಾರವೆಲ್ಲವೂ ಅಳಿಯರಾಯರ ಸವಾರಿ ಊರಿಗೇನೆ ಬರಲಿಲ್ಲ. ಚೈತ್ರ ಮಾಸ ಮುಗಿದು ವೈಶಾಖದ ಒಂದು ಪಕ್ಷ ಸರಿದಿತ್ತು. ಆಗ ಒಂದು ದಿನ ನರಸಿಂಹಯ್ಯ ನಡುಮಧ್ಯಾಹ್ನಕ್ಕೆ ಊರಿಗೆ ಬಂದರು. ಅವರು ಅಚ್ಯುತನನ್ನು ಕಾಣದೆ ವರ್ಷವಾಗಿತ್ತು. ಬಂದವರೇ ದೂರದಲ್ಲಿರುವ ಹುಡುಗನನ್ನು ನೋಡಿ 'ಹೋ ಸಣ್ಣ ಯಜಮಾನರು ಬಂದಿದ್ದಾರೋ? ಮುಂದಿನ ವರ್ಷ ಬಿ. ಎ. ಗೀಯೇ ಮಾಡಲು ಉಂಟೇನೋ'-ಎಂದುಕೊಂಡರು. ಅಚ್ಯುತ ಭಾವ ಬಂದ ಸುದ್ದಿಯನ್ನು ತಾಯಿಗೆ ತಿಳಿಸಿದನು. ತಾಯಿ ಮಗಳನ್ನು ಕರೆದು 'ಸೀತೆ ನಿನ್ನ ಗಂಡ ಬಂದನಂತೆ--ನೋಡು. ಬಾಯಾರಿಕೆ ಏನಾದರೂ ಬೇಕೋ ಕೇಳು'-ಎಂದು ಕೇಳಿಸಿ ಉಪಚರಿಸಿದಳು.

ಆ ಸಂಜೆ ಸೀತೆಯು ಗಂಡನ ಬಳಿಯಲ್ಲಿ ತಾಯಿ ಕೊಟ್ಟ ಇನ್ನೂರು ರೂಪಾಯಿಗಳನ್ನು ಕೊಟ್ಟು "ಇದು ಅಮ್ಮ ಕೊಟ್ಟದ್ದು" ಎಂದಳು. ನರಸಿಂಹಯ್ಯ "ಇಷ್ಟು ನಿಧಾನವಾಗಿ ಕೊಡುವವರು ಹದಿನೈದು ದಿನದ ಮೊದಲು ಕೊಟ್ಟಿದ್ದರೆ! ಒಳ್ಳೆಯ ಒಂದು ಭೂಮಿ ಗೇಣಿಗೆ ಸಿಗುವುದಿತ್ತು; ಮಾಡಿಕೊಳ್ಳಬಹುದಿತ್ತು-ಸಮಯಕ್ಕೆ ಬಾರದ ಹಣವನ್ನು ಈಗ ತೆಗೆದುಕೊಂಡು ಏನು ಮಾಡಲಿ?" ಎಂದರು. "ಅವರೇ ಎಷ್ಟೆಂದು ಸಾಕುವುದು ನಮ್ಮನ್ನೆಲ್ಲ" ಎಂದಳು ಸೀತೆ. ನರಸಿಂಹಯ್ಯನಿಗೆ ಇಂಥ ಒಂದೊಂದು ಮಾತೂ ಒಂದೊಂದು ಬರೆಯಂತೆ ಕಾಣುತ್ತಿತ್ತು. ಇಲ್ಲದ ಅರ್ಥ ಅವಕ್ಕೆ ಕಲ್ಪಿಸಿಕೊಳ್ಳುವ ಶಕ್ತಿ ಬೇರೆ ಇದ್ದುದರಿಂದ "ಯಾರು ಹಾಗೆಂದು ನಿನ್ನ ಅಮ್ಮ ಹೇಳಿದರೇ?" ಎಂದು ಅನುಮಾನ ಪ್ರಕಟಿಸಿದರು. "ಅಮ್ಮ ಹೇಳಿದ್ದಲ್ಲ, ನಾನೆಂದದ್ದು. ವರ್ಷವಾಯಿತು; ನಾಳಿಗೋ ನಾಡದಿಗೇ ಅಪ್ಪಯ್ಯನ ವರ್ಷಾಂತಿಕ. ಅದನ್ನು ಮುಗಿಸಿಕೊಂಡು ಹೊರಡುವ" ಎಂದಳು. "ನಿನಗೆ ನಿನ್ನ ತಾಯಿಮನೆ ಭಾರವಾಗಿ ಕಂಡ ಮೇಲೆ ನನಗೇನು?" ಎಂದರು ನರಸಿಂಹಯ್ಯ. ಮರದಿನವೇ 'ಸ್ಥಳ ನೋಡಿ ಬರುವೆ'ನೆಂದು ಮುಂಜಾನೆ ಹೊರಟವರು ತಿರುಗಿ ಮಳೆ ಉದುರುವ ತನಕ ಆ ಊರಿಗೆ ಕಾಲಿರಿಸಲಿಲ್ಲ' ವರ್ಷಾಂತಿಕದ ದಿನ ಬಂತು; ಅಳಿಯನಿಲ್ಲದೆ ಆ ದಿನವನ್ನು ತೀರ ಬಡತನದಲ್ಲೇ ನಡೆಯಿಸಿದರು. ಕೃಷ್ಣಯ್ಯನವರ ಗತಾತ್ಮನಿಗೆ ತೃಪ್ತಿಯಾಗಬೇಕಲ್ಲ; ಮಾಡುವುದಿಲ್ಲ ಎನ್ನಲು ಆದೀತೆ?

ಮಳೆಗಾಲ ಪ್ರಾರಂಭವಾಗುವುದರಲ್ಲಿ ಅಚ್ಚುತ ತಾಜಾ ರೈತನಾಗಿದ್ದ. ತಾಯಿಯೊಂದಿಗೆ, ಆಳುಗಳೊಂದಿಗೆ ಹೊಲ ಮನೆಗಳ ಓಡಾಟ ತೊಡಗಿದ್ದ. ಮಾಮುಂಜಿ ಕೊಡಿಸಿದ ಕೋಣಗಳನ್ನು ಕಂಡು, ಅವನ ತಾಯಿಯು ಮತ್ತೂ ಮತ್ತು ಸಂತೋಷಪಟ್ಟಳು. ಅವರ ಊರಿಗೇನೆ 'ಅತ್ಯುತ್ತಮ ಹೂಟೆಯ ಕೋಣಗಳವು' ಎಂಬ ಕೀರ್ತಿ ಅವರಿಗೆ ಬಂದಿತು. ನಡುವಿನ ಎಂಟು ದಿನದಲ್ಲಿ, ಮಳೆಯಲ್ಲಿ ತೊಯ್ದುಕೊಂಡು, ಪುತ್ತೂರಿನ ತನಕ ಅವನು ಯಾತ್ರೆ ಬೆಳೆಯಿಸಬೇಕಾಯಿತು. ತಾನು S. S. L. C. ಯಲ್ಲಿ ಪಾಸಾಗಿರುವೆನೆಂಬ ಹಿಗ್ಗಿನ ಸುದ್ದಿ ಊರಿಗೆ ಮುಟ್ಟಿಸುವ ಭರದಲ್ಲಿ ಅವನಿಗೆ ಮಳೆಯ ಪರವೆಯೇ ಆಗಲಿಲ್ಲ. ಹಾದಿಯಲ್ಲಿ ಮಾಮುಂಜಿಯನ್ನು ಕಂಡು ಮಾತನಾಡಿಸಿದ. "ಮುಂದೇನು?" ಎಂದು ಅವನು ಕೇಳಿದುದಕ್ಕೆ ಮಾತಿಲ್ಲದಾದ.

"ಉಪ್ಪಿನಂಗಡಿಗೆ ಮಾಸ್ಟರರಾಗಿ ಬಾ' ಎಂದ ಮಾಮುಂಜಿ.

ಊರನ್ನು ಸೇರಿದನು; ತಾಯಿಗೆ ಮಗನು ಓದಿನಲ್ಲಿ ತೇರ್ಗಡೆಯಾದ ಬಗ್ಗೆ ತುಂಬ ಉತ್ಸಾಹವಾಯಿತು.

ಮಳೆಗಾಲ ಕಳೆಯುವುದರಲ್ಲಿ ನಾಗರಾಜಯ್ಯನ ಮಾವ ತೀರಿಕೊಂಡ ಸಂಗತಿಯು ಅವನ ಕಿವಿಯನ್ನು ಸೇರಿತು. ಅವನು ಗೆಳೆಯನನ್ನು ಸಂತೈಸಲು ಅವರ ಮನೆಯ ತನಕ ಓಡಬೇಕಾಯಿತು. ಆದರೆ ನಾಗರಾಜನಿಗೆ ಸಂತೈಕೆ ಬೇಕಿತ್ತೇ-ಎಂಬ ಅನುಮಾನ ಎಲ್ಲರಿಗೂ!



## ೫ನೆಯ ಅಧ್ಯಾಯ

ಈ ದಿನ ಕಡಬದ ಊರವರ ಪಾಲಿಗೆ ಬಹು ದೊಡ್ಡ ದಿನವೆಂದರೂ ಸರಿಯೆ. ಕೇವಲ ಹಳ್ಳಿಯಾಗಿದ್ದ ಅವರ ಊರನ್ನೂ ಒಮ್ಮೆಗೇ, ಒಂದು ಸಿಟಿಯಾಗಿಯಾದರೂ ಮಾಡುವುದರ ಸಲುವಾಗಿ ಸಭೆ ಜರಗುವುದಿತ್ತೆಂದ ಮೇಲೆ ಅಲ್ಲಿನ ಓದುಬಲ್ಲ ಯಾರಿಗೂ ಉತ್ಸಾಹವಲ್ಲದೆ ಬೇರೆಯಿಲ್ಲ. ಮುಖ್ಯ-ಈ ಕೆಲಸಕ್ಕೆ ಮುಂದಾಳು ಎಂದರೆ ನಾಗರಾಜ. ಆತ ಈಗ ಮನೆಯ ಯಜಮಾನ. ಆ ಊರಿಗೇನೆ ಒಬ್ಬ ಅಭಿಮನ್ಯು. ಅವನ

ಹುಮ್ಮಸವೇ ಹುಮ್ಮಸ. ತಾನೇ ಬಹಳ ಜನರನ್ನು ಭೇಟಿಯಾದನು; ‘ಹೇಗಾದರೂ ಮಾಡಿ ನಮ್ಮ ಕಡಬದ ಊರು, ನಮ್ಮ ಕರ್ನಾಟಕದ ನಕ್ಷೆಯಲ್ಲಿ ಕಾಣಿಸುವ ಹಾಗೆ ಮಾಡಬೇಕು’-ಎಂಬುದೇ ಅವನ ಹಟ. ಆರು ತಿಂಗಳೊಳಗೇನೆ ತಮ್ಮ ಪೇಟೆ, ‘ನಗರ’ವೋ ‘ಸಿಟಿ’ಯೋ ಆಗುವುದೆಂದು ನಾಗರಾಜನ ಪ್ರಾಚೀನಕಾಲದ ಗುರುಗಳಾದ ಜಾನ್‌ಸನ್ ಮಾಸ್ತರರು ಹೇಳುತ್ತಾರೆ. ಒಂದು ಕ್ಲಬ್, ಒಂದು ರೀಡಿಂಗ್‌ರೂಮ್, ಲೈಬ್ರೇರಿ, ಬೇಡಮಿಂಟನ್ ಕೋರ್ಟು, ವಿಹಾರಿ ಸಂಘ, ತರ್ಕ ಸಂಘ, ಎಮೆಚೂರು ನಾಟಕ ಸಂಘ ನಿರ್ಮಾಣ ಆಗಿ, ಮುಂದೆ ವರ್ತಮಾನ ಪತ್ರಿಕೆಗಳಲ್ಲಿ ಕಡಬದ ಸುದ್ದಿ ಬಾರದ ದಿವಸವೇ ಇರಬಾರದೆಂದು ಹೇಳುತ್ತಾರೆ. ಊರಿನ ಎಲ್ಲ ಉಪಾಧ್ಯಾಯ ವರ್ಗದ ಬೆಂಬಲವೂ ಅದಕ್ಕಿದೆ. ಮಾಲಿಂಗ ಗೌಡರು, ನಾಗೇ ಗೌಡರು, ಸಂಕಪ್ಪ ಗೌಡರು, ಐತಪ್ಪ ಮೂಲ್ಯರು, ನಾರಾಯಣರಾಯರು — ಎಲ್ಲರೂ ‘ಆಗಲಿ’ ಎನ್ನುತ್ತಾರೆ. ಸಂಕಪ್ಪ ಗೌಡರ ಮಟ್ಟಿಗೆ ಪೂರ್ಣ ಸಮ್ಮತಿ ಇರುವ ಹಾಗೆ ತಿಳಿಯೆ. ಕಾರಣ ಅವರು ಒಳಗಿಂದೊಳಗೇನೆ ಯೋಚಿಸುತ್ತಾರೆ: ‘ಕ್ಲಬ್ಬು, ಅದು, ಇದು ಸರಿಯೆ! ಪೇಪರು ಊರಿಗೆ ಬಂದರೆ ಓದಲೂ ಬಹುದು. ಆದರೆ ಅದಕ್ಕೆ ದುಡ್ಡು ಬೇಡವೆ? ನಿಮ್ಮೆಲ್ಲರ ಯೋಚನೆಯನ್ನು ಕೇಳಿದರೆ ತಿಂಗಳಿಗೆ ನೂರು ರೂಪಾಯಿಯಾದರೂ ಕಡಮೆ ಕಡಮೆ ಬೇಕು. ಸ್ವಂತ ಕಟ್ಟಡವೂ ಇದೇ ವರ್ಷ ಆಗಬೇಕಂತೆ! ಇದು ಕಾಸುಗಳ್ಳರ ಊರಲ್ಲಿ ಹುಟ್ಟೀತೇ? ಈಗ ನಾನು ತಿಂಗಳಿಗೆ ನಾಲ್ಕಾಣೆಯೋ ಆರಾಣೆಯೋ ಕೊಟ್ಟೇನು. ನನ್ನಿಂದಲೇ ತೊಂದರೆಯಾಗುತ್ತದೆಂದು ತಿಳಿಯಬೇಡಿ; ಆದರೆ ನನ್ನಂತೆ ಇರುವವರು ಎಷ್ಟು ಮಂದಿ?” ಎಂದರು.

ಇದರಿಂದ ನಮ್ಮ ಉತ್ಸಾಹಿ ಜಾನ್‌ಸನ್‌ರಿಗೆ ಕೋಪ ಬಂದು ತಡೆಯದು. Your six annas, put it to the river. ಕಡಮೆ ಕಡಮೆ ತಿಂಗಳಿಗೆ ರೂಪಾಯಿ ಒಂದು ಕೊಡಬೇಕು. ಅಂಥ fifty ಜನ ಕಡಬದಲ್ಲಿ ಇಲ್ಲವೇ? ಈ ನಾಲ್ಕು ಸುತ್ತಲಿನ ಊರುಗಳಲ್ಲಿ forty ಟೀಚರ್ಸ ಇಲ್ಲವೇ? ಆ ಮೇಲೆ ಹೊಸಮಠ-ಸುಬ್ರಮಣ್ಯದ ತನಕ ವರ್ಗದಾರರು ಇಲ್ಲವೇ! Hundred Rupees no time make’ ಎಂದರು. ‘ಆಗಲಿ ನೋಡಬಹುದಲ್ಲ’-ಎಂದರು ಸಂಕಪ್ಪ ಗೌಡರು. ಜಾನ್‌ಸನರಿಗೆ ಈ

ಹಾಳು ಸಂಕಪ್ಪನ ಮುಖ ಈ ಬೆಳಿಗ್ಗೆ ನೋಡಿದ್ದೇ ತಪ್ಪಾಯಿತು! ಇಂಥ forward ಕೆಲಸಕ್ಕೆ ಅವರು last' ಎಂದರು.

ಆ ಸಂಜೆ ಮೂರು ಘಂಟೆಗೇನೆ ನಾಗರಾಜನೂ ಜಾನ್‌ಸನರೂ ಇತರ ಒಬ್ಬಿಬ್ಬರೂ ಊರಿನ ಪಂಚಾಯಿತ ಮಂದಿರದಲ್ಲಿ ಸ್ಥಾಪನೆಯಾದರು. ಕೆಲವೊಂದು ಮಕ್ಕಳನ್ನು ಹಿಡಿದು, ತಳಿರ್ದೋರಣ ಮಾಡಿಸುತ್ತಿದ್ದರು. ನಾಗರಾಜ ಹೊಟೇಲಿನ ಕುಡುಮತ್ತಾಯರನ್ನು ಕರೆಯಿಸಿ, 'ಒಂದು ಐವತ್ತು ಜನರಿಗೆ ಆರು ಘಂಟೆಗೆ ಫಸ್ಟ್‌ಕ್ಲಾಸ್ ಟಿಫಿನು ಆಗಬೇಕು'-ಎಂದನು. 'ಐವತ್ತು ಸಾಲದೇ ಸಾಲದು'-ಎಂದರು ಜಾನ್‌ಸನರು. ಅಲ್ಲಿಗೂ ಬಂದ ಸಂಕಪ್ಪ ಗೌಡರು-'ಐವತ್ತಕ್ಕೆ ದುಡ್ಡು ಎಷ್ಟಾಯಿತು? ಅಲ್ಲದೆ ಅಷ್ಟು ಮಂದಿ ಬಂದಾರೆಯೇ?' ಎಂದರು.

ಜಾನ್‌ಸನರಿಗೆ ತೀರ ಕೋಪ ಬಂದು 'Put him to the river Mr. Nagaraj. ಅವರನ್ನು ಹೊಳೆಗೆ ಹಾಕಿರಯ್ಯ. ಕಾಸು ಎಂದರೆ ಪ್ರಾಣಬಿಡುವ ಜನ ಅವರು. ಈವತ್ತು First tiffin -ನಾಗರಾಜನದ್ದು for coming to ಪಟ್ಟ. ಆ ಮೇಲೆ ಪ್ರತಿ Weekಗೆ ಉಂಟು. ಹೋಗಲಿ next sunday ನನ್ನದೇ ಖರ್ಚಿನಿಂದ. ಅದು ಹೋಗಲಿ. ಸಂಕಪ್ಪ ಗೌಡರೇ ನಿಮ್ಮ tiffin ಯಾವಾಗ?'

'ನಿಮ್ಮ ಕ್ಲಬ್ಬು ಆರು ತಿಂಗಳು ಸಮನಾಗಿ ನಡೆದರೆ ಆ ಮೇಲೆ ನನ್ನದೇ ಟಿಫೀನು-ಒಂದಲ್ಲ, ಎರಡು.'

'ಆಯಿತು. give five rupees deposit' ಎಂದರು ಜಾನ್‌ಸನರು.

'ಏನು ನಾನು ಐದು ರೂಪಾಯಿಗೂ ಸಾಲದೆಂದೋ ಮಾಸ್ಟ್ರ ಅಭಿಪ್ರಾಯ! ಆಗಲಿ. ನಾನೇಕೆ ಅಮಂಗಲ ಆಡುವವನೆಂದಾಗಬೇಕು. ಮತ್ತೆ ನಿಮಗೇನೆ ತಿಳಿಯುತ್ತದೆ ಊರವರ ಹಣೆಬರಹ'-ಎಂದುಬಿಟ್ಟು, ಸಂಕಪ್ಪ ಗೌಡರು ಸುಮ್ಮನಾದರು.

ಸುಮಾರು ನಾಲ್ಕು ಘಂಟೆಗೆ ಇನ್ನೂ ಹತ್ತೆಂಟು ಮಂದಿ ಸೇರಿದರು. ಹಿರಿಯರಲ್ಲ; ಶಾಲೆಯ ಹುಡುಗರು! ಐದು ಘಂಟೆಗೆ ಅವರ ಸಭೆ ಜರಗಬೇಕು. ಆ ನಡುವೆ ನಾಗರಾಜನಿಗೆ ಯೋಚನೆಯಾಯಿತು. —'ಮಾಸ್ಟರರೇ, ಇವತ್ತಿನ ಸಭೆಗೆ ಒಬ್ಬರು ಪ್ರೆಸಿಡೆಂಟರು ಬೇಡವೇ?'

ಎಂದನು. 'Urgently' ಎಂದು ಉತ್ತರ ಬಂದಿತು. 'President ರಿಗೆ what difficulty? you become; or head master. ಅಥವಾ-ಬಂದರೆ our new S. S. L. C. ಅಚ್ಯುತ. ಬರುವುದು ಹೇಗೋ ಮನೆಯಲ್ಲಿ ಸ್ವಂತ head ನ ಮೇಲೆ ಗೊಬ್ಬರ carry ಮಾಡುತ್ತಾನಂತೆ!'-ಎಂದರು ಜಾನ್ ಸನರು.

ನಾಗರಾಜ-'ನಾವ್ಯಾರೂ ಬೇಡ. ಯಾರಾದರೂ ಬಾರದಾನೆ ಇರುವವರು ಬೇಡವೆ?'

ಜಾನ್ ಸನ—'ಬಾರದಾನೆ ಇರುವವರೇ? ನಮ್ಮ ಹೊಸಮಠದ ಸಾಂತಪ್ಪಯ್ಯನಾಗಬಹುದು. If come, he is one ಖಂಡಿweight'

ನಾಗರಾಜ-'ನಿಮ್ಮ ಚೇಷ್ಟೆ ಸಾಕು. ಈಗಲೇ ಯೋಚನೆ ಮಾಡಿಡುವ. ಇವತ್ತಿನ ಸಭೆಗೆ ಯಾರು ಅಧ್ಯಕ್ಷರು ಎಂದು; Secretary ನೀವೇ ಆಗಬೇಕು ಮಾಸ್ಟರರೇ. ಆ ಮೇಲೆ ಕೋಶಾಧಿಕಾರಿ ಯಾರು ಎಂದೂ ಯೋಚನೆ ಮಾಡಬೇಕು'-

ಜಾನ್ ಸನರು-'ಅಧ್ಯಕ್ಷರು ಬೇಕು. ನಿಜ, ಭರಾಮಿನವರು ಬೇಕೆಂಬುದೂ ನಿಜ. ಯಾಕೆಂದರೆ ಕ್ಲಬ್ ಮಾಡಿಸಿ, ಅದರ opening ಸೆರಮನಿಗೆ, ಮಂಗಳೂರಿನಿಂದಲೇ ಯಾರನ್ನಾದರೂ ಕರೆಯಿಸಬೇಕು. Why not Dt. Bd. President? ಅಂದರೆ ನಮ್ಮ ಮಾಸ್ತರರ active interest ನೋಡಿ ಅವರಿಗೆ ಖುಶಿ ಆದೀತು.

ಸಂಕಪ್ಪಗೌಡರು-'ಹೌದು ಈ ಮಾಸ್ತರರು ಕ್ಲಬ್, ಆಟ ಎಂದು ಗಮ್ಮತ್ತಿನಲ್ಲಿ ಇದ್ದಾರೆಯೇ ಹೊರತು ಶಾಲೆಯ ಯೋಚನೆಯಲ್ಲಿಲ್ಲ ಎಂದು ಅವರು ತಿಳಿಯಲಿಕ್ಕೊಂದು ದಾರಿ."

ಜಾನ್ ಸನರಿಗೆ ರೌದ್ರಾವೇಷ ಕೆರಳಿತು. "ಹೌದೋ ಸಂಕಪ್ಪ ಮಾಸ್ತರರೇ, ನಿಮ್ಮ ಬಾಯಿಗೆ ನೀವು ನಮ್ಮ ಮೀಟಿಂಗ್ ಮುಗಿಯುವ ತನಕ ಬೀಗ ಹಾಕಿಡಬೇಕು. ಇಲ್ಲವಾದರೆ I will ಕೊಲ್ you. ಒಂದೇ ಒಂದು ಒಳ್ಳೆಯ ಮಾತು ಬರಬಾರದೇ?"-ಎಂದರು.

ಅಷ್ಟರಲ್ಲಿ ಮಳೆಯಲ್ಲಿ ಅರ್ಧ ತೊಯ್ದುಕೊಂಡು-ನಮ್ಮ ಅಚ್ಯುತನ ಸವಾರಿ ಬಂದಿತು. ಜಾನ್ ಸನರು "ಮಿ। ಅಚ್ಯುತ್; ನಮ್ಮ ನಾಗರಾಜ ನಿನ್ನ ವಿಷಯ ಬರುತ್ತಾನೋ ಇಲ್ಲವೋ ಎಂದು ಅನುಮಾನಿಸಿದ್ದ.

ನೀವಿಬ್ಬರಲ್ಲವೇ ಈ idea ವಿನ father ಸು." ಎಂದು ನಕ್ಕರು.

"ಬಂದೆಯೋ ಅಚ್ಚುತ. ಒಳ್ಳೆಯದಾಯಿತು. ಒಂದು ಮೀಟಿಂಗಿನ ಪ್ರೋಗ್ರಾಮ್ ತಯಾರಿಸುವ"-ಎಂದು ನಾಗರಾಜನು ತೋರಣಕ್ಕೆ ಕೈಹಾಕಿದ್ದವನು, ಅದನ್ನು ಬಾಲಕರಿಗೆ ವಹಿಸಿ, ಗೆಳೆಯನನ್ನು ಕರೆದು ಸಭೆಮಾಡಲು ಕುಳಿತ. ನಾಗರಾಜನ ಕಾರ್ಯಕ್ರಮದ ಪಟ್ಟಿ ಕೇಳಿಯೇ ಅಚ್ಚುತನಿಗೆ ಬೆದರಿಕೆಯಾಯಿತು. "ಇಷ್ಟೆಲ್ಲ ಆಗುವುದುಂಟೆ, ಹೋಗುವುದುಂಟೆ?"—ಎಂದು ಅವನೂ ಉದ್ಗರಿಸಿಬಿಟ್ಟ. "you are ಸಂಕಪ್ಪ ಮಾಸ್ತರರ ತಮ್ಮ" ಎಂದು ಜಾನ್‌ಸನರು ಹೇಳುವಂತಾಯಿತು.

ಅಚ್ಚುತನೆಂದ-"ಮಾಸ್ಟರರೇ,ಯಾವುದಕ್ಕೂ ಊರವರು ಬರಲಿ. ನಾವು ನಾವೇ ಮಾತನಾಡಿ ಫಲವಾಗದು. ಇನ್ನೂ ನಿಮ್ಮ ಹೆಡ್‌ಮಾಸ್ತರರೂ ಬರಲಿಲ್ಲ. ಊರಿನ ದೊಡ್ಡವರಾರೂ ಬರಲಿಲ್ಲ."

"Tiffinಗೆ ಎಲ್ಲರೂ ಬರುತ್ತಾರಪ್ಪ. ಕುಡುಮತ್ತಾಯ is making ಹೋಳಿಗೆ for tiffin-" ಎಂದರು ಮಾಸ್ತರರು. ಒಟ್ಟಾರೆ ಮಾಸ್ತರರ ಆಂಗ್ಲೊ ಕನ್ನಡ ಕೇಳಿ ಉಳಿದವರಿಗೆ ನಗು ಬರುತಿತ್ತೇ ವಿನಹ ಯಾವ ಮುಂದಲ ವಿಚಾರವೂ ತೀರ್ಮಾನವಾಗಲಿಲ್ಲ. ಐದು ಘಂಟೆ ಸರಿದು, ಘಂಟೆ ಆರಾಯಿತು. ಕುಡುಮತ್ತಾಯರು ತಿಂಡಿ ತೀರ್ಥಗಳನ್ನು ತಂದಿರಿಸಿದರು. ಅದನ್ನು ಕಂಡ ಬಳಿಕ ಪೇಟೆಯಿಂದ ನಾಲ್ಕಾರು ಮಂದಿ ಬಂದರು. ಆಟದ ಬಯಲಿನಿಂದ ಇನ್ನೂ ಹತ್ತಿಪ್ಪತ್ತು ಬಾಲಕರು ಬಂದರು. ಸಭೆಯಾಗಲಿರುವ ಜಗುಲಿ ಕಿಕ್ಕಿರಿಯಿತು. ಆದರೆ ಊರಿನ ಧನಿಕರಾಗಲೀ, ವರ್ಚಸ್ಸು ಉಳ್ಳವರೆಂದು ತಿಳಿಯಲ್ಪಟ್ಟ ಜನಗಳಾಗಲೀ ಬಾರದೆಹೋದುದರಿಂದ,ನಾಗರಾಜನಿಗೆ ಬೇಸರವಾಯಿತು. "ಅದಕ್ಕೇನೆ ಕ್ಲಬ್ ಬೇಕೆನ್ನುವುದು? ಅದರ ಸವಿ ತಿಳಿದ ಮೇಲೆ ಇವರು ಬಂದಾರು. ಈಗ ಪುತ್ತೂರಲ್ಲಿ ನಾನು ನೋಡಿಲ್ಲವೇ-ಆರೆಂಟು ಮಂದಿಯಾವಾಗಲೂ ಕ್ಲಬ್ಬಿನಲ್ಲಿ ಇದ್ದೇ ಇರುತ್ತಾರೆ." ಎಂದನು ಅವನು.

ಜಾನ್‌ಸನ್-'ನಾಗರಾಜ, ಒಂದು ಪಿಡಿ ಇಸ್ಪೀಟ್ bring. ಇವರಲ್ಲ, ಇವರಪ್ಪ ಬರುತ್ತಾರೆ. ಒಂದು ಸಾರಿಗೆ ಪೇಪರು-Hindu, Times Weekly these come. ಜನ like ಕುರಿ's will flock."

ಅಷ್ಟು ಹೊತ್ತಿಗೆ ಹೆಡ್‌ಮಾಸ್ತರರಾದ ನಾರಾಯಣರಾಯರೂ

ಬಂದರು. ನಾಗರಾಜನು "ಜಾನ್‌ಸನ ಮಾಸ್ತರರೇ; ಇನ್ನು ಸಭೆ ಶುರು ಮಾಡುವ. ಕಾಫಿ ಮೊದಲಾಗಲೋ ಅಥವಾ ಸಭೆಯೋ"? ಎಂದು ಕೇಳಿದನು.

ಹೆಡ್‌ಮಾಸ್ತರರು—"ಕಾಫಿ ಬಂದಿದ್ದರೆ ಅದು ತಣಿಯುವುದು ಬೇಡ. ಆದರೆ ಇಷ್ಟೆಲ್ಲ ಮಕ್ಕಳು ತುಂಬಿರುವಾಗ ಇದು ಸಾಕೇ ಸಾಲದೇ? ನನಗೆ, ಮಹಾರಾಯರೇ ಒಂದು ಕಡೆ ಓಡಾಟವಾಗಿ, ಇಷ್ಟು ತಡವಾಯಿತು, ಮಧ್ಯಾಹ್ನ ಮೂರು ಘಂಟೆಗೇನೆ ಬರಬೇಕಿತ್ತು ನಾನು" ಎಂದರು.

"ಈಗ ಬಂದಿರಲ್ಲ. ನೀವು ಎಂದ ಹಾಗೆ ಮಾಡುವ. ಕಾಫಿ ಐವತ್ತು ಜನರಿಗೆ ಹೇಳಿದ್ದೇನೆ. ಆದರೆ ಕಪ್‌ಗಳು ಇಪ್ಪತ್ತೂ ಇಲ್ಲ; ಅದು ನಮ್ಮ ಕುಡುಮತ್ತಾಯರ ಹೊಟೇಲಲ್ಲವೇ"—ಎಂದನು ನಾಗರಾಜ. ನಾರಾಯಣರಾಯರ ಮನೆಯಿಂದಲೂ ಕಪ್ಪುಗಳನ್ನು ತರಿಸಿಕೊಂಡು ಉಪಹಾರದ ಕಾರ್ಯಕ್ರಮವಾಯಿತು. ಹೋಳಿಗೆಯು ಬಲು ಚೆನ್ನಾಗಿತ್ತೆಂದು ಕುಡುಮತ್ತಾಯರಿಗೆ ಶಿಫಾರಸಿಯೂ ದೊರಕಿತು. ಕಾಫಿ ಮಟ್ಟಿಗೆ, "ಹುಡಿ, ಹಾಲು, ಸಕ್ಕರೆ ಇಷ್ಟು ಹೆಚ್ಚಿಗೆ ಬಿದ್ದಿದ್ದರೆ ಚೆನ್ನಾಗಿತ್ತೆಂದು"-ಹೆಡ್‌ಮಾಸ್ತರರು ನುಡಿದರು. "ನಮ್ಮ ಊರವರ forehead ನಲ್ಲಿ ಇಂಥ ಹೋಳಿಗೆ ತಿನ್ನುವ ಋಣ ಖಂಡಿತ ಬರೆದಿಲ್ಲ"—ಎಂದು ಜಾನ್‌ಸನರು ತೀರ್ಮಾನಿಸಿದರು.

ಅಂತು ಮುಂದಿದ್ದ ತಿಂಡಿ ತೀರ್ಥಗಳನ್ನೂ ಸೇರಿದ ಮೂವತ್ತು ಮಂದಿಯೇ ಮುಗಿಸಿ, ಕೃತಕೃತ್ಯರಾದರು. ಕಾಫಿಯ ಬಳಿಕ, ಕತ್ತಲಾಯಿತು ಎಂದು ತಮ್ಮ ತಮ್ಮ ಗುಡಿಸಲು ಸೇರಲು ಎದ್ದು ಎದ್ದು ಹೊರಡಲಾಗಿ, ಉಳಿದವರ ಸಂಖ್ಯೆ ಹತ್ತಕ್ಕೆ ಇಳಿದು, ನಾರಾಯಣರಾಯರ ಅಧ್ಯಕ್ಷತೆಯಲ್ಲಿ ಕಾರ್ಯಾರಂಭವಾಯಿತು. ಮೊದಲಿಗೇನೆ ಜಾನ್‌ಸನರ ಗಂಭೀರ ಭಾಷಣವು ಅರ್ಧ ತಾಸಿನ ತನಕ ಜರುಗಿ ಸಭಿಕರನ್ನು ಮುಗ್ಧಗೊಳಿಸಿತು. ಅವರು ಉಪನ್ಯಾಸವನ್ನು ಮುಗಿಸಿ, ಬಂದು ಕುಳಿತು ತಾವು ಆಡಿದ ಮಾತಿನ ಸಾರಾಂಶವನ್ನು ವಿವರಿಸಿದುದರಿಂದ, ಸಭಿಕರು ಧನ್ಯರಾದರು. ಮುಂದೆ ನಾಗರಾಜನ ಖುದ್ದು ನಿಂತು, ರಿಸ್ಟ್‌ವಾಚನ್ನು ನೋಡುತ್ತ, ಆಗಾಗ ತಲೆ ಸವರುತ್ತ, ಬೆವರು ಉಜ್ಜುತ್ತ, ಹತ್ತು ಮಿನಿ

ಟುಗಳ ಅ-ಶ್ರಾವ್ಯ ಭಾಷಣ ಮಾಡಿ ಮುಗಿಸಿದನು. ಇನ್ನು ಒಬ್ಬಿಬ್ಬರ ಭಾಷಣವಾಯಿತು. ಅಚ್ಯುತನೂ ಮಾತನಾಡಬೇಕೆಂದು ಜಾನ್‌ಸನರ ಹಟ. ಹೀಗಾಗಿ "ಮಹಿಳೆಯರೇ ಮಹನೀಯರೇ" ಎಂದುಸುರಿ ಅವನು ಕ್ಲಬ್ಬಿನ ಆವಶ್ಯಕತೆಯನ್ನು ಕುರಿತು ಮಾತನಾಡಿದನು. ಜಾನ್‌ಸನರ ಅಂಕೆಗೊಳಗಾಗಿದ್ದ ಸಂಕಪ್ಪ ಗೌಡರ, ಹೊರತು ಆ ದಿನ ಎಲ್ಲರ ಉಪನ್ಯಾಸಗಳಾದುವು. ಮುಂದೆ ಅಧ್ಯಕ್ಷರು ತೀರ್ಮಾನಿತ್ತರು. ಕ್ಲಬ್ಬು ಬೇಕೆಂದಾಯಿತು. ಅವರೆಲ್ಲರೂ ಸೇರಿ ಲೈಬ್ರೆರಿ, ವಾಚನಾಲಯ, ಬೆಡ್‌ಮಿಂಟನ್ ಕೋರ್ಟು ಇಷ್ಟನ್ನು ನಡೆಯಿಸಬೇಕೆಂದೂ ನಿರ್ಣಯವಾಯಿತು. ಆ ದಿನದ ಅಧ್ಯಕ್ಷರೇ ಅದಕ್ಕೂ ಅಧ್ಯಕ್ಷರಾದರು. ಜಾನ್‌ಸನರೂ ನಾಗರಾಜನೂ ಜತೆ ಕಾರ್ಯದರ್ಶಿಯಾದರು. ಅಚ್ಯುತ ಒಬ್ಬ ಸಾಮಾನ್ಯ ಸದಸ್ಯನಾದ. ತಾನು ದೂರದಿಂದ ಬರಬೇಕಾದವನಾದುದರಿಂದ ಕಮಿಟಿ ಮೆಂಬರಿ ಬೇಡವೆಂದನು. "You, my cycle purchase" ಎಂದು ಜಾನ್‌ಸನರು ಹುಮ್ಮಸ ಹುಟ್ಟಿಸಿದ್ದು ಪ್ರಯೋಜನಕಾರಿಯಾಗಲಿಲ್ಲ. ಆ ದಿನವೇ ವರ್ಗಣಿ ಮೊದಲಾದ ವಿವರಗಳನ್ನು ನಿರ್ಣಯಿಸಿದರು. ಸದಸ್ಯತನ ಬೆಳೆದೀತೆಂಬ ಭರವಸೆಯಿಂದ ಕೂಡಲೇ ಜಿಲ್ಲೆಯ ಎಲ್ಲ ಕನ್ನಡ ಪತ್ರಿಕೆಗಳನ್ನು, ಮದ್ರಾಸಿನಿಂದ 'ಹಿಂದೂವನ್ನು', ಬೊಂಬಾಯಿಯಿಂದ 'ವೀಕ್ಲಿ'ಯನ್ನೂ ತರಿಸುವುದೆಂದು ತೀರ್ಮಾನವಾಯಿತು.

ಸಭೆ ಅಂದಿಗೆ ಚೆದರುವುದಿತ್ತು. ಆದರೆ ಜಾನ್‌ಸನರ ಉಮೇದು ಕಡಮೆಯಾಗಬೇಕಲ್ಲ. "ಸಭಿಕರೆ, ಹೋಳಿಗೆ ತಿಂದು ಮನೆಯಲ್ಲಿ ಊಟ ಬೇಡವಾಗಿದೆ. ನಾನಂತು ಬರುವಾಗಲೇ Don't make Cooking- ಎಂದೇ ಬಂದಿದ್ದೇನೆ. ಆದುದರಿಂದ ಮನೆಗೆ ಹೋಗಿ ಬರುವವರು ಬನ್ನಿ. ನಮ್ಮ ಸಂಕಪ್ಪ ಮಾಸ್ತರರು ಸಿಟ್ಟುಮಾಡದೆ ಭಾಗವತಿಕೆ ಮಾಡಿದರೆ, ಒಂದು ಯಕ್ಷಗಾನ ಸಭೆ ಜರುಗಿಸಿ ಬಿಡುವ" ಎಂದರು.

ಅಲ್ಲಿ ಜರುಗಿದ ಎಲ್ಲರೂ ಉತ್ಸಾಹಿತರಾದರು. ಸಂಕಪ್ಪಗೌಡರು ಆ ರಾಜ್ಯಕ್ಕೇನೆ ಹೆಸರಾದ ಭಾಗವತರು. ಅವರು ಜಾಗಟೆ ಹಿಡಿದ ರಾತ್ರಿ ಐವತ್ತು ಮಂದಿಗೆ ಕಡಮೆಯಿಲ್ಲದ ಸದಸ್ಯಗಣ ಸೇರುವುದು ಖಂಡಿತ. ಅವರಿಗೂ ತಾನೊಬ್ಬ ಗಣ್ಯ ಮನುಷ್ಯ ಎಂದು ತಿಳಿದಿತ್ತು. "ಮಾಸ್ಟರೇ, ಪ್ರತಿ ಆದಿತ್ಯವಾರ ಒಂದೊಂದು ಯಕ್ಷಗಾನ ಕೂಟವನ್ನು ಇರಿಸಿದರೆ,

ನಮ್ಮ ಕ್ಲಬ್ಬಿನ ಕೀರ್ತಿ ಹರಡುವುದಕ್ಕೊಂದು ದಾರಿ" ಎಂದರು ಸಂಕಪ್ಪ ಗೌಡರು. ಜಾನ್ ಸನರು ಈ ಬಾರಿ ಸಂಕಪ್ಪಗೌಡರ ಮಾತನ್ನು ಒಪ್ಪದೇ ಹೋಗಲಿಲ್ಲ. "ನಮಗೂ ನಿಮಗೂ ಸಂಕಪ್ಪ ಮಾಸ್ತರರೇ, ಯಕ್ಷಗಾನ ವೆಂದರೆ G. C. M. ಇದ್ದ ಹಾಗೆ" ಅಂದರು. ಎಲ್ಲರೂ ನಕ್ಕರು.

ಅಲ್ಲಿಂದ ಸಭೆ ಚೆದರಿ ತಿರುಗಿ ಕೂಡುವುದಾಯಿತು. ಅಚ್ಯುತ, ನಾರಾಯಣಮಾಸ್ತರರ ಬಲವಂತಕ್ಕೆ, ಅವರ ಮನೆಗೆ ಊಟಕ್ಕೆ ಹೋದ. ನಾಗರಾಜನಿಗೆ 'ಪೋಸ'* ವಲ್ಲವೇ! ಜಾನ್ ಸನರು no cooking ನವರು. ಹೀಗಾಗಿ ಅವರಿಬ್ಬರು ಅಲ್ಲಿಯೇ ಕುಳಿತು, ಒಂದು ಪೆಟ್ಟಿಗೆ ಸೀಸರ್ಸ ಬತ್ತಿಗಳನ್ನು ಧ್ವಂಸವೆಸಗುತಿದ್ದರು. ಅವರಿಗೆ ನಿದ್ರೆಯ ಆವಳಿಕೆಗಳು ಮೇಲುಮೇಲಿಂದ ಬರುತ್ತಿದ್ದರೂ, ಯಕ್ಷಗಾನದವರು ಜಮಾಯಿಸಲು ತೊಡಗಲಿಲ್ಲ. ಇವರಿಬ್ಬರಂತೆ ಅವರ ಪೆಟ್ರೋಮ್ಯಾಕ್ಸ ದೀವಿಗೆ ಏಗುತಿತ್ತು. ಅಂತು ಅವರ ಕೂಟ ಸೇರುವಾಗ ಹದಿನೆರಡು ಘಂಟೆ ರಾತ್ರಿಯಾಯಿತು. ಸಂಕಪ್ಪ ಮಾಸ್ತರರು ಎಲೆ ಅಡಿಕೆ ಜೊಲ್ಲನ್ನು ಇಳಿಸಿಕೊಂಡು ಜಾಗಟೆ ಹಿಡಿದು ಕುಳಿತು, "ಯಾವುಜು, ಅಂಗಜ ಸಂಜಾನವೋ ಕರ್ಣಾರ್ಜುನವೊ"-ಎಂದು ಕೇಳಿದರು. ಮದ್ದಲೆಗೆ ಐತುಮೂಲ್ಯರು ಕುಳಿತರು. ಎಲ್ಲರೂ ಹೆಡ್ ಮಾಸ್ತರರನ್ನು ಕೇಳಲು, ಅವರು "ಕರ್ಣಾರ್ಜುನವನ್ನು ಹಾರ್ಸಿಬಿಡುವ"-ಎಂದು, ಯೋಚನೆ ಮಾಡಿ ಪಾತ್ರಗಳನ್ನು ಹಂಚಿದರು. ಅಚ್ಯುತನೂ ಒಂದು ಭೂಮಿಕೆಯನ್ನು ವಹಿಸಲೆಂದು ಒತ್ತಾಯವಾಯಿತು. ಅವನಿಗೆ ಅದರ ತಲೆಬುಡ ತಿಳಿದಿರಲಿಲ್ಲ. "ಬೇಡ, ಬೇಡ"ವೆಂದು ಅಳುಕಿದರೂ ಅವನಿಗೆ ಒಂದು ಪಟ್ಟವನ್ನು ಕಟ್ಟಿದರು. ಜಾನ್ ಸನರಿಗೆ ಕೃಷ್ಣನ ಭೂಮಿಕೆಯೇ ಬೇಕಂತೆ; ಕುಡುಮುತ್ತಾಯರು ಕರ್ಣನಾಗುವುದೆಂದೂ, ನಾರಾಯಣರಾಯರು ಅರ್ಜುನನೆಂದೂ ಆಯಿತು. ಶಕುನಿ ಶಲ್ಯರಿಗೆ ಯಾರೆಂದು ಹುಡುಕಿ ಬೇಸತ್ತರು. ಶಲ್ಯನ ಭೂಮಿಕೆ ತೀರ ಹೊಸಬನಾದ ನಾಗರಾಜನ ಕೊರಳಿಗೆ ಬಿತ್ತು. ಶಕುನಿಯನ್ನು ಇನ್ನಾರಿಗೋ ಕೊಟ್ಟರು.

ಸಂಕಪ್ಪ ಗೌಡರು ಮೂರು ಮೂರು ಬೀಡಾಗಳನ್ನು ಚರ್ವಿಸಿ, ನಾಲಗೆಯನ್ನು ದಪ್ಪ ಮಾಡಿಕೊಂಡು ಅಸ್ಪಷ್ಟ ವಾಣಿಯಲ್ಲಿ ಹಾಡ

* ಕತ್ತಲೆಗೆ ಮುಂಚಿನ ಊಟ

ತೊಡಗಲು, ಪ್ರಸಂಗ ಪ್ರಾರಂಭವಾಯಿತು. ಅವರ ಗಂಟಲ ದನಿ, ಮೂಲ್ಯರ ಚರ್ಮವಾದ್ಯಗಳು ಜಮಾವಣೆಯಾಗಲು, ಆಚೀಚೆ ಮನೆಗಳಿಂದ ಜನರು ಒಬ್ಬೊಬ್ಬರಾಗಿ ಬಂದು ಕಲೆತರು. ಅಚ್ಯುತನು ನಿದ್ರೆ ಬಿಗಿ ಹಿಡಿದು, ತನ್ನ ಪಾತ್ರವನ್ನು ಮುಗಿಸಿ, ಬೆವರು ಸುರಿಸಿದನು. ತರ್ಕ ಸಭೆಯ ವಾದಕ್ಕಿಂತ ಅದು ಕಷ್ಟವೆಂದೆನಿಸಿತು ಅವನಿಗೆ. ನಾಗರಾಜನು ಎರಡೇ ಮಾತುಗಳಲ್ಲಿ 'ತಲೆನೋವೆ'ಂದು ತನ್ನ ಭೂಮಿಕೆಯನ್ನು, ಕೊನೆಗೆ ಬಂದು ಸೇರಿದ ವಾಸುದೇವಯ್ಯನವರಿಗೆ ವಹಿಸಿಬಿಟ್ಟನು. ಕೃಷ್ಣನಂತು ಆ ದಿನ ವಿದೂಷಕನೇ ಆಗಿಬಿಟ್ಟನು. ಆತ ತಮಿಳು, ಸಂಸ್ಕೃತ, ಇಂಗ್ಲೀಷು ಮೊದಲಾದ ಯಾವತ್ತು ಭಾಷೆಗಳ ಸಮರಸ ಮಿಶ್ರಣವನ್ನು ಸಭಿಕರಿಗೆ ಉಣಿಸಿ ಧನ್ಯನಾದನು.

ಅಂದಿನ ಯಕ್ಷಗಾನದ ಜೀವಕಳೆಯೆಂದರೆ ನಾರಾಯಣರಾಯರು ಮತ್ತು ಕುಡುಮತ್ತಾಯರು. ನಾರಾಯಣರಾಯರಿಗೆ, ಮಾತಿನ ಧೋರಣೆ, ಪಾತ್ರದ ಕಲ್ಪನೆ, ಮಿತವಾದ ಗಾಂಭೀರ್ಯವಿದ್ದುದರಿಂದ ಅಳತೆಗೆ ತಕ್ಕಂತಿತ್ತು. ಆದರೆ 'ಕರ್ಣ' ನೆರೆದವರ ದೃಷ್ಟಿಯಲ್ಲಿ ಚಿನ್ನದ ಪದಕಕ್ಕೇನೆ ತಕ್ಕವ. ಕುಡುಮತ್ತಾಯರಂತು ಅಂದಿನ ಕಾಳಗದಲ್ಲಿ ಬಾಣಗಳಿಂದ ಅಧಿಕವಾಗಿ, ಗೀರ್ವಾಣ ಶ್ಲೋಕಗಳನ್ನೂ, ವಾಕ್ಯಗಳನ್ನೂ ಎಸೆದರು. ಅಮರ ಓದಿದ ಪಂಡಿತರು ಅವರು ಬಳಸಿದ ಶಬ್ದಗಳಿಗೆ ಯಾವ ಗ್ರಂಥಗಳಲ್ಲಿ ಅರ್ಥ ಹುಡುಕಬೇಕು? 'ಏನು ಮಾತು! ಏನು ಮಾತು!' ಎಂದು ಬೆನ್ನು ಚಪ್ಪರಿಸಲಾಗಿ, ಬೆಳಗಿನ ಸೂರ್ಯೋದಯಕ್ಕೆ ಸಮನಾಗಿ ಯಕ್ಷಗಾನ ಮುಗಿಯಿತು. ಜಾನ್‌ಸನ ಮಾಸ್ತರರು ಕುಡುಮತ್ತಾಯರಿಗೆ ಕರಲಾಘವ ಕೊಟ್ಟರು. "ನನಗೆ ನೋಡಿ, ಸಂಸ್ಕೃತಶ್ಲೋಕಗಳೊಂದೂ ಬರುವುದಿಲ್ಲ. ಅಲ್ಲವಾದರೆ ನಿಮ್ಮ ಡಬ್ಬಲ್ ಅರ್ಥ ಹೇಳಿಬಿಟ್ಟೇನು"- ಎಂದರು. ನಾಗರಾಜನಿಗೆ, ಏನಾದರೂ ಮಾಡಿ ತಾನು ಹೆಸರಾದ ಅರ್ಥಗಾರನಾಗುವ ಮನವಾಯಿತು. ಮರುದಿನದಿಂದಲೇ ಕುಡುಮತ್ತಾಯರಲ್ಲಿ ಆ ಬಗ್ಗೆ ಶಿಕ್ಷಣ ಪಡೆಯಲು ಅವನು ಸಿದ್ಧನಾದ. ಹೆಡ್‌ಮಾಸ್ತರರ ಅರ್ಥಕ್ಕೆ ಮೆಚ್ಚಿದ ಅಚ್ಯುತನು "ಕುಡುಮತ್ತಾಯರ ಬಾಯಿ ಡಬ್ಬಿ*ಗೆ ಬೆಂಕಿಹಾಕಲಿ. ಅರ್ಥ, ಪಾತ್ರಕ್ಕೆ ತಕ್ಕ

---

*ಡಬ್ಬಿ–ಡೌಲು, ಜಂಬ

ದೆಂದರೆ ನಾರಾಯಣ ಮಾಸ್ತರದ್ದು"-ಎಂದು ಶ್ಲಾಘಿಸಿದನು. ಮನಸ್ಸಿನಲ್ಲಿ, ನಾಲ್ಕು ವರ್ಷ ಹೋದ ಬಳಿಕವಾದರೂ ತಾನು ಹಾಗಾಗಿನೇ ಎಂಬ ಹಂಬಲವಾಯಿತು. "ತನ್ನ ವಿರಾಮದಲ್ಲಿ, ಕಾಳಗ ಪ್ರಸಂಗಳನ್ನೆಲ್ಲಾ ಅಭ್ಯಸಿಸಿ, ಆತ್ಮವಿಶ್ವಾಸವುಂಟಾದ ಮೇಲೆ, ಯಕ್ಷರಂಗಕ್ಕೆ ಕಾಲಿಡಬೇಕು ಒಂದು ದಿನ. ಅದಕ್ಕೂ ಮೊದಲು ಕೈಹಾಕಿದರೆ, ಕೆನ್ನೆ ಬೆವತು, ನಾಲಗೆ ಬಿಗಿಹಿಡಿಯುವುದೇ ಸರಿ" ಎಂದುಕೊಂಡನು.

ಮುಖ್ಯಸ್ಥರೆಲ್ಲರೂ ಕುಡುಮುತ್ತಾಯರ ಹೊಟೇಲಿಗೇನೆ ಹೋದರು. ಅವರು ಹಲ್ಲುಜ್ಜಿ, ಮೋರೆ ತೊಳೆದು, ಅವಲಕ್ಕಿ ಉಪ್ಪಿಟ್ಟು ತಯಾರಿಸುವ ತನಕ ಕಾದಿದ್ದು ಅದನ್ನು ಭಕ್ಷಿಸಿ, ಒಬ್ಬರನ್ನೊಬ್ಬರು ಬೀಳ್ಕೊಟ್ಟರು. ಅಚ್ಚುತನು ತಿರುಗಿ ಆರು ಮೈಲು ದೂರ ನಡೆದು, ಊರನ್ನು ಸೇರಬೇಕು. ಬರಲು ಆಮಂತ್ರಣವಿತ್ತ ನಾಗರಾಜನನ್ನು ವಂದಿಸಿ, "ಬರುತ್ತೇನೆ"-ಎಂದ. "ಅಚ್ಚುತ, ಪ್ರತಿವಾರಕ್ಕಾದರೂ ಒಮ್ಮೆ ಬಾ. ಆದಿತ್ಯವಾರವೇ ಒಳ್ಳೆಯದು, ನಿನಗೆ. ನನಗೆ ಬರಲು ಎಲ್ಲಾ ವಾರವೂ ಸರಿಯೆ"-ಎಂದು ನಾಗರಾಜನೆಂದ. ಆಗ ಜಾನ್‌ಸನರು "ಮಾಸ್ಟರುಗಳಿಗೆ, ಆದಿತ್ಯವಾರವೇ ಅನುಕೂಲ, ಅಂದರೆ ಒಂದೊಂದು ಯಕ್ಷಗಾನ ಬಿಗಿಯಲು ಬರುತ್ತದೆ. ಇನ್ನೊಮ್ಮೆ ಕರ್ಣಾರ್ಜುನ ಪ್ರಸಂಗ ಮಾಡಿದರೆ ನನಗೆ ಕರ್ಣನಲ್ಲಿ one hand try ಮಾಡಬೇಕು"ಎಂದರು.

ಅಚ್ಚುತ ಊರ್ಥನ್ನು ಸೇರುವ ವೇಳೆ ಬೆಳಗಿನ ಹತ್ತು ಘಂಟೆಯಾದರೂ ಆಗಿರಬೇಕು. ದಾರಿಯಲ್ಲಿ ಬರುತ್ತ ಅವನು ತನ್ನೂರಿನ ಸಲುವಾಗಿ, ಸವಿಗನಸುಗಳಲ್ಲಿ ತೇಲುತಿದ್ದನು. ಹಿಂದಿನ ರಾತ್ರಿಯಂತೆ ಊರಿನ ಹತ್ತೆಂಟು ಮಂದಿ ಸೇರಿದರೆ, ನಿತ್ಯ ಜೀವನ ಎಷ್ಟು ಲಘುವಾಗಲಿಕ್ಕಿಲ್ಲ! ಅಲ್ಲದೆ ತಮ್ಮ ಕ್ಲಬ್ಬು ರೂಪಕ್ಕೆ ಬಂದರೆ-ಪುಸ್ತಕಗಳೋ ಪತ್ರಿಕೆಗಳೋ ಜನರ ಕೈಗೆ ದೊರೆತು ಅವರ ಜ್ಞಾನವೂ ಎಷ್ಟೆಲ್ಲ ಹೆಚ್ಚಲಾರದು! ಈ ಸಂಸ್ಥೆಯನ್ನು ಹೇಗಾದರೂ ಉಳಿಸಿ ಬೆಳೆಯಿಸಬೇಕು; ಬೇಕಾದರೆ ವಾರಕ್ಕೆ ನಾಲ್ಕಾವೃತ್ತಿ ನಡೆದು ಹೋಗಿಯಾದರೂ ಸಹಕರಿಸಬೇಕು--ಎಂದು ಯೋಚಿಸಿದ. ಅವನ ಯೋಚನೆಗೆ ಸರಿಯಾಗಿ, ಅಂಗಿ ಕೊಡೆಗಳನ್ನು ಹಾರಿಸುವ ಬಿರುಗಾಳಿ ಬೀಸಿತು. ಮಳೆ ಪಟಪಟನೆ ಬಡಿಯಿತು; ಎಲ್ಲ ಯೋಚನೆಗಳನ್ನು ಮರೆಸುವಷ್ಟು ಹಾವಳಿಯನ್ನು ಅದು ಎಬ್ಬಿಸಿ

ಬಿಟ್ಟಿತು. ಮನೆಯನ್ನು ಸೇರುವಾಗ, ಅಚ್ಯುತನ, ಮನಸ್ಸಿನಲ್ಲಿ ಮಳೆಗಾಲ ಕಳೆಯುವ ತನಕ, ವಾರಕ್ಕೆ ಒಂದು ಸಾರಿ ಹೋಗಿ ಬರುವುದೇ ಕಷ್ಟವಾದೀತು, ಅದೂ ಮಳೆಯಲ್ಲಿ ಆರು ಮೈಲು ಹೋಗಿಬರುವುದೆಂದರೆ ಎರಡೆರಡು ಸ್ನಾನವೇ ಸರಿ, ಎಂದು ತೋರಿತು.

ಮನೆಯನ್ನು ಸೇರಿದವನೇ, ಒದ್ದೆ ಬಟ್ಟೆಗಳನ್ನು ಕಳಚಿ, ಸ್ನಾನದ ಮನೆಯನ್ನು ಹೊಕ್ಕನು. ಹೊತ್ತಿಗೆ ಸಮನಾಗಿ ಊಟವೂ ಆಯಿತು. ರಾತ್ರಿ ನಿದ್ದೆ ಬಿಟ್ಟವನಾದುದರಿಂದ, ಚಾಪೆ ಬಿಡಿಸಿ ಮಲಗಿಕೊಂಡ. ಆ ದಿನ ತೃತೀಯ ಸೊಸೆಯ ರೋದನ ಸಾಕಷ್ಟು ಬಲವಾಗಿದ್ದರೂ, ಅವನಿಗೆ ಮಾತ್ರ ಎಚ್ಚರವೇ ಆಗಲಿಲ್ಲ.

ಎಚ್ಚರವಾದುದೆಂದರೆ ತನ್ನ ಭಾವ ನರಸಿಂಹಯ್ಯನವರ ಗಂಟಲ ಧ್ವನಿಯನ್ನು ಕೇಳಿ. ಅವರು ಒಳಗಿಂದೊಳಗೇನೆ ಗುರುಗುರಿಸುತ್ತಿದ್ದರು. ಸೀತೆ, ಹಿರೀ ಮಗಳು, ಅತ್ತೆ ಎಲ್ಲರೂ ಸೇರಿ ಗದ್ದೆಯ ಕಳೆಕೀಳಲು ಹೋಗಿದ್ದರು. ಕಿರಿಗೂಸು ಎರಡನೆಯವಳು, ಈ ಕೂಗುಮರಿ ಇವರು ಮಾತ್ರ. ಎರಡನೆಯಾಕೆ ಎಷ್ಟು ಸಮಾಧಾನಗೊಳಿಸಿದರೂ ಅಶಕ್ತಿ ತುಂಬಿದ ಮಗುವನ್ನು ತೂಗುವುದೇ ನಿತ್ಯದ ಉದ್ಯೋಗವಾಗಿತ್ತು. ಅದು ಅಷ್ಟು ಕೂಗಿದರೂ, ತನ್ನ ಭಾವನು ಕೇಳಿಸದವನಂತೆ ಹಗಲು ನಿದ್ರೆ ಮಾಡುತ್ತಿದ್ದಾನೆ-ಎಂದು ನರಸಿಂಹಯ್ಯನಿಗೆ ಸಿಟ್ಟು.

ಅದಕ್ಕಾಗಿ ಅಂಗಳಕ್ಕೆ ಬಂದು, ಬಲು ದೂರ ಕೇಳಿಸುವಂತೆ "ಏ ಎಲ್ಲಿ ಸತ್ತೆಯೋ? ಆ ಮಗುವನ್ನು ಕಾಣುವವರು ಒಬ್ಬರೂ ಬೇಡವೇ"—ಎಂದರು. ಅಚ್ಯುತನಿಗೆ ಆ ರಣಗಹಳೆಯನ್ನು ಕೇಳಿ ಎಚ್ಚರವಾಯಿತು. ತುಂಬ ನಿದ್ರೆಯ ಅಮಲು. ಭಾವನವರಿಗೆ ಸಿಟ್ಟು ಬಂದಿದೆಯೆಂಬುದೂ ತಿಳಿಯಿತು. ಮಗುವು ಕೂಗುವುದರಿಂದ ಹೀಗೆ ಕುಪಿತರಾಗಿದ್ದಾರೆಂದೂ ತಿಳಿಯಿತು. ಅರೆ ನಿದ್ದೆಯಲ್ಲಿ--'ಯಾಕೆ ತಾವು ಎತ್ತಿಕೊಳ್ಳಬಾರದು? ತಮ್ಮ ಕೂಸಲ್ಲವೇ?' ಎಂಬ ಕುವಾದವು ಹೊಳೆದು, ಬೇಕೆಂದೇ ಮಲಗಿಕೊಂಡು ಕಿವಿ ಕಿವುಡು ಮಾಡಿಕೊಂಡನು. ನರಸಿಂಹಯ್ಯನ ರಣಗಹಳೆ ಯಾರಿಗೂ ಕೇಳಿಸಲಿಲ್ಲ. ತಿರುಗಿ ಚಾವಡಿಗೆ ಬಂದರು. "ಹಗಲು ನಿದ್ದೆ ಈ ಪ್ರಾಯದಲ್ಲಿ-ಏನು ಅರಿಷ್ಟ!" ಎಂದರು. ಅವರ ಮಗಳು ತಂಗಿಯನ್ನು ಎತ್ತಿ, ಆಚೀಚೆ ಅಡ್ಡಾಡಿಸಿದರೂ ಅದು

ಸುಮ್ಮನಾಗಲಿಲ್ಲ. ಅಚ್ಯುತನಿಗೆ ಕೇಳುತಿದ್ದರೂ ಮಲಗಿರುವನಲ್ಲ- ಎಂದು ನರಸಿಂಹಯ್ಯ ಕುದಿಯುತ್ತಿದ್ದರು. ಆ ಸಿಟ್ಟನ್ನು, ಹೋಗಿ ಅಳುವ ಮಗುವಿನ ಮೇಲೆ ತೆಗೆದರು. ಚೆನ್ನಾಗಿ ಎರಡೇಟು ಬಡಿಯಲು ಅದು ಕಿಕ್ಕಿರಿಯಿತು. ಅದರ ಅಕ್ಕ ಅದನ್ನು ಅಂಗಳದಲ್ಲೇ ಬಿಟ್ಟು ಹೆದರಿ ಓಡಿದಳು. ತಂದೆ ಮಗುವಿಗೆ ಇನ್ನೂ ಎರಡು ಅಮರಿಸುವುದ ರಲ್ಲಿ ಇದ್ದರು. ಅಚ್ಯುತ ತವಕದಿಂದ ಓಡಿ ಬಂದು ಅದನ್ನು ಬಿಡಿಸಿಕೊಂ ಡನು. ಅವನಿಗೂ ಸಿಟ್ಟು ಬಂದಿತ್ತು. ಅದನ್ನು ಎತ್ತಿಕೊಂಡು ಈಚೆ ಬರುತ್ತ, ಗಟ್ಟಿಯಾಗಿ, "ಯಾಕೆ? ನೀವದನ್ನು ಎತ್ತಿಕೊಂಡರೆ ಏನಾಗು ತ್ತದೆ? ನಿಮ್ಮ ಮಗುವಲ್ಲವೆ ಅದು. ಅದನ್ನು ಹೊಡೆಯಲು ಕೈಬರುವು ದಂತೆ, ಎತ್ತಲು ಬರುವುದಿಲ್ಲವೇ" ಎಂದ. ಎಂದಿನಿಂದ ಭಾವನ ಮೇಲೆ ಕುದಿಯುತ್ತಿದ್ದ ಅವನ ಸಿಟ್ಟು ಇಂದು ಉಕ್ಕಿ ಬಂದು ಮಾತನಾಡಿದನು. ನರಸಿಂಹಯ್ಯನಿಗೆ ಪಿತ್ತವೇ ನೆತ್ತಿಗಡರಿತು. ಬಂದು ಇವನ ಕೈಯಿಂದ ಮಗುವನ್ನು ಕಿತ್ತು ಎಸೆಯುತ್ತೇನೆಂದುಕೊಂಡರು. ಎರಡು ಹೆಜ್ಜೆ ಮುಂದಿರಿಸಿದರು. ಆವರೆ ಅಚ್ಯುತನ ಮುಖದ ಬಿಗುಪನ್ನು ಕಂಡು ಅಳುಕಿದರು. ಈ ತನಕ ಎದುರು ಮಾತನಾಡದ ಅವನು, ಈಗ ಹಲ್ಲು ಕಡಿದು ನಿಂತಿದ್ದ. ಮರ್ಯಾದೆ ದೊಡ್ಡದೆಂದು ಸುಮ್ಮನಾದರು. ಮತ್ತೆ ಮೆಲ್ಲಗೆ "ನಿಮ್ಮ ಮನೆಯ ಕೂಳಿಗೆ ಬಿದ್ದಿದ್ದೇನೆಂದು ನೀನು ಹೀಗೆ ಹಂಗಿಸುತ್ತೀಯಲ್ಲವೇ? ಇಲ್ಲಿ ನೋಡುವವರು ಯಾರೂ ಗತಿಯಿಲ್ಲ ವೆಂದು ನಮ್ಮ ಸುಖ ಮರೆತು, ಇಲ್ಲಿದ್ದರೆ, ನಿಮಗೆ ನಾವು ಕಾಲಿನ ಕಸ ವಾಯಿತಲ್ಲವೇ"--ಎಂದರು. ಅವರ ತುಟಿ, ಹಲ್ಲು, ಮೂಗು ಕಣ್ಣು- ಎಲ್ಲವೂ ನಂಜು ಕೋಪಗಳನ್ನು ಕಾರುತಿದ್ದುವು.

"ಅಷ್ಟೆಲ್ಲ ಪ್ರೀತಿಯಿದ್ದವರು ತಮ್ಮ ಮಕ್ಕಳನ್ನು ಚೆನ್ನಾಗಿ ನೋಡಿ ಕೊಂಡರೆ ಸಾಕು"—ಎಂದ. ಅವನ ಕೈಗೆ ಬಂದ ಆ ಕೂಸು ಹೆದರಿಕೆ ಯಿಂದಲೋ ಏನೋ, ಬೆಪ್ಪಾಗಿ ಕೂಗುವುದನ್ನು ನಿಲ್ಲಿಸಿತು. ಇತ್ತ ಮಾತನಾಡಿ ಗೆಲುವಿಲ್ಲೆಂದು ತಮ್ಮ ತಮ್ಮ ಕೋಪಕ್ಕೆ ತಾವೇ ಶಾಂತಿ ಯನ್ನು ತಂದುಕೊಂಡು ಇಬ್ಬರೂ ಬೆಪ್ಪಾಗಿ ಕುಳಿತರು. ನರಸಿಂಹಯ್ಯನ ಕಣ್ಣು ಮಾತ್ರ ಕಿಡಿ ಕಾರುತ್ತಲೇ ಇತ್ತು. ಅವು ಸೀತೆಯನ್ನು ಸುಡುವ ನಿರೀಕ್ಷಣೆಯಲ್ಲಿದ್ದುವೆಂದರೂ ತಪ್ಪಾಗದು.

ಸೀತೆ, ತಾಯಿ ಮಗಳೊಂದಿಗೆ ಹೊತ್ತು ಕಂತುವ ವೇಳೆಗೆ ಸಮ ನಾಗಿ, ಒಂದೊಂದು ಹೊರೆಹುಲ್ಲನ್ನು ಹೊತ್ತುಕೊಂಡು ಮನೆಗೆ ಬಂದಳು. ಆಗ ನರಸಿಂಹಯ್ಯನ ಸವಾರಿ ಉರಿ ಮುಖ ಮಾಡಿಕೊಂಡು, ಕಂಬಕ್ಕೆ ಒರಗಿ ಕುಳಿತಿತ್ತು. ಅವಳು ಕಾಲು ತೊಳೆದು ಮನೆಯಲ್ಲಿ ಕಾಲು ಇರಿಸುವುದರೊಳಗಾಗಿ "ಸೀತೇ" ಎಂದು ಕರೆದರು. ಅವಳು, ಸ್ವರದ ಬಿಗಿಯಿಂದಲೇ ಬೆರಗಾಗಿ, "ಏನು?" ಎಂದು ಬೆದರಿ ಕೇಳಿದಳು. ನರಸಿಂಹಯ್ಯ ಒಂದೇ ಉಸಿರಿಗೆ "ಇಗೋ ನಾವು ಈ ಮನೆಯಲ್ಲಿ ಇರಬೇಕೇ, ನಾಳೆಯೇ ಹೊರಡಬೇಕೆ-ಎಂದು ನಿನ್ನ ತಾಯನ್ನು ಕೇಳು. ಯಾರಿಗೂ ಬೇಡವಾಗಿ ನಾವಿಲ್ಲಿ ಇರಬೇಕಾಗಿದೆ. ತಾನು ಓದಿ ಬಂದಿದ್ದೇನೆ ಎಂಬ ಡೌಲು ಅವನಿಗೆ! ಮನೆಯ ಯಜಮಾನ ಅವನಲ್ಲವೇ. ಅವನ ಹತ್ತಿರ, ಮಾನಕ್ಕೆ ಹಗುರಾಗಿ ಇಲ್ಲಿರುವುದು ನನಗೆ ಇಷ್ಟವಿಲ್ಲ. ನಮಗೆ ಗತಿಯಿಲ್ಲದೆ ಇಲ್ಲಿಗೆ ಬಂದಿದ್ದೇವೆ ಎಂದು ಅವನು ತಿಳಿಯುವುದು ಬೇಡ. ಅವನ ಅಮ್ಮನಿಗೂ ಅದೇ ಮಾತನ್ನು ಹೇಳಿಬಿಡು. 'ಪಾಪ! ಗಂಡು ಸರಿಲ್ಲದೆ, ಮನೆ ಅನಾಥವಾಗಬಾರದೆಂದು ತಿಳಿದುಕೊಂಡು, ನನ್ನ ಬದುಕು ಕೆಡಿಸಿ, ಇಲ್ಲಿ ಕುಳಿತರೆ, ಇವನು 'ನೀನು ತಾನು' ಎನ್ನುವುದಕ್ಕೆ ತೊಡಗಬೇಕೇ?" ಎಂದರು.

ಅವರ ಧ್ವನಿ ಮತ್ತೂ ಏರಿಕೆಯಲ್ಲೇ ಇದ್ದಿತು. ಅತ್ತೆಯ ಕಿವಿಗೆ ಚೆನ್ನಾಗಿ ಕೇಳಿಸಲೆಂದು ಅವರು ಆ ರೀತಿಯಲ್ಲಿ ಜೋರಾವರಿಯಲ್ಲೇ ಉಸಿರುಗರೆದುದು. ಆದರೆ ಅವಳಿಗೆ ಸಂಗತಿ ಮುಂಚಿತವಾಗಿ ತಿಳಿದಿತ್ತು. ಅಚ್ಯುತ, ಮಗುವನ್ನು ಅಲೆದಾಡಿಸುವ ನೆಪದಿಂದ, ತಾಯಿಯ ಬಳಿಗೆ ಹೋಗಿ ನಡೆದ ಸಂಗತಿಗಳನ್ನು ವಿವರಿಸಿಯಾಗಿತ್ತು. ತಾಯಿಯೂ ಬೇಸರಿಸಿದ್ದಳು. "ಮಗು, ನಾವು ಅವರನ್ನು ನೋಯಿಸಿದರೆ ಸೀತೆಗೆ ಕಷ್ಟವಲ್ಲವೇ! ಅವಳು ತನ್ನ ಸಂಕಟ ಯಾರ ಹತ್ತಿರ ಹೇಳಲಿ?" ಎಂದಳು. "ಅಮ್ಮ, ಅವರು ರಾಕ್ಷಸರ ಹಾಗೆ ಈ ಮಗುವನ್ನು ಬಡಿಯುವಾಗ ಸುಮ್ಮನಿರಬೇಕೇ? ನೋಡು, ಇದರ ಬೆನ್ನು ಹೇಗೆ ಕೆಂಪಾಗಿ ದಡಿಕೆ ಬಂದಿದೆ. ಅವರು ನಮ್ಮ ಉದ್ಧಾರಕ್ಕೆ ಇಲ್ಲಿ ನಿಂತಿದ್ದಾರಂತೆ..... ನನಗೆ ಗೊತ್ತಿದೆ. ನಾನೇನು ಮಗುವಲ್ಲ. ಊರವರಿಂದ ನನಗೆ ಸ್ವಲ್ಪವಾದರೂ ಕೇಳಿ ತಿಳಿಯುತ್ತದೆ. ನಾನೂ ಈ ವರೆಗೆ ನಿನಗೆ ಹೇಳಲಿಲ್ಲ.

ಅವರು ಊರಿನ ಆಸ್ತಿಯನ್ನು ಮಾರಿಯಾಗಿದೆ. ಇದ್ದುದ್ದನ್ನು ಯಾರ್ಯಾರಿಗೆ ನೇಕಡ ಹನ್ನೆರಡು ಹದಿನೆಂಟರಂತೆ ಸಾಲಕೊಟ್ಟು ಲೇವಾದೇವಿ ಮಾಡುತ್ತ ಕಾಲಕಳೆಯುತ್ತಾರೆ. ನಮ್ಮ ಮೇಲಿನ ಕನಿಕರವಾದರೆ, ಮನೆಗೆ ಆರುಕಾಸಿನ ಒಡವೆ ತರಬಹುದಲ್ಲ. ಇಷ್ಟು ಜನರು ಮನೆಯಲ್ಲಿಲ್ಲವೆ?" ಎಂದನು.

ತಾಯಿಯ ಕಿವಿಗೂ ಈ ಸುದ್ದಿ ಬಿದ್ದಿತ್ತು. ಅವಳು ಮಗಳ ಸಲುವಾಗಿ ಮೌನವಾಗಿದ್ದಳು. ಈಗ ಮಗಳೆದುರಿಗೇನೆ ಮಾತು ಬರಲು "ಅಚ್ಯುತ, ಸಿಟ್ಟು ಬಂದರೆ ಮೈ ಎಚ್ಚರ ಇರಬೇಡವೇ ನಿನಗೆ? ಯಾರಾರು ಹೇಳಿದ ಮಾತನ್ನು ನೀನು ಕೇಳಿ ಹೀಗೆನ್ನಬಾರದು. ಸೀತೆ ನಿನ್ನ ಅಕ್ಕ; ನನಗೆ ಅವಳೇನು ಕಡಮೆ?"

"ಅವಳ ಮಗುವನ್ನೇ ಭಾವ ಹೊಡೆದುದು ಎಂದೆ ನಾನು" — ಎಂದ ಅಚ್ಯುತ. ತಾಯಿ ಮಗನೊಡನೆ ಕೋಪಕ್ಕಿಟ್ಟುಕೊಳ್ಳಬಾರದೆಂದು. ಸೀತೆ, ತನ್ನ ಕೆಲಸ ಬಿಟ್ಟು, "ಅಮ್ಮ, ಅಚ್ಯುತನನ್ನು ನೀನು ಗದರಿಸುವುದು ಯಾಕೆ? ಯಾಕೆ ಅವರು ಮಗುವನ್ನು ಒಂದು ಗಳಿಗೆ ಹಿಡಿಯಬಾರದು? ಯಾವ ಮಗುವನ್ನು ಎತ್ತಿ ಮುದ್ದಾಡಿಸಿದರಂತೆ? ಅವುಗಳಿಗೆ ಹೊಡೆಯಲು ಮಾತ್ರ ಕೈ ಮುಂದಾಗಬೇಕೆ"-ಎಂದಳು.

ಇದರಿಂದ ಅಚ್ಯುತನ ಕೈ ಮೇಲಾಯಿತು. ಅಕ್ಕನ ಮೇಲೆಯೂ ಅವನಿಗೆ ಅಭಿಮಾನವಾಯಿತು. ಇಂಥ ಭಾವನೊಡನೆ, ತನ್ನ ಅಕ್ಕ ಹೇಗೆ ಸಂಸಾರವೆಸಗಿದಳು ಎಂದು ದುಃಖವಾಯಿತು.

ಇತ್ತ ಸೀತೆ ಎಲ್ಲ ತಿಳಿದೇ ಗಂಡನೊಡನೆ ಮಾತನಾಡಲು ಹೋದವಳಾದುದರಿಂದ,ಅವರ ಸ್ವಭಾವವನ್ನು ತಿಳಿದವಳಾದುದರಿಂದ-"ನೀವು ಯಾಕೆ ಸಿಟ್ಟಾಗುವುದೋ ನನಗೆ ತಿಳಿಯದು. ಆ ಹುಡುಗ ಏನೋ ಅಂದಿರಬಹುದು. ಅವನಿಗೆ ಎಳೆಪ್ರಾಯ. ನೀವು ತಿಳಿದವರು. ಹೀಗಿದ್ದೂ....ಇನ್ನೂ ಮನೆಬಿಡುವ ಸಂಗತಿ ಹೇಳುತ್ತೀರಿ. ಅದಕ್ಕೆ ಅಮ್ಮನನ್ನು ಯಾಕೆ ಕೇಳಬೇಕು ಹೇಳಿ? ಅವರ ಹೊರೆ ಅವರು ನೋಡಿಕೊಂಡರೆ ಸಾಕು. ಈಗ ಒಂದು ವರ್ಷದ ಮೇಲಾಯಿತು-ನಮ್ಮ ಹೊರೆಯನ್ನು ಅವರ ಮೇಲೆ ಹೊರಿಸುತಿದ್ದೀರಿ ಯಾಕೆ! ನಿಮಗೆ ಬೇಸಾಯವಿಲ್ಲದೆ ಸುಮ್ಮನೆ ತಿರುಗಲು ಲಾಯಕಾಗಿದೆ. ನನಗೆ ಇಲ್ಲಿ, ತಾಯ ಮನೆ

ಅನ್ನವಾದರೂ, ಅವರಹೊರೆಯ ಮೇಲೆ ಇನ್ನೊಂದು ಕಲ್ಲಾಗಿ, ನಾಲ್ಕು ಮಕ್ಕಳನ್ನು ಕೂಡಿ ಇರಲು ನಾಚಿಕೆಯಾಗಿದೆ. ಉಂಡ ಅನ್ನ ಗಂಟಲಿಗೆ ಇಳಿಯುವುದಿಲ್ಲ. ಸಾಲದ್ದಕ್ಕೆ ಅವರ ಮೇಲೆ ನಿಮ್ಮ ರೋಷ! ಅಚ್ಯುತ ಬಂದು ಎಲ್ಲವನ್ನೂ ಹೇಳಿದನು. ನೀವು ಹೊಡೆದದ್ದು ಯಾಗ ಮಗುವೆಂದು? ಯಾರ ಮಗುವನ್ನು ಯಾರು ಎತ್ತಲಿಲ್ಲವೆಂದು ನೀವು ರೇಗಾಡಿದ್ದು............?"

ಸೀತೆ ಜ್ವಾಲಾಮುಖಿಯಾದಳು. ಗಂಡನ ಮನೆಯಲ್ಲಿ ಎಷ್ಟೋ ಬಾರಿ ಅವಳು ಗಂಡನ ಮರ್ಯಾದೆ ಉಳಿಸಲು ಜಗಳ ತೆಗೆಯಬೇಕಾಗಿತ್ತು. ಆದರೆ ಇಲ್ಲಿ ಹಾಗೆ ಮಾಡಲು ದಾರಿಯಿರಲಿಲ್ಲ. ತಪ್ಪು ಯಾರದ್ದೆಂದು ಅವಳು ಬಲ್ಲಳು. ಹೀಗೆ ಇದ್ದರೆ ತಮ್ಮ ಗೌರವಕ್ಕೆ ತಕ್ಕದಲ್ಲವೆಂದು ಬಲ್ಲಳು. ಹಿಂದೆಯೂ "ಬೇರೆ ಮನೆಮಾಡಿಕೊಂಡಿರುವ, ನಮ್ಮ ಸುಖದುಃಖ ನಮಗೆ"—ಎಂದಿದ್ದಳು.

ಅರ್ಧ ತಾಸು ಕಳೆದರೂ ನಾಲಿಗೆಗೆ ತೆರವಿಲ್ಲದಂತೆ, ಸೀತೆ ಗಂಡನನ್ನು ತುಂಬ ಹಳಿದಳು. ಅದನ್ನು ಅವಳ ತಾಯಿ ಬಂದು ತಡೆಯಬೇಕಾಯಿತು. ಅಚ್ಯುತನಿಗೆ-ತಾನೇಕೆ ಈ ಗೊಂದಲ ಹುಟ್ಟಿಸಿದೆನೆಂಬ ದುಃಖವಾಯಿತು. "ಇನ್ನು ಭಾವ ಸಿಟ್ಟುಗೊಂಡು ಊರನ್ನು ಬಿಟ್ಟಾರೆ? ಬಾವಿಗೆ ಹಾರಿಕೊಂಡಾರೇ"ಎಂದು ಅವನ ಎಳೆಮನಸ್ಸು ಹೇಳುತಿತ್ತು. ಸೀತೆಯ ಮಾತು ಮುಗಿದ ಮೇಲೆ ಭಾವ ಏನಾದರೊಂದು ಹಿಂಸೆ ಮಾಡಿದರೇನು ಗತಿ ಎಂದು ಅವನು ಅಂಜಿಬಿಟ್ಟನು. ಯಾರನ್ನು ಕರೆಯಲಿ, ಏನಾಗುತ್ತದೋ ಏನೋ ಎಂದು ಅವನ ಎದೆ ಬಡಬಡಿಸುತಿತ್ತು.

ಆದರೆ-ಎಲ್ಲವೂ ಸಪ್ಪಗೆ; ಈಗ ನೆಟ್ಟಗೆ ನರಸಿಂಹಯ್ಯನ ಮುಖಭಂಗವಾಯಿತು. ಸೀತೆ ಆ ರೀತಿ ರಾವು ಬಡಿದವಳಂತೆ ಮಾತನಾಡಿದ್ದನ್ನು ಅವರೂ ಕೇಳಿರಲಿಲ್ಲ. ಅದನ್ನು ಎದುರಿಸುವ ನರವೇ ಅವರಲ್ಲಿ ಇಲ್ಲದಾಯಿತು. ತೆಪ್ಪಗಾದರು. ನೆಟ್ಟಗೆ ಬಚ್ಚಲಿಗೆ ಹೋಗಿ ಸ್ನಾನಮಾಡಿ, ಜಪಕ್ಕೆ ಕುಳಿತರು. ಆ ದಿನ ಅವರ ಜಪ ಮೂರು ತಾಸಾದರೂ ಮುಕ್ಕಿತ್ತು. ನಾಲ್ಕು ಸುತ್ತಲಿನ ಭೂತ ಬೇತಾಳಗಳನ್ನು ಗದರಿಸುವಷ್ಟು ಗಟ್ಟಿಯಾಗಿತ್ತು. ಆ ಧ್ವನಿಯಲ್ಲಿ ಅವರು ತಮ್ಮನ್ನೇ ತಾವು ಮರೆತುಬಿಟ್ಟರು. ಊಟಕ್ಕೆ ನಾಲ್ಕಾವೃತ್ತಿ ಅತ್ತೆ ಕರೆದ ಮೇಲೆ, ಶಾಂತವಾಗಿ ಬಂದು, ಏನೂ

ಕೊರತೆಯಿಲ್ಲದಂತೆ ಊಟಮುಗಿಸಿದರು. ತಾಂಬೂಲ ಮೆದ್ದು ಮಲಗಿ ಕೊಂಡವರು ಬೆಳಗೇನೆ ಎದ್ದದ್ದು. ಎದ್ದು ಅಲ್ಲಿಂದ ಅದೃಷ್ಯರಾದವರು ಹದಿನೈದು ದಿನದ ಬಳಿಕವೇ ಬಂದದ್ದು. ಅವರು ಹೊರಡುವಾಗ ಸೀತೆ ಯಿದ್ದಳು; "ನೋಡಿ- ಮನೆಯೆಲ್ಲಿಯೆಂದು ನೋಡಿ ಬನ್ನಿ. ಇನ್ನು ತಿಂಗ ಳಿಗೆ ಮಿೂರಿ ನಾನು ಈ ಮನೆಯಲ್ಲಿರಲಿಕ್ಕಿಲ್ಲ. ಪ್ರಾಣ ತೆಗೆದುಕೊಂಡೇನು" ಎಂದಳು.

ಹದಿನೈದು ದಿನ ಕಾಲ, ಸೀತೆಯ ಈ ಪ್ರಮಾಣ ಅವರ ಬೆನ್ನು ಹತ್ತಿರಬೇಕು. ಎಲ್ಲೆಲ್ಲೋ ಅಲೆದಾಡಿ ಮನೆ ಹುಡುಕಿದರು. ಯಾರು ಈ ವೇಳೆಯಲ್ಲಿ ಅವರಿಗೆ ನೆಲ ಕೊಡುವವರು? ಅವು ಒಕ್ಕಲು ಬಿಡುವ ದಿನಗಳಲ್ಲ. ಮನೆ ಸೇರುವ ಸಮಯವಲ್ಲ. ಕೊನೆಗೆ, ಬರಿಯ ವಾಸ ಕ್ಕಾದರೂ ಆಗಲೆಂದು ಹೊಸಮಠದ ಪೇಟೆಯಲ್ಲಿ ಒಂದು ಗುಡಿಸಲನ್ನು ಬಾಡಿಗೆಗೆ ವಹಿಸಿಕೊಂಡು ಬಂದರು. ಬಂದವರು-"ಬಂದಿದ್ದೇನೆ. ನಿನ್ನ ಇಷ್ಟ ಬಂದ ದಿನ ಹೊರಡಬಹುದು"-ಎಂದರು. ಲಕ್ಷ್ಮಮ್ಮಗೆ ತುಂಬ ವ್ಯಥೆಯಾಯಿತು. ಮಗನ ಮಾತು ಈ ರೀತಿಯಲ್ಲಿ ರಂಪಕ್ಕಿಟ್ಟೀತೆಂದು ಅವಳು ತಿಳಿದಿರಲಿಲ್ಲ. ನಿತ್ಯವೂ 'ಹೊರಡು' ಎಂದು ಹೇಳುತ್ತಲೇ ಇದ್ದರು. 'ಎಲ್ಲಿ, ಏನು' ಎಂದು ಕೇಳಲು, "ಪೇಟೆಯ ಮನೆ. ಗದ್ದೆ ಸಾಗುವಳಿಗೆ ಸಂಬಂಧಪಟ್ಟದ್ದಲ್ಲ" ಎಂದು ತಿಳಿಯಿತು. "ನವರಾತ್ರಿಯ ಮೇಲೆ ಹೊರಡುವಿಯಂತೆ; ಗೇಣಿಗೆ ಅನುಕೂಲವಾದಲ್ಲಿ ಕುಳಿತಿರಿ"-- ಎಂದಳು ಲಕ್ಷ್ಮಮ್ಮ. ಮಗಳು "ಇಲ್ಲ, ನಿನಗೆ ಗೊತ್ತಿಲ್ಲ. ಒಮ್ಮೆ ಅವರ ಕುತ್ತಿಗೆಯ ಮೇಲೆ ಸಂಸಾರದ ಹೊರೆ ಬೀಳಲಿ. ಅಲ್ಲಿಯೂ ಅಣ್ಣಂದಿರ ಹತ್ತಿರ ಜಗಳ ಕಾದು, ಊರಮೇಲೆ ತಿರುಗಾಡುತ್ತಿದ್ದರು. ಗದ್ದೆ ಗೇಣಿಗೆ ವಹಿಸಿಕೊಳ್ಳಲಿ, ಬಿಡಲಿ; ಹೀಗೆ ತಿಂಗಳಿಗೆ ಇಪ್ಪತ್ತು ದಿನ ಹೊರಗೆ ತಿರು ಗುತ್ತಿದ್ದರೆ ಬುದ್ಧಿ ನಾನು ಕಲಿಸುತ್ತೇನೆ"-ಎಂದಳು.

ಊರಲ್ಲಿ ಕೊಯ್ಲು ತೊಡಗುವ ಮುಂಚೆಯೇ ನರಸಿಂಹಯ್ಯನ ಸವಾರಿಯು ಕೋಂಬಾರನ್ನು ಬಿಟ್ಟಿತು. ಯಾರಿಗೋ ಸಲಾಮು ಹೊಡೆದು ಗಾಡಿಯಲ್ಲಿ ಸರಕು ತುಂಬಿಸಿ, ಮಕ್ಕಳನ್ನು ತುಂಬಿಸಿ, ತಾವು ನಡೆದು ಕೊಂಡು ಪಶ್ಚಿಮಾಭಿ ಮುಖವಾಗಿ ತೆರಳಿದರು. ಸೀತೆಗೆ ಆ ದಿನ ಒಳ ಗಿಂದೊಳಗೆ ನಗುವೇ ಬರುತಿತ್ತು. "ಅಮ್ಮ, ಹೋಗಿಬರುತ್ತೇನೆ" —

ಎಂದಳು. ಲಕ್ಷ್ಮಮ್ಮಗೆ ದುಃಖವಾಯಿತು. "ಆಗಲಿ ಮಗು, ಬರುತ್ತೀಯಲ್ಲ" ಎಂದು ಕೇಳಲು "ಇಲ್ಲಿಂದಿಲ್ಲಿಗೆ ಬಾರದೆ ಇರುತ್ತೇನೆಯೇ? ಮತ್ತೆ ಅವರ ವ್ಯಾಪಾರ........ಏನು ಎಂಬುದು ದೃಢವಿಲ್ಲ" — ಎಂದಳು.

ಈಗ ಅಕ್ಕನನ್ನು ಬೀಳ್ಕೊಡುವುದು ಅಚ್ಯುತನ ಸರದಿ. ಅವನಿಗೂ ಭಾವರಾಯರಿಗೂ ಮಾತಿಲ್ಲದೆ ಎಷ್ಟೋ ದಿನಗಳಾಗಿದ್ದುವು. ಅವರೊಳಗೆ ಸರಸ ಸಂಭಾಷಣೆಯಾದುದೆಂಬುದೇ ಇಲ್ಲ. ಆಡಿದ್ದೆಲ್ಲ ವಿರಸಕ್ಕೆ ಹೋಗುತ್ತಿರಲು, ಈಗಲಾದರೂ 'ಹೋಗುತ್ತೀರಾ' ಎಂದು ಇವನು ಕೇಳಲಿಲ್ಲ. ಅವರೂ ಹೇಳಲಿಲ್ಲ. ಆದರೆ ಅಕ್ಕನೊಡನೆ ಅವನಿಗೇನು ಕೋಪ! ನಾಲ್ವರು ಸೊಸೆಯರನ್ನು ಮುದ್ದಿಕ್ಕಿ ಬೀಳ್ಕೊಡುವಾಗ ಅವನಿಗೆ ದುಃಖವಾಯಿತು. "ಅಕ್ಕ ನನ್ನಿಂದಾಗಿ ನಿನಗೆಷ್ಟು ಕಷ್ಟವೊ" — ಎಂದನು. ಹಿಂದಣ ಕಾಳಗದ ನೆನಪು ಅವನಿಗೆ. ಆದರೆ ಸೀತೆಗೆ ಅವನು ನಿರಪರಾಧಿಯೆಂದು ತಿಳಿದಿರಲು — "ಏನಿಲ್ಲ ಮಗು. ನೀನು ಬೇಸರಮಾಡಬೇಡ". — ಎಂದಳು. ಅಚ್ಯುತನ ಮನಸ್ಸಿಗೆ ಸಮಾಧಾನವಿಲ್ಲ. ಗಾಡಿ ಹೊರಟುಹೋದ ಬಳಿಕ ಅವನೂ ಓಡಿಹೋಗಿ ಕಡಬದ ತನಕ ಅವರನ್ನು ಬೀಳ್ಕೊಟ್ಟನು. ಅವನಿಗೆ ಬಲು ದಿನಗಳಿಂದ ತಮ್ಮ ಹೊಸ ಕ್ಲಬ್ಬನ್ನು ಸಂದರ್ಶಿಸುವುದಾಗಿರಲಿಲ್ಲ. ಭಾವನಂಟರ ಕಾಳಗವಾದಂದಿನಿಂದ ಮನಸ್ಸಿನ ನೆಮ್ಮದಿ ಕಳೆದು ಹೋಗಿತ್ತು. ಹಾಗೊಮ್ಮೆ ಕ್ಲಬ್ಬಿಗೆ ಹೋಗಿ ಬರುತ್ತೇನೆ, ಎಂದುಕೊಂಡು ಹೊರಡುವ ಮನಸ್ಸುಮಾಡುತ್ತಿದ್ದಾನೆ. ಆದರೆ ಯಾಕೋ ಮನಸ್ಸು ನಿರುತ್ಸಾಹವಾಗಿದ್ದುದರಿಂದ ಆ ಕೆಲಸಮಾಡಲು ಮುಂದುವರಿಯಲಿಲ್ಲ.

ಈ ಹೊತ್ತು ಕಡಬವನ್ನು ಸೇರಿದ್ದಾಯಿತು. ಸೇರುವ ವೇಳೆ ಹನ್ನೊಂದು ಘಂಟೆ ಕಳೆದಿರಲಿಲ್ಲ. ಎಲ್ಲಿಗೆ ಹೋಗಲಿ? ನಾಗರಾಜನ ದರ್ಶನ ಸಂಜೆಗೇನೆ ಆಗಬೇಕು. ಅಲ್ಲಿಯ ತನಕ ಏನು ಮಾಡಲಿ ಎಂದು ತೋಚದೆ, ನೆಟ್ಟಗೆ ಹೆಡ್ ಮಾಸ್ತರ್ ನಾರಾಯಣರಾಯರ ಮನೆಗೆ ಹೋದ. ನಾರಾಯಣರಾಯರು ಎಳೆಪ್ರಾಯದವರು. ಏನು ಮೂವತ್ತಕ್ಕೆ ಮೀರದ ವಯಸ್ಸು; ತುಂಬ ಉತ್ಸಾಹಶಾಲಿ ಸ್ವಭಾವ. ನೋಟಕ್ಕೆ-ಹದವಾದ ಶರೀರ. ದಪ್ಪನೂ ಅಲ್ಲ, ತೆಳ್ಳಗೂ ಅಲ್ಲ. ಬಣ್ಣದಲ್ಲಿ ಕಂದು ಬಣ್ಣ. ಅವರ ಮಾತಿಗೊಂದು ಝೇಂಕಾರವಿತ್ತು, ಮನಸ್ಸನ್ನು ನಾಟುವ ಗುಣವಿತ್ತು. ಅವರಲ್ಲಿ ಅವರ ಶಿಷ್ಯರಿಗಿದ್ದ ವಿಶ್ವಾಸದಷ್ಟೇ ಅವರಿಗೂ ಅವರ

ಶಿಷ್ಯರ ಮೇಲೆ ಮಮತೆಯಿತ್ತು. ಈ ಮಮತೆ ವ್ಯಾಸಂಗದೊಡನೆ ಮುಕ್ತಾಯವಾಗುವ ತೆರನದ್ದಲ್ಲವೆಂದೇ ಅಚ್ಯುತ ಅವರ ಮನೆಗೆ ಹೋದುದು. ಓದುವಾಗಲೂ ಶಾಲೆಯನ್ನು ಬಿಟ್ಟುಳಿದ ಗಳಿಗೆಯಲ್ಲಿ ಹುಡುಗರೊಡನೆ, ಅಣ್ಣತಮ್ಮಂದಿರ ರೀತಿಯಲ್ಲಿರುವರು. ಇಂದು ಅವರು ಅಚ್ಯುತನೊಡನೆ 'ನೀವು' ಎಂದೇ ಮಾತನಾಡತೊಡಗಿದರು. "ಬಂದಿರಾ ಒಳ್ಳೆದಾಯಿತು. ಊಟಕ್ಕೆ ಎಲೆ ಹಾಕಲೇ, ಊಟ ಆಗಿಲ್ಲವಷ್ಟೆ"-ಎಂದು ಕಾಲು ತೊಳೆಯಲು ಹೇಳಿದರು. ಈ ಹಳೆಯ ಗುರುಗಳ ಉಪಚಾರ ಬಹುವಚನಗಳ ತೊಡಕಿಗೇನೆ ಅವನು ಸಿಲುಕಿ ಬಿಟ್ಟಂತಾಯಿತು. ಅವನು ಬೇಡವೆಂದರೂ 'ನೀವು, ನೀವು' ಎಂದು ಕರೆಯುವ ಗುರುಗಳ ಮಾತಿಗೆ ಅವನು ಕಿವುಡನಾಗಬೇಕಾಯಿತು.

ಊಟ ಮುಗಿಸಿಕೊಂಡು ಕ್ಲಬ್ಬಿನ ಪ್ರಸ್ತಾಪ ತೆಗೆದ. "ಹೇಗಿದೆ ಸರ್,ಕ್ಲಬ್? ನನಗೆ ಬರುವುದಾಗಲಿಲ್ಲ. ಏನೇನು ಪೇಪರು ಬರುತ್ತದೆ? ಯಾರಾರು ಬರುತ್ತಾರೆ"-ಎಂದೆಲ್ಲ ಕೇಳಲು, ಅವರು "ಹೂಂ, ನಡೆಯುತ್ತಿದೆ. ಇನ್ನು ಪ್ರಾರಂಭವಲ್ಲವೇ! ಪೇಪರು ಎರಡು ಮೂರು ಬರುತ್ತವೆ. ಈಗ ಎಂಟೊಂಭತ್ತು ಮಂದಿ ಮೆಂಬರರೂ ಇದ್ದಾರೆ. ಅಷ್ಟು ಸರಿಯಾಗಿ ಉಳಿದರೆ ಸಾಕು. ಆದರೆ ವರ್ಗಣಿ ಕೊಡುವ ಸಮಯ ಬಂದಾಗ ಇದೇ ಉಮೇದು ಉಳಿದೀತೆ—ಎಂಬುದು ಅನುಮಾನ. ಅಲ್ಲದೆ ಈ ವರ್ಷವೂ ಅಕ್ಕಿಗಾಗಲೀ ಅಡಕೆಗಾಗಲೀ ಧಾರಣೆ ಏರುವ ನಮೂನೆಯಿಲ್ಲ. ಮೂರು ನಾಲ್ಕು ವರ್ಷಗಳಿಂದ ಈ ಮುಗ್ಗಟ್ಟು ಉಳಿದಿದೆ. ಕಾಸಿಲ್ಲದೆ ಕೈಕಾಲು ಬಡಿಯುವವರೇ ಎಲ್ಲ.

"ಹಾಗೆ ನೋಡಹೋದರೆ—ತಿಂಗಳಿಗೆ ಇಪ್ಪತ್ತೊ, ಮೂವತ್ತೋ ಸಿಗುವ ನಾವೇ ವಾಸಿ. ನನಗೀಗ ನಲವತ್ತು ಅನ್ನಿ—ತಲೆ ಮಾಷ್ಟ್ರು ಅಲ್ಲವೇ. ಈಗಿನ ಮಟ್ಟಿಗೆ ಊರಿನ ವರ್ಗದಾರರಿಗಿಂತ ನಾವು ವಾಸಿ!" —ಎಂದರು.

ಅಲ್ಲಿಂದ ಅವರು "ಅಚ್ಯುತ, ನೀವು ಈಗ ಓದು ಮುಗಿಸಿಯಾಯಿತಲ್ಲ."

"ಬೇಡ ಸರ್, 'ನೀವು' ಅನ್ನಬೇಡಿ. 'ನೀನು' ಅನ್ನಬಾರದೇ"-ಎಂದು ಬಿಟ್ಟ. ಅವನಿಗೆ ಬೇಸರವಾಯಿತೆಂದು ತಿಳಿಯಲು, ಆಗಲಿ 'ನೀನು

ಎಂದೇ ಕರೆಯುವ. ಅಂದರೆ ನೋಡು, ಶಾಲೆ ಬಿಟ್ಟಮೇಲೆ ನಮ್ಮ ಜಬ್ರು ಖರ್ಚುಮಾಡುವುದು ಒಳಿತಲ್ಲ" ಎಂದರು. "ಹೋಗಲಿ. ಈಗ ನಾನು ಯಾವ ಪ್ರಸ್ತಾಪ ತೆಗೆದೆ ನಿನ್ನ ಹತ್ತಿರ"?

"ಮಾಸ್ತರಿಕೆ ಸುದ್ದಿ ಹೇಳಿದಿರಿ."

"ಅದೇನೆ. ನೀನೀಗ ಓದಿ ಮನೆಯಲ್ಲಿ ಸುಮ್ಮನಿರುವುದು ಸಮನಲ್ಲ." ನಿಮಗಿರುವ ಐವತ್ತು ಮುಡಿ ಅರುವತ್ತು ಮುಡಿಯಲ್ಲಿ ಈಗಿನ ದಿವಸದಲ್ಲಿ ಏನಾದೀತು? ಅದೂ ಅಲ್ಲದೆ ನಿನ್ನ ಭಾವನವರು ನಿಮ್ಮಮನೆಯಲ್ಲೇ ಜಕ್ಕು ಹೊಡೆದಿರಬೇಕು ಎಂದು ಕಾಣುತ್ತದೆಯಲ್ಲ........"

"ಅವರು ಇವತ್ತು ಬಿಡಾರ ಹೋದರು; ನಾನೀಗ ಕಳುಹಿಸಿಕೊಡಲು ಬಂದವ"—ಎಂದು ಅವರ ವೃತ್ತಾಂತವನ್ನು ತಿಳಿಸಿದನು.

"ನೀನು ಹಟ ಹಿಡಿದು ಒಂದು ಕೆಲಸ ಸಂಪಾದಿಸಿಕೊಳ್ಳಬೇಕು. ಈಗಿನ ಕಾಲದಲ್ಲಿ ದುಡ್ಡಿದ್ದವನೇ ದೊಡ್ಡಪ್ಪ. ಈಗ ನಮ್ಮ ನಾಗರಾಜನ ಹಿಂದೆಷ್ಟು ಜನ ತಿರುಗುತ್ತಾರೆಂದು ನೋಡು. ಮಾವನು ತೀರಿಕೊಂಡು ತಿಂಗಳು ಮೂರು ಕಳೆಯುವುದರಲ್ಲೇ ಅವನು ಊರಿಗೇನೆ ಒಬ್ಬ ಗುರಿಕಾರನಾದ. ಯಾವುದರಿಂದ? ಅವನಲ್ಲಿ ಹಣ ಇದೆ ಎಂಬುದರಿಂದ. ಹಾಗೆ, ಹಣ ಗುರಿಕಾರಿಕೆಗಳಿಗೆ ಬೇಡವಾದರೂ, ಉಂಡುಡಲು ಸಾಕಾಗಬೇಕಲ್ಲ. ಅದಕ್ಕೇನೆ ಅನ್ನುವುದು— ಊರಿಗೆ ದೂರವಾಗಿ ಕೆಲಸ ಸಿಕ್ಕಿದರೂ ಪ್ರಯೋಜನವಿಲ್ಲ. ಸಮೀಪದಲ್ಲಿ ಸಿಗಬೇಕು. ಬೇರೆ ಚಾಕರಿ ಏನಿದೆ? ಮಾಸ್ತರಿಕೆ ಸಂಪಾದಿಸಿಕೋ. ಈಗ ತತ್ಕಾಲಕ್ಕೆ ಪಂಚಾಯತ ಶಾಲೆಯಾದರೂ ಸರಿಯೇ, ಸೇರಿಕೋ. ಅಲ್ಲಿ ಸಂಬಳ ತಿಂಗಳು ತಿಂಗಳು ಸಿಗುವುದು ಕಷ್ಟವೇನೆ. ಆದರೂ ಸೇರಿಕೊಂಡು, ಒಂದು ಟ್ರೈನಿಂಗ್ ಮುಗಿದರೆ ಮುಂದೆ ಬೋರ್ಡು ಸರ್ವಿಸಿಗೆ ಸೇರಬಹುದು. ಇನ್ನು ನಮ್ಮ ಶಾಲೆಯಲ್ಲಿ ಎರಡು ಮೂರು ವರ್ಷದಲ್ಲಿ ರಿಟೈಯರು ಆಗುವವರಿಲ್ಲವೇ? ಸಂಕಪ್ಪ ಗೌಡರಿಗೆ ಹಲ್ಲು ಉದುರುವಲ್ಲಾಯಿತು. ಆಗ ಹೇಗಾದರೂ ಮಾಡಿ ಸೇರಿಕೊಂಡರೆ, ಮನೆಯನ್ನು ನೋಡಿಕೊಂಡಿರಬಹುದು"— ಎಂದು ದೀರ್ಘ ಉಪನ್ಯಾಸ ಮಾಡಿದರು.

ಅಚ್ಚುತನಿಗೆ ಅಂಥದೇನೋ ಅಸ್ಪಷ್ಟ ಆಸೆ ಮನಸ್ಸಿನ ಮುಂದೆ ಸುಳಿದಾಡುತ್ತಿತ್ತು. ಅದನ್ನು ಗಳಿಸುವ ಬಗೆಯೊಂದು ಮಾತ್ರ ತೋಚಿ

ರಲಿಲ್ಲ. ಈಗ ಒಮ್ಮೆಗೇ ಆಸೆ ಬಲವತ್ತರವಾಯಿತು. ಮನೆಯ ಆಯ ಶೀರ್ವೆ ತೆತ್ತ ಬಳಿಕ ಯಾವ ಖರ್ಚಿಗೂ ಸಾಲದೆಂದು ಅರಿತಿದ್ದನು. ಅಲ್ಲದೆ ತಂದೆಯವರು ಹೆರವರಿಗೆ ಭೋಗ್ಯ ಮಾಡಿದ ಭೂಮಿಗಳನ್ನು ಹಿಂದಕ್ಕೆ ದೊರಕಿಸಿಕೊಳ್ಳುವ ದಾರಿಯಿಲ್ಲವೆಂದೂ ಬಲ್ಲ. ಹಾಗೆಂದು ನೌಕರಿಗಾಗಿ ತೀರ ದೂರ ಹೋದಲ್ಲಿ ಮನೆಯಲ್ಲಿ ತಾಯಿ ಏನು ಮಾಡ ಬೇಕು ಎಂಬ ಚಿಂತೆ ಬೇರೆ ಕಾಡುತಿತ್ತು.

"ಆದರೆ ಸರ್, ಇಲ್ಲೆಲ್ಲಿ ಈಗ ಮಾಸ್ತರಿಕೆ ಖಾಲಿಯಿದೆ? ಯಾವ ಪಂಚಾಯಿತಿನಲ್ಲಿ?" ಎಂದು ವಿಚಾರಿಸಿದ.

"ಹಾಗೋ? ಎಷ್ಟು ಬೇಕಾದರೂ ಇವೆ. ಈ ವಟಾರದ ಪಂಚಾಯಿತು ಶಾಲೆಗಳಲ್ಲಿ ವರ್ಷಕ್ಕೊಬ್ಬೊಬ್ಬರು ಮಾಸ್ತರರು. ಹೊರಗಿನವರು ಬಂದು ಇಲ್ಲಿನ ಜ್ವರಕ್ಕೆ ತಾಳದೆ ಹೋಗುವುದೂ ಉಂಟು. ಪ್ರೆಸಿಡೆಂಟರುಗಳಿಂದ ಕೈಗೆ ಸಂಬಳ ಸಿಗದೆ ಓಡುವವರೂ ಉಂಟು. ಇದ್ದುದರಲ್ಲಿ ನಮ್ಮ ಬೊಗ್ಗಾಡಿ ಶಾಲೆ ಆದೀತು. ಪ್ರತಿ ತಿಂಗಳು ಅವರು ಕೊಡುವ ಹದಿನೈದರಲ್ಲಿ, ಅವರಿಗೆ ಮೂರು ರೂಪಾಯಿ ಕರಾರಿನಂತೆ ಬಿಟ್ಟರೆ ಬೇರೆ ರಿಕಾರ್ಡು, ಇನ್ನೊಂದು ಬಿಟ್ಟಿಯೆಂದು ತೊಂದರೆಯಿಲ್ಲ. ನೀನು ಅರ್ಜಿ ಹಾಕುವುದಾದರೆ ನಾನು ಹೇಳಿ ಮಾಡಿಸಿ ಕೊಡುತ್ತೇನೆ; ಒಮ್ಮೆ ಸೇರಿಕೊಂಡು ಟ್ರೈನಿಂಗಿಗೆ ಹೋಗು. ಟ್ರೈನಿಂಗ್ ಆದ ಮೇಲೆ ಬೇರೆ ಒಳ್ಳೆಯ ಸ್ಥಳ ಹುಡುಕಿದರಾಯಿತು"—ಎಂದರು.

ಅಚ್ಯುತನಿಗೆ ಹೊಸ ಸ್ವಪ್ನರಾಜ್ಯ ಕಾಣಿಸಿದಂತಾಯಿತು. ಅರ್ವತ್ತ ಮುಡಿ ನರಮಾನವಿರುವವರಿಗೇನೆ, ಸರಕಾರದ ಕಂದಾಯ ತೆತ್ತು ಆಗಿನ ಅಕ್ಕಿ ಧಾರಣೆಯಲ್ಲಿ, ನೂರಐವತ್ತು ರೂಪಾಯಿ ಕೈಗೆ ಬರುವುದಿಲ್ಲವಿತ್ತು. ಹೀಗಾಗಿ-ತಿಂಗಳಿಗೆ ಹನ್ನೆರಡು ರೂಪಾಯಿಯೂ ಕಡಮೆಯಲ್ಲ; ಅಲ್ಲದೆ ತಾನು ನಿರುದ್ಯೋಗಿ. ನಿತ್ಯ, ಮೂರು ಮೈಲು ನಡೆದು ಬರುವಷ್ಟು ಸಮೀಪ ಬೊಗ್ಗಾಡಿ. "ಆಗಲಿ ನೋಡುವ"- ಎಂದು ಒಪ್ಪಿಗೆಯಿತ್ತನು. ನಾರಾಯಣರಾಯರು ಅವನಿಂದ ಒಂದು ಅರ್ಜಿಯನ್ನು ಬರೆಯಿಸಿಕೊಂಡರು. ತಾವೇ ಹೋಗಿ ಅವರೊಡನೆ ಮಾತನಾಡಿ ಬರುವೆನೆಂದು ಭರವಸೆ ಹೇಳಿದರು.

ಅಚ್ಯುತ ಮನಸ್ಸಿನಲ್ಲಿ ಈಗಾಗಲೇ ಉಪಾಧ್ಯಾಯನಾದ. ಹಿರಿಯ

ಗುರುಗಳಾದ ನಾರಾಯಣರಾಯರೊಡನೆ ಅವರ ಕ್ಲಬ್ಬಿಗೆ ಹೋದ. ಯಾವುದೋ ಒಂದು ಅಂಗಡಿ ಕೋಣೆಗೆ 'International Club' ಎಂದು ಹೆಸರಿನ ಪಟ್ಟಿ ಅಂಟಿಸಿದ್ದರು. ಜಾನ್‌ಸನ್ ಮಾಸ್ತರರಿಗೆ ಅದಕ್ಕಿಂತ ಕಡಮೆಯಾದ ಯಾವ ಹೆಸರಿನಲ್ಲೂ ತೃಪ್ತಿಯಾಗಿರಲಿಲ್ಲ. ಹಾಗಾಗಿ ಎಲ್ಲರೂ ಒಪ್ಪಿ ಅದೇ ಹೆಸರನ್ನು ಮಂಜೂರು ಮಾಡಿದ್ದರು. "ಕ್ಲಬ್ಬೇನೋ ಇಂಟರ್‌ನೇಶನಲ್ ಆಯಿತು. ಬರುವವರು ಒಂದೇ ಪಂಗಡವಾಯಿತಲ್ಲ"-ಎಂದುದಕ್ಕೆ — ಜಾನ್‌ಸನರು "ನನಗೆ ಸರಿಸಮ ಇಂಗ್ಲೀಷ್ ಮಾತಾಡುವವರಿಲ್ಲ. ಆದ್ದರಿಂದ ನಾನು 'European' ಎಂದರು. ನಮ್ಮ ಹೆಡ್‌ಮಾಸ್ತರರು ಬಣ್ಣದಲ್ಲಿ ಸುಮಾರು ಹಂಗೇರಿಯವರ ಹಾಗಿದ್ದಾರೆ. ನೀನು ನಾಗರಾಜ, ಚಟ್ಟೆ ಮೂಗಿನವನಾದುದರಿಂದ ಜಪಾನಿ. ನೋಡು, ಸಂಕಪ್ಪ ಮಾಸ್ತರರು ಬಣ್ಣದಿಂದ ಥೇಟು ಆಫ್ರಿಕನರು. ನಿಗ್ರೋ"-ಎಂದರಂತೆ. ಎಲ್ಲರೂ ನಕ್ಕರು. ಆದರೆ ಸಂಕಪ್ಪ ಗೌಡರು ಮೂರು ದಿನದ ತನಕ ಶಾಂತರಾಗಲಿಲ್ಲ. ಜಾನ್‌ಸನರು ಸ್ವಂತ ಖರ್ಚಿನಿಂದ ಅವರಿಗೆ ಕಾಫಿ ಕುಡಿಯಿಸಿ, ಮೇಲೆ ರಾಜಿಯಾಗಬೇಕಾಯಿತು.

ಕ್ಲಬ್ಬಿನಲ್ಲಿ ಒಂದು ಮೇಜೂ, ಎರವಲು ತಂದ ನಾಲ್ಕಾರು ಸ್ಟೂಲುಗಳು, ಒಂದು ಬೆಂಚೂ ಇದ್ದುವು. ಬಂದ ವರ್ಗಣಿಯಿಂದ ಎಲ್ಲಕ್ಕೂ ಮೊದಲು ಒಂದು ಪೆಟ್ರೋಮ್ಯಾಕ್ಸ ತರಿಸಿದರು. International ಕ್ಲಬ್ಬಿನ ಪ್ರಾರಂಭ ಉತ್ಸವವನ್ನು ಸದ್ಯಕ್ಕೆ ಬೇಡೆಂದು ನಿರ್ಣಯಿಸಿದರು 'ಸ್ವಂತ ಕಟ್ಟಡ Put up ಮಾಡಿ ಆ ಮೇಲೆ ಎಲ್ಲ ರಂಗುಮಾಡುವ' ಎಂದು ಜಾನ್‌ಸನರೇ ಸೂಚಿಸಿದ್ದರು.

ಸರಿ, ಕ್ಲಬ್ಬಿಗೆ ಆ ದಿನ ಆರು ಮಂದಿ ಬಂದಿದ್ದರು. ಪೇಪರುಗಳು ಅವರವರ ಮನೆಯ ತನಕ ಹೋಗುತ್ತಿದ್ದುದರಿಂದ, ನಾಲ್ವರು ಬರುವ ತನಕ ಕಾದಿದ್ದು, ಅನಂತರ ಇಸ್ಪೀಟಿನ ಪಿಡಿ ಬಿಡಿಸಿದರೆ, ರಾತ್ರಿ ಎಂಟು ಘಂಟೆಯ ತನಕ ಅದರ ಪಾರಾಯಣವಾಗುವುದು. ಅದರ ವಿಷಯದಲ್ಲಿ ಜಾನ್‌ಸನರಿಗೆ ತುಂಬ ಹೆಮ್ಮೆ "The only International indoor game", ಎನ್ನುತ್ತ ಪಿಡಿಯನ್ನು ಕಲಸಿ, ಠೀವಿಯಿಂದ ಹಂಚುವುದೇ ಒಂದು ರಸದೂಟವಾಗಿತ್ತು. ಅಚ್ಯುತನಿಗೆ ಆಟ ಬಾರದು. ಅದ

ರಿಂದ ಸುಮ್ಮನೆ ಪತ್ರಿಕೆಯೊಂದನ್ನು ಹಿಡಿದು ಕುಳಿತ. ಜಾನ್‌ಸನರು "You Achuth, you have to become civilized ಇಸ್ಪೀಟು ಬಾರದವ ಯಾಕೆ ಮಣ್ಣಿಗೆ" ಎಂದು ಹಳಿದು ಆಟದಲ್ಲಿ ತಲ್ಲೀನರಾದವರು, ಸಂಜೆಯು ತನಕ ಮೈಮರೆತು ಆಡುತ್ತಲೇ ಇದ್ದರು.

ಅಚ್ಚುತ ಆಗಾಗ ಹೊರಗಿನಿಂದ ಯಾರು ಬರುವರೆಂದು ನೋಡುತ್ತಲಿದ್ದ. ದೂರದಿಂದ ಒಮ್ಮೆ ಬಂದು ತಿರುಗಿ ಹೊರಕ್ಕೆ ಹೋಗಿದ್ದ ನಾಗರಾಜ ಯಾರೋ ಇಬ್ಬರು ಆಳುಗಳನ್ನು ಕೂಡಿಕೊಂಡು ಬರುವುದು ಕಂಡಿತು. ಆದರಿಂದ ಇವನಾಗಿ ಹೊರಕ್ಕೆ ಹೋಗಿ ಅವನನ್ನು ಸ್ವಾಗತಿಸಿದನು. "ಬಾ ಅಚ್ಚು, ಒಂದು ಆಟ ಆಡುವ"--ಎನ್ನಲು "ನನಗೆಲ್ಲಿ ಇಸ್ಪೀಟು ಗೊತ್ತು?"-ಎಂದುದರಿಂದ ಗೆಳೆಯನ ದಾಕ್ಷಿಣ್ಯಕ್ಕೆ, "ಇವತ್ತು ಮುಗಿಲಿಲ್ಲ. ಇಲ್ಲೇ ಹೊರಗೆ ಗುಡ್ಡದಲ್ಲಿ ಕುಳಿತಿರುವ"-ಎಂದನು ನಾಗರಾಜ. "ಕುಳಿತಿರುವ ನಾಲ್ಕು ಮಿನಿಟು, ನಾನು ಊರಿಗೆ ಹೊರಡಬೇಕು ಆ ಮೇಲೆ" ಎಂದನು ಅಚ್ಚುತ. "ಅದನ್ನು ಅನಂತರ ನೋಡುವ" ಎಂದು ನಾಗರಾಜನೆನ್ನಲು ಇಬ್ಬರೂ ಮಾತನಾಡುತ್ತ ಕುಳಿತರು.

ಕ್ಲಬ್ಬಿನಿಂದ ಅಚ್ಚುತ ಏಕೆ ಕಣ್ಮರೆಯಾದನೆಂದು ನೋಡಲು ನಾರಾಯಣರಾಯರು ಹೊರಕ್ಕೆ ಬಂದರು. ದೂರದಲ್ಲಿ ಅಚ್ಚುತ ಕುಳಿತುದನ್ನು ಕಂಡು ಅವರೂ ಅಲ್ಲಿಗೆ ಬಂದರು. ನಾಗರಾಜನಿದ್ದ. "ನಾಗರಾಜ, ನಿಮ್ಮ ಭಾವನಲ್ಲವೆ ಬೊಗ್ಗಾಡಿ ಪ್ರೆಸಿಡೆಂಟರು?" ಎಂದರು.

"ಹೌದು ಯಾಕೆ? ಏನಾಗಬೇಕು?"

"ಅಲ್ಲ; ಅಲ್ಲಿನ ಶಾಲೆಯ ಮಾಸ್ತರಿಕೆ ಇವನಿಗೆ ತಾಗಿಸಿ ಹಾಕುವ ಎಂದು ಯೋಚಿಸಿದೆ" ಎಂದರು. ನಾಗರಾಜನಿಗೂ ಅದು ಒಪ್ಪಿಗೆಯಾಯಿತು. "ನಾನು ಕಾಗದ ಕೊಡುತ್ತೇನೆ"-ಎಂದ ಆತ.

ನಾರಾಯಣರಾಯರು "ಕಾಗದಗೀಗದ ಬೇಡ. ನಾಳೆ ಬೆಳಿಗ್ಗೆ ನಾವು ಮೂವರೂ ಅಲ್ಲಿಗೆ ಹೋಗಿ ಬರುವ. ನನಗೆ ಹೇಗೂ ರಜೆಯಿದೆ. ನಾಳೆ ಆದಿತ್ಯವಾರ" ಎಂದರು. ಗುರುಗಳ ಮಾತನ್ನು ನಿರಾಕರಿಸಲಾರದೆ, 'ಆಗಲಿ' ಎಂದ ನಾಗರಾಜ. "ನಾನು ಬೆಳಗ್ಗೆ ಅಲ್ಲಿಗೇನೆ ಬಂದರೆ ಸಾಲದೇ?" ಎಂದನು ಅಚ್ಚುತ.

"ಇವತ್ತಿನ ರಾತ್ರಿ ಊಟಹಾಕುವ ತ್ರಾಣವಿದೆ ನನಗೆ; ಅದಕ್ಕೋ

ಸ್ಕರ ಕೋಂಬಾರಿಗೆ ಆರು ಮೈಲು ನೀನು ನಡೆಯುವುದು ಬೇಡ" ಎಂದರು ನಾರಾಯಣರಾಯರು.

ಮರುದಿನ ನಾರಾಯಣರಾಯರು ಅಚ್ಯುತನನ್ನು ಕೂಡಿಕೊಂಡು ನಾಗರಾಜನ ಮನೆಗೆ ಬಂದು, ಉಪಹಾರ ಮುಗಿಸಿ, ಜೋಗ್ಗಾಡಿಗೆ ಹೋಗುವುದೆಂದು ನಿರ್ಣಯವಾಯಿತು. ತಿರುಗಿ ಎಲ್ಲರೂ ಎದ್ದು ಕ್ಲಬ್ಬಿನ ಒಳಕ್ಕೆ ಹೋದರು. ಹೋಗುವಾಗ ನಾಗರಾಜ, "ನೋಡಿದೆಯಾ ನಮ್ಮ ಬೋರ್ಡನ್ನು. ನಮ್ಮದು ಒಂದು ಬೇರೆ 'League of nations' ಇದ್ದ ಹಾಗೆ. ಈಗ ನಿನ್ನನ್ನು ಜಾನ್‌ಸನ್ ಮಾಸ್ತರರು ಕಾಣಲಿಲ್ಲವೆಂದು ತೋರುತ್ತದೆ. ನನ್ನನ್ನು ಜಪಾನಿನವನಾಗಿ ಮಾಡಿದ ಹಾಗೆ, ನಿನ್ನನ್ನು ಯಾವ ರಾಜ್ಯಕ್ಕೆ ಸೇರಿಸುತ್ತಾರೆಂದು ನೋಡಬೇಕು' — ಎಂದ, "ಹೋಯ್ ಮಾಸ್ತರೇ, ನಮ್ಮ ಅಚ್ಯುತ ಯಾವ Nation"? ಎಂದು ಕೇಳಿದನು. ಹಾಂ, ಅಚ್ಯುತ ಬಂದಿದ್ದಾನೋ! ಆಟದಲ್ಲಿ ನೋಡಲೇ ಇಲ್ಲ. Come on Mr. Maorie"–ಎಂದರು. ಅಚ್ಯುತ ನಗುತ್ತ "ಹೋಗಲಿ; ನಿಮ್ಮ ಭೂಗೋಲದ ಜ್ಞಾನ ಈಗಲಾದರೂ ಖರ್ಚಿಗೆ ಬಂತಲ್ಲ" ಎಂದನು.

ಆಟ ಮುಗಿಯಿತು. ಜಾನ್‌ಸನರು ಎದ್ದು "ಸಂಕಪ್ಪ ಮಾಸ್ತರೇ! ನಾಳೆ ಆದಿತ್ಯವಾರ, ನೆನಪುಂಟಲ್ಲ–ಯಾರೂ ತಪ್ಪಿಸಬಾರದು... ತಾಳ ಮದ್ದಲೆ very grand ಆಗಬೇಕು; ಅಚ್ಯುತನ ಲೆಕ್ಕಕ್ಕೆ ಚರಮುರಿ"– ಎಂದರು.

"ಒಳ್ಳೆಯ ಬಲಿ ಹುಡುಕಿದಿರಿ" ಎಂದರು ನಾರಾಯಣರಾಯರು.

"ಇವರಿಗೆ ತಿನ್ನುವ ಯೋಗ್ಯತೆ ಇದ್ದರೆ, ನನಗೆ ಕೊಡುವ ಯೋಗ್ಯತೆ ಬಂದೀತು"–ಎಂದನು ಅಚ್ಯುತ.



# ೬ನೆಯ ಅಧ್ಯಾಯ

ಅಚ್ಯುತನು ಈಗ ಬೊಗ್ಗಾಡಿ ಪಂಚಾಯತ ಶಾಲೆಯ ಉಪಾಧ್ಯಾಯ; ಏಕ ಉಪಾಧ್ಯಾಯನೂ, ಮುಖ್ಯ ಉಪಾಧ್ಯಾಯನೂ ಅಹುದು. ಅವನಿಗೆ ಕೆಲಸ ದೊರೆಯುವುದೇನೋ ಕಠಿಣವಾಗಿರಲಿಲ್ಲ. ಆ ಕೆಲಸಕ್ಕೆ ಪ್ರತಿಸ್ಪರ್ಧಿಗಳೂ ಇದ್ದಿಲ್ಲ. ಜ್ವರದ ಕೊಂಪೆ ಆ ಊರು. ಹೊರಗಿನಿಂದ ಹಲವರು ಬಂದು, ಅಲ್ಲಿ ಕೆಲಸಮಾಡಿದ್ದರು. ಎರಡು ಕಾರಣಗಳಿಂದ ಅವರು ಅಲ್ಲಿ ತಾಳದಾದರು. ಪಂಚಾಯತ ಅಧ್ಯಕ್ಷರು ಕಾರುಭಾರಿಗಳು. ಅವರ ಖಾಸಗಿ ಬರವಣಿಗೆ ಮತ್ತು ಬಿಟ್ಟಿಗಳನ್ನು ಉಪಾಧ್ಯಾಯರು ಮಾಡಬೇಕಿತ್ತು. ಮೇಲೆ, ಕಾಲಕಾಲಕ್ಕೆ ಪೂರ್ತಿ ಸಂಬಳವನ್ನೂ ಕೊಡುವ ಹವ್ಯಾಸ ಅವರಲ್ಲಿಲ್ಲ. ಅಧ್ಯಕ್ಷರ ಕೈಯನ್ನು ಕಾದು, ಬೇಸರಗೊಳ್ಳುವುದರ ಜತೆಗೆ, ಊರಿನ ಜ್ವರದ ಹವೆಯಿಂದಲೂ ಕಂಗಾಲಾಗುತ್ತಿದ್ದರು. ಇತ್ತ ಶಾಲೆಯಿರುವ ತಾವು, ಆ ಊರಿನ ಬಾಲಕರಿಗೆ ಅನುಕೂಲವಾಗಿರುವುದಕ್ಕಿಂತ—ಅಧ್ಯಕ್ಷರ ಮನೆಗೆ ಸಮೀಪವಾಗಿರಲಿ—ಎಂದು ಆರಿಸಿದ್ದಾಗಿತ್ತು. ಈ ಎಲ್ಲ ಕಾರಣಗಳಿಂದ ಅಲ್ಲಿ ಯಾವ ದಿನವೂ ಏಳೆಂಟು ಹುಡುಗರಿಗಿಂತ ಹೆಚ್ಚಿನ ಹಾಜರಿಯಿರಲಿಲ್ಲ. ಕೆಲಸ, ಗ್ರೆಂಟುಗಳನ್ನು ಉಳಿಸಿಕೊಳ್ಳುವ ಯೋಚನೆಯಿಂದ ಕಳ್ಳ ಹಾಜರಿಯನ್ನು ಹಾಕಿಯೇ ಮೂವತ್ತಕ್ಕೆ ಮೇಲ್ಪಟ್ಟು ಹೆಸರುಗಳನ್ನು ಕಾಣಿಸುವ ವಾಡಿಕೆ ಬಂದಿತ್ತು. ಒಂದು ದಿನ ಶಾಲಾ ಆಫೀಸರರ ಸವಾರಿ, ಯಾರಿಗೂ ತಿಳಿಸದೆ ಆ ಊರಿಗೆ ಬರಬೇಕೇ? ತಿಳಿಸಿದ್ದಲ್ಲಿ, ಬೇಕಾದರೆ ನೂರು ಮಂದಿ ಬಾಲಕರನ್ನು ಜಮಾಯಿಸುವ ಶಕ್ತಿ ಒಂದು ದಿನದ ಮಟ್ಟಿಗಾದರೂ, ಅಧ್ಯಕ್ಷ ನಾಭಿರಾಜಯ್ಯನವರಿಗೆ ಇರುತಿತ್ತು. ಆದರೆ ಆಫೀಸರರು ಎಳನೀರಿನ ಯೋಚನೆಯೂ ಇಲ್ಲದೇನೆ ಫಕ್ಕನೆ ಬಂದರು. ಹತ್ತುಗಂಟೆಗೆ ಬಂದು ಶಾಲೆಯ ಜಗುಲಿಯ ಮೇಲೆ ನಿಂತವರಿಗೆ, ಹನ್ನೆರಡು ಗಂಟೆಗೆ ಉಪಾಧ್ಯಾಯರ ದರ್ಶನವಾಯಿತು. ಆಫೀಸರರನ್ನು ನೋಡಿ ಅವರು ಜ್ವರ ನಟಿಸಿದರು. ಅವರ ಬಲವಂತಕ್ಕೆ ಹಾಜರಿ ಪುಸ್ತಕ ತೋರಿಸಲು, ಅಲ್ಲಿ ಏಳು ದಿನಗಳ ಹಾಜರಿ ಗುರುತೇ ಇದ್ದಿಲ್ಲವಾಗಿತ್ತು.

ಮುಂದಕ್ಕೆ ನಾಭಿರಾಜಯ್ಯನವರನ್ನು ಕರೆಯಿಸಿ ಉಪಾಧ್ಯಾ

ಯರ, ಮೇಲೆ ದೂರು ಹೇಳಿದರು. ನಾಭಿರಾಜಯ್ಯ ತನ್ನ ಮಾನವನ್ನು ಕಾಯಲು, 'ಉಪಾಧ್ಯಾಯರ ಹಣೆಯ ಬರಹವೇ ಹೀಗೆ'ಂದರು. ಉಪಾಧ್ಯಾಯರು ತಮ್ಮ ಸರದಿಯಿಂದ "ಇವರು ಮೂರು ತಿಂಗಳ ಸಂಬಳ ತಿಂದರೆ, ನಾವೇನು ಈ ಊರಲ್ಲಿ ಗಾಳಿ ತಿಂದು ಬದುಕುವುದೇ" ಎಂದರು. ಶಾಲೆಯು ಇನ್ನು ಅಭಿವೃದ್ಧಿ ತೋರದಿದ್ದಲ್ಲಿ ಮುಚ್ಚಬೇಕಾಗುವುದೆಂದು ಆಫೀಸರರ ಶಿಫಾರಸಿಯಾಯಿತು. ಈ ಪರಿಸ್ಥಿತಿಯಲ್ಲಿರುವಾಗಲೇ ಅಚ್ಯುತರಾಯನು ನಾರಾಯಣರಾಯರನ್ನೂ ನಾಗರಾಜನನ್ನೂ ಕರೆಕೊಂಡು ಆ ಶಾಲೆಯನ್ನು ಸಂದರ್ಶಿಸಿದುದು. ನಾಗರಾಜನು ತಮ್ಮ ಬಂಧುವಿಗೆ ಉಪದೇಶಿಸಿದನು: "ನೀವು ಹೇಗಾದರೂ ಶಾಲೆಯನ್ನು ಉಳಿಸಿಕೊಳ್ಳಿ. ತಿಂಗಳು ತಿಂಗಳ ಮೊದಲನೇ ತಾರೀಕಿಗೆ ಹದಿನೈದು ರೂಪಾಯಿ ಕೊಡಬೇಕು. ಇವರು ಊರ ಮನೆಯವರು; ಪ್ರಯತ್ನ ಮಾಡಿದರೆ,ಒಂದು ತಿಂಗಳಲ್ಲಿಹಾಜರಿಯನ್ನು ಐವತ್ತಕ್ಕೆ ಏರಿಸಬಹುದು. ಆಗ ಎರಡೆರಡು ಉಪಾಧ್ಯಾಯರುಗಳ ಬಗ್ಗೆ ಗ್ರೇಂಟು ಪಡೆಯಬಹುದು" ಎಂದನು.

ಆಗಾಗಲೇ ಪೇಚಿಗೆ ಸಿಲುಗಿದ ನಾಭಿರಾಜಯ್ಯ ಒಪ್ಪದೆ ಉಪಾಯವಿಲ್ಲ. ಅಚ್ಯುತನು ಅದರಿಂದ ಉಪಾಧ್ಯಾಯನಾದನು. ಮರುದಿನವೇ ಶಾಲೆಗೆ ಬರತೊಡಗಿದನು. ಬೆಳಿಗ್ಗೆ ಮೂರು ಮೈಲು ದೂರ ನಡೆದು ಶಾಲೆಗೆ ಬರುವುದು. ಮಧ್ಯಾಹ್ನ ಅವಲಕ್ಕಿ ಮೊಸರಿನ ಊಟ; ಸಂಜೆ ಮನೆಗೆ. ಇದೇ ದಿನದ ಕಾರ್ಯಕ್ರಮವಾಯಿತು. ಬಂದ ಒಂದು ತಿಂಗಳು ದಿನ ಗ್ರಾಮ ಸಂಚಾರವೇ ಆಯಿತು. ಊರವರ ಬೈಗಳನ್ನೂ, ದೂರನ್ನೂ, ಕೇಳಿಕೊಂಡು ಮನೆಮನೆಗೆ ತಿರುಗುತ್ತ, ವಿದ್ಯಾರ್ಥಿಗಳನ್ನು ಕೂಡಿಸುವ ಕೆಲಸವಾಯಿತು. "ಯಾವ ಮಣ್ಣಿಗೆ ನಮ್ಮ ಮಕ್ಕಳಿಗೆ ವಿದ್ಯೆ?" ಎಂಬವರು ಕೆಲವರು; "ನಿಮಗೆ ಹೊಸತರಲ್ಲಿನ ಉಮೇದು! ಆ ಮಾಸ್ತರರೂ ಹಾಗೆಯೇ ಇದ್ದರು. ಮತ್ತೆ ಮತ್ತೆ ರಾಯರ ಕುದುರೆ ಕತ್ತೆಯಾಯಿತು. ಅಮಾವಾಸೆ ಹುಣ್ಣಿಮೆಗೆ ಮಾತ್ರ ಶಾಲೆ ತೆರೆಯಲು ಶುರುಮಾಡಿದರು. ಮಕ್ಕಳಿಗೆ ಶಾಲೆ ಬಾಗಿಲು ಕಾಯುವ ಕೆಲಸವಾಯಿತು"–ಎಂದರು. ಅಚ್ಯುತನ ಮನೆಯ ಗುರುತಿದ್ದವರು "ನಿಮಗ್ಯಾಕಪ್ಪ ಈ ಕೆಲಸ? ನಾಭಿರಾಜಯ್ಯ ಸಂಬಳ ಕೊಡಲಿಕ್ಕಿದೆಯೇ? ನೀವು

ಉಳಿಯಲಿಕ್ಕಿದೆಯೇ? ಅವರಿಗೆ ಕಾಸು ಖರ್ಚಿಲ್ಲದೆ ಎಲ್ಲಾ ಡೌಲು ನಡೆಯಬೇಕು. ಅಲ್ಲದೆ ಆ ಶಾಲೆಯಿರುವುದು ತಮ್ಮ ಮಕ್ಕಳಿಗೆ ಅನುಕೂಲವಾಗಬೇಕೆಂದು; ಅದು ಊರವರೆಲ್ಲರ ಸಲುವಾಗಿಯಲ್ಲ"—ಎಂದರು. ಅಚ್ಯುತನಿಗೆ ಒತ್ತಟ್ಟು ನಿರಾಶೆ; ಇನ್ನೊತ್ತಟ್ಟು ಅವರು ಆಡುತ್ತಿದ್ದ ಮಾತುಗಳು ನಿರಾಧಾರವಾದುದಲ್ಲ ಎಂದು ತೋರಿತು. ಆದರೂ ತಾನು ಒಂದು ಕೈ ನೋಡಿಬಿಡುತ್ತೇನೆ; ನನ್ನ ಮುಖ ನೋಡಿಯಾದರೂ ಕಳುಹಿಸಿ"–ಎಂದನು.

ಒಂದು ತಿಂಗಳ ಶ್ರಮದಲ್ಲಿ ದಿನದ ಹಾಜರಿಯು ಮೂವತ್ತಕ್ಕೆ ಬಂದಿತು. ಪುಸ್ತಕದ ಮೇಲೆ ಐವತ್ತು ಹೆಸರುಗಳು ದಾಖಲಾದುವು. ನಿತ್ಯವೂ, ಬಾರದಿರುವ ಹುಡುಗರ ಮನೆಗೆ ಹೋಗುವ ಕೆಲಸ, ಅಚ್ಯುತರಾಯರಿಗೆ. ಒಂದೆರಡು ಬಾರಿ ಶಾಲೆಯ ಅಭಿವೃದ್ಧಿಯನ್ನು ತಿಳಿದುಕೊಳ್ಳಲು, ನಾಭಿರಾಜಯ್ಯನವರು ಶಾಲೆಯ ತನಕ ಬಂದು, ಇದ್ದೊಂದು ಕುರ್ಚಿಯನ್ನು ಆವರಿಸಿದ್ದರು.

ಅಚ್ಯುತ ಈ ಉದ್ಯೋಗಕ್ಕೆ ಹೊಸಬ. ಐದು ತರಗತಿಯ ಬಾಲಕರನ್ನು ಒಬ್ಬನೇ ನಡೆಯಿಸಿಕೊಂಡು ಹೋಗಬೇಕು. 'ನಿಮಗೆ ಕಾಪಿ; ನಿಮಗೆ ಲೆಕ್ಕ; ನಿಮಗೆ ಓದು; ನಿಮಗೆ ಆಟ' ಎಂದು ಕೆಲಸ ಹಂಚಿಹಾಕಿ, ಶತಾವಧಾನಿಯಂತೆ ಎಲ್ಲರಿಗೂ ಪಾಠ ಹೇಳಬೇಕು. ಆದರೆ ಒಮ್ಮೆ ಆಟ, ಕತೆ, ಹಾಡುಗಳಿಂದ ಅವರ ಮನಸ್ಸನ್ನು ಒಲಿಸತೊಡಗಿದ ಅಚ್ಯುತನಿಗೆ ಮುಂದೆ ಕಷ್ಟವಾಗಲಿಲ್ಲ. ರಾತ್ರಿ ತಾನು ಮನೆಯಲ್ಲಿ 'ಅಂಬುಜಾನನೆ ಕೇಳು ತಾಂಡವ'ಗಳ ಅರ್ಥ ಓದಿಕೊಂಡು ಹಗಲು ಬಂದು, ಪಾಠ ಹೇಳುತಿದ್ದ. ಇದರಿಂದಾಗಿ, ಊರಿನ ನಡೆಯುವ ಹಸುಗೂಸುಗಳೂ, ತಮ್ಮ ಅಣ್ಣಂದಿರ ಅಕ್ಕಂದಿರ ಜತೆಗೆ ಶಾಲೆಗೆ ಬರತೊಡಗಿದುವು. ಅವುಗಳನ್ನು ಆಡಿಸುವುದೂ ಇವನಿಗೊಂದು ಕೆಲಸವಾಗಬೇಕೆ? ಆದರೆ ಉತ್ಸಾಹದ ಕಾಲವದು. ಜತೆಗೆ ತಕ್ಕಷ್ಟು ಹಟವೂ ಇದೆ. ಶಾಲೆಯನ್ನು ಉತ್ತಮ ಸ್ಥಿತಿಗೆ ತರಬೇಕೆಂಬ ಹವಣಿಕೆ ಬೇರೆ ಮನಸ್ಸಿನಲ್ಲಿ!

ನಾಲ್ಕು ತಿಂಗಳ ಕಾಲ ದುಡಿಯುವುದರಲ್ಲಿ ಅಚ್ಯುತ ಸೊರಗಿ ಸುಣ್ಣವಾಗಿದ್ದಾನೆಂದು ಅವನ ತಾಯಿ ಹೇಳಲಾರಂಭಿಸಿದಳು. ಮನೆಯ ಕೆಲಸ, ಬೇಸಾಯವೆಲ್ಲ ಅವಳಿಂದಲೇ ನಡೆಯುತ್ತಿತ್ತು. ಬೇರೆ ಯಾವ

ರಗಳೆಗಳಿಲ್ಲ. "ಇವನೊಬ್ಬ ಶಾಲೆಯ ಭಾರದಿಂದಲೇ ಸೊರಗಿದನೆಂದರೆ ಆಶ್ಚರ್ಯವಲ್ಲವೆ"-ಎನ್ನುತ್ತಿದ್ದಳು. ಆಗಾಗ ತಾನು ಪಾಠ ಹೇಳಿಸಿಕೊಳ್ಳಲು ಅಚ್ಯುತ ನಾರಾಯಣರಾಯರಲ್ಲಿಗೆ ಹೋಗುತ್ತಿದ್ದ. ಐದನೆಯ ತರಗತಿಯ ಪಾಠ ಹೇಳುವ ಕೆಲಸವು ಅವನಿಗೂ ತ್ರಾಸವಾಗುತ್ತಿತ್ತು. ಅದರಿಂದ "ಮಾಸ್ಟ್ರೇ ಅದು ಹೇಗೆ? ಇದು ಹೇಗೆ?" ಎಂದು ಕೇಳುತ್ತಿದ್ದ. ಅವರೂ ಇವನಿಗೆ ಮಾಹಿತಿ ಕೊಡುತ್ತಿದ್ದರು. ಆದರೆ ಈತ ಶರೀರದಲ್ಲಿ ಸೊರಗಿದ್ದನ್ನು ಅವರೂ ಕಂಡರು. "ಅಚ್ಯುತ, ಬಹಳ ಒದರಿಕೊಳ್ಳುತ್ತೀಯಾ ಕ್ಲಾಸಿನಲ್ಲಿ? ಮುಖ ತೀರ ಕಂಗಾಲಾಗಿದೆ" ಎಂದರು.

"ಅಮ್ಮನೂ ಹಾಗೆನ್ನುತ್ತಾಳೆ!"

"ನೀನು ಮಧ್ಯಾಹ್ನಕ್ಕೇನು ಮಾಡುತ್ತೀ?"

"ಅವಲಕ್ಕಿ ಮೊಸರು ಕೊಂಡುಹೋಗುತ್ತೇನೆ."

"ನಿಜವೇ! ನೀನು ಮಧ್ಯಾಹ್ನ ಉಪವಾಸವಿರುವುದರಿಂದ ಹೀಗಿದ್ದೀಯ" ಎಂದರು.

ಅಚ್ಯುತ ನಕ್ಕನು. ನಗುವಿನಲ್ಲೊಂದು ಖೇದ ಕಾಣಿಸಿತ್ತು. "ಅಹುದು ಅಲ್ಲಿಗೆ ಅವಲಕ್ಕಿ ಮೊಸರನ್ನು ಕೊಂಡುಹೋಗುವುದು ನಿಜ. ಆದರೆ ಒಬ್ಬನೇ ತಿನ್ನಲು ಬರುತ್ತದೆಯೇ? ನೋಡಿ, ಅಲ್ಲಿ ಮೂರುನಾಲ್ಕು ಹುಡುಗರು ಕೇವಲ ನನ್ನ ದಾಕ್ಷಿಣ್ಯಕ್ಕೆ ಬರುವುವು. ಅವು ಬರಲು, ಹೋಗಲು, ಮೂರು ಮೂರು ಮೈಲು ಗುಡ್ಡ ಹತ್ತಿ ಆಗಬೇಕು. ಆ ಕಾಡು ದಾರಿಯಲ್ಲಿ ಬರುವುದೇ ಒಂದು ಆಶ್ಚರ್ಯ! ಅದರಲ್ಲಿ ಮಧ್ಯಾಹ್ನ ಯಾರು ಅವಕ್ಕೆ ಗತಿ? ಪಾಪ! ನೀರು ಕುಡಿಯುತ್ತವೆ. ಮನೆಗೆ ಹೋದರೂ ಏನಿಲ್ಲ. ಮೂರು ಮೈಲು ಹೋಗಿಬರುವುದು ಸಾಧ್ಯವೇ? ಹೀಗಾಗಿ, ನನ್ನ ತಿಂಡಿಯನ್ನು ಅವಕ್ಕೆ ಹಂಚಿ ದಿನಕಳೆಯುತ್ತಿದ್ದೇನೆ" ಎಂದ. ಅವನಿಗೆ ತನ್ನ ಹಸಿವಿನ ವ್ಯಥೆಯು ಕಾಣಿಸಿರಲಿಲ್ಲ. ತನ್ನ ಶಾಲೆಗೆ ಬರುತ್ತಿದ್ದ ಆ ಕೂಸುಗಳ ಜೀವನದ ಸಮಸ್ಯೆ ಇದಿರಾಗಿ, ಬಲು ದುಃಖವಾಯಿತು. ನಾರಾಯಣರಾಯರು ಅದನ್ನು ತಿಳಿಯದವರಲ್ಲ. "ಇಲ್ಲೇ ನೋಡುವುದಿಲ್ಲವೇ, ಐದು ಮೈಲಿನಿಂದ ಬರುವ ಮಕ್ಕಳಿದ್ದಾರೆ. ಹತ್ತು ಹನ್ನೆರಡು ವರ್ಷ ಪ್ರಾಯದವು. ಬುತ್ತಿಯನ್ನು ತರುತ್ತವೆ. ಅದರಲ್ಲಿ ಇರುವುದು ಹಳಸಲು ಅನ್ನ. ಕೆಲವು ದಿನ ಅದೂ ಇಲ್ಲ. ಏನೋ ಓದಬೇಕೆಂಬ

ಆಸೆ" ಎಂದರು. ಕೆಲಸ ಹೊತ್ತು ಇಬ್ಬರೂ ಮೌನವಾಗಿದ್ದರು.

"ಅದಿರಲಿ, ನಾಭಿರಾಜಯ್ಯನಿಂದ ಸಮನಾಗಿ ಸಂಬಳ ಸಿಗುತ್ತಿ-ದೆಯೋ?"

"ಹೂಂ!" ಎಂದನು.

"ಹೂಂ! ಎಂದರೆ?"

"ಬಂತು ಮೂರು ತಿಂಗಳು ದಿವಸ. ಈ ತಿಂಗಳಲ್ಲಿ ಹನ್ನೆರಡು ರೂಪಾಯಿ ಕೊಟ್ಟಿದ್ದಾರೆ. ಮೂರು ರೂಪಾಯಿ ಚಿಲ್ಲರೆ ಇಲ್ಲ. ನೋಟು ಮುರಿಸಿ ಮತ್ತೆ ಕೊಡುವ ಎಂದರು. ಅಂದು ಹದಿನೈದು ದಿನವಾಯಿತು."

"ಅಲ್ಲಿಗೇ ಬಂತೇ! ಅಚ್ಯುತ, ನೀನು ಬಿಟ್ಟಿ ದುಡಿಯಬೇಡ! ಅವರ ಶಾಲೆ ಹೋಗುವ ಸ್ಥಿತಿಯಲ್ಲಿದ್ದುದನ್ನು ಉಳಿಸಿದವನು ನೀನು. ನಿನಗೂ ಕೋಕರ್ ಹಾಕಿದರೆ!

"ಅಂಥಾದ್ದಾದರೆ ಈ ಒಂದು ವರ್ಷ ಇರು. ಈ ವರ್ಷ ನೀನು ಹೇಗಾದರೂ ಟ್ರೈನಿಂಗಿಗೆ ಒಂದು ದಾರಿ ಮಾಡಿಕೊಳ್ಳಬೇಕಲ್ಲ.

"ಆದರೂ ಬಿಟ್ಟಿ ಕೆಲಸ ಮಾಡಬೇಡ"-ಎಂದರು.

ಹೀಗೆ ತನ್ನ ಉಪಾಧ್ಯಾಯ ವೃತ್ತಿಯ ಕಥೆಯನ್ನು ಆಗಾಗ ಗುರುವಿನ ಮುಂದೆ ಹೇಳಿಕೊಳ್ಳುವುದು ಅವನ ಶೀಲವಾಗಿತ್ತು. ಅಲ್ಲಿಗೆ ಹೋದವನು ಅವರ ಹೆಸರಾದ International clubನ ದರ್ಶನ ಮಾಡದೆ ಹೋಗುತ್ತಿರಲಿಲ್ಲ. ನಾಗರಾಜ, ಜಾನ್‌ಸನರು, ಸಂಕಪ್ಪ ಗೌಡರು— ಇವರುಗಳನ್ನು ಮಾತನಾಡಿಸಬೇಡವೇ? ಕ್ಲಬ್ಬಿನಲ್ಲಿ ಮೊದಲಿನದೇ ಅಭಿವೃದ್ಧಿ ಇನ್ನು ಉಳಿದುಬಂದಿದೆ. ವರ್ಗಣಿಯಿಂದ ಕೆಲಸ ಸಾಗದಿದ್ದರೂ, ನಾಗರಾಜನ ಕೃಪೆಯಿಂದ ಹೊಸ ಬೆಡ್‌ಮಿಂಟನ್ ಕೋರ್ಟು ಒಂದು ಸೇರಿಕೊಂಡಿದೆ. ಅದರಿಂದ ಇಸ್ಪೀಟಿನ ಭರ ಕಡಮೆಯಾಗಿದೆ. ಅಚ್ಯುತ ಹೋದಾಗಲೆಲ್ಲ ಒಂದೊಂದು ಆಟ ಆಡುತ್ತಿದ್ದನು. "ಅಚ್ಯುತ, ನೀನು regular ಆಡಿದರೆ champion ಆಗುವೆ. ನನಗೆ ಒಂದು idea ಇದೆ. ಈ ವರ್ಷದ ಕೊನೆಗೆ all Puttur tournament ಕರೆಯಬೇಕೆಂದು. ಆಗ ಮುಂದಿನ ವರ್ಷ Dt. tournament ಕರೆಯಬಹುದು. ಏನು ಹಳ್ಳಿಯವರೆಂದು ಯಾರೂ ಸಸಾರ ಮಾಡುವುದು ಬೇಡ! ಈಗ ಒಂದು ಸಾರಿಗೆ ಮಂಗಳೂರಿನವರಿಗೂ ನೀರು ಕುಡಿಸಲು ಕಡಬ ಸಾಕು" ಎಂ

ದರು ಜಾನ್‌ಸನರು. "ಹೋಯ್ ಜಾನ್‌ಸನರೇ, ನಮ್ಮ ಕ್ಲಬ್ International ಆದ ಮೇಲೆ ನಾವು ಅಂತರಾಷ್ಟ್ರೀಯ ಟೂರ್ನಮೆಂಟಿಗೆ ಕಡಮೆಯಾಗುವಲ್ಲಿ ಭಾಗವಹಿಸಲೇ ಕೂಡದು"-ಎಂದರು ನಾರಾಯಣರಾಯರು. ಜಾನ್‌ಸನರು "ಏನು-ನಿಮ್ಮ ಸರ್ವಿಸು ತೆಗೆದುಕೊಳ್ಳಲಿಲ್ಲವೆಂದೇ! ಥೂತ್, ಈ ದರಿದ್ರ Racket ಪ್ರಯೋಜನವಿಲ್ಲ. ಯು.ಬಿ. ರಾಯನಿಂದ ಕನಿಷ್ಠ ಹತ್ತು ರೂಪಾಯಿ ಕಡಮೆಯ Racket ತರಿಸಿ ಆಡಿಯೇ ಫಲವಿಲ್ಲ. ಈ Racket ಕೃಷಿ Department ನವರಿಗೆ ಬಂಬುಚ್ಚು ಹಿಡಿಯಲಿಕ್ಕಾದೀತು" ಎಂದು ಅಬ್ಬರಿಸಿ ಮುಂದುವರಿಸಿದರು.

ಅಚ್ಚುತನಿಗೆ ಕಡಬದ ಕ್ಲಬ್ಬಿನಲ್ಲಿ, ಆಟದಲ್ಲಿ, ಪತ್ರಿಕೆಗಳನ್ನು ಓದುವುದರಲ್ಲಿ ಕ್ರಮೇಣ ಅಭಿಲಾಷೆ ಹೆಚ್ಚುತ್ತ ಬಂದಿತು. ಆದರೆ ಮನೆಯು ಕ್ಲಬ್ಬಿಗಿಂತ'ಆರುಮೈಲು ದೂರ'ಎಂಬುದನ್ನು ಸ್ಮರಿಸಿದರೆ ಎಲ್ಲಆಸೆಯೂ ತಣಿಯುವುದು. "ಒಂದು ವೇಳೆ ಟ್ರೈನಿಂಗ್ ಆಗಿ, ಕಡಬದ ಶಾಲೆಯಲ್ಲಿ ನೌಕರಿ ಸಿಕ್ಕಿದರೆ, ಕ್ಲಬ್ಬನ್ನು ಮುಂದಕ್ಕೆ ತರಬಹುದು. ಜಾನ್‌ಸನರು ಎನ್ನುವ ಹಾಗೆ ಅನೇಕ ಚಟುವಟಿಕೆಗಳ ಬೀಡಾಗಿ ಮಾಡಬಹುದು" ಎಂದು ಅಂದುಕೊಳ್ಳುವನು.

ಅಚ್ಚುತನಿಗೆ ಒಂದು ದಿನ, ಶಾಲಾ ಆಫೀಸರರು ಬರುವರೆಂಬ ವರದಿ ಸಿಕ್ಕಿತು. ಅವನು ಹಿಗ್ಗಿದ. ಬಿದ್ದುಹೋದ ಶಾಲೆಯನ್ನು ತಾನು ಎಷ್ಟೊಂದು ಊರ್ಜಿತಕ್ಕೆ ತಂದೆನೆಂದು ತೋರಿಸುವೆನಾಗಿ ನಿಶ್ಚೈಯಿಸಿಕೊಂಡನು. ಆದರೆ ಆಫೀಸರರ ಮುಂದಕ್ಕೆ ಉಪಾಧ್ಯಾಯರ ಮಂಡೆಗೆ 'ಒಳಜ್ವರ' ಬರುವುದೆಂದು ಅವನು ವಿದ್ಯಾರ್ಥಿಯಾಗಿರುವಾಗಲೇ ಮನಗಂಡಿದ್ದ. ಸರ್ವಿಸಾದ ಸಂಕಪ್ಪಗೌಡರ ಮುಂದೆ ಇನ್ಸಪೆಕ್ಟರರು ನಿಂತಾಗ, 'ಆರು ಮೂರ್ಲಿ ಒಂಬತ್ತಾ'ಗುವುದನ್ನೂ ಕಂಡಿದ್ದ. ಅದರಿಂದಾಗಿ—"ಇದು ಯಾವ ಭೂತವೋ ಬರುವುದು? ಏನೇನು ಜಬರಿಕೆ ಮಾಡಲಿಕ್ಕಿರುವರೋ? ಹಳೆಯ ಪ್ರಾರಬ್ಧ ಹೊತ್ತು ಬಂದ ಶಾಲೆಯ ಮೇಲೆ ಅವರಿಗಿರುವ ಕೋಪವನ್ನು, ಹೊಸ ಉಪಾಧ್ಯಾಯನಾದ ತನ್ನ ಮೇಲೆ ತೋರಿಸಿದರೆ!" ಎಂದು ಅಂಜಿದನು.

ಆಫೀಸರರು ಬರುವ ಮೂರು ದಿನ ಮುಂಚಿತವಾಗಿ "ಮಗು ಶೇಷ, ನಿನ್ನ ಅಂಗಿ ತೊಳೆಯಬೇಕು; ಮಗು ನಾಗಿ, ಈ ಹರಕು ಲಂಗ

ವನ್ನು ಬಿಟ್ಟು ಬಾ. ನಾಗಪ್ಪ, ನೀನು ಅಂಗಿ ಗುಂಡಿ ತಿನ್ನುವುದೊಂದು ಕೆಲಸ ಬಿಟ್ಟರೆ ಆದೀತು"-ಎನ್ನತೊಡಗಿದನು.

"ಅವರು ಬರುವ ದಿನ ನಂಟರ ಮನೆ ಊಟ ಎಂದು ದನಮೇಯಿಸುವವರು ಯಾರೂ ಇಲ್ಲವೆಂದು—ಹೋಗಬೇಡಿ. ಒಮ್ಮೆ ಗಟ್ಟಿ ಮನಸ್ಸು ಮಾಡಿ ಬಂದುಬಿಡಿ ನೋಡುವ. ಈ ವರ್ಷ ಜಾಸ್ತಿ ಹಾಜರಿ ಹಾಕಿದ ಹುಡುಗರಿಗೆ ಒಳ್ಳೆಯ ಸ್ಲೇಟು ತೆಗಿಸಿಕೊಡುತ್ತೇನೆ ಎಂದಿದ್ದೆನಲ್ಲ. ಮರೆಯಬೇಡಿ-" ಎಂದನು.

ಇತ್ತ ಶಾಲೆಯ ಗೋಡೆಗೆ ಯುಗಾಂತರಗಳಿಂದ ಅಂಟಿದ ಧೂಳನ್ನು ಜಾಡಿಸುವ ಕೆಲಸ ತಾನೇ ಮಾಡಿದನು. ಆ ದಿನ ಮನೆಗೆ ಹೋಗುವಾಗ ಅವನ ರೂಪ ನೋಡಬೇಕಿತ್ತು! "ಮಗು, ದೂಮ ಮಾಡುವ ಕೆಲಸ ನೀನೇ ಮಾಡಿದೆಯೋ! ಎಲ್ಲಾದರೂ ಬಿದ್ದೆಯೋ?" ಎಂದು ತಾಯಿ ಕೇಳಬೇಕಾಯಿತು. ಲಕ್ಷ್ಮಮ್ಮ ಮಗನ ಕಾರುಭಾರ ಕೇಳಿ ಹೊಟ್ಟೆ ಬಿರಿಯುವಂತೆ ನಕ್ಕಳು.

ಇನ್ನು ಇನ್ಸಪೆಕ್ಟರರೂ ಯಾವ ದಾರಿಯಾಗಿ ಬರುತ್ತಾರೆ? ಬರುವಾಗ ತಾನು ಶಾಲೆಯಲ್ಲಿರಬೇಕೋ, ದಾರಿಯಲ್ಲಿ ನಿಂತಿರಬೇಕೋ? ಕಡಬದ ಶಾಲೆಯವರ ಹಾಗೆ, ಮಕ್ಕಳ ಕೈಯಲ್ಲಿ ಒಂದೊಂದು ದೊಣ್ಣೆ ಕೊಟ್ಟು, ಸ್ಕೌಟು ಸಲಾಮು ಹಾಕಿಸಬೇಕೋ ಹೇಗೆ? ಈ ಕೊನೆ ಗಳಿಗೆಗೆ ದೊಣ್ಣೆಗಳನ್ನು ಎಲ್ಲಿಂದ ತರಿಸಲಿ? ಎಲ್ಲಕ್ಕೂ ಮಿಗಿಲಾಗಿ, ಅವರಿಗೆ ಕಾಫಿ, ಊಟದ ಏರ್ಪಾಡು ಏನು? ಬಂದು ಹೋಗುವವರಾದರೆ ಆಯಿತು.ರಾತ್ರಿಯೂ ಇಲ್ಲಿ ನಿಂತರೆ?ಇವೇ ಸ್ವಗತ ಭಾಷಣಗಳು ನಡೆದು, ನಾಭಿರಾಜಯ್ಯನವರಲ್ಲಿಗೆ ನಿರ್ಧಾರಕ್ಕೆ ಹೋಗಬೇಕಾಯಿತು. ನಾಭಿರಾಜಯ್ಯನಿಗೆ ಹಿಂದಲ ಬಾರಿಯೇ, ಅವರೊಡನೆ ಮುಖ ತೋರಿಸುವ ಹಾಗಾಗಿರಲಿಲ್ಲ. ಹೀಗಾಗಿ-"ಮಾಸ್ತರರೇ ನಾನು ಬರುವುದಿಲ್ಲ. ಇಕೊಳ್ಳಿ ಮೂರು ರೂಪಾಯಿ. ನನ್ನ ಲೆಕ್ಕಕ್ಕೆ ಬೇಕಾದ್ದು ತರಿಸಿ, ಮಾಡಿ. ನಾನು ಇಲ್ಲವೇ ಎಂದು ಅವರಾಗಿ ಕೇಳಿದರೆ, ಹೇಳಿಕಳ್ಳಿ"--ಎಂದರು. ಸರಿ, ಹಿಂದಲ ತಿಂಗಳಲ್ಲಿ ಅವರ ಸಂಬಳದಿಂದಲೇ ಕತ್ತರಿಸಿದ ರೂಪಾಯಿಗಳಲ್ಲಿ ಮೂರನ್ನು ಈಗ ಮಾಸ್ಟರರ ಕೈಮೇಲಿರಿಸಿದರು.

"ಎಲ್ಲ ಜವಾಬುದಾರಿಯು ನನ್ನ ಮೇಲೆಯೆ' ಎಂದು ಮತ್ತಷ್ಟು

ಗಾಬರಿಯಾದ ಅಚ್ಯುತ. ಇನ್ಸ್‌ಪೆಕ್ಷನಿಗೆ ಮೊದಲು ಶಾಲೆಗೆ ಸುಣ್ಣವನ್ನು ಬಳಿಯಿಸಿಯಾಗಿತ್ತು. ಒಂದೆರಡು ಕಾಟಿ, ಗಿಳಿಗಳ ಚಿತ್ರ ತೂಗಿಸಿದನು. ತಾನೇ ಖುದ್ದಾಗಿ ತಾರೆಣ್ಣೆಯಿಂದ ಮುಂಭಾಗದ ಬಾಗಿಲಿನ ಮೇಲೆ 'ದೇವರ ಭಯವೇ ಜ್ಞಾನದ ಆರಂಭ' ಎಂದೂ ಬರೆದುಬಿಟ್ಟನು.

ಇನ್ನು ಆಫೀಸರರ ಸಲುವಾಗಿ, ಬಾಳೆಯ ಹಣ್ಣು, ಎಳನೀರುಗಳನ್ನು ತಂದಿರಿಸಿದನು. ಅಲ್ಲೇ ಒಂದು ಮೂಲೆಯಲ್ಲಿ ಅಡುಗೆಯ ಸಲಕರಣೆಗಳೂ ಕಾದಿದ್ದುವು. ಅಡುಗೆಯಾದರೆ ಅಡುಗೆ, ಕಾಫಿಯಾದರೆ ಅದು–ಎಂದು ಎರಡಕ್ಕೂ ಸಿದ್ಧತೆಮಾಡಿ, ಹತ್ತು ಘಂಟೆಯಾಗುವಾಗ ಬಾಲಕರಿಗೆ ಉದ್ಯೋಗ ನೇಮಿಸಿ, ತಾನು ಶಾಲೆಯ ಜಗುಲಿಯ ಮೇಲೆ ಕೈಕಟ್ಟಿ ಕಾದು ನಿಂತನು. ದಾರಿಯಲ್ಲಿ ಸೈಕಲಿನ ಘಂಟೆ ಎಂದು ಕೇಳಿಸೀತೆಂದು ಅವನ ಕಿವಿ ನಿಮಿರಿತ್ತು.

ಸರಿಯಾಗಿ ಹತ್ತು ಘಂಟೆಗೆ ಸೈಕಲು, ಆಫೀಸರರನ್ನು ಹೇರಿಕೊಂಡು ಬಂದುಬಿಟ್ಟಿತು. ಬರುವಾಗಲೇ ಅವರ ಮುಖ, ಬೇಗೆಯಿಂದ ಕೆಂಪಡರಿತ್ತು. ಅಚ್ಯುತನಿಗೆ ಮತ್ತಷ್ಟು ಕಕ್ಕಾಬಿಕ್ಕಿಯಾಯಿತು. ಅವರನ್ನು ಬರಮಾಡಿಕೊಂಡು, ಅವರ ಸೈಕಲನ್ನು ತೆಗೆದಿರಿಸಿ, ಕಾಲು ತೊಳೆಯಲು ನೀರು, ಟವೆಲುಗಳನ್ನು ಕೊಟ್ಟನು. ದಣಿದ ಅವರಿಗೆ ಎಳನೀರಿನ ಸೇವನೆಯಾಯಿತು. ಇಷ್ಟೆಲ್ಲ ನಡೆದ ಮೇಲೆ "ನಾನು ಪಾಠ ತೊಡಗಲೆ?"–ಎಂದು ಕೇಳಿದನು. ಶಾಲೆಯು ನೀರವವಾಗಿತ್ತು! ಐವತ್ತರಲ್ಲಿ ನಾಲ್ವತ್ತು ಬಾಲಕರು ಬಂದ ಮಹಾ ಸುದಿನವದು. ಆಫೀಸರಿಗೆ ಹೇಳಲಾರದಷ್ಟು ಸಂತೋಷವಾಯಿತು. ಅವರು "ನಾನು ಕುಳಿತಿರುತ್ತೇನೆ. ನೀವು ಎಂದಿನಂತೆ ನಿಮ್ಮ ಕೆಲಸ ನಡೆಯಿಸಿ" ಎಂದರು. ಎರಡು ತಾಸುಗಳ ತನಕ ಅಚ್ಯುತ ತನ್ನ ಗುರುತನವನ್ನು ಚಲಾಯಿಸಿದನು. ಕತೆ ಹೇಳಿಸಿದನು, ಅವರಿಗೆ ಪಾಠಮಾಡಿದನು; ಆಡಿಸಿದನು. ಬಾಲಕರು ಉತ್ಸಾಹವಾಗಿದ್ದರು. ಎಡೆಯಲ್ಲಿ ಆಫೀಸರರನ್ನು ಕದ್ದು ನೋಡುತಿದ್ದುದೂ, ಅಚ್ಯುತ "ಚೂ, ಚೂ" ಎಂದು ಮಕ್ಕಳ ಗಮನ ಸೆಳೆಯುತಿದ್ದುದೂ, ಆಫೀಸರರ ಗಮನಕ್ಕೆ ಬಾರದಿರಲಿಲ್ಲ. ಅವರು ಕುಳಿತಲ್ಲಿಂದಲೇ ಹಾಜರಿಯ ಪುಸ್ತಕ ತಿರುವಿದರು. ಅಚ್ಯುತ ಬಂದ ಆರು ತಿಂಗಳಲ್ಲಿ ಶಾಲೆ ಇಷ್ಟು ಉತ್ತಮಗೊಂಡೀತೆಂದು ಅವರು ತಿಳಿದಿರಲಿಲ್ಲ.

ಈಗ ಘಂಟೆಯಾಯಿತು. ಅಚ್ಯುತನೇ ಅದನ್ನು ಬಾರಿಸಿದನು; ಹುಡುಗರೆಲ್ಲ ಹೊರಕ್ಕೆ ಹೋದರು. ಅಚ್ಯುತನು "ತಮಗೆ ಊಟವೇ! ಕಾಫಿಯೇ!" ಎಂದನು. "ಅದಕ್ಕೆ ಎಲ್ಲಿಗೆ ಹೋಗಬೇಕು?"–ಎಂದರು ಅವರು. ಆ ದಿನ ಇಪ್ಪತ್ತನಾಲ್ಕು ಮೈಲು ಸವಾರಿ ಮಾಡಿ ಬಂದ ಅವರ ಉಸಿರೇ ಇನ್ನೂ ಶಾಂತವಾಗಿರಲಿಲ್ಲ. ಅದರಲ್ಲಿ ನಡೆಯಲು ಮನಸ್ಸಾದೀತೆ? "ಅಡುಗೆ ಇಲ್ಲೇ ಮಾಡುತ್ತೇನೆ" ಎಂದ ಅಚ್ಯುತ. ಅಡುಗೆ ಸಲಕರಣೆ ಅವರ ಕಣ್ಣಿಗೆ ಗೋಚರಿಸಿತು. "ಕಾಫಿ ಸಾಕು" ಎಂದರು. ಒಂದೆರಡು ಬಾಲಕರ ಬೆಂಬಲದಿಂದ ಪರಿಷ್ಕಾರವಾದ ಉಪ್ಪಿಟ್ಟು, ಕಾಫಿ ಸಿದ್ಧವಾಯಿತು. ಬಾಳೆಯ ಹಣ್ಣು ಮೇಜನ್ನೇರಿತು. "ನೀವು ಜತೆಗೆ ಬನ್ನಿ" ಎಂದು ಆಫೀಸರರು ಆತನನ್ನು ಆಮಂತ್ರಿಸಲು, ಅಚ್ಯುತ ಹಿಗ್ಗಿದ. ತನ್ನ ಕೆಲಸ ಅವರಿಗೆ ಒಪ್ಪಿತೆಂದು ತಿಳಿದುಕೊಂಡ.

ಅವರು ಅಷ್ಟು ಬಲವಂತ ಮಾಡಿದ ಮೇಲೆ, ತಾನು ನಿಂತು, ಬೇರೆಯಾಗಿ ಇಷ್ಟು ಫಲಾಹಾರ ಮಾಡಿದನು. ನಿಜಕ್ಕೂ ಕಾಫಿ ಉಪ್ಪಿಟ್ಟು ಚೆನ್ನಾಗಿದ್ದುವು. ಈತ ತನ್ನ ಪಾಕಕ್ಕೆ ತಾನೇ ಹಿಗ್ಗುವ ಕಾಲಕ್ಕೆ ಅವರು -"ಮಾಸ್ತರೇ, ನೀವು ಒಂದು ಹೊಟೇಲಿಟ್ಟರೂ ಬಚಾಯಿಸುವಿರಿ" — ಎಂದರು. ಅಚ್ಯುತ ನಕ್ಕನು. ಆ ಮೇಲೆ ಅವರು "ನಿಮಗೆ ಸಮನಾಗಿ ಸಂಬಳ ಬರುತ್ತದೆಯೇ? ಅಲ್ಲ, ಹಿಂದಿನವರ ಹಾಗೆ ಡಿಸ್ಕೌಂಟು ಹೋಗುತ್ತಾ......." ಎಂದರು. "ಇಲ್ಲಿಯ ತನಕ ಬಂದಿದೆ" ಎಂದ ಅಚ್ಯುತ. ನಿಜಕ್ಕೂ ಇನ್ನೂ ಮೂರು ರೂಪಾಯಿ ಬರುವುದಿತ್ತು.

ಆಯಾಸಗೊಂಡಿದ್ದ ಅವರು ತಿರುಗಿ ಶಾಲೆಯು ತೊಡಗುವ ತನಕ ಮಲಗಿಕೊಳ್ಳುವೆನೆಂದರು. ಎರಡು ಬೆಂಚುಗಳನ್ನು ಜತೆಗೆ ಜೋಡಿಸಿ, ಪುಸ್ತಕಗಳಿಂದೊಂದು ದಿಂಬನ್ನು ರಚಿಸಿಕೊಟ್ಟು, ಅಚ್ಯುತ ಹೊರಕ್ಕೆ ಬಂದನು.

ಎರಡು ತಾಸಾಗುವ ವೇಳೆ ಬಾಲಕರ ಜಮಾವಣೆಯಾಗಿತ್ತು. ಅವರ 'ಗುಂಯಿ ಗುಂಯಿ ಗುಸುಗುಸು'ಗಳನ್ನು ತಡೆಯುತ್ತ ಬಾಗಿಲಿನಿಂದ ಇಣಿಕಿದನು. ಆಫೀಸರರಿಗೆ ತುಂಬ ನಿದ್ರೆ ಬಂದಿತ್ತು. ಅವರನ್ನು ಎಚ್ಚರಿಸಬಾರದೆಂದು — ಮರದ ನೆರಳಿನಲ್ಲಿ 'ಶಾಂತಿನಿಕೇತನವನ್ನು' ನಡೆಯಿಸಿದನು. ಶಾಲೆ ಬಿಡುವ ಸಮಯವೂ ಆಯಿತು. ಆಗ ಹುಡು

ಗರನ್ನು ಹೋಗಗೊಡಿಸಿ, ತಿರುಗಿ ಒಳಕ್ಕೆ ಬಂದನು. ಅವನಿಗೆ ಸೋಜಿಗ ವಾಯಿತು; ಆಫೀಸರರು ಜ್ವರದಿಂದ ನಡುಗುತ್ತಿದ್ದರು. ಹೊದೆಯಲು ಅರಿವೆಯಿರಲಿಲ್ಲ. ಓಡಿಹೋಗಿ ಅಧ್ಯಕ್ಷರ ಮನೆಯಿಂದ ಕಂಬಳಿಯನ್ನು ತಂದುಕೊಟ್ಟನು. ತಿರುಗಿ ಚೆನ್ನಾಗಿ ಕಾಫಿ ಮಾಡಿಕೊಟ್ಟನು. ಅವರ ಕಣ್ಣೆಲ್ಲ ಕೆಂಪಡರಿ ಊದಿತ್ತು; ಮಾತು ಹೊರಡುವುದೇ ಅಸಾಧ್ಯವಾ ಗಿತ್ತು. ಅಚ್ಯುತನಿಗೆ ಏನು ಮಾಡುವುದೆಂದೂ ತೋರಲಿಲ್ಲ. ಅಲ್ಲಿ ರಾತ್ರಿ ಕಳೆಯುವ ಬಗೆ ಹೇಗೆ ಎಂದು ಯೋಚಿಸಿದನು. ಹೊತ್ತು ಕಂತುವ ವೇಳೆಗೆ ಅವರ ಮೈ ಬೆವರಿತು.ಆಗ ನಾಭಿರಾಜಯ್ಯನವರೂ ಬಂದಿದ್ದರು. ಆದರೆ ಇನ್ಸ್‌ಪೆಕ್ಟರರು ಹಳೆಯ ನೆನಪಿನಿಂದ ಅವರ ಮುಖ ನೋಡ ಲಿಲ್ಲ. ಆದುದರಿಂದ ನಾಭಿರಾಜಯ್ಯ, ಮಾಸ್ತರರ ಕೈ ಮೇಲೆ ಎರಡು ಕ್ವಿನೀನು ಗುಳಿಗೆಗಳನ್ನು ಇರಿಸಿ ಹೊರಟುಹೋದರು. ಆಫೀಸರರು, "ಮಾಸ್ತರರೇ ನಿಮಗೆ ತಡವಾಯಿತೆಂದು ಕಾಣುತ್ತದೆ. ನಾನು ರಾತ್ರಿ ಇಲ್ಲಿಯೇ ಮಲಗಿರುತ್ತೇನೆ. ನೀವು ಮನೆಗೆ ಹೋಗಿ"-ಎಂದರು. ಯಾರ ಮನಸ್ಸು ಒಡಂಬಟ್ಟೀತು? ಕೊನೆಗೆ ಅವನ ಆಗ್ರಹಕ್ಕೆ ಅವರು ಸೈಕಲಿನ ಮೇಲೆ ಕುಳಿತುಕೊಂಡರು. ಅಚ್ಯುತ ಅವರನ್ನು ಆದರಿಸಿಕೊಂಡು ಮೆಲ್ಲನೆ ತನ್ನ ಮನೆಯ ಕಡೆಗೆ ಹೊರಟನು. ಈತ ಬರುವುದು ತಡವಾ ದುದರಿಂದ ತಾಯಿ ದೂಮನನ್ನು ಕಳುಹಿಸಿದ್ದಳು. ಹೀಗಾಗಿ ಇಬ್ಬರೂ ಸೇರಿ ಅವರನ್ನು ಮನೆಗೆ ಮುಟ್ಟಿಸಿದರು. "ಉಸ್ಸೆಂದು" ಆಫೀಸರರು ಮಲಗಿಕೊಂಡರು. ರಾತ್ರಿ ಹಾಲಿಷ್ಟು ಕುಡಿದರೇ ಹೊರತು, ಎಷ್ಟು ಬಲ ವಂತಗೊಳಿಸಿದರೂ ಊಟ ಮಾಡಲಿಲ್ಲ.

ತಿರುಗಿ ಅವರು ಆ ಊರನ್ನು ಬಿಡಲು ಮೂರು ದಿನಗಳ ಕಾಲ ಹಿಡಿಯಿತು. ತೀವ್ರ ಜ್ವರದಿಂದ ಸೊರಗಿಬಿಟ್ಟರು. ಆದರೆ ಕ್ವೀನಿನು, ವಿಶ್ರಾಂತಿಗಳಿಂದ ಸಾಕಷ್ಟು ಚೇತನಗೊಂಡ ಬಳಿಕ, 'ಹೋಗುವುದು. ಬಸ್ಸಿನಲ್ಲಿ'-ಎಂದು ನಿರ್ಧರಿಸಿದರು. ಅಚ್ಯುತ "ತಾವು Inspection report ಬರೆಯಲಿಲ್ಲವಲ್ಲ. ಪುಸ್ತಕ ತಮ್ಮಲ್ಲಿಗೆ ಕಳಿಸಲೇ"? ಎಂದು ಕೇಳಿದನು. "ಆಗಲಿ, ಹಾಗೆ ಮಾಡಿ" ಎಂದರು ಅವರು. ಈ ನಡುವೆ ನಾಲ್ಕು ದಿನಗಳು ಶಾಲಾ ದಿನಗಳಾದುದರಿಂದ ಅಚ್ಯುತನು ಶಾಲೆಯ ತನಕ ಮುಖ ಹಾಕಿ, ಹುಡುಗರಿಗೆ ರಜೆ ಕೊಟ್ಟು ಬಂದುದೂ ಆಯಿತು.

ಇನ್ಸ್‌ಪೆಕ್ಟರರು ಹೊರಟುಹೋದ ಬೆನ್ನಿಗೇ, ತಿರುಗಿ ಶಾಲೆಯ ಕೆಲಸ ತೊಡಗಿತು. ತನ್ನ ಅನುಭವವನ್ನು ನಾರಾಯಣರಾಯರಿಗೆ ಹೇಳುವ ತನಕ, ಅವನ ಮನಸ್ಸು ತಡೆಯದು. ಇತ್ತ, ರಿಮಾರ್ಕು ಪುಸ್ತಕವನ್ನು ಅವರು ಒಯ್ದುದರಿಂದ 'ಅದರಲ್ಲಿ ಮಾತ್ರ ಏನು ಬರೆಯುತ್ತಾರೆಯೋ' ಎಂಬ ಪುಕ್ಕು ಪೂರ್ಣವಾಗಿ ಬೆದರಿಸಿತು. ತನ್ನ ಉತ್ಸಾಹವನ್ನು ಬಿಗಿ ಹಿಡಿದು, ನಾಲ್ಕು ದಿನಗಳ ದುಡಿತವನ್ನು ಮುಗಿಸಿ, ಆದಿತ್ಯವಾರವನ್ನು ಇದಿರುಗೊಂಡನು. ಆ ಬೆಳಿಗ್ಗೆಯೇ ಕಡಬವನ್ನು ಸೇರಿ ಗುರುಗಳ ಮುಂದೆ, ನಡೆದ ಸಂಗತಿಗಳನ್ನು ವಿಸ್ತರಿಸಿದನು. "ನೀವು ಕಾಫೀ ಹೊಟೇಲನ್ನು ಇರಿಸಬಹುದೆ"ಂದು, ಮೇಲಾಫೀಸರು ಸದಾನಂದ ರಾಯರಿಂದ ಶಿಫಾರಸು ಬಂದುದು, ಅವರು ಜ್ವರ ಹಿಡಿದು ಮಲಗಿದುದು, ಮೂರು ದಿನ ನರಳಿದುದು, ತಾನು ಉಪಚರಿಸಿದುದು, ಸಾಭಿರಾಜಯ್ಯನವರಿಗೂ ಅವರಿಗೂ ಸಮನಾಗಿ ಮಾತುಕತೆ ನಡೆಯದುದು-ಎಲ್ಲವನ್ನೂ ವಿಸ್ತರಿಸಿದ್ದಾಯಿತು. "ಅಚ್ಯುತ, ನೀನು ಇನ್ಸ್‌ಪೆಕ್ಟರರನ್ನು ಬಗಲಿಗೇನೆ ಬಡಿದುಬಿಟ್ಟೆ. ಅವರು, ಸಾಮಾನ್ಯ ಯಾರ ಬಲೆಗೂ ಬೀಳದವರು, ನಿನ್ನ ಬಲೆಗೆ ಬೀಳಬೇಕೇ?" ಎಂದು ನಾರಾಯಣರಾಯರು ನಕ್ಕರು. ಅವರು ಊಟಕ್ಕೆ ಕುಳಿತಾಗಲೇನೆ ಕಡಬದ ಊರಿನ ಅಂಚೆ ಮಾಸ್ತರರ ಸವಾರಿ ಆ ಕಡೆ ಬಂದಿತು. ಅವರು ಮನೆಯ ಮೆಟ್ಟಲನ್ನು ಹತ್ತುವ ಮೊದಲೇ "ಹೌದೇ ನಾರಾಯಣರಾಯರೇ, ಪ್ರತಿಆದಿತ್ಯವಾರವೂ ನಮ್ಮ ಬೊಗ್ಗಾಡಿ ಮಾಸ್ತರರು ಬರುವುದುಂಟಲ್ಲ; ಇವತ್ತು ಬಂದಿದ್ದಾರೋ? ಏನೋ ರಿಕಾರ್ಡು ಬಂದಿದೆ" ಎಂದರು.

ಅವರು ಊಟದ ಮನೆಯಿಂದಲೇ--"ಅವನು ಬೊಗ್ಗಾಡಿಯಲ್ಲಿರಬೇಕು. ಇದು ಬೊಗ್ಗಾಡಿಯೇ?"

"ಅಲ್ಲ ಬಂದಿದ್ದಾರೋ ಎಂದು ಕೇಳಿದೆ."

"ಇರಲಿ, ಏನು ರಿಕಾರ್ಡು ಬಂದದ್ದು ಅದು?"

"ಏನೋ ಬುಕ್‌ಪೋಸ್ಟು ಶಾಲಾ ಇನ್ಸ್‌ಪೆಕ್ಟರರಿಂದ. ಹೌದಯ್ಯ, ಮೊನ್ನೆ ನಿಮ್ಮ ಸದಾನಂದರಾಯರು ಬೊಗ್ಗಾಡಿಗೆ ಸೈಕಲಿನ ಮೇಲೆ ಹೋದದ್ದಲ್ಲವೇ? ಅಲ್ಲಿಂದ ಸುಬ್ರಮಣ್ಯ, ಇಚ್ಲಂಪಾಡಿ ಇನ್ಸ್‌ಪೆಕ್ಷನ್ ಮುಗಿಯಿಸುತ್ತಾರೆಂದು ಗದ್ದಲವಿತ್ತು. ಒಂದು ಕಡೆಗೂ ಹೋಗಲಿಲ್ಲ-

ಊರಿಗೂ ಹಿಂದೆ ಹೋಗಲಿಲ್ಲ. ಏನಾದರೂ ಹುಲಿಗಿಲಿ ಹಿಡಿಯಿತೋ. ಮರ್ದಾಳದ ಬದಿಯಲ್ಲಿ ಒಂದು ಜೋರಿನ ಹುಲಿ ತಿರುಗಾಡುತ್ತಿದೆ ಎಂಬ ಸುದ್ದಿ." ಎಂದು ಜಗಲಿಯ ಮೇಲೆ ಬಂದು ಕುಳಿತುಕೊಂಡು ಮಾತನಾಡತೊಡಗಿದರು.

ಒಳಗೆ ಇವರ ಊಟವಾಗುತ್ತಿತ್ತು. ಇಬ್ಬರೂ ತಮ್ಮ ಊಟವನ್ನು ಮುಗಿಸಿ ಹೊರಗೆ ಬರುವಾಗ ಅಂಚೆ ಮಾಸ್ತರರು ಕಂಡರು. ಕಂಡು ನಗುತ್ತ, "ಹಾಂ, ನಾರಾಯಣರಾಯರೆ! ನೀವು ಒಳ್ಳೆಯ ಜನ. ನಿಮ್ಮ ಮಾತನ್ನು ನಂಬಿ, ನಾನೇನಾದರೂ ತಾರೀಫು ಮಾಡಿದ್ದರೆ ಅಚ್ಯುತರಾಯರ ಕಿವಿಗೆ ಬೀಳುತ್ತಿತ್ತು" ಎಂದರು.

"ಅದಕ್ಕೇನು? ಹಿಂದೆ ಹೇಳುವುದನ್ನು ಮುಂದೆಯೇ ಹೇಳಿದರಾಯಿತು" ಎಂದರು ನಾರಾಯಣರಾಯರು.

ಅವರು ಕೈತೊಳೆದುಕೊಂಡು ಬಂದರು. ಅಚ್ಯುತನಿಗೆ ಟಪ್ಪಾಲು ಪಡೆದು ಒಡೆಯುವ ವರೆಗೆ ಆತುರ. ಮುಂದೆ, ಪುಸ್ತಕವನ್ನು ತೆರೆಯುವ ಮೊದಲೇ ನಾರಾಯಣರಾಯರಿಗೆ ಕೊಟ್ಟನು. ಅವರು ತೆಗೆದು ಓದಿದರು. "ಅಚ್ಯುತ, ಈ ವರೆಗೆ ಯಾರಿಗೂ ಈ ನಮೂನೆ ಬರೆದವರಲ್ಲ. ಎರಡೆರಡು ಕುಂಟು ಪಂಕ್ತಿಯಲ್ಲದೆ ಅವರ ರಿಮಾರ್ಕ್ ಇರುವುದಿಲ್ಲ. ನಿನಗೇನು, ಶಿಫಾರಸಿನ ಸುರಿಮಳೆ! ಪ್ರಾಯಶಃ ನಿನ್ನ ಊಟ ಉಪಚಾರ ಮೆಚ್ಚಿ ಹಾಗೆ ಮಾಡಿದರು" ಎಂದರು ಹೆಡ್ ಮಾಸ್ತರರು. ಅದರ ಪಠಣ ಪೋಸ್ಟ ಮಾಸ್ಟರರ ಮುಂದೆಯೇ ಜರುಗಿತು. ನಮ್ಮ ಪೋಸ್ಟು ಮಾಸ್ಟರರಿಗೆ ಹಿಂದೆ ಶಾಲೆ ಮಾಸ್ತರಿಕೆ ಮಾಡಿದ ರೂಢಿಯಿತ್ತು. ಅವರು ಸಹ "ಹೌದಯ್ಯ ಇದೇನು! ಅಚ್ಯುತ ಮಾಸ್ತರರನ್ನು ಅಟ್ಟಕ್ಕೇರಿಸಿಬಿಟ್ಟಿದ್ದಾರೆ. ಇನ್ನು ಮಾಸ್ತರರಿಗೆ ಸಂಬಳ ಸಿಗದಿದ್ದರೂ ಚಿಂತೆಯಿಲ್ಲ"— ಎಂದರು. ನಾರಾಯಣರಾಯರು "ನೋಡುವ, ನಾಭಿರಾಜಯ್ಯ ಇನ್ನು ಇವನ ಸಂಬಳದಲ್ಲಿ ಏನಾದರೂ ಚಿವುಟಲಿ. ನಾಗರಾಜನ ಮುಂದೆ ಮಂಗಳಾರತಿ ಮಾಡಿಸುತ್ತೇನೆ. ಅವರ ಶಾಲೆ, ನಮ್ಮ ಅಚ್ಯುತನಲ್ಲದೆ ಹೋದರೆ, ಯಾವಾಗಲೇ ನೀರು ಕುಡಿಯುತ್ತಿತ್ತು" ಎಂದರು.

ಅಂತು ಸಂಜೆಯ ಒಳಗಾಗಿ ಬೊಗ್ಗಾಡಿ ಶಾಲೆಯ ಕೀರ್ತಿ ಕಡಬದಲ್ಲಿ ಹರಡಿಬಿಟ್ಟಿತು. ಇನ್ಸ್‌ಪೆಕ್ಟರರನ್ನು ಹುಲಿ ಹಿಡಿಯಲಿಲ್ಲವೆಂದೂ

ಜ್ವರದಿಂದಾಗಿ ಅವರ ಸರ್ಕೀಟು ನಿಂತಿತೆಂದೂ ಖಾತ್ರಿಯಾದ ವರ್ತಮಾನವೂ ಪ್ರಚಾರವಾಯಿತು. ಈ ವಾರ್ತೆ ಕಿವಿಗೆ ಬಿದ್ದ ಗಳಿಗೆಯೇ ನಮ್ಮ ಜಾನ್‌ಸನ್ ಮಾಸ್ತರರು ನೇರಾಗಿ ಓಡಿಬಂದು "ಹೋಯ್ ಅಚ್ಯುತರಾವ್--To digest this ಶಿಫಾರಸಿ you must give us good tiffin. ಇನ್ಸ್ಪೆಕ್ಟರರಿಗೆ ಕೊಟ್ಟ ಉಪ್ಪಿಟ್ಟು ಕಾಫಿಯೇ ಆದರೂ ಆದೀತು" ಎಂದರು. ಅಂತು ಆ ದಿನ ಸಂಜೆ ಕ್ಲಬ್ಬಿನಲ್ಲಿ, ಅವರ International club ನಲ್ಲಿ ಒಂದೂವರೆರೂಪಾಯಿವೆಚ್ಚದಹೊದಿಯಾಯಿತು. ಕಾಫಿ ಕುಡಿದ ಹುಮ್ಮಸದಲ್ಲಿ ಜಾನ್‌ಸನ್ ಮಾಸ್ತರರು "ಹೋಗಲಿ, ಇವತ್ತು ನಮ್ಮನ್ನು ಯಾರು beat ಮಾಡುತ್ತಾರೋ ಬೆಡ್‌ಮಿಂಟನಿನಲ್ಲಿ ಅವರಿಗೆ ನನ್ನದೊಂದು ಕಾಫಿ"ಯೆಂದರು. ಒಂದು ಆಟದ ಸ್ಪರ್ಧೆಯೂ ಜರುಗಿತು. ಅದರಿಂದ ಎರಡನೆಯ ಟಿಫಿನನ್ನು ಜಾನ್‌ಸನರು ಎಲ್ಲರಿಗೆ ಕೊಡುವ ಪಾಡು ಬಂದಿತು.

ಇನ್ನು ಎರಡೂವರೆ ತಿಂಗಳ ಕಾಲ ಅಚ್ಯುತರಾಯನು ಉಪಾಧ್ಯಾಯಿಕೆಯನ್ನು ಮೆರೆಯಿಸಿ ಬಿಟ್ಟರೆ ಸಾಕಿತ್ತು. ಅವನ ಮುಂದಿನ ಗಮನ ಪಂಚಾಯತಿಯ ಪರವಾಗಿ ಟ್ರೈನಿಂಗಿಗೆ ಹೋಗುವುದಿತ್ತು. ಅದಕ್ಕೆನಾಭಿರಾಜಯ್ಯನೊಡನೆ ಈಗಾಗಲೇ ಪೀಠಿಕೆ ಹಾಕಿದ್ದನು. ಆದರೆ ಅವರು "ಅಚ್ಯುತ ಮಾಸ್ತರರೇ, ನೀವೇ ಬೆಳೆಯಿಸಿದ ಗಿಡವನ್ನು ಎರಡು ಮೂರು ವರ್ಷವಾದರೂ ಕಾಪಾಡದೆ ಬಿಟ್ಟರೆ, ಬೇರೆಯವರ ಕೈಯಲ್ಲಿ ಅದು ಸಿಕ್ಕಿ ತಿರುಗಿ ಮೊದಲಿನ ಹಾದಿಗೇನೆ ಬಂದರೆ" ಎಂದರು. ಅಚ್ಯುತನು-"ನಾಳೆಯಾದರೂ ಟ್ರೈನಿಂಗ್ ಆಗಬೇಕು ನಾನು. ಸಂಸಾರ ಕಟ್ಟಿಕೊಂಡ ಮೇಲೆ ಅದಕ್ಕಾಗಿ ಒದ್ದಾಡುವುದು ಬೇಡವೆ! ಓದುವ ಭಾಗವೆಲ್ಲ ಈಗ ಮುಗಿದರೆ ಅದೊಂದು ಚಿಂತೆಯಾದರೂ ದೂರವಾದೀತಲ್ಲ"-ಎಂದನು. ಅಂತು ಇಬ್ಬರ ಹಟ ಯಾವ ಸಂಧಾನಕ್ಕೂ ಬಾರದೆ ಹೋಯಿತು. ಅದರ ಪ್ರತಿಫಲವೆಂದರೆ ಮುಂದಿನ ಎರಡು ತಿಂಗಳ ಸಂಬಳ ಅವನ ಕೈಗೆ ಬಾರದೆಹೋದುದು. ಹಾಗೆಂದು ಅಚ್ಯುತ ಉದಾಸೀನನಾಗದೆ ತನ್ನ ಕೆಲಸವನ್ನು ನಿರ್ವಂಚನೆಯಿಂದ ಸಾಗಿಸಿ, ಸಂಬಳಕ್ಕಾಗಿ ನಾಗರಾಜ ನಾರಾಯಣರಾಯರ ಮಧ್ಯಸ್ತಿಕೆಯನ್ನು ತಂದೊಡ್ಡಿದನು. ನಾಭಿರಾಜಯ್ಯ ಅಚ್ಯುತನ ಅರ್ಜಿಯನ್ನು ಮುಂದಕ್ಕೆ ಕಳುಹಿಸಿದರು.

# ೭ನೆಯ ಅಧ್ಯಾಯ

ಜೂನು ಪ್ರಾರಂಭವಾಗಲು ನಾಲ್ಕು ದಿನ ಮುಂಚಿತವಾಗಿಯೇ ಊರಿನಲ್ಲಿ ಬಾನು ಗುಡುಗುಡಿಸಿತು. ಬೇಸಾಯ ತೊಡಗಿಹೋಗಿತ್ತು. ತಾಯಿ, ಮನೆಯ ಬೇಸಾಯವನ್ನು ಪ್ರಾರಂಭಿಸಿದ್ದಳು. ಕಡೆಬಯಲನ್ನು ಅವರು ಹಿಂದಣ ವರ್ಷದಲ್ಲಿ ಸಾಗುವಳಿ ಮಾಡಿದ್ದರೂ ಯಾವ ಫಲಿತಕ್ಕೂ ಬಾರದೆಹೋಗಿತ್ತು. ಅಲ್ಲಿ ಕಾವಲು ನಿಲ್ಲುವವರಿಲ್ಲದೆ-ಬೆಳೆದುದು ಗುಬ್ಬಿ, ಕೋತಿಗಳ ಪಾಲಿಗೆ ಸಂದಿತ್ತು. ಅಲ್ಲಿ ಹೋಗಿ ನೆಲೆಸಿ, ಬೇಸಾಯ ಮಾಡುವಂಥ ಯಾವ ಸಮನಾದ ಆಳೂ ಕಾಣಿಸಲಿಲ್ಲ. "ಮಗು, ಆ ಭೂಮಿ ಈ ವರ್ಷ ಹಡಿಲು ಬೀಳುತ್ತದೆ. ಹಾಗೆ ಒಂದು ವರ್ಷ ಬಿದ್ದಿತೆಂದರೆ, ಮುಂದೆ ಅದರ ತುಂಬ ಮುಳ್ಳು ಹಿಂಡಲೇ ಬೆಳೆದು ಭೂಮಿ ವ್ಯರ್ಥವಾಗುತ್ತದೆ" ಎಂದಳು ತಾಯಿ.

ಅಚ್ಯುತನಿಗೆ ಮನೆಯ ವಿಚಾರವನ್ನು ನೆನೆದು ಹಾದಿಗಾಣದಾಯಿತು. ಅವನು ಆ ವರ್ಷ ತನಗೆ ಬಂದ ಹಣ, ನೂರು ರೂಪಾಯಿ ಸುಮಾರನ್ನು, ತಾಯಿಯ ಬಳಿ ಇರಿಸಿದ್ದನು. ಇತ್ತ ಅಕ್ಕಿಗೆ ಬೆಲೆಯೇ ಬಾರದೆ, ಜೀವನ ಬಲು ಕಠಿಣವಾಗಿತ್ತು. ಸ್ವಂತ ಸಾಗುವಳಿ ಮಾಡಿ ದಿನಗಳು ಸರಿದುವು. ಅದರೂ ತಾಯಿಯ ಚಿನ್ನ ಒತ್ತೆಯಿರಿಸಿ ಪಡೆದ ಸಾಲಕ್ಕೆ ಬಡ್ಡಿ ತೆತ್ತಿರಲಿಲ್ಲ. ವರ್ಷದ ಅರಿವೆ ಕೊಂಡಾಗಿರಲಿಲ್ಲ. ಹೇಗೂ ಬಡತನದಿಂದ ಕಾಲ ಕಳೆಯುವ-ಎಂದರೆ ತನ್ನ ನಗರವಾಸದ ಎರಡು ವರ್ಷಗಳ ವೆಚ್ಚವನ್ನು ಗಮನಿಸದೆ ಹೋಗುವಂತೆಯೂ ಇರಲಿಲ್ಲ. ಅದಲ್ಲದೆ ತಾಯಿಯನ್ನು ಒಬ್ಬಂಟಿಗಳಾಗಿ ಬಿಟ್ಟುಹೋಗಲು ಧೈರ್ಯವಿಲ್ಲ. ಆ ಒಂದು ವರ್ಷಕಾಲ ಅವನಿಂದ ದೂರವಾಗಿದ್ದ ಯಾವತ್ತು ಯೋಚನೆ, ಗೊಂದಲಗಳೆಲ್ಲ ಈಗ ತಿರುಗಿ ಬಂದು ಕೂಡಿಕೊಂಡವು. ಸಾಲದುದಕ್ಕೆ ಅದೇ ವರ್ಷ, ಅವರು ಭೋಗ್ಯಕ್ಕೆ ಒಡ್ಡಿದ ಆಸ್ತಿಯನ್ನು ಬಿಡಿಸುವ ಸಮಯ ಬಂದಿತು. ಹಣವನ್ನು ತೆರದೆ ಹೋದರೆ ಸಾಲದವರು ದಾವೆಯಿಂದ ಆಸ್ತಿಯನ್ನು ಒಳಗೆ ಸೆಳೆಯುತ್ತಾರೆ. ಆಸ್ತಿಗೆ ಮೌಲ್ಯವಿಲ್ಲದಾಗ, ಸಾಲಕ್ಕೆ ಬಡ್ಡಿ ತೆರುವುದಾಗುತ್ತದೆಯೋ — ಎಂಬ ಯೋಚನೆಯೂ ಬಂದಿತು.

ಈ ನಡುವೆ ಅಚ್ಯುತ ಮಾಸ್ತರರಿಗೆ ಹೆಣ್ಣು ಕೊಟ್ಟರೆ ಆಗಬಹು ದೆಂದು, ಒಂದೆರಡು ನಂಟುತನಗಳು ತಾವಾಗಿಯೇ ಅರಸಿಬಂದವು. ಅಚ್ಯುತ ನಕ್ಕನು. "ಈಗಲೇ ಮದುವೆಯಾಗುತ್ತಿದೆ. ಈ ಮದುವೆಯೂ ಒಂದು ಗಂಟುಬಿದ್ದರೆ--ಸರಿ! ಬೇಡವಪ್ಪ" ಎಂದುಕೊಂಡನು. "ಓದು ಮುಗಿಯಿಸಿ ಬರುವಾಗ, ಇಪ್ಪತ್ತನೆಯ ವರ್ಷಕ್ಕೆ ಕಾಲಿಡುತ್ತೇನೆ. ಆಗ ಎಲ್ಲವನ್ನು ನೋಡಿಕೊಳ್ಳುವ" ಎಂದುಕೊಂಡನು. ಅವನಿಗೆ ತನ್ನೊಬ್ಬನ ಬುದ್ಧಿಯಿಂದಲೇ ಈ ತೊಡಕು ನಿವಾರಣೆಯಾಗಲಿಕ್ಕಿಲ್ಲೆಂದು, ತೋರಿ ತನ್ನ ನಾರಾಯಣರಾಯರಲ್ಲಿಗೆ ಹೋದನು. ಅವರೂ ತಲೆ ಕೆರೆಯ ತೊಡಗಿದರು. "ಇದಕ್ಕೆ ಯೋಚನೆ ಇಷ್ಟು ಬಲವಾಗಿ ಮಾಡಬೇಕೇ? ನೋಡುವ--ನಮ್ಮ ನಾಗರಾಜನು ಮನಸ್ಸು ಮಾಡಿದರೆ, ನಿನಗೆ ಅಲ್ಲಿನ ಖರ್ಚಿಗೆ ತಿಂಗಳೊಂದರ ಹತ್ತು ರೂಪಾಯಿ ಕಳಿಸುವುದು ಕಷ್ಟವಲ್ಲ. ಆ ಮೇಲೆ ಸ್ಟೈಪೆಂಡು ಬರುತ್ತದಲ್ಲ. ಖರ್ಚಿಗೆ ಅಲ್ಲಿಂದಲ್ಲಿಗೆ ಆದೀತು. ಮುಂದೆ ನಿನ್ನ ಕೆಲಸದಿಂದ ಸಾಲವನ್ನು ಸಂದಾಯ ಮಾಡಬಹುದು" ಎಂದರು.

"ಹಾಗೆ ಒಂದು ನೂರು ರೂಪಾಯಿ ನಾನೂ ಉಳಿಸಿದ್ದೇನೆ."

"ತತ್ಕಾಲಕ್ಕೆ ಅದಂತು ಇರಲಿ. ಸಾಲವಿದೆ ಎನ್ನುತ್ತೀಯಲ್ಲ. ಬಡ್ಡಿ ಹಣ, ಅಂಗಡಿ ಲೆಕ್ಕ, ಅವನ್ನು ತೀರಿಸದೆ ಹೋದರೆ, ನಾಳೆ ನಿನ್ನ ತಾಯಿಗೆ ಕಷ್ಟವಾದೀತಲ್ಲ."

"ಹಾಗಾದರೆ ನೀವು ನಾಗರಾಜನನ್ನು ಮಾತನಾಡಿಸಿ ನೋಡು ತ್ತೀರಾ"-ಎಂದನು ಅಚ್ಯುತ.

ನಾರಾಯಣರಾಯರು ನಾಗರಾಜ ಕ್ಲಬ್ಬಿಗೆ ಬಂದೊಡನೆ, ಸಂಧಾ ನಕ್ಕೆ ಅನುವಾದರು. ಆಗ ನಾಗರಾಜನದು ಹುಮ್ಮಸದ ಕಾಲವಷ್ಟೆ. ಪಟ್ಟಕ್ಕೆ ಬಂದ ಎರಡನೆಯ ವರ್ಷವಷ್ಟೆ. ಅವನಲ್ಲಿ ಹಣವೂ ಇದ್ದ ಸಮಯ. "ತಿಂಗಳ ತಿಂಗಳ-ಹತ್ತು, ಹತ್ತು, ಯಾರು ತಾರೀಕು ಕಾದು ಕಳಿಸಲು ಬರುತ್ತದೆ? ಬೇಕಾದರೆ ನಾನು ಒಂದೇ ಸಾರಿಗೆ ಇನ್ನೂರು ಕೊಡುತ್ತೇನೆ"-

"ಯಾವ ದರದ ಬಡ್ಡಿ ಕೊಡಲಿ?"

"ಅಚ್ಯುತನ ಮಟ್ಟಿಗೆ ಬಡ್ಡಿ, ಜಾಮೀನು--ಯಾವ ಸಂಗತಿಯೂ

ಬೇಡ. ಅವನು ಬಂದು ಕೆಲಸಕ್ಕೆ ಸೇರಿದವನೇ ತಿಂಗಳಿಗೆ ಐದರಂತಾಗಲೀ, ಹತ್ತರಂತಾಗಲಿ ಸಾಲ ತೀರಿಸಲಿ"-ಎಂದನು ನಾಗರಾಜ. "ಹಾಗಿದ್ದರೆ ಹಣವನ್ನು ಸೇವಿಂಗ್ಸ್ ಬ್ಯಾಂಕಿನಲ್ಲಿರಿಸಿಕೊಂಡು ಸಮಯಕ್ಕೆ ಬೇಕಾದಂತೆ ತೆಗೆಯಲಿ"-ಎಂದರು ಗುರುಗಳು. ಅಂತು ಅಷ್ಟು ಬೇಗನೆ ಸಮಸ್ಯೆ ಬಗೆಹರಿದುದಕ್ಕೆ ಅವರಿಗೂ ಸಂತೋಷವಾಯಿತು.

ಮರುದಿವಸವೇ ಅಚ್ಯುತನಿಗೆ ಕೊಡುವಂತೆ ಇನ್ನೂರು ರೂಪಾಯಿಗಳನ್ನು ಆತ ನಾರಾಯಣರಾಯರಿಗೆ ಮುಟ್ಟಿಸಿಬಿಟ್ಟ. ಹೊರಡುವಾಗ ಮಾತ್ರ—"ಮಾಸ್ಟರರೇ, ನನಗೆ ಲೆಕ್ಕಕ್ಕೊಂದು ದಾಖಲೆಯಿರುವುದು ಒಳ್ಳೆಯದು. ಹಣ ಬಂದುದಕ್ಕೆ ಒಂದು ಕೈಕಾಗದ ಅವನಿಂದ ಮಾಡಿಸಿ" ಎಂದು ಹೇಳಿ ಹೋದನು. ಆ ಒಂದು ದಿವಸದಲ್ಲೇ ನಾಗರಾಜನ ಔದಾರ್ಯದೊಳಗೇನೆ ಅನುಮಾನ ಬೆರೆಯಿತೆಂಬುದು ಸ್ಪಷ್ಟವಾಯಿತು. ಅದರಿಂದಾಗಿ ಅವರು ಅಚ್ಯುತನನ್ನು ಕರೆಯಿಸಿ "ಅಚ್ಯುತ, ಸೇಕಡಾ ಎಂಟರ ಬಡ್ಡಿ ಕಾಣಿಸಿ, ಒಂದು ನೋಟನ್ನು ಅವನ ಹೆಸರಿಗೆ ಬರೆದು ಕೊಡುವ. ಅಂದರೆ ಅವನ ಮನಸ್ಸಿಗೆ 'ಸ್ನೇಹಾಚಾರಕ್ಕೆ ಸಿಕ್ಕಿಬಿದ್ದೆ ಎಂದೆನ್ನಿಸಬಾರದಲ್ಲ' ಎಂದು ಹೇಳಲು, ಅದರಂತೆ ಡಿಮಾಂಡ್ ನೋಟನ್ನು ಬರೆದು, ತಾವೂ ಸಾಕ್ಷಿ ಹಾಕಿ, ಆ ಸಂಜೆಗೇನೆ ನಾಗರಾಜನಿಗೆ ಮುಟ್ಟಿಸಿದರು. "ಛೇ ಛೇ, ಇದೆಲ್ಲ ಬೇಡವಿತ್ತು. ಬರಿಯ ಕಾಗದ ಸಾಕಿತ್ತು."-ಎಂದು, ಕೊಟ್ಟ ಬರಹವನ್ನು ಕಿಸೆಗೆ ತುರುಕಿಕೊಂಡು, ಕುಳಿತನು. ಅದೇ ದಿನ ಸಂಜೆ ಅಚ್ಯುತನು ಹಾಸಿಗೆ ಸುರುಳಿ, ಟ್ರಂಕುಗಳ ಸಮೇತ ಬಸ್ಸನ್ನೇರಿ, ಮಂಗಳೂರಿಗೆ ಪಯಣ ಬೆಳೆಯಿಸಿದನು. ಅವನಿಗೆ ಹಾದಿಯಲ್ಲಿ ಮಾಮುಂಜಿಯ ಭೇಟಿಯಾಗಲು ಅವಕಾಶವಾಗಲಿಲ್ಲ.

ಮಗನನ್ನು ದಿನನಿತ್ಯ ಕಾಣುತ್ತ ಈ ಒಂದು ವರ್ಷಕಾಲ ಸವೆದ ಲಕ್ಷ್ಮಮ್ಮನಿಗೆ ಮಗನು ಮಂಗಳೂರಿಗೆ ಹೋಗುತ್ತಾನೆಂದು ಕೇಳಿಯೇ ಬಲು ವ್ಯಥೆಯಾಗತೊಡಗಿತ್ತು. ಯಾರಿನ್ನು ತನಗೆ ನೆರವಾಗುವವರು? ಮಗಳೇ, ಅಳಿಯನೇ-ಯಾರು? ಬೇಸರವಾದಾಗ ಮನಸ್ಸಿನ ಬೇಗೆಯನ್ನು ಯಾರ ಮುಂದೆ ತೋಡಿಕೊಳ್ಳಬೇಕು? ಎಷ್ಟೆಂದರೂ ಮನುಷ್ಯ ಜೀವವಲ್ಲವೇ? ಆತ್ಮೀಯರೊಬ್ಬರೂ ಸಮೀಪವಿರದೆ ಬದುಕು ಹರಿದೀತೆ? ಇತ್ತ, ಮಗನ ಮಾತಿಂದ ಕುಪಿತನಾದ ಅಳಿಯನ ಸವಾರಿ, ಆ

ವರ್ಷವೆಲ್ಲವೂ ಈ ಕಡೆಗೆ ಕಾಲಿರಿಸಲಿಲ್ಲ. ತಾನೇ ಹೋಗಿ ಅವನನ್ನು ನೋಡಿಕೊಂಡು ಬರುತ್ತೇನೆಂದು ಎಣಿಸಿದರೂ ಮನಸ್ಸಾಗಲಿಲ್ಲ. "ಅವನಿಗೆ ನಾನು ಹೋಗುವುದು ಸರಿಯಾಗಿ ಕಾಣಬೇಕಲ್ಲ; ನಾವೇ ಅವನನ್ನು ಓಡಿಸಿದವರು ಎಂದು ಅವನು ತಿಳಿದಿರುತ್ತ, ನಾವಾಗಿ ಅಲ್ಲಿಗೆ ಹೋಗಲೇ" ಎಂದು ಅವಳು ಯೋಚನೆ ಮಾಡುತ್ತಿರಬೇಕಾಯಿತು.

ನರಸಿಂಹಯ್ಯನವರೇ! ಅಚ್ಚುತನಿಂದ ಬುದ್ಧಿ ಕಲಿತಾರೆಯೇ? ಅವರದೇ ಬುದ್ಧಿ ಅವರಿಗೆ. ಆ ದಿನ ಅಚ್ಚುತನು ಅವರ ಜತೆಗೆ ಬಂದುದು-ಸಹ ಅವರಿಗೆ ಇಷ್ಟವಾಗಲಿಲ್ಲ. ಕಡಬದಲ್ಲಿ ಅವನು ಬೇರೆಯಾದೊಡನೆ "ಪ್ರಾಯಶಃ ನಾವು ಹೋಗಿದ್ದೇವೆ ಎಂದು ಖಾತ್ರಿಮಾಡಿಕೊಳ್ಳಲು ಬಂದಿರಬೇಕು" ಎಂದು ಸೀತೆಯೊಡನೆ ಹಂಗಿಸಿಯೂ ಆಗಿತ್ತು.

ಆ ದಿನ ಅವರು, ಹೊಸಮಠದ ಹೊಸ ಬಿಡಾರದಲ್ಲಿ ತಮ್ಮ ಮಡಿಕೆ ಕುಡಿಕೆಗಳನ್ನು ತಂದು ಸುರಿದು, ಅಡುಗೆ ಅಡುವಾಗ ಕತ್ತಲಾಗಿತ್ತು. ಕಿರಿಯ ಕೂಸುಗಳೆಲ್ಲ ಹಸಿವಿಂದ ಅತ್ತುವು. ಎಲ್ಲದಕ್ಕೂ ಅವರು ಕಿವುಡರಾಗಿದ್ದರು. "ಆಚೆಯ ಅಂಗಡಿಯಿಂದ ನಾಲ್ಕು ಬಾಳೆಹಣ್ಣಾದರೂ ತಂದುಕೊಡಿ. ಅವು ಎಷ್ಟು ಹೊತ್ತು ಉಪವಾಸವಿದ್ದಾವು" ಎಂದಳು ಸೀತೆ. "ಬಾಳೆ ಹಣ್ಣಲ್ಲ! ಬಾಳೆಹಣ್ಣು ಧರ್ಮಕ್ಕೆ ಬರುತ್ತದಂತೇನು?" ಎಂದು ನರಸಿಂಹಯ್ಯ ಬೆದರಿಸಿ, ಹೊಳೆಗೆ ಮಿಂಯಲು ಹೋದವರು, ಮೂರು ತಾಸು ಮನೆಗೆ ಕಾಲಿರಿಸಲಿಲ್ಲ. ನೆರೆಯಂಗಡಿಯೊಂದರ ಜಗುಲಿಯ ಮೇಲೆ ಕುಳಿತು, ತಾವು ಬಂದ ವಿಚಾರವಾಗಿ ನೆರೆಕರೆಯವರೊಡನೆ ಠೀವಿಯಿಂದ ಮಾತು ಬೆಳೆಯಿಸುತಿದ್ದರು. ಅತ್ತ ಸೀತೆಯು ಅವರು ಮಿಂಯಲು ಹೋದ ಸಮಯ ನೋಡಿ, ಪಾವು ಅವಲಕ್ಕಿ ತರಿಸಿ, ಮಕ್ಕಳಿಗೆ ಕೊಟ್ಟು, ಅಡಿಗೆ ಮನೆಗೊಂದು ಆಕಾರಕೊಡಲು ಪ್ರಯತ್ನಿಸಿದಳು. ಇವರು ಅಂಗಡಿಯ ಮುಂದೆ ಕುಳಿತು ಮಾತಿನಿಂದಲೇ ಜಗ ಬೆಳಗುತ್ತೇನೆ-ಎಂದು ಕುಳಿತಾಗ, ಹೊಟ್ಟೆ ಹಸಿವೆಯಿಂದ ಕಡಿಯತೊಡಗಿತ್ತು. ಮೂರಾವೃತ್ತಿ ಮನೆಗೆ ಬಂದು ಹೋದರು. ಎಲ್ಲವನ್ನೂ ತಂದು, ಹೂಡಿ ಆಗಬೇಕು. ಆದುದರಿಂದ ಆ ದಿನ ಗಂಜಿ ಬೇಯಿಸುವುದೇ ಕಷ್ಟವಾಗಿತ್ತು. ಹಸಿ ಒಲೆಯಲ್ಲಿ ಕೆಲಸ ಮುಂದುವರಿಯುವಂತಿರಲಿಲ್ಲ. ಮಕ್ಕಳಂತು ನಿರಾಶೆಯಿಂದ ಮಲಗಿದುವು. ನರಸಿಂಹಯ್ಯ ಮೂರನೆ ಬಾರಿಗೆ

ಬಂದು, ಮುಖ ಕಗ್ಗಂಟು ಮಾಡಿ, ತಿರುಗಿ ಅಂಗಡಿ ಜಗುಲಿಗೇ ಹೋದರು. ಬೇರೆ ದಾರಿಕಾಣದೆ-"ನೋಡುವ, ನಿಮ್ಮಲ್ಲಿ ಅವಲಕ್ಕಿ ಸ್ಯಾಂಪಲ್" ಎಂದರು. "ಸ್ಯಾಂಪಲ್ ಏನು? ಈಗ ನಿಮ್ಮ ಮಗುವೇ ಬಂದು, ಒಂದು ಪಾವು ಕೊಂಡುಹೋಯಿತು. ಅವಲಕ್ಕಿ ಮಂಗಳೂರಿನದ್ದನ್ನು ಹಿಂದೆ ಹಾಕುತ್ತದೆ" ಎಂದರು ಅಂಗಡಿಯವರು. ಅವರಿಂದ ಕೇಳಿದ ವಾರ್ತೆ ನರಸಿಂಹಯ್ಯನವರನ್ನು ಕೆದಕಿಬಿಟ್ಟಿತಾದರೂ, ಹಸಿವಿನಿಂದ ಕಂಗಾಲಾದ ಅವರು, ತೆಪ್ಪನೆ ಇನ್ನೊಂದು ಪಾವು ಅವಲಕ್ಕಿಯನ್ನು ಕೊಂಡು ಮೆಲ್ಲುತ್ತ ಕುಳಿತರು. ಅಗ್ನಿದೇವನಿಗೆ ತೃಪ್ತಿಯಾಗಲು, ಅವರೂ ಶಾಂತರಾದರು. ಮನೆಯಿಂದ ಊಟದ ಕರೆ ಬರುವ ತನಕ ಉಲ್ಲಾಸವಾಗಿಯೇ ಇದ್ದರು.

ಊಟದ ಹೊತ್ತಿಗೆ 'ಅವಲಕ್ಕಿ' ಪ್ರಕರಣ ಎತ್ತೋಣವೆಂದರೆ, ತಾನೂ ಹಸಿವಿನಿಂದ ಅದನ್ನು ತಿಂದಾಗಿತ್ತು. ಹೀಗಾಗಿ ಮೂಕರಂತೆ ಉಂಡು, ತಿರುಗಿ ಪೇಟೆಗೆ ಬಂದು, ಒಂದೆರಡು ತಾಸು ಕಾಲ ಹರಟೆ ಕೊಚ್ಚುತ್ತಿದ್ದು, ಮನೆಗೆ ಹೋಗಿ ಮಲಗಿಕೊಂಡರು. ರಾತ್ರಿ ತುಂಬ ಮಳೆ ಬಡಿಯಿತು. ಅವರು ಇಳಿದುಕೊಂಡ ಬಿಡಾರದ ನಾಲ್ಕು ಸುತ್ತಲೂ ನೀರು ಕೋಡಿ ಹರಿಯಿತು ಒಳಕ್ಕೂ, ಹೊರಕ್ಕೂ. "ಅರೇ, ನೆಲವೇಕೆ ಇಷ್ಟು ತಂಡಿಯಾಗಿದೆ" ಎಂದರೆ, "ಹೀಗೆ-ಇಲ್ಲಿ ನಾಲ್ಕು ದಿನವಿದ್ದರೆ ಮಕ್ಕಳು ಜ್ವರದಲ್ಲಿ ಸತ್ತುಹೋದಾವು. ಅಲ್ಲ, ಇಲ್ಲಿಗೆ ನಮ್ಮನ್ನು ತಂದು ತುಂಬಿಸುವ ಮೊದಲು, ಮಾಡಿನ ಹುಲ್ಲು ಚಾವಣಿ ಸಮನಾಗಿದೆಯೋ ಎಂದು ನೋಡಬೇಡವೇ" ಎಂದು ಸೀತೆಯು ಗೊಣಗುಟ್ಟಿದಳು. ತಂಡಿ ನೆಲದಲ್ಲಿ ನಿದ್ರಿಸಿ ಮಳೆಯ ಜೋರಾವರಿಯನ್ನು ಅವರೂ ಅನುಭವಿಸಬೇಕಿದ್ದುದರಿಂದ-"ಯಾರಿಗೆ ಗೊತ್ತು ಮಹಾರಾಯತಿ, ಆಚೆ ಅಂಗಡಿಯ ಕೊಂಕಣಿ ಎಲ್ಲಾ ಫಸ್ಟ್ ಮಾಡಿದ್ದೇನೆ ಎಂದ. ನಂಬಿ ಬಂದೆ. ಅಲ್ಲದೆ ತಿಂಗಳ ಒಂದು ರೂಪಾಯಿ ಬಾಡಿಗೆಯನ್ನು ಕೊಡಬೇಕು" ಎಂದರು. "ನಾಳೆ ಅವನು ಮಾಡಿಗೆ ಚಾವಣಿ ಹಾಕಿಸದೆ ಹೋದರೆ ಅವನ ಬಾಡಿಗೆ ತಿರುಪತಿಯಲ್ಲಿ!" ಎಂದು ನರಸಿಂಹಯ್ಯ ಪಣತೊಟ್ಟರು.

ನೆರೆ ಅಂಗಡಿಯವನೂ ನರಸಿಂಹಯ್ಯ. ಅವನ ಹೆಸರು ನರಸಿಂಹ ಕಮ್ತಿ. ಸೋರುವ ಮನೆಯ ವಿಷಯದಲ್ಲಿ ಎರಡು ನರಸಿಂಹರು ತಾಸ

ಅರ್ಧ ತಾಸು ಕಾದಾಡಿಕೊಂಡ ಬಳಿಕ, ನರಸಿಂಹಯ್ಯನು ಅದನ್ನು ತತ್ಕಾಲಕ್ಕೆ ರಿಪೇರಿಮಾಡಿಕೊಂಡು, ಬಾಡಿಗೆಯಿಂದ ಆ ಖರ್ಚು ವಜ ಹಿಡಿಯುವುದೆಂದು ತೀರ್ಮಾನವಾಯಿತು. ನರಸಿಂಹಯ್ಯನಿಗೆ ಮೂರು ದಿನಗಳ ತನಕ ಯಾರ ಮನೆಯಲ್ಲಿ 'ಕರಡ' ದಾಸ್ತಾನಿದೆಯೆಂದು ಹುಡುಕುವುದಾಯಿತು. ಅಂತು, ಕಟ್ಟಿಗೆ, ನೆಲ-ಒಂದಕ್ಕೊಂದು ರೂಪುಬರುವಾಗ ತಿಂಗಳಕಾಲ ಹಿಡಿಯಿತು. ಎಲ್ಲ ಮುಗಿಯುತ್ತ ಬಂದಿತು-ಎನ್ನುವಾಗ ಸೀತಮ್ಮ "ಹೌದೇ! ನಿನ್ನೆ ಹೊರಗೆ ಜಗುಲಿಯಲ್ಲಿ ನೀವಿರಿಸಿದ ಚಂಬು ಕದ್ದುಹೋಯಿತು. ನಿಮಗೆ ಒಳಗೆ ಇರಿಸಲು ಏನು ಧಾಡಿ? ನಾನು ಖಂಡಿತಕ್ಕೊ ಅನ್ನುತ್ತೇನೆ! ಈ ಪಾಟಿ ಜನ, ಜಾನುವಾರು ತಿರುಗುವ ರಸ್ತೆಯ ಬದಿ ನಮಗೆ ಬೇಡ, ಎಲ್ಲಾದರೂ ಗದ್ದೆಬಯಲಿಗೆ ತಾಗಿ, ಹಿತ್ತಲು ತರಕಾರಿ ಮಾಡುವ ಜಾಗ ಹುಡುಕಿ. ಈ ವರ್ಷವಾದರೂ ಬೇಸಾಯಮಾಡಿ ಬದುಕಬೇಕು. ನಿತ್ಯವೂ ಪಾವು, ಅರ್ಧಸೇರು ಅಕ್ಕಿಯನ್ನು ಕ್ರಯಕ್ಕೆ ಕೊಂಡು ಪೇಟಿಗೂಬೆಗಳಂತೆ ಕಳೆಯಲು ನನ್ನಿಂದಾಗದು" ಎಂದಳು.

ನರಸಿಂಹಯ್ಯ ಗಂಟಲನ್ನು ತೆರೆದರು. ಹೆಂಡತಿ ಬಾಯಿಗೆ ಬೆರಳಿಡಿಸಿ, "ಪೇಟೆಯ ಬದಿಯಲ್ಲಿ ರಣರಂಪ ಮಾಡಬೇಡಿ, ನಾನು ಪ್ರಾಣ ಇರಿಸಿಕೊಳ್ಳಲಾರೆ" ಎಂದಳು. ನರಸಿಂಹಯ್ಯ ಕಕ್ಕಾವಿಕ್ಕಿಯಾದರು. ಸೀತೆ ಈ ರೀತಿಯ ಹೆಂಗುಸೆಂದು ಅವರಿಗೆ ತಿಳಿದೇ ಇರಲಿಲ್ಲ. ಕುಟುಂಬದ ಮನೆಯಲ್ಲೂ ಅವಳು ಹಾಗಿರಲಿಲ್ಲ; ತಾಯಿ ಮನೆಯಲ್ಲೂ ವಾಸಿಯಾಗಿದ್ದಳು. ಈ ಬಿಡಾರಕ್ಕೆ ಬಂದ ಮೇಲಂತು ತನ್ನಂತಹ ಸಿಂಹನನ್ನು ಕುಣಿಸುವ ಸರ್ಕಸ್‌ನವರಂತೆ ಅವಳು ಮಾಡುತ್ತಿದ್ದಾಳೆ. ನಿಜಕ್ಕು ಇವಳಿಗೇನಾಗಿದೆಯೆಂದು ಗಾಬರಿಯಾದರು.

ನಿಜಕ್ಕೊ, ಸೀತೆ ಮೊದಲಿನಂತಿರಲಿಲ್ಲ. ತನ್ನ ಗಂಡನೆಂಥವನೆಂದು ಹದಿನೆರಡು ವರ್ಷಗಳ ಜತೆಗಾರಿಕೆಯಿಂದ ಅವಳು ತಿಳಿಯದವಳೇ? ಆದರೆ ತಾನು ಕುಟುಂಬದ ಮನೆಯಲ್ಲಿರುವಷ್ಟು ದಿನ, ಏನೂ ಅನ್ನುವಂದಕ್ಕಿಲ್ಲವಿತ್ತು. ಗಂಡನ ತಪ್ಪನ್ನು ತಾನೇ ತೋರಿಸಿಕೊಡುವುದು, ಸಮವಲ್ಲವೆಂದು ತಿಳಿದಿದ್ದಳು. ಇವರು ಒಬ್ಬರೇ ಇದ್ದು ದುಡಿಯಲಾರರು ಎಂದೂ ಅವಳು ಅರಿತಿದ್ದಳು. ಆದುದರಿಂದ ಕುಟುಂಬದ ಮನೆಯಲ್ಲಿದ್ದಷ್ಟು ದಿನ, ತನಗೂ ತನ್ನ ಮಕ್ಕಳಿಗೂ ದಾಸ್ಯವೆಂಬುದನ್ನು ಅನುಭವಿಸಿ ತಿಳಿದಿದ್ದಳು.

ತಾಯಿಮನೆ ಸುಖವಾದೀತೆಂದು ಬಯಸಿದಳು. ಕೆಲವು ದಿನಕಾಲ ಸರಿಯಾಗಿತ್ತು. ಆದರೆ ತನ್ನ, ಶುದ್ಧ ಮೈಗಳ್ಳ ಗಂಡನಿಂದ, ತಾಯಿಮನೆಯವರಿಗೆ ತಾವೊಂದು ಹೊರೆಯಾಗುತ್ತೇವೆಂದು ತಿಳಿದು ಬರಲು, ತನ್ನ ಮೌನವನ್ನು ಸಡಲಿಸಿದಳು. ಅಚ್ಯುತನ ಪ್ರಕರಣದಲ್ಲಿ ಅವಳು ತನ್ನ ನಿಜವನ್ನು ತೋರಿಸಿದಳು. ‘ಒಮ್ಮೆ ಬಿಡಾರ ಬೇರೆಯಾದರೆ ಇತರರಂತೆ ಇವರೂ ಕಷ್ಟ ಜೀವನ ಮಾಡಿ, ಮರ್ಯಾದೆ ಉಳಿಸುವಂತೆ ಮಾಡುತ್ತೇನೆ. ನಾಲ್ವರು ಹುಡುಗಿಯರು ಇದ್ದಾರೆ. ಹೀಗೆ ಇವರು ಉಂಡಾಡಿಯಾಗಿ ಅಲೆದರೆ, ಅವರಿಗೆ ಲಗ್ನವಾಗಲಿಕ್ಕಿದೆಯೇ’ ಎಂದು ವ್ಯಥೆಗೊಂಡಳು.

ಈಗ ಮೂರನೆಯ ತಾವಿಗೆ ಬಂದ ಮೇಲೆ, ‘ಕೇವಲ ಸೋಮಾರಿಗಳಿಗೇನೆ ತಕ್ಕ ಸ್ಥಳ ಹುಡುಕಿದ್ದಾರೆ; ಇಲ್ಲಿ ಇವರು ದುಡಿಯುವಂತೆಯೇ ಇಲ್ಲ’ ಎಂಬುದನ್ನು ಮನಗಂಡಳು. ಸೀತೆಯ ತಾಳ್ಮೆಕೆಡುತ್ತ ಬಂತು; ಇಲ್ಲಿಯೂ ಗಂಡನು ತಿಂಗಳಿಗೆ ಹದಿನೈದು ದಿನ ಊರಿಂದ ಅದೃಶ್ಯರಾಗತೊಡಗಿದರು. ಈಗಲೂ ಸರಿಯೇ, ಕಾಸು ಎರಡು ಕಾಸುಗಳನ್ನು ಬೇಡಿ, ಅಂಗಡಿ ಸಾಮಾನು ತರಿಸಿ, ಜೀವನ ಮಾಡುವುದು ಅವಳ ಮನಸ್ಸಿಗೆ ಹಿಡಿಸಲಿಲ್ಲ. ಹೀಗಾಗಿ, ಒಂದು ದಿನ-“ನಿಮಗೆ, ನಾನೂ ನಿಮ್ಮ ಮಕ್ಕಳೂ ನಿಮ್ಮ ಜತೆಗೇನೆ ಮರ್ಯಾದೆಯಿಂದ ಬದುಕಬೇಕೆಂದಿದ್ದರೆ ಇಲ್ಲಿಂದ ಬಿಡಾರ ತೆಗೆಯಿಸಿ” ಎಂದುಬಿಟ್ಟಳು. ನರಸಿಂಹಯ್ಯನ ಅಭಿಮಾನ ಕೆಣಕಿತು. “ಏನು ಮಾಡುತ್ತೀ?” ಎಂದರು ಅವರು. “ಮಾಡಿದ ಮೇಲೆ ನೋಡುವಿರಂತೆ! ನಮ್ಮನ್ನು ಹೇಗೆ ಹಾದಿಯ ಬದಿಯಲ್ಲಿ ನರಳಿಸುತ್ತೀರೋ, ಅಷ್ಟನ್ನು ಮಾಡಲು ನನಗೂ ಬಂದೀತು”-ಎಂದಳು.

ಆ ರಾತ್ರಿಯುದ್ದಕ್ಕೂ ನರಸಿಂಹಯ್ಯ--ಅಸಮಾಧಾನ, ಕೋಪ, ತಾಪ, ರೌದ್ರಗಳಿಂದ, ಮನೆಯಿಂದ ಬೀದಿಗೆ, ಬೀದಿಯಿಂದ ಮನೆಗೆ ಅಲೆದಾಡಿದರು. ಸೀತೆ ಒಂದೇ ಒಂದು ಮಾತನಾಡಲಿಲ್ಲ. ಮರುದಿನ, ಮನೆಗೆ ಒಮ್ಮೆಗೇ ಎಂಟು ದಿನಗಳ ಊಟದ ಒಡವೆ ತರಿಸಿಹಾಕಿದರು. ಅದರ ಜತೆಗೆ “ನಾಳೆ ಬರುವೆ”ನೆಂದು ನರಸಿಂಹಯ್ಯನು ಊರನ್ನು ಬಿಟ್ಟರು. ‘ಅವರು ಹಾಗೇನೆ ಹೋಗಿಬಿಟ್ಟರೆ’ ಎಂದು ಮಾಲಕ್ಷ್ಮಿತಾಯೊಡನೆ ಹೇಳಿ ಅಳುತ್ತಿದ್ದಳು. ಸೀತೆ ಗಂಡನನ್ನು ಬಲ್ಲಳು. ಆ ಗಂಡು ಜೀವ

ತನ್ನ ಹೆಣ್ಣುತನಕ್ಕಾದರೂ ಜೋತು ಬಿದ್ದಿದೆಯೆಂಬುದನ್ನು ಅವಳು ಚೆನ್ನಾಗಿ ಅರಿತಿದ್ದಳು. ಹಾಗೆಂದು ಅವರಿಗೆ ಮಕ್ಕಳ ಮೇಲಿನ ಪ್ರೀತಿ ಏನೇನೂ ಇದ್ದಿರಲಿಲ್ಲ.

ಸೀತೆಯ ಈ ಕೊನೆಯ ಮಂತ್ರವೇನೊ ಸಿದ್ಧಿಸಿತು. ಎಂಟೇ ದಿನಗಳಲ್ಲಿ ನರಸಿಂಹಯ್ಯನ ಸವಾರಿ ಮಗಳಿ ಬಂದಿತು. ಎರಡನೆಯ ಬಾರಿಗೆ ಪಯಣದ ಯೋಗ ಅವರ ಮನೆಯವರಿಗೆ ಲಭಿಸಿತು. ಈ ಬಾರಿ, ಎಂಟು ಮೈಲಿನ ದೂರದ ಪಂಜದ ಊರಿಗೆಂದು ಅವರ ದಿಬ್ಬಣ ಹೊರಟಿತು. ಕಡಬದ ಊರಿನವರು-“ಹೋ! ನಾರಾಯಣರಾಯರೇ, ನಮ್ಮ ಅಚ್ಯುತ ಮಾಸ್ತರರ ಭಾವನ ದಿಬ್ಬಣ ಪಂಜದ ಕಡೆಗೆಲ್ಲೋ ಹೊರಟಂತೆ ಕಾಣುತ್ತದೆ!” ಎಂದು ಪರಿಹಾಸ್ಯಮಾಡಿದರು.

ಪಂಜಕ್ಕೆ ಒಂದು ಮೈಲು ಮುಂಚೆ, ಹಾದಿಯ ಸಮೀಪದ ಒಂದು ಬಯಲಿನಲ್ಲಿ ಅವರ ಗಾಡಿ ಮೂಕಿ ತಪ್ಪಿಸಿತು. ಸೀತೆ ಮಕ್ಕಳೊಂದಿಗೆ ಉತ್ಸಾಹವಾಗಿ ಸಾಮಾನುಗಳನ್ನು ಇಳಿಸಿದಳು. ನರಸಿಂಹಯ್ಯ ಹೆಂಡತಿಯ ಪ್ರಸನ್ನತೆ ಗಳಿಸಿಲು ಅಲ್ಲಿನ ಒಂದು ಭೂಮಿಯನ್ನು ಮೂಲಗೇಣಿಗೇನೆ ಪಡೆದಿದ್ದರು. ಈಗ ಪುಟ್ಟದೊಂದು ಮನೆಯಲ್ಲಿ ಬಿಡಾರ ಹೂಡುವುದೆಂದೂ, ಪಾಲ್ಗುಣಕ್ಕೆ ಮೊದಲಿನಒಕ್ಕಲು ಅಲ್ಲಿಂದ ಹೋಗುವುದರಿಂದ ತಾವು ಅವನ ದೊಡ್ಡ ಮನೆಯಲ್ಲಿ ನೆಲೆಸುವುದೆಂದೂ, ನಿರ್ಣಯವಾಗಿತ್ತು.

ಮೂರು ಮುಡಿ ಸುಗ್ಗಿಯ ಹೊಲದಲ್ಲಿ, ಇವರು ಬರುವಾಗ ಹಸುರುನಗುತ್ತ ಕುಣಿಯುತಿತ್ತು. ಎಲ್ಲೆಲ್ಲಿಯೂ ನೀರಿನಸಮೃದ್ಧಿಯಿತ್ತು. ಕಾಡು ಕಟ್ಟಿಗೆಗಳಂತು ಅನುಕೂಲವೇ. ಬೇರೆ ಒಂದೆರಡು ಎಕರೆ ಖಾಲಿ ಭೂಮಿಯಿತ್ತು. ‘ಮನಸ್ಸು ಮಾಡಿದರೆ ತೋಟ ಇರಿಸಬಹುದು’ ಎಂದು ಗಾಡಿ ಇಳಿದವರೇ ಸೀತೆಗೆ ಬಣ್ಣಿಸತೊಡಗಿದರು. “ಆಲಸ್ಯ ಬಿಟ್ಟರೆ ನಿಮ್ಮಿಂದ ಏನೂ ಆದೀತು. ನೀವೇನೂ ಮಾಡಬಹುದು” ಎಂದಳು ಸೀತೆ.

ಹೊಸ ಮನೆಯಲ್ಲಿ ಅವಳು ಬಂದು ಬಿಡಾರ ಹೂಡಿದ್ದಾಯಿತು. ಮರುದಿನವೇ ಊರವರ ಗುರುತು ಮಾಡಿಕೊಂಡು — ತರಕಾರಿಯ ಹಂಬು, ಬೀಜಗಳನ್ನು ಬೇಡಿ ತಂದಳು. ಬಿಡಾರದ ಹಿಂದೆ ಸೊಂಪಾಗಿ ಬಾಳೆ ಬೆಳೆದಿತ್ತು. ಅವುಗಳನ್ನು ತೆಳ್ಳಗೆ ಮಾಡಿ ನಟ್ಟಳು. ತಾನೇ ಹಿತ್ತಲ

ಕೆಲಸಕ್ಕೂ ಕೈಯಿಕ್ಕಿದಳು. ಸೀತೆ ಗಂಡನಿಗೆ ಎರಡು ದಿನಗಳ ವಿಶ್ರಾಂತಿಯನ್ನೂ ಕೊಡದೆ-"ಹೂಂ! ಜಾತ್ರೆ ಮುಗಿದ ಮೇಲೆ ಹೋಗಿ ಫಲವಿಲ್ಲ. ಸಾಗುವಳಿ ಮಾಡಿಸುವವರಾದರೆ, ಒಂದು ಜತೆಯಾದರೂ ಒಳ್ಳೆಯ ಕೋಣಗಳನ್ನು ಕೊಂಡುಕೊಂಡು ಬನ್ನಿ. ಕರೆಯಲು ಒಂದು ಸಾಧಾರಣದ ಎಮ್ಮೆಯೋ ದನವೋ ಇರಲಿ. ಮಕ್ಕಳು ಕಾವಿನಿಂದಸೊರಗಿ, ಕಜ್ಜಿ ಹಿಡಿದು ಪ್ರೇತವಾಗಿದ್ದಾವೆ" ಎಂದಳು. ಅತೀವ ನಮ್ರರಾಗಿ ನರಸಿಂಹಯ್ಯ ಕುಳುಕುಂದದ ಜಾತ್ರೆಗೆ ತೆರಳಿದರು. ಒಂದರ ಬದಲು ಎರಡು ಜತೆ ಜಾನುವಾರುಗಳು ಬಂದುವು. ಕರೆಯಲು ಗಬ್ಬದ ಎಮ್ಮೆ ಮನೆಗೆ ಬಂದಿತು.

ಮುಂದಿನ ಮಳೆ ಬೀಳುವ ತನಕ ಗಂಡನನ್ನು ಬಂಧಿಸಿ ಹಾಕಿದಂತೆ,ಹೇಳಿ, ಮಾಡಿ,ಬೇಸಾಯಕ್ಕೆ ತಳಹದಿಯನ್ನು ಹಾಕಿಯೇಬಿಟ್ಟಳು. "ಏನಿಲ್ಲ.ಅಮ್ಮ ಒಬ್ಬಂಟಿಯಾಗಿ ಮಾಡುವಷ್ಟು ಕೆಲಸ, ನಮ್ಮಿಬ್ಬರಿಂದಾಗದೇ"-ಎಂದು ಗಂಡನ ಅಹಂಕಾರವನ್ನು ಚುಚ್ಚಿಯೇ ತಮ್ಮ ಹೊಸ ಬದುಕನ್ನು ಹೂಡಿಸಿಬಿಟ್ಟಳು.



## ೮ನೆಯ ಅಧ್ಯಾಯ

ಮಂಗಳೂರನ್ನು ಅಚ್ಯುತರಾಯ ಎರಡು ವರ್ಷಗಳ ವಟ್ಟಿಗೆ ತನ್ನ ಊರನ್ನಾಗಿ ಮಾಡಿಕೊಂಡುದಾಯಿತು. ಹಳ್ಳಿಯಿಂದ ಬಂದ ಆತನಿಗೆ, ನಗರದ ಈ ಆವರಣ ತೀರ ಹೊಸತಾಗಿತ್ತು. ಅವನು ಈ ಮೊದಲು ಪುತ್ತೂರಿನ ಸರಹದ್ದನ್ನು ಸಹ ದಾಟಿರಲಿಲ್ಲ. ಈಗ ನಗರದಲ್ಲಿದ್ದಾನೆ. ಜನರ ಗದ್ದಲ, ಕಾರುಗಳ ಓಡಾಟ, ಬೀದಿಯುದ್ದಕ್ಕೂ ಅಂಗಡಿಗಳು, ಮಾರು ಮಾರಿಗೊಂದು ಕಾಫಿ ಹೊಟೇಲು, ಇವನ್ನು ಕಂಡ--ತಾವು ನಗರವನ್ನಾಗಿ ಮಾಡಲೆಳಸಿದ ಕಡಬದ ನೆನಪು ಆಗದಿರುತ್ತಿರಲಿಲ್ಲ. ಅಲ್ಲಿಗೂ ಇಲ್ಲಿಗೂ ಎಷ್ಟು ತಾರತಮ್ಯ! ಅಲ್ಲಿ ಬೇಕೆಂದರೂ ಹತ್ತು ಮಂದಿಯಿಂದ ದೂರಾಗುವನೆಂದರೂ ಅಸಾಧ್ಯವಾಗಿತ್ತು. ನಗರದ ಗದ್ದಲ, ದೂಳು, ಚರಂಡಿಗಳ ನಾತ--ಇಷ್ಟನ್ನು ಬಿಟ್ಟಲ್ಲಿ ನಗರವಾಸ

ರಮಣೀಯವಾದುದು ಎಂದು ಅವನಿಗೆ ಅನಿಸುತ್ತಿತ್ತು.

ಅವನು ಸೇರಿಕೊಂಡ ಟ್ರೈನಿಂಗ್ ಶಾಲೆಯಲ್ಲಿ ಅವನು ಇಂಟರ್ ಆದವರ ಜತೆಗೆ ತಿಕ್ಕಾಡುತ್ತಿದ್ದ. ಅವನಂತೆ ಹಲವಾರು ಜನ ವಿದ್ಯಾರ್ಥಿ ಗುರುಗಳು ಅಲ್ಲಿ ಸೇರಿದ್ದಾರೆ. ಅವರಲ್ಲಿ ಬಹು ಮಂದಿ ಇವನಂತೆ ಹಳ್ಳಿಯಿಂದ ಬಂದವರು; ಪೇಟೆಯ ವೆಚ್ಚಕ್ಕೆ ಅವರ ಕೈ ಹಿಂಜರಿಯುತಿತ್ತು. ಸಾಮಾನ್ಯವಾಗಿ ಅವರಾರೊಡನೆ ಕೇಳಿದಗೂ--'ಒಂದು ಸಾರಿಗೆ ಈ ಎರಡುವರ್ಷದ ಜೈಲು ತಪ್ಪಿದರೆ ಸಾಕಪ್ಪಾ!'—ಎನ್ನುತಿದ್ದರು. ಇಂಥ ಚೆಲುವಿನ ನಗರ ಜೈಲಾಯಿತೇಕೆ-ಎಂಬುದು ಹೊಸತರಲ್ಲಿ ಬಂದ ಅಚ್ಯುತನಿಗೂ ಸಮಸ್ಯೆಯಾಗಿತ್ತು. ದಿನಕ್ಕೊಂದು ಹಾದಿಯಲ್ಲಿ ವಿಹಾರಕ್ಕೆ ಹೊರಟರೂ ಮೂರು ತಿಂಗಳಕಾಲ ಸಂದೀತಲ್ಲ-ಎಂದೆನಿಸುತಿತ್ತು. ಆದರೆ ಅವರಲ್ಲಿ ಹಲವರು ಈಗಾಗಲೇ ಬಂದು ಒಂದು ವರ್ಷವಾದವರು; ಹಲವರು ಅದೇ ವರ್ಷವೇ ಬಂದವರು. ಅವರಲ್ಲಿ ಬಹು ಮಂದಿ ಹಿರಿಯರು; ಅವನಂತೆ ಎಳೆಯರಲ್ಲ. ಮದುವೆಯಾಗಿದ್ದು, ಬಾರಿಬಾರಿಗೂ ತಮ್ಮ ಹೆಂಡತಿ ಮಕ್ಕಳನ್ನು ನೆನೆದು, ಮರುಗುತ್ತಿದ್ದವರು. ಅಲ್ಲಿನ ಸ್ಟೈಪೆಂಡು ಅಲ್ಲಿನ ವೆಚ್ಚಕ್ಕೆ ಎಟುಕದಿರುವಾಗ, ಮನೆಯಲ್ಲಿ ಹೆಂಡಿರು ಮಕ್ಕಳು ಉಣ್ಣುವುದೇನು-- ಎಂಬ ಯೋಚನೆಗೀಡಾದವರು.

ಬಂದ ಎರಡು ಮೂರು ತಿಂಗಳಲ್ಲಿ, ಅವರೆಲ್ಲರಲ್ಲಿ ಉದಯಿಸಿದ ಮನೆಯ ಮುಖದ ಬಯಕೆ ಇವನಿಗೂ ಬರತೊಡಗಿತು. ತಾಯ ನೆನೆಪು ಆಗಾಗ ಬರಹತ್ತಿತು. ಅಕ್ಕ, ಅಕ್ಕನ ಮಕ್ಕಳು ಏನಾದರೋ? ಯಾವ ಕಾಡು ಸೇರಿದರೋ? ತಾನು ಅವರನ್ನು ಮನೆಯಿಂದ ದೂರಾಗುವಂತೆ ಮಾಡಬಾರದಿತ್ತು, ಎಂದು ಚಿಂತಿಸುತ್ತ ಅಲ್ಪವನ್ನು ಮಹಾ ಮಾಡಿಕೊಂಡನು. ಇತ್ತ ಹೊಟೇಲಿನ ಕಾರಕ್ಕೂ, ಉಂಡದ್ದೇ ಉಣ್ಣುವ ಪಾಡಿಗೂ ಸಿಲುಕಿ ದಣಿದನು.

ಆದರೆ ಅವೇನೆ ಇವನ ಕನಸುಗಳನ್ನು ಕೆಡಿಸಲಿಲ್ಲ. ಆತ ಬಹು ವಿಧದ ಸುಖಸ್ವಪ್ನಗಳನ್ನು ಕಾಣತೊಡಗಿದನು. ಆವರಣ ಹೊಸತ್ತಾಗಿತ್ತು. ತನ್ನಂತಿರುವ ಹಲವು ಜನರ ಎಡೆಯಲ್ಲಿ, ತಾನು ಇತರರಿಗಿಂತ, ಕಡಮೆಯಲ್ಲ-ಎನ್ನುವ ಆತ್ಮವಿಶ್ವಾಸ ಉಂಟಾಗುತ್ತ ಬಂದಿತು. ಶಾಲೆಯ ತರ್ಕ ಸಂಘಗಳಲ್ಲಿ, ಮೊದ ಮೊದಲು ಅಂಜಿಕೆಯಾದರೂ, ಕ್ರಮೇಣ

'ಅಚ್ಚುತ ವಕ್ತಾರ'ಅನಿಸುವಷ್ಟು ಹೆಸರು ಆತಗೆ ಬಂದಿತು. ಅಲ್ಲಿನ ಜೀವನವನ್ನು ಬರಿಯ ಬರಡುಜೀವನವಾಗಿ ಕಳೆಯಲು ಮನಸ್ಸಾಗಲಿಲ್ಲ. ಆತ S. S. L. C. ಓದುವಾಗ ಪರೀಕ್ಷೆಯು ಭೂತವೆನಿಸಿತ್ತಷ್ಟೆ. ಇಲ್ಲಿನ ಜತೆಗಾರರು ಅದಕ್ಕಾಗಿ ಅಷ್ಟೊಂದು ಹೆದರುತ್ತಿರಲಿಲ್ಲ. ಆಚೀಚೆ ಕಾಲೇಜಿನ ಆವರಣವಿತ್ತು. ಊರಲ್ಲಿ ವಿಲಾಸಕ್ಕೆ ಸಿನೆಮಾಗಳಿದ್ದುವು. ಮನಬಂದಾಗ ಒಂದೊಂದು ಮೂಕ ಚಿತ್ರವನ್ನು ನೋಡಿಕೊಂಡು ಬರುತ್ತಿದ್ದನು. ಇತ್ತ ಶಾಲೆಯಲ್ಲಿನ ತೋಟಗಾರಿಕೆಗೆ ಕೆಲವು ಬಾರಿ ಮನಸೋಲುತ್ತಾನೆ. ಇನ್ನೊಮ್ಮೆ ತರ್ಕಸಂಘದಲ್ಲಿ ಕೀರ್ತಿತಾಳಬೇಕೆಂದು ಬಯಸುತ್ತಾನೆ. ಬೇರೊಮ್ಮೆ ಶಾಲೆಯವರೆಲ್ಲರೂ ಸೇರಿ, 'ಏಕೆ ನಾವು ಒಂದು ಯಕ್ಷಗಾನ ಕೂಟ ಏರ್ಪಡಿಸಬಾರದೆ'ಂದು ಬಯಸುತ್ತಾನೆ.

ಅವನ ಬಂಧುಗಳ ಶಾಲೆ, ಲೋವರ್‌ಗ್ರೇಡ್ ಉಪಾಧ್ಯಾಯರ ಶಾಲೆ; ಅಲ್ಲಿಗೆ ಅವನು ಆಗಾಗ ಹೋಗಿ ಬರುತ್ತಿದ್ದ. ಅಲ್ಲಿನ ಆವರಣದಲ್ಲಿ ಸದಾ ತಾಳಮದ್ದಲೆ ಕುಣಿದಾಡುತ್ತಿತ್ತು. ಉಪಾಧ್ಯಾಯರೇ ಭಾಗವತರು, ಅವರೇ ಮೃದಂಗಕಾರರು, ಅವರೇ ಅರ್ಥಗಾರರು. ಇದನ್ನೆಲ್ಲ ಕಂಡು ಇವನಲ್ಲೂ ಅಂಥ ಹಂಬಲ ಉಂಟಾಯಿತು. ತಮ್ಮ ಶಾಲೆಯಲ್ಲೂ ಒಂದು ಯಕ್ಷಗಾನಕೂಟ ಏರ್ಪಡಿಸುವೆನೆಂದುಕೊಂಡನು. ತಾನೇ ಮುಂದಾಳಾದನು. ಪೇಟೆಯ ಬೇಸರವನ್ನು ತಳ್ಳಲು ಯಾವ ಹೊಸ ಉಪಾಯಕ್ಕೂ ಅವನು ಅಣಿಯಾದನು.

ಅವನ ಜತೆಗಾರರೂ ಮುಂದೆ ಬಂದರು. ಈತ ತನ್ನ ಪಾಠಗಳ ಎಡೆಯಲ್ಲಿ-ಯಕ್ಷಗಾನ ಕಾಳಗ, ಪ್ರಸಂಗಗಳನ್ನು ಇಣಿಕಿ, ಪರಿಶೀಲಿಸಿದನು. 'ಒಮ್ಮೆ ಕಡಬವನ್ನು ಸೇರಿದರೆ, ಒಂದು ದಿನ ಕುಡುಮತ್ತಾಯರನ್ನು ಕಂಗಾಲುಗೊಳಿಸುತ್ತೇನೆ' ಎಂದುಕೊಂಡನು. ನದಿಯ ದಂಡೆಗೆ ಅಲೆದಾಡಲು ಹೋದಾಗ, ಮೈದಾನಿನಲ್ಲಿ ಕುಳಿತಾಗ, ರೈಲ್ವೆ ದಾರಿಯಿಂದ ಉಳ್ಳಾಲ ಸೇತುವೆಗೆ ಹೋದಾಗ, ಯಾವಾಗ ನೋಡಿದರೂ ಆಗ-ಯಕ್ಷಗಾನದ ಪ್ರೇತ ಅವನ ಬೆನ್ನುಹತ್ತಿತು. ಬಾಯಲ್ಲಿ ಮಟಮಟ ಅರ್ಥ ಹೇಳುವುದು, ಗೆಳೆಯರು ಬಳಿಯಲ್ಲಿದ್ದರೆ—"ಹೌದಯ್ಯ, ನೀವು ಮೊನ್ನೆ ಅಂಗದನ ಅರ್ಥ ಹೇಳಿದಿರಲ್ಲ? ಅದು ಹೇಗಾಗುತ್ತದೆ? ಭಗವದ್ಗೀತೆಯ ಶ್ಲೋಕ ಹಾರಿಸಿಬಿಟ್ಟಿರಿ! ರಾಮಾಯಣ ಮೊದಲಾ

ದುದೇ,ಭಾರತವೇ? ಮೊನ್ನೆ ನಮ್ಮ ಗೋಪಾಲರಾಯರು ರಾಮನ ಅರ್ಥ ಹೇಳಿದರಲ್ಲ. 'ಥೂ ಸೂಳೆಮಗನೇ' ಎಂದು ವಾಲಿಯನ್ನು ಬೈದರಲ್ಲ- ರಾಮ ಹಾಗೆಂದಾನೆಯೇ? ಒಳ್ಳೆಯ ಮನೆತನದಲ್ಲಿ ಹುಟ್ಟಿದ ರಾಮನ ಬಾಯಲ್ಲಿ ಆ ಮಾತು ಬಂದೀತೇ"-ಎನ್ನುತ್ತಾನೆ. ಗೋಪಾಲರಾಯರೂ ಅಲ್ಲಿಯೇ ಇದ್ದರು. ಅವರು ವಾದವೆತ್ತಿದರು. "ನೀವು ಶರ್ಮರ, ಶೆಟ್ಟರ ಅರ್ಥಗಳನ್ನು ಕೇಳಿಲ್ಲ. ಅಂಥ ಹೆಸರಾದ ಅರ್ಥಗಾರರೇ ಹಾಗೆನ್ನುವು ದನ್ನು ನಾನು ಕೇಳಿದ್ದೇನೆ. ನೀವೆನ್ನುವುದು ಮಹಾ!" ಎಂದರು. "ಅದನ್ನು ಶರ್ಮರು ಹೇಳಲಿ, ಪ್ರತ್ಯಕ್ಷ ಪರಮೇಶ್ವರನೇ ಹೇಳಲಿ; ತಪ್ಪೇನೆ. ಈಗ ನೀವೇ ಯೋಚನೆಮಾಡಿ: ಅವನು ದೇವರಂತೆ; ಯೋಗ್ಯನಾದ ದಶರಥ ರಾಯನ ಮಗ. ವಸಿಷ್ಠರಲ್ಲಿ ಶಿಕ್ಷಣ ಪಡೆದವನಂತೆ. ಆತ 'ಸೂಳೆಮಗ' ಎಂದರೆ ಅಂಥ ರಾಮನ ವಿಷಯ ನಮಗೇನು ಗೌರವ ಬಂದೀತು"- ಎಂದು ಅಚ್ಯುತ ವಾದಿಸಿದನು.

ಈ ತೆರನಲ್ಲಿ ವಿಚಾರವಂತರು ಒಪ್ಪಬಹುದಾದ ಹಲವು ತರ್ಕ ಸರಣಿಗಳು ಅವನಲ್ಲಿ ಮೂಡುತ್ತಿದ್ದುವು. ಅವರ ಶಾಲೆಯ ಯಕ್ಷಗಾನ ಕೂಟದಲ್ಲಿ ಕೊಂಬಾರು ಅಚ್ಯುತರಾಯರು ಎಂಬ ಒಬ್ಬ ವಿಮರ್ಶಕ ಶಿಖಾಮಣಿಗಳೆನಿಸಿದರು. ಉಳಿದ ಅರ್ಥಧಾರಿಗಳಂತೆ ಅವರು ಸಂಸ್ಕೃತ ಪದಗಳನ್ನು ಜಮಾಯಿಸುವುದಕ್ಕೆ ಹೋಗಲಿಲ್ಲ; ನಾಣ್ಣುಡಿಗಳನ್ನು ಬೆಸೆ ಯುವುದಕ್ಕೂ ಹೋಗುತ್ತಿರಲಿಲ್ಲ.

ಆದರೆ ಅವನ ಈ ವಿಮರ್ಶಕ ಬುದ್ಧಿಯಿಂದ, ಅವನಿಗೆ ಕೆಲ ವೊಂದು ವೈರಿಗಳು ಉಂಟಾಗದಿರಲಿಲ್ಲ. ಒಂದು ದಿನ ಅವರ ಕೂಟದ ವರು ತಮ್ಮ ಸವತಿ ಶಾಲೆಗೆ ಹೋಗಿದ್ದರು—ಅದೇ ಲೋವರ್ ಗ್ರೇಡಿ ನವರ ಶಾಲೆ. ಆ ದಿನ ರಾತ್ರಿ ಮಹಾನುಭಾವರೊಬ್ಬರ ನೇತೃತ್ವದಲ್ಲಿ ಪ್ರಸಿದ್ಧ ಅರ್ಥಗಾರರಿಂದ ಯಕ್ಷಗಾನ ನಡೆಯುವುದಿತ್ತು. ಸಿನೆಮಾಕ್ಕೂ ಸೇರದಷ್ಟು ಜನ ಸಂಖ್ಯೆ ಅಲ್ಲಿ ನೆರೆದುದನ್ನು ಕಂಡು ಅಚ್ಯುತರಾಯ ನಿಗೆ ಆಶ್ಚರ್ಯವಾಯಿತು. ಬಳಿಯಲ್ಲಿ ಅವರ ಗೆಳೆಯ ಗೋಪಾಲರಾ ಯರೊಂದಿಗೆ 'ಹೌದಯ್ಯ, ಪೇಟೆಯ ಜನರಿಗೂ ನಮ್ಮ ಯಕ್ಷಗಾನ ಹಿಡಿ ಸುತ್ತದೆ. ಅಲ್ಲವೇ"—ಎಂದರು.

"ಇವತ್ತು ಬರುವ ಅರ್ಥಧಾರಿಗಳೂ ಅಂಥಂಥವರೆ! ಶರ್ಮರು,

ಸೂರ್ಯ ರೈಗಳು, ಲಚ್ಚಣ್ಣ ಸೆಟ್ಟರು-ಎಂದರೆ ಅಂಥಿಂಥ ಅರ್ಥಗಾರರಲ್ಲ. ನಾವು,ನೀವು ಕಿರುಚಿದರೆ ಇಷ್ಟು ಜನ ಬಂದು ಸೇರಲು ಮರುಳು ಹಿಡಿಯಬೇಕು"ಎಂದರು ಗೋಪಾಲರಾಯರು.

ತೀರ ಉತ್ಸಾಹಗೊಂಡು 'ಹಾಗಾದರೆ ಬೆಳಗಿನ ತನಕ ಕೂತಿರಲೇಬೇಕು. ನಾಳೆ ಸೋಮವಾರ; ಶಾಲೆಗೆ ಕೇಜುವಲ್ ರಜೆ ಗತಿಯಾದರೂ ಚಿಂತೆಯಿಲ್ಲ" ಎಂದುಕೊಂಡು, ಇಬ್ಬರೂ ಎಲೆ ಅಡಿಕೆಯನ್ನು ಮೆಲ್ಲುತ್ತ ಕಥಾಪ್ರಾರಂಭದ ನಿರೀಕ್ಷಣೆಯಲ್ಲಿದ್ದರು. ಸುಮಾರು ಹತ್ತಕ್ಕೆ ಪ್ರಸಂಗ ತೊಡಗಿತು. ಸಭೆ ಜರುಗಿಸಿದ ಮಹಾನುಭಾವರು ಬಂದು--"ಈ ಹೊತ್ತು 'ಕರ್ಣಾರ್ಜುನ'ವನ್ನು ಆಡುವುದೆಂದು ನಿರ್ಣಯಿಸಿದ್ದೇವೆ. ಸೂರ್ಯ ರೈಗಳು-ಕರ್ಣ; ಶರ್ಮರು-ಅರ್ಜುನ; ಲಚ್ಚಣ ಸೆಟ್ಟರು—ಶಲ್ಯ; ವಕೀಲ ವೆಂಕಪ್ಪಯ್ಯನವರು-ಕೃಷ್ಣ"ನೆಂದೂ ಹೇಳಿದರು. ವಕೀಲರೂ ಯಕ್ಷಗಾನದಲ್ಲಿ ಭಾಗವಹಿಸುತ್ತಾರೆಂದು ಕೇಳಿದ ಮೇಲೆ ಅಚ್ಯುತರಾಯನ ಕಿವಿ ನಿಮಿರಿತು. ತಮ್ಮೂರಲ್ಲಿ ಪ್ರತಿವಾರ ತಾವೂ ಯಕ್ಷಗಾನ ನಡೆಯಿಸಿ, ಕನ್ನಡಮಾತೆಗೆ ಸೇವೆ ಸಲ್ಲಿಸಬೇಕೆಂಬ ದೃಢ ನಿರ್ಧಾರವು ಆಯಿತು. ಆ ರಾತ್ರೆ ಅವರಿಬ್ಬರೂ ಎವೆಮುಚ್ಚಲಿಲ್ಲ. ತೂಕಡಿಕೆ ಬಂದಾಗಲೆಲ್ಲ, ಎರವಿನ ಚಿಟಿಕೆ ನಸ್ಯದಿಂದ ಚೇತರಿಸಿಕೊಂಡು, ಬೆಳಗಿತ ತನಕ ಆಲಿಸುತ್ತಲೇ ಇದ್ದರು. ನಡುನಡುವೆ, ಮುಗ್ಗುಲಿಗೆ ಕುಳಿತ ಗೋಪಾಲರಾಯರು "ಹೇಗಿದೆ, ಹೇಗಿದೆ?" ಎಂದು ಅವನನ್ನು ಹಿಗ್ಗಿ ಮಾತನಾಡಿಸುತ್ತಿದ್ದರು. ಆದರೆ ಅಚ್ಯುತರಾಯ ತೀರ ಏಕಚಿತ್ತ. ಬೆಳಗಾಗುವ ತನಕ ಉಸಿರೆತ್ತಲಿಲ್ಲ-"ಈಗ ಕೇಳುವ; ಮತ್ತೆ ಮಾತನಾಡಬಹುದಲ್ಲ" ಎನ್ನುತ್ತಿದ್ದ.

ಬೆಳಗಾಗುತ್ತಲೇ ಸಭೆಯು ಚೆದರಿತು. ಸಭಿಕರೊಬ್ಬರು ಬಂದು, ಅರ್ಥಗಾರರನ್ನು ಅಟ್ಟಕ್ಕೇರಿಸಿ ಮಾತನಾಡಿದರು. ಅಂತು ನೆರೆದ ಸಭಿಕರು ತೃಪ್ತಿಗೊಂಡು ಮರಳಿದರೆಂಬುದಕ್ಕೆ ಅಡ್ಡಿಯಿಲ್ಲ. ಬಂದ ಸಭಿಕರೆಲ್ಲರೂ, ಯಕ್ಷಗಾನ ಅರ್ಥಧಾರಿಗಳನ್ನು ಕುರಿತು ಕೊಂಡಾಡುತ್ತಲೇ ಇದ್ದರು. ಅಚ್ಯುತನಿಗೆ ಪ್ರಸಂಗ ಹೇಗೇ ಕಂಡಿರಲಿ, ಮಂಗಳೂರಿನ ರಸಿಕರು ಅದನ್ನು ಮೆಚ್ಚಿದರೆಂಬುದು ನಿರ್ವಿವಾದ.

ಆ ದಿನ ಬೆಳಗ್ಗೇನೋ ಅಚ್ಯುತ ಶಾಲೆಗೆ ಹೋಗಿದ್ದ. ಮಧ್ಯಾಹ್ನ

ಊಟ ಮುಗಿಸಿ ಮಲಗಿಕೊಂಡ. ಸಂಜೆ ಎಂದಿನಂತೆ ಗುರ್ಪುರ ಗೋಪಾಲರಾಯರು, ಕಲ್ಯಾಣಪುರ ವೆಂಕಟೇಶರೊಡನೆ ಅಲೆದಾಟಕ್ಕೆ ಹೋಗಿದ್ದನು. ಮೂವರೂ ಬಂದರಿಗೆ ಹೋಗಿ, ಧಕ್ಕೆಯ ಮೇಲೆ ಕುಳಿತು, ಆಚೀಚೆ ಓಡಾಡುವ ಹಾಯಿದೋಣಿಗಳನ್ನು ನಿರೀಕ್ಷಿಸುತ್ತಿದ್ದರು. ಮಾತುಗಳು ಹಿಂದಣ ರಾತ್ರಿಯ ಯಕ್ಷಗಾನದ ಕಡೆಗೆ ಹೊರಳಿದುವು. ಗೋಪಾಲರಾಯರು ತಮ್ಮ ಅಭಿನಂದನೆಯ ಸುರಿಮಳೆಯನ್ನು ಸುರಿಸಿದರು. ವೆಂಕಟೇಶ ನಡುವೆಒಂದೊಂದು ಮಾತನಾಡುತ್ತ, ಇಲ್ಲ 'ಅವರು ಹಾಗೆ ಮಾತನಾಡಿದುದು ಚೆನ್ನಾಗಿತ್ತು. ಆದರೆ ಶಲ್ಯ ಸ್ವಲ್ಪ 'ಸದರ'ವಾಯಿತು; ಕರ್ಣನ ಜೋರಿಗೆ ಸಮನಾದವನಲ್ಲ. ಕೃಷ್ಣ ಏಕೋ ನನಗೆ ಹಿಡಿಸಲಿಲ್ಲ-ವಾಕ್ಯಕ್ಕೆ ಕೊಮ, ಅಲ್ಪವಿರಾಮ ಒಂದೂ ಬೇಡವೇ? ಹಾಲವಕ್ಕಿ ನರಸಣ್ಣನಂತೆ ಅರೆತಾಸಿನ ತನಕ ಬಡಬಡಿಸಿದರೆ ಹೇಗೆ?' ಎಂದನು. ಅವನನ್ನು ಗೋಪಾಲರಾಯರು ವಿರೋಧಿಸಿದರು. ಗೋಪಾಲರಾಯರು ಕಿಡಿಕಿಡಿಯಾಗಿ "ನಿಮಗೆ ಖುಶಿಯಾಗುವಂತೆ ಅರ್ಥ ಹೇಳಲು ಬ್ರಹ್ಮ ಬರಬೇಕಾದೀತು"-ಎಂದರು. ವೆಂಕಟೇಶ, ಸಹಾಯಕ್ಕೆ ಅಚ್ಚುತನನ್ನು ಕರೆದರೆ, ಅಚ್ಚುತ ಬರಿದು ಮನಸ್ಸಿನಿಂದ "ಆಂ" ಎಂದನು. ತಿರುಗಿ ಅವರಲ್ಲಿ ವಾದವಿವಾದಗಳಾದುವು. "ಅದನ್ನೇ ಈಗ ನಾನು ಯೋಚಿಸುತ್ತಿದ್ದೇನೆ, ಈಗ ಕತ್ತಲಾಯಿತು. ಮನೆಗೆ ಹೋಗುವ; ಇಲ್ಲಿ ಯಾವ ಗದ್ದಲವೂ ಬೇಡ" ಎಂದು ಅಚ್ಚುತ ಹೇಳಲು, ತಾವು ಇಳಿದುಕೊಂಡ ಹೊಟೇಲಿಗೆ ತೆರಳಿದರು.

ರಾತ್ರಿ ಊಟ ಮುಗಿಸಿ ಮೂವರೂ ತಮ್ಮ ಕೊಟಡಿಯನ್ನು ಸೇರಿದರು. ಅಚ್ಚುತನೆಂದ: "ಗೋಪಾಲರಾಯರೇ, ಈಗ ನನ್ನ ಅಭಿಪ್ರಾಯವನ್ನು ನಾನು ಹೇಳುತ್ತೇನೆ. ಅಭಿಪ್ರಾಯವಲ್ಲ; ವಿಮರ್ಶೆಯನ್ನು— ನಿಮ್ಮ ಮುಂದಿರಿಸುತ್ತೇನೆ. ಕೇಳಿಕೊಂಡು ನೀವು ಹೇಳುವುದನ್ನು ಹೇಳಿ" ಎಂದನು. ಅಚ್ಚುತ ಹಿಂದಣದ ದಿನ, ತದೇಕಚಿತ್ತನಾಗಿ ಕೇಳಿದುದರಿಂದ ತಮ್ಮ ಪಂಗಡಕ್ಕೆ 'ಭಲೆ!' ಬರುತ್ತದೆಂದು ಗೋಪಾಲರಾಯರು ಯೋಚಿಸಿದ್ದರು. ಅಚ್ಚುತ ವಿಮರ್ಶಕ ಬುದ್ಧಿಯವನಾದುದರಿಂದ, ತನ್ನ ಪಂಗಡವೇ ಗಟ್ಟಿಯಾದೀತೆಂದು ವೆಂಕಟೇಶ ತಿಳಿದುಕೊಂಡನು. ಅಚ್ಚುತ ಸಾವಧಾನವಾಗಿ—

"ಗೋಪಾಲರಾಯರೇ, ನಿನ್ನೆ ಯಾವ ಪ್ರಸಂಗವನ್ನು ಅವರು ಎತ್ತಿಕೊಂಡುದು?" ಎಂದು ಕೇಳಿದ.

"ಅದೇಕೆ? ಕರ್ಣಾರ್ಜುನ."

"ಸರಿಯೆ-ಕರ್ಣಾರ್ಜುನ. ಅದನ್ನು ಕೇಳಿದೆವು ನಾವು. ಪೂರ್ಣ ಕೇಳಿ ಮನೆಗೆ ಬರುವಾಗ ನಮಗೆ ಕರ್ಣ ಎಂಥವನು, ಅರ್ಜುನ ಎಂಥವನು, ಕೃಷ್ಣ ಎಂಥವನು ಎಂಬ ನೆನಪು ಬರುತ್ತಿತ್ತೇ, ಅರ್ಥಗಾರ ಶರ್ಮರೋ, ಸೂರ್ಯರೋ, ವೆಂಕಪ್ಪಯ್ಯನವರೋ-ಇವರುಗಳ ನೆನಪೇ ಉಳಿಯುವಂತಾಯಿತೇ? ಅವರೆಲ್ಲ ಮಾತಿನಲ್ಲಿ ಜಾಣರೆಂಬ ವಿಷಯದಲ್ಲಿ ಅನುಮಾನವಿಲ್ಲ. ಅಲ್ಲಲ್ಲಿ ಸಂಸ್ಕೃತವನ್ನು ಅರ್ಥವಿಲ್ಲದೆ ಅವರು ಬಿಗಿದರೂ, ವಕ್ತಾರರೇ ಎಲ್ಲರು. ಆದರೆ ಕಾಳಗ ಭೂಮಿಯಲ್ಲಿ ಕೃಷ್ಣನಂಥ ಮೇಧಾವಿ ಅರ್ಜುನನ್ನು ಬೈದರೆ ಹೇಗೆ ಬೈದಾನು? ಶಲ್ಯ--ಕರ್ಣನನ್ನು ಹಂಗಿಸಿದರೆ ಹೇಗೆ ಹಂಗಿಸಿಯಾನು?-ಎಂಬ ಅಳತೆ ನಿನ್ನೆ ಕಾಣುತ್ತಿತ್ತೇ? ಬೀದಿಯ ಭಿಕಾರಿಗಳ ಮಾತಿನ ಬಳಕೆಗೂ ಯೋಗ್ಯ ಶಿಕ್ಷಣ ಪಡೆದವರ ಮಾತಿಗೂ ಏನೂ ವ್ಯತ್ಯಾಸ ಇಲ್ಲವೆ?

"ಪ್ರತಿಯೊಬ್ಬರೂ ತಮ್ಮ ಮಾತಿನ ಪ್ರೌಢಿಮೆಯಿಂದ ಸಭೆಯನ್ನು ಮೋಹಿಸಲು ಹೊರಟರೇ ವಿನಾ, ತಮ್ಮ ಪಾತ್ರದ ಯೋಗ್ಯತೆ, ಯಾವ ಪ್ರಸಂಗದಲ್ಲಿ ನಡೆಯಿತು ಈ ಕೆಲಸ ಎಂಬ ವಿಚಾರಗಳನ್ನು ಮಾಡಿದರೇ? 'ನನಗೆ ನಿನ್ನೊಡನೆ ಮಾತಿಗೆ ವಿರಾಮವಿಲ್ಲ; ತೆಗೆ ಬಾಣವನ್ನು,' ಎಂದು ಒಂದು ಗಂಟೆಯ ಕಾಲ ದಂತ ಕತೆಗಳನ್ನು ಹೊಸೆದ ಕರ್ಣನಿಗೆ, ಅದು ಯುದ್ಧ ಭೂಮಿ ಎಂಬ ಪರಿಜ್ಞಾನವಿತ್ತೇ? ಆತ ಆತ್ಮವಿಶ್ವಾಸವುಳ್ಳ ವ್ಯಕ್ತಿಯೆಂಬ ಭಾವನೆಯಾಗುತ್ತಿತ್ತೇ? ಅಲ್ಲಿನ ಒಬ್ಬೊಬ್ಬರಿಗೂ, ತಾವು ಮಾತುಗಾರರು ಎಂಬ ಪ್ರಜ್ಞೆಯಿದ್ದಂತೆ ಕಾಣುತ್ತಿತ್ತೇ ವಿನಾ, ಭೂಮಿಕೆಯಲ್ಲಿ ಲೀನವಾಗಿ, ತಾನು 'ಕರ್ಣ, ಅರ್ಜುನ' ಎಂಬ ಭ್ರಮೆ ಹುಟ್ಟಿಸಲಿಲ್ಲ. ಸಭೆಯಿಂದ ಹೊರಡುವಾಗಲೂ, ಜನರು ಅಂದುದು ಅದನ್ನೇ-'ಕರ್ಣನ ಮಾತೆಂದರೆ ಮಾತು, ಶಲ್ಯನ ಮಾತೆಂದರೆ ಮಾತು. ಅರ್ಜುನನೇನು ಟಿಕಾಯಿಸಲಿಲ್ಲ ಕರ್ಣನ ಮುಂದೆ' ಎಂದರಲ್ಲವೆ?

"ತಾನು ಮೇಲೆ, ತಾನು ಮೇಲೆ ಎಂದು ನಾಲಗೆ ಬೆಳೆಯಿಸುವ, ಜನರ ಜೂಜೇನು ಅದು? ಇಲ್ಲವೆ ಭಾರತದ ಒಂದು ಕಥೆಯನ್ನು ನಮ್ಮ

ಮುಂದೆ ಕಟ್ಟುವ ರಸಭರಿತ ಸನ್ನಿವೇಶವೇ ಅದು! ಏನು? ನಮ್ಮ ಮನಸ್ಸೇನಾಯಿತು? ಹಾಡುಗಾರನಿಗೆ ತುಂಬ ವಿಶ್ರಾಂತಿಯಿತ್ತು. ಪ್ರತಿಯೊಬ್ಬರೂ ಲೆಕ್ಕರಿಗೆ ನಿಂತ ಪ್ರೊಫೆಸರರೇ! ಅಲ್ಲಿನ ಚಾರಕನು ಸಹ ಸಂಸ್ಕೃತ ಪಂಡಿತನೇ! ಒಟ್ಟು ನೋಡಹೋದರೆ-ಆ ಶಕುನಿಯಾದ ಭಟ್ಟರೊಬ್ಬರಿಗೆ ಭಾರತ ಓದಿದ ನೆನಪಿದ್ದಿರಬೇಕು. ತಂತ್ರಗಾರನಾದವ ಹೇಗೆ ಮಾತನಾಡಿಯಾನು, ಅವನ ಮಾತು ಹೇಗೆ ತೂಕದ್ದಿರಬಹುದು ಎಂಬ ಕಲ್ಪನೆಯಿತ್ತು. ಪ್ರಾಯಶಃ ನಿಮ್ಮ ಪಟ್ಟಿಯಲ್ಲಿ ಶಕುನಿಗೆ ಯಾವ ಸ್ಥಾನವೂ ಇಲ್ಲ. ತಮ್ಮ ನಾಲಗೆಯನ್ನು ಹಾವಿನ ಹಾಗೆ ಕುಣಿಸಿದವರಿಗೆ ಮರ್ಯಾದೆ! ಭಾರತದಲ್ಲಿ ಅರ್ಧಘಂಟೆ ನಡೆದ ಸನ್ನಿವೇಶವನ್ನು ಇವರು ಆರು ತಾಸು ಹಿಗ್ಗಿಸಿಬಿಟ್ಟು ವ್ಯಾಸನನ್ನು ಕೊಂದರು-ಅಷ್ಟೇನೆ ಅದರ ಫಲ" ಎಂದನು ಅಚ್ಚುತರಾಯ.

ಗೋಪಾಲರಾಯರಿಗೆ ರೇಗಿತು — "ನಿಮಗೇನು ಮಹಾ ಬರುತ್ತದೆಂದು ತಿಳಿದಿದ್ದೀರಯ್ಯ. ಅವರಿಗೆ ಮಹಾಭಾರತದ ಜ್ಞಾನವಿಲ್ಲವಂತೆ-ನಿಮಗೆ ಇದೆಯೆಂತಲೋ?" ಎಂದುಬಿಟ್ಟರು.

"ನನಗಿಲ್ಲ ಎಂದು ತಿಳಿಯುವ. ಅವರಿಂದ ಅದು ಉಂಟಾಗಲೂ ಇಲ್ಲ ಎಂದೇ ನನ್ನ ಅಭಿಪ್ರಾಯ" ಎಂದ ಅಚ್ಚುತರಾಯ. ಈ ಕಲಹ ಕೈಕಾಳಗದಲ್ಲಿ ಮುಗಿಯದಿದ್ದುದೇ ಆಶ್ಚರ್ಯ. ವೆಂಕಟೇಶ ಎಷ್ಟು ತಡೆಯಲು ಯತ್ನಿಸಿದರೂ "ನೀವೆಲ್ಲ ಘಟಿಂಗರಯ್ಯ, ಹಳ್ಳಿಯ ಗೌಡರಯ್ಯ, ನಾಯಿಯನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿದರೆ.... ಎನ್ನುತ್ತಾರಲ್ಲ.... ಹಾಗೆ" ಎಂದು ಗೋಪಾಲರಾಯರು ಕಿಡಿಕಿಡಿಯಾದರು.

ಅಚ್ಚುತನಿಗೆ ವ್ಯಸನವಾಯಿತು. ಈ ತೆರನ ವಾದ ಫಲಿಸದೆಂದು ತಿಳಿದನು. "ಗೋಪಾಲರಾಯರೇ, ನಿಮಗೆ ಸಿಟ್ಟು ಬರಿಸಿದ್ದಾದರೆ, ನನ್ನ ಕ್ಷಮಾಯಾಚನೆ. ಆದರೇನು ಮಾಡಲಿ? ಜನರ ಅಭಿರುಚಿ ಹೀಗೆ ಕೆಡುವುದನ್ನು ಕಂಡು ನನಗೆ ವ್ಯಸನವಾಯಿತು; ಹೇಳಿದೆ. ನನಗೆ ನಿಮ್ಮ ಅಭಿರುಚಿ ಕೆಟ್ಟಿದೆ ಎಂದೂ ತೋರಿತು; ಏನು ಮಾಡಲಿ" ಎಂದನು.

"ಹೋಗಲಿ ಬಿಡಿ, ನಾಳೆ ನಿಮ್ಮ ಯಕ್ಷಗಾನವಿದೆಯಲ್ಲ. ನಾಳೆ ನೀವು ಕಡಿಯುವುದು ಕಾಣುತ್ತದೆ" — ಎಂದರು ಗೋಪಾಲರಾಯರು. ಅಂತು ಆ ರಾತ್ರಿ ಎಲ್ಲರ ಮನಸ್ಸೂ ಉದ್ವೇಗದಿಂದ ಕೂಡಿತ್ತು. ಅಚ್ಚುತ

ರಾಯ ಮಲಗಿದರೂ, ತಿರುತಿರುಗಿ ಅವನ ಮುಂದಕ್ಕೆ ಹಿಂದಣ ದಿನದ ಯಕ್ಷಗಾನ ನಲಿಯಿತು. ಅವರೇ ಅರ್ಥಧಾರಿಗಳು, ಬಂದರು; ಅವೇ ಮಾತನಾಡಿದರು. ಅಚ್ಯುತ ಅವರ ಬಾಯಿಯಿಂದ 'ಹೀಗೆ ಆಡಿ, ಇದು ನಿಮ್ಮ ಸ್ಥಾನಕ್ಕೆ ಕುಂದು, ಇದು ರಸಕ್ಕೆ ಕುಂದು' ಎಂದು, ತಿದ್ದಿ ತಿರುಗಿ ಅವರಿಂದ ನುಡಿಯಿಸಿದನು. ಕೃಷ್ಣನನ್ನು ಹಿಡಿದೆಳೆದು-'ನಿನ್ನಂಥ ಬಾಯಿ ಹರಕ ಯಾವ ಪಾತ್ರಕ್ಕೂ ತಕ್ಕವನಲ್ಲ, ನೀನಾಡುವ ವಾಕ್ಯಗಳ ಅರ್ಥ ಎಲ್ಲಿ ತೊಡಗುತ್ತದೆ, ಎಲ್ಲಿ ಮುಗಿಯುತ್ತದೆ — ಎಂದು ಗೊತ್ತಿಲ್ಲ ನಿನಗೆ' ಎಂದನು. ಮಲಗುವ ಮೊದಲು ಗೋಪಾಲರಾಯರೊಡನೆ ಮಾಡಿದ ಜಗಳವನ್ನು, ತನ್ನ ಕನಸಿನಲ್ಲಿ ಯಕ್ಷಗಾನದ ಅರ್ಥಧಾರಿಗಳೊಡನೆಯೂ ಮಾಡಿದನು.

"ಇಲ್ಲ, ಭಾರತ ರಾಮಾಯಣವನ್ನು ಓದಿಕೊಳ್ಳಬೇಕು. ಈ ಪ್ರಸಂಗದ ಕತೆಗಳೆಲ್ಲ, ಅಲ್ಲಿನವಲ್ಲವೇ? ಮೂಲ ಪಾತ್ರರಚನೆ ಹೇಗಿದೆ, ಏನು ಮಾಡಿದರೆ ಅವುಗಳ ರೂಪ ತಾಳಮದ್ದಲೆಯಲ್ಲಿ ಉಳಿದೀತು ಎಂದು ನೋಡುತ್ತೇನೆ" ಎಂಬ ತೀರ್ಮಾನಕ್ಕೆ ಬಂದನು. ಮರುದಿನದಿಂದ ಅಳ ಸಿಂಗಾಚಾರ್ಯರ ಬೃಹದ್ ಭಾಷಾಂತರವನ್ನು ತೆರೆದು ಪಠಣ ಆರಂಭ ವಾಯಿತು. ಮುಂದಿನ ಮೂರು ತಿಂಗಳ ತನಕ ಗೋಪಾಲಯರು ಅವನೊಡನೆ ಮಾತನಾಡಲಿಲ್ಲ. ಅಚ್ಯುತ ಮಾತನಾಡಳೆಸಿದ್ದೂ, ವೆಂಕಟೇಶನ ಸಂಧಾನ ಯತ್ನವೂ ನಿರರ್ಥಕವಾದುವು. ಅಚ್ಯುತನ ಶಾಲಾ ಜೀವನದಲ್ಲಿ ಹೀಗೆ ಹಲವು ವಿರಸವಾದ ಘಟನೆಗಳೂ ನಡೆದುವು. 'ತನಗೇನು ತಿಳಿದಿದೆ, ತಾನೊಬ್ಬ ಬಲ್ಲಿದನಾಗಬೇಡವೇ' ಎಂಬ ಹಂಬಲವನ್ನು ಅವು ಕೆರಳಿದುವು. ಅವನ ಇನ್ನೊಂದು ಅಭಿಲಾಷೆಯೆಂದರೆ ಭಾಷೆಯ ವಿಷಯವಾಗಿ. ತಾನು ಐದನೆಯ ತರಗತಿಯವರಿಗೆ ಪಾಠ ಹೇಳುವಾಗ, ಕ್ಲಿಷ್ಟಪದಗಳಿಗೆಲ್ಲ ನಾರಾಯಣ ಮಾಸ್ತರರ ಬಳಿಗೆ ಓಡಬೇಕಾದ ಪ್ರಸಂಗ ಬರುತ್ತಿತ್ತು. ಅದರಿಂದ ತಾನು ಕನ್ನಡ ಅಭ್ಯಾಸ ಚೆನ್ನಾಗಿ ಮಾಡಬೇಕೆಂದು ಎನಿಸಿತು. ಮಾತಿನ ಮೇಲೆ ತನಗೊಂದು ಹಿಡಿತ ಇರಬೇಡವೇ; ತನ್ನ S. S, L. C. ಇಂಗ್ಲಿಷು ವಿಶೇಷ ಖರ್ಚಿಗೆ ಬರಲಾರದು" — ಎಂದೂ ತಿಳಿದಿದ್ದ.

ಅವರ ಶಾಲೆಯಲ್ಲಿ ಹಿಂದಣ ವರ್ಷವೇ ಒಂದು 'ಕನ್ನಡ ಸಂಘ'

ಜನ್ಮವೆತ್ತಿತ್ತು. ಅದರಂತೆ ಮಂಗಳೂರಿನ ಎರಡು ಕಾಲೇಜುಗಳಲ್ಲಿಯೂ ಕನ್ನಡ ಸಂಘಗಳು ಜನ್ಮ ತಾಳಿದ್ದುವು. ಅಚ್ಚುತರಾಯನಿಗೆ ಜ್ಞಾನದ ಹಂಬಲ ಬಲವಾದುದರಿಂದ ಎಲ್ಲಿ ಏನು ಉಪನ್ಯಾಸವಾದರೂ ಕೇಳಲು ತವಕಿಸುತ್ತಿದ್ದನು. ಯಾವನಾದರೂ ಒಬ್ಬ ಒಳ್ಳೆಯ ವಕ್ತಾರ ಬಂದರೆ ಉಪನ್ಯಾಸದ ಬಳಿಕ,ಅವನ ಹಿಂದೆ ಐದು ನಿಮಿಷವಾದರೂ ಅಲೆಯದೆ ಮನಸ್ಸಿಗೆ ನೆಮ್ಮದಿ ಬರುತ್ತಿರಲಿಲ್ಲ. ಅವರ ಗೆಳೆತನ ಬೆಳೆಸುವ ಚಪಲ ಕೊನೆಗೆ, 'ನಾನೆಲ್ಲಿ? ಅವರೆಲ್ಲಿ?' ಎಂಬ ಅಲ್ಪತೆಯ ವಿಚಾರ ಕಾಲಿರಿಸಿ, ನೊಂದ ಅಭಿಮಾನದೊಡನೆ ಮರಳುತ್ತಿದ್ದನು.

ನಾಡಿನ ವೃತ್ತಪತ್ರಿಕೆಗಳಲ್ಲೆಲ್ಲಿಯೂ 'ಕನ್ನಡದ ಗತ ವೈಭವಗಳ' ಉಪನ್ಯಾಸಗಳ ಸುದ್ದಿ, ರನ್ನ ಪಂಪರ ಶ್ಲಾಘನೆಗಳು ಕೇಳಿಬರುತ್ತಿದ್ದುವು. ತಾನೇ ರನ್ನ ಪಂಪರನ್ನು ಹಿಡಿದರೆ, ಅಡಿಗಡಿಗೆ ಕಿಟ್ಟೆಲಿನ ನೆರೆ, ನೋಟ ಗಳಿಲ್ಲದೆ ದಾರಿಗಾಣುತ್ತಿರಲಿಲ್ಲ. ಆ ವೇಳೆಗೆ ಸರಿಯಾಗಿ, ಅವನ ಗೆಳೆಯ ವೆಂಕಟೇಶನಿಗೆ ಬೇರೊಂದು ಹುಚ್ಚು ಹಿಡಿದಿತ್ತು. . ಅವನೊಂದು ದಿವಸ "ಅಚ್ಚುತಯ್ಯ, ನನಗೊಂದು ಯೋಚನೆ ಬಂದಿದೆ ನೋಡಿ-ನಾನಿರುವುದು ಬೋರ್ಡು ಎಲಿಮೆಂಟರಿ ಶಾಲೆಯಲ್ಲಿ. ನಮ್ಮ ಬೋರ್ಡಿನ ಕಾಯಿದೆ ಯಂತೆ, ಅಲ್ಲಿರುವವರಿಗೆ ಅಲ್ಲೇನೆ ಗೋರಿ! ನನಗೆ ಉಡುಪಿಯಲ್ಲಿ ಮಾವನ ಮನೆ. ಒಂದು ಕೆಲಸ ಅಲ್ಲಿನ ಬೋರ್ಡು ಶಾಲೆಯಲ್ಲಿ ದೊರ ಕಿಸಬೇಕೆಂದು ಆಸೆ. ಆದರೆ ಎಲಿಮೆಂಟರಿ ಶಾಲೆಯವರು S.S.L.C ಕಲಿತರೂ, ಅವರ ಮತ್ತು ನಮ್ಮ ಗ್ರೇಡ್ ಬೇರೆ ಎಂದು ತಿಳಿಯುತ್ತಾ ರಲ್ಲ" ಎಂದನು ವೆಂಕಟೇಶ.

"ಅದೆಲ್ಲ ನಮ್ಮ ಊರಿನ ಹಣೆಯ ಬರಹ. ಹೈಸ್ಕೂಲು S.S,L.C. ಎಲಿಮೆಂಟರಿ S.S.L.C. ಎರಡು ಜಾತಿ ಬೇರೆ! ಗ್ರೇಜುವೇಟರ ಪಾಲಿಗೆ ಇವರು ಮೇಠರು; ಆ ಮೇಠರ ಪಾಲಿಗೆ ನಾವು-ಮುಂಡಾಳರು" ಎಂದನು ಅಚ್ಚುತ.

ವೆಂಕಟೇಶ ನಕ್ಕನು. "ಅದಕ್ಕೆ ನಾನೊಂದು ಹಂಚಿಕೆ ತೆಗೆದಿದ್ದೇನೆ. ಸಾಯುವುದರೊಳಗೆ ಹೈಸ್ಕೂಲು ಸೇರಿ, L.T, ಯವರ ಸಾಲಿನಲ್ಲಿ ಮೆಟ್ರಿಕ್ಕಿಗೆ ಪಾಠ ಹೇಳಬೇಕೆಂದು" ಎಂದನು.

"ಏನು B,A.L.T. ತಿರುಗಿ ಕಲಿಯುತ್ತೀರಾ? ಖಾಸಗಿ ಕಲಿತು

ನೀವು ಅಲ್ಲಿಗೆ ಸೇರುವಾಗ ಗಡ್ಡ ಹಣ್ಣಾಗುತ್ತದೆ. ನೀವು ಕಲಿತು ಮುಗಿಸುವಾಗ ಅಲ್ಲಿ ಚಾಕರಿಯೂ ಖಾಲಿಯಾಗಿ ಉಳಿದಿರಬೇಕಲ್ಲಯ್ಯ!" — ಎಂದನು ಅಚ್ಯುತ.

"ಅದಲ್ಲಯ್ಯ, ನನಗೆ ಕನ್ನಡವೆಂದರೆ ಪ್ರೀತಿ. ಪಂಡಿತ ಪರೀಕ್ಷೆ ಕಷ್ಟವಲ್ಲ ಎನ್ನುತ್ತಾರೆ. ಒಂದೆರಡು ವರ್ಷ ಒದ್ದಾಡಿ 'ವಿದ್ವಾನ' ಆದರೇನು ಎಂಬುದು ನನ್ನ ಯೋಚನೆ."

"ಅದಾದರೆ ನಾನಿದ್ದೇನೆ ಜತೆಗೆ. ಆದರೆ ಈ ವ್ಯಾಕರಣ, ಈ ರನ್ನ ಪಂಪರು, ನಾವೇ ತಲೆ ಚಚ್ಚಿಕೊಂಡು ಆಗುವ ಬದುಕುಗಳಲ್ಲ. ಯಾರಾದರೂ ಪಾಠ ಹೇಳುವವರು ಬೇಕು. ಅದೂ ಬಿಟ್ಟಿಗೆ ಯಾರು ಹೇಳುತ್ತಾರೆ ಮಹಾರಾಯರೇ" ಎಂದು ಕೇಳಿದ ಅಚ್ಯುತ.

"ಬಿಟ್ಟಿ ಯಾರೂ ಹೇಳುವುದಿಲ್ಲ. ನಾನು ನಮ್ಮ ವಿದ್ವಾನ್ ಈಶ್ವರ ಭಟ್ಟರಲ್ಲಿ ಟ್ಯೂಶನ್ ಗೊತ್ತುಮಾಡಿದ್ದೇನೆ— ಹತ್ತು ರೂಪಾಯಿಗಳಂತೆ ತಿಂಗಳಿಗೆ. ಒಂದಲ್ಲ ಎರಡು ವರ್ಷಗಳು ಹಿಡಿದರೂ, ಇದರ ಜತೆಗೆ ಅದೂ ಆಗಬೇಕು?" ಎಂದ ವೆಂಕಟೇಶ.

"ಇಲ್ಲಿನದ್ದೇನೂ ಅಷ್ಟು ಭಯ ಕಾಣುವುದಿಲ್ಲ ನನಗೆ. ಇಲ್ಲಿ ಸೈಕಾಲಜಿ ಮಾತ್ರ ಹೆದರಿಸುತ್ತದೆ. ಅದನ್ನು ಬಾಯಿಪಾಠ ಕಲಿಯಬೇಕು. ಆ ಆಯುಧವಂತು ಗಟ್ಟಿ ಇದೆಯಲ್ಲ. ನಾನೂ ಒಂದು ವಿದ್ವಾನ ಆಗಬಹುದಿತ್ತು. ನಮ್ಮ ಹಳ್ಳಿಗೆ ಹೋದ ಮೇಲೆ ಅಂಥ ಆಸೆ ಬಿಡಬೇಕು. ಆದರೆ ತಿಂಗಳಿಗೆ ಹತ್ತು ರೂಪಾಯಿ ಎಲ್ಲಿಂದ ತರಲಿ! ಹಣಕ್ಕೆ ಹೆದರಿ ಊರಿಗೆ ಹೋಗಲಿಲ್ಲ ನಾನು. ಕ್ರಿಸ್‌ಮಸ್ಸಿನ ರಜೆಗೂ ಹೋಗಲಿಲ್ಲ..."-ಎಂದನು ಅಚ್ಯುತ.

"ನೀವು ಊರಿಗೆ ಹೋಗದೆ ನಡೆದೀತು. ಹೆಂಡತಿ ಮಕ್ಕಳೇ? ನನ್ನನ್ನು ನೋಡಿ- ಮೂರು ಮಕ್ಕಳು ಮನೆಯಲ್ಲಿ. ಬರುವಾಗ ಅವಳು ಗರ್ಭಿಣಿ. ಈ ತಿಂಗಳು ಹಡೆಯಬಹುದು. ನಾನು ಇಲ್ಲಿ ಆಕಾಶದಲ್ಲಿನ ನಕ್ಷತ್ರ ಎಣಿಕೆ ಮಾಡುತ್ತಿದ್ದೇನೆ" ಎಂದನು ವೆಂಕಟೇಶ.

"ಹೋ! ನೀವೀಗ ಮೂರು ಮಕ್ಕಳ ತಂದೆಯೋ! ಪ್ರಾಯವೇನೂ ಅಷ್ಟು ಕಾಣುವುದಿಲ್ಲ. ನೀವು ವಿದ್ವಾನ್ ಪರೀಕ್ಷೆ ಓದುವುದಾದರೆ ನನಗೇನು ಧಾಡಿ? ಎಷ್ಟೆಂದರೂ ಎಳೆ ಕೋಣವಲ್ಲವೇ? ಆದರೆ ಕಾಸಿನ

ವಿಚಾರ ಬಿಡಿ. ನೀವು ಪಾಠ ತೊಡಗಿದರೆ, ಪುಸ್ತಕ, ನೋಟ್ಸುಗಳನ್ನು ನನಗಷ್ಟು ತೋರಿಸಿಬಿಡಿ. ಅಷ್ಟೇನೆ ಸಾಕು; ಹೂವಲ್ಲದಿದ್ದರೆ, ಹೂವಿನ ಎಸಳು" ಎಂದ ಅಚ್ಯುತ.

ಈ ನಿರ್ಧಾರದಿಂದಾಗಿ ಅಚ್ಯುತನ ವಿರಾಮ ಇದರಲ್ಲೇ ಕಳೆಯ ತೊಡಗಿತು. ವೆಂಕಟೇಶನೂ ಅವನೂ ದಾರಿಯಲ್ಲಿ ಹೋಗುವಾಗಲೂ ಕೈಯಲ್ಲಿ ಪುಸ್ತಕ ತೆರೆದಿರುತಿತ್ತು. ಸಾಹಿತ್ಯ ಚರ್ಚೆ, ಸಂಧಿ ವಿಂಗಡಿಸುವ ಗದ್ದಲ, ಕವಿ ಚರಿತ್ರೆಗಳೇ ಚರ್ಚಿತವಾಗುತ್ತಿದ್ದುವು. ಒಂದೆರಡು ಬಾರಿ ಈ ಮಥನದಲ್ಲಿ ಮೈಮರೆತು ಮೋಟರುಗಳ ಚಕ್ರಕ್ಕೆ ಸಿಲುಕಿ ನುಚ್ಚು ನುರಿಯಾಗದಿದ್ದುದೂ ಆಶ್ಚರ್ಯ.

ಈಗೀಗ ಅಚ್ಯುತನಿಗೆ ಓದು, ಓದು, ಓದು- ಭ್ರಮೆಯಾಗಿಬಿಟ್ಟಿವೆ. ನಿತ್ಯವೂ ಕಾವ್ಯದ ಕನಸುಗಳೇ ಕಾಣತೊಡಗಿವೆ.

ನಡುನಡುವೆ ಸಿನೆಮಾ ಪ್ರಪಂಚದ ತಾರೆಯರೂ ಮನಸೆಳೆಯದೆ ಇರಲಿಲ್ಲ. ಹಳ್ಳಿಯಲ್ಲಾಗಲೀ ಪುತ್ತೂರಿನಲ್ಲಾಗಲೀ ಅವನಿಗೆ 'ಸಿನೆಮಾ' ಎಂಬುದು ಹೆಸರು ಮಾತ್ರವೆನಿಸಿತ್ತು. ಈಗ ಬೇಕಾದರೆ ದಿನಕ್ಕೆರಡು ಸಿನೆಮಾ ನೋಡಲು ಅವಕಾಶವುಳ್ಳ ನಗರವನ್ನು ಸೇರಿದ್ದಾನೆ. ಆದರೆ ದಿನಕ್ಕೆ ಎರಡು ಇಲ್ಲವೆ ನಾಲ್ಕಾಣೆಗಳನ್ನು ಕೊಟ್ಟು ಆತ ಸಿನೆಮಾ ನೋಡಬಲ್ಲನೇ? ಯಾವ ಅಳತೆಯನ್ನು ಮೀರಿದರೂ ಅವನ ಮನಸ್ಸು ತನ್ನ ಕಿಸೆಯ ಅಳತೆಯನ್ನು ಮೀರಲಾರದಾಗಿತ್ತು. ಹೀಗಾಗಿ ತಿಂಗಳಿಗೊಂದೆರಡು ಚಿತ್ರ ನೋಡಿದನೆಂದರೆ ಅತಿಶಯವಾಯಿತು. ಆದರೂ ಅವುಗಳ ಪರಿಣಾಮ ಮನಸ್ಸಿನ ಮೇಲೆ ಮೊಳೆಯದೆ ಇರಲಿಲ್ಲ. ಈ ಚಿತ್ರಲೋಕದ ಕನಸುಗಳು ವಿಚಿತ್ರ ತೆರನಾದುವು. ಕೊಲ್ಲಾಪುರ ಸಿನೆಟೋನ್, ಇಂಪೀರಿಯಲ್, ರಂಜಿತ್, ಕೊಹಿನೂರುಗಳೆಂಬವು ಮಾಯಕದ ಹೆಸರುಗಳಾದುವು. ಅದರಲ್ಲಿನ ನಟನಟಿಯರು ಬಾಯಿತೆರೆಯದೇನೆ—ಸಾವಿರಾರು ರೂಪಾಯಿಗಳನ್ನು ಗಳಿಸುತ್ತಾರೆಂದು ಕೇಳಿದ ಬಳಿಕ, 'ಈ ಬಡ ಮಾಸ್ತರಿಕೆ ಯಾವ ಮಣ್ಣಿಗೆ?' ಎಂಬ ನಿರಾಶೆಯೂ ಆಯಿತು.

ತನ್ನ ಮೋರೆಯನ್ನು ತಾನೇ ಕನ್ನಡಿಯಲ್ಲಿ ನೋಡಿ, ಆತ ತೃಪ್ತಿ ತಾಳಿದ. ಅಲ್ಲಿ ತೆರೆಯ ಮೇಲೆ ಕಂಡ ಮೋರೆಗಳಿಗಿಂತ ತನ್ನದು ಕೆಟ್ಟಿಲ್ಲ

ವೆಂದೂ, ತಾನು ಜುಟ್ಟನ್ನು ಕುಯ್ಯಿಸಿ, ಕ್ರಾಪನ್ನು ಇರಿಸಿಕೊಂಡರೆ, ತನ್ನ ಸೌಂದರ್ಯದ ಕಲ್ಪನೆಯಾದೀತೆಂದು ಅನಿಸಿತು.'ತಾಯಿ ಏನೆಂದಾಳು' ಎಂಬ ಭೀತಿಯಾಯಿತು. 'ಹೂಂ! ಊರನ್ನು ಸೇರುವುದು ಎಪ್ರಿಲು ತಿಂಗಳಲ್ಲಿ. ಅದರೊಳಗೆ ಕ್ರಾಪಿನ ಕೊಳಕೆ ಬೆಳೆಯನ್ನೂ ತೆಗೆಯಬಹುದಲ್ಲ' ಎಂದು ಜುಟ್ಟನ್ನು ಕುಯ್ಯಿಸಿಕೊಂಡ. ಆ ದಿನವೇ ವೆಂಕಟೇಶ ಅದನ್ನು ನೋಡಿದವನು 'ಅಚ್ಚುತ ಮಾಸ್ತರರೇ, ಈ ಪೇಟೆಗೆ ಬಂದರೆ, ಒಂದೊಂದು ಸಾರಿ, ನಾವೂ ಹಳ್ಳಿಯ ಕೋತಿಗಳಾಗಿ ಕಾಣಿಸಿಬಿಡುತ್ತೇವಲ್ಲವೇ" ಎಂದು ಪರಿಹಾಸ್ಯ ಮಾಡಿದನು.

ಮೂರು ತಿಂಗಳ ಅಭಿವೃದ್ಧಿಯಲ್ಲಿ ಒಂದು ಕ್ರಾಪನ್ನು ಬೆಳೆಯಿಸಿಕೊಂಡು, ಫೋಟೋಗ್ರಾಫರ ಶ್ಯಾಮನ ಸ್ಟುಡಿಯೋವಿಗೆ ಹೋದನು. ನಗುತ್ತ ತನ್ನ ಚಿತ್ರವನ್ನು ತೆಗೆಯಿಸಿಕೊಂಡು, ಮುಂಬಯಿಗೂ ರವಾನೆ ಹಾಕಿದ. ಇಂದು ಉತ್ತರ ಬಂದೀತು; ನಾಳೆ ಬಂದೀತು-ಎಂದು ಕಾದು ದಣಿದ. ಆದರೆ ಅದು ಮುಂಬಯಿಯಲ್ಲಿ ಕಸದಬುಟ್ಟಿ ಸೇರಿರಬೇಕು ಎಂಬ ನಿರಾಶೆಯನ್ನು ತನ್ನದಾಗಿ ಮಾಡಬೇಕಾಯಿತು. ಈ ಎಡೆಯಲ್ಲಿ ಇಂಗ್ಲಿಷ್,ಅಮೇರಿಕನ್ ಚಿತ್ರಗಳನ್ನುಒಂದೊಂದಾಗಿ ಇಣಿಕಿನೋಡಿದ. ಡಗ್ಲಾಸನ ಲಾಗದ ಮುಂದೆ ಮಾಸ್ಟರ್ ವಿಠಲನ ಕುಣಿತ ಹೇಗೆಂದು ನೋಡಿದ. ರಾಜಾಸೆಂಡೋವಿನ ಮುಂದೆ ಜಾನ್ ಗಿಲ್ಬರ್ಟನನ್ನುಹಿಡಿದ. ಮತ್ತಾರನ್ನೋ ಜೇನಿಂಗ್ಸನಿಗೆ ಹೋಲಿಸಿದ—ಕೊನೆಗೆ, 'ಹೂಂ, ಅವರಂತೆ ನಾನು ಅಭಿನಯಿಸಿಯೇನೆ? ಜೇನಿಂಗ್ಸ್, ಡಗ್ಲಾಸ್ ಇವರೆಲ್ಲರ ಮುಂದೆ,ನಮ್ಮವರ ಅಭಿನಯ ಅಣಕ. ನನ್ನಂಥ ಶಾಲಾ ಮಾಸ್ತರನಿಗೆ ಇದ್ದುದೇ ಒಳಿತು- ಇಪ್ಪತ್ತು ಇಪ್ಪತ್ತೈದು ರೂಪಾಯಿಗಳ ಮಾಸ್ತರಿಕೆಯ ಕನಸೇ ಒಳ್ಳೆಯದು. "ಜುಟ್ಟು ಕತ್ತರಿಸಿಕೊಂಡೆ; ಇನ್ನು ಸಿನೇಮಾ ಸೇರಿದರೆ, ಇಲ್ಲದ ಬಾಲವೂ ಕತ್ತರಿಸಿ ಹೋದೀತು" ಎಂದು ಪ್ರೇಕ್ಷಕ ವಿಮರ್ಶಕನ ಸ್ಥಾನದಲ್ಲೇನೆ ಇರತೊಡಗಿದ.

ಆದರೂ ಒಮ್ಮೊಮ್ಮೆ ಅಭಿನಯಿಸುವ ಬಯಕೆ ಮೂಡುತ್ತಿತ್ತು. ಮೈದಾನಿನಲ್ಲಿ 'ಚಾಮುಂಡೇಶ್ವರಿಯೋ, ಗುಬ್ಬಿಯೋ' ತಂಬು ನಟ್ಟರೆ ನಿದ್ದೆ ಬಿಟ್ಟು ನಾಟಕನೋಡಿ ಬೆರಗಾಗಿ "ಅವರಿಗೆ ನಾನು ಕಡಮೆಯಲ್ಲ" ಎಂದು ತನ್ನ ಹೊಟೇಲಿಗೆ ಮರಳುತ್ತಾನೆ. ಒಮ್ಮೆ ಶಾಲೆಯ ವರ್ಧಂತಿ

ಯಲ್ಲಿ ಹಟಮಾಡಿ ಪಾರ್ಟನ್ನು ವಹಿಸಿದ್ದೂ ಆಯಿತು. ಆ ದಿನ ಅವನ ಭೂಮಿಕೆಯನ್ನು ಗೆಳೆಯರು ಬಹಳ ಮೆಚ್ಚಿದರೂ, ತನಗೇ ಮಾತು ಬಾರದಿದ್ದುದು, ತನಗೇ ಅಭಿನಯ ಸಾಧಿಸದುದು, ಇವನ್ನು ಕಂಡು- "ಇದೆಲ್ಲ ಫಕ್ಕನೆ ಆಗುವ ಬಾಬಲ್ಲ. ನನ್ನ ಪಾಲಿಗೆ ಯಕ್ಷಗಾನವೊಂದು ಸಾಧಿಸಿದರೆ ಮಸ್ತಾಯಿತು. ಹಳ್ಳಿಯ ಊರಿಗೆ ನಾಟಕವೂ ಬೇಡ, ಸಿನೆಮವೂ ಬೇಡ" ಎಂಬ ತೀರ್ಮಾನಕ್ಕೆ ಬಂದನು.

ಹೀಗೆ ಹೊಸಗನಸುಗಳು ಅಚ್ಚುತನಿಗೆ ಒಂದೊಂದಾಗಿ ಕಾಣಿಸದೆ ಇರಲಿಲ್ಲ. ಅವುಗಳದ್ದೊಂದು ಹುಚ್ಚು ಹೊಳೆಯೇ ಅವನ ಕಣ್ಮುಂದೆ ಹರಿಯುತ್ತಿರುವುದು ಅವನ ಸ್ವಭಾವವಾಗಿತ್ತು. ಅವರ ತರ್ಕ ಸಂಘಗಳಲ್ಲಿ ಚರ್ಚಿಸಿ ಬೇಸರವಾಗದ ಒಂದು ವಿಷಯವೆಂದರೆ, 'ಗ್ರಾಮವಾಸ; ಪಟ್ಟಣವಾಸ' ಎಂಬುದು. ಇನ್ನೂ ನೂರು ವರ್ಷಗಳ ತನಕ ಅದು ಹಳಸಲಾರದ ಪ್ರಶ್ನೆ. ಚರ್ಚೆಯ ಕಾಲದಲ್ಲಿ ಪಟ್ಟಣಿಗರೆಲ್ಲ ಒಂದು ಕಡೆ; ಹಳ್ಳಿಯಿಂದ ಬಂದವರೆಲ್ಲ ಒಂದು ಕಡೆ. ಸಾಮಾನ್ಯ ಹತ್ತೆಂಟು ಮನೆಗಳುಳ್ಳ ಪೇಟೆಗಳನ್ನು ಪಟ್ಟಣವಾಗಿ ಮಾಡಿಕೊಂಡು, ತಾವೂ ಪಟ್ಟಣದ ನಾಗರಿಕರು, ಹಳ್ಳಿಯ ಅನಾಗರಿಕರಲ್ಲ, ಎಂಬುದನ್ನು ಸಾಧಿಸುತ್ತಿದ್ದರು. ಅವರೊಂದಿಗೆ ಅಚ್ಚುತ ಜಿದ್ದಾಡಬೇಕು. ಅವನು ಶುದ್ಧ ಹಳ್ಳಿಯವ. ಬೊಗ್ಗಾಡಿ,ಕೊಂಬಾರು, ಕಡಬ-ಇವು ಯಾವುವೂ ಪಟ್ಟಣಗಳಲ್ಲ. ಆದರೆ ಗೆಳೆಯನಾದ ವೆಂಕಟೇಶನು ಪಟ್ಟಣಿಗನಾಗಲು ಬಯಸುತ್ತಿದ್ದಾನೆ. ಕಲ್ಯಾಣಪುರವನ್ನು ಶಹರನ್ನಾಗಿ ಮಾಡಲೆಳೆಸುತ್ತಾನೆ. ಹೀಗಾಗಿ ತನ್ನವರನ್ನು ಆತ ಸೋಲಿಸಬೇಕಾಗುತ್ತದೆ. 'ಪಟ್ಟಣವೆಂದರೆ ನಾಲ್ಕು ಬೀದಿಯ ಬಳಿಯಲ್ಲಿ ನಾಲ್ಕು ಮನೆಗಳಿದ್ದರೆ ಸಾಲದು. ಆ ಹೆಸರು ನಮ್ಮ ಕಡಬಕ್ಕೂ ಬರುತ್ತದೆ. ಆದರೆ ಕಡಬ ಪಟ್ಟಣವಾದೀತೆ? ನಾಗರಿಕ ಸೌಕರ್ಯಗಳೆಲ್ಲವಕ್ಕೆ ಅದು ತವರೂರಾಗಿರಬೇಕು-ಆಸ್ಪತ್ರೆ, ಟ್ರಾಮು, ಟ್ರೈನು, ವಿದ್ಯುತ್, ಸಿನೆಮಾ ಮೊದಲಾದ-ಎಲ್ಲವೂ ಬೇಕು' ಎಂದು ಪೀಠಿಕೆ ಹಾಕಿ, ಅನಂತರ ಪೇಟೆಯ ಗದ್ದಲ, ಉದ್ದೇಶ ರಹಿತ ಜೀವನ, ಇವನ್ನೆಲ್ಲ ಖಂಡಿಸಿ, ತಮ್ಮ ಹಳ್ಳಿಗಳನ್ನು ಎತ್ತಿಹಿಡಿಯುತ್ತಾನೆ! ಆದರೆ ಒಮ್ಮೊಮ್ಮೆ ಮನಸ್ಸು ಹಳ್ಳಿಯ ಕಡೆಗೆ ಜಿಗುಪ್ಸೆ ಹುಟ್ಟಿಸಿ, ಪೇಟೆಯ ಸಿನೆಮಾಗಳ ಕಡೆಗೆ ಮನಸ್ಸನ್ನು ಸೆಳೆಯುತ್ತದೆ. ತಾನು ಓದಿ

ಪಾರಂಗತನಾಗಿ, ವಿದ್ವಾನನೋ, ಅದಕ್ಕೆ ಮಿಕ್ಕಿದವನೋ ಆದರೆ, ಹಳ್ಳಿಯಲ್ಲಿದ್ದು ಏನು ಮಾಡುವುದು – ಎಂಬ ಅನುಮಾನ ಆಗಲೇ ಮೊಳೆಯುತ್ತದೆ!

ಆದರೆ ಅವನು ಬಂದ ವರ್ಷವೇ, ಅವನ ತಳಮಳಕ್ಕೆ ಶಾಂತಿಯನ್ನುಂಟು ಮಾಡುವ ಘಟನೆಯೊಂದು ಜರುಗಿತು. ಆ ಊರಿಗೆ ದೇಶಭಕ್ತರಾದ ರಾಜಗೋಪಾಲಚಾರ್ಯರು ಬಂದಿದ್ದರು. ಜತೆಗೆ ಶಂಕರಲಾಲ್ ಬ್ಯಾಂಕರರು. ಮೈದಾನಿನಲ್ಲಿ ಇಬ್ಬರದ್ದೂ ಉಪನ್ಯಾಸಗಳಿದ್ದುವು. ಉಪನ್ಯಾಸವೇ ಅನ್ನಹಾರವಾಗಿರುವ ಅಚ್ಯುತ ಬಿಟ್ಟಾನೆಯೇ? ಗೆಳೆಯರ ತಂಡವನ್ನು ಕೂಡಿಕೊಂಡು ಅಲ್ಲಿಗೆ ಬಂದಿದ್ದ. ಬಂದ ಉಪನ್ಯಾಸಕ ಮಹನೀಯರು, ಖಾದಿ, ಗ್ರಾಮಜೀವನಗಳನ್ನು ಕುರಿತು ಭಾಷಣ ಮಾಡಿದರು. 'ನಿಮ್ಮಲ್ಲಿ ಎಷ್ಟು ಮಂದಿ ವಿದ್ಯಾರ್ಥಿಗಳಿದ್ದೀರಿ? ಹಳ್ಳಿಗೆ ಹೋಗಿ ಅದನ್ನು ಉದ್ಧರಿಸುವ ಕೆಲಸ ಮಾಡಬೇಕು" ಎಂದೆಲ್ಲಾ ಹೇಳಿದರು. ಹಾಗೆ ಭಾಷಣಕೊಟ್ಟವರಲ್ಲಿ ಒಬ್ಬರು, ಸಾವಿರಾರು ರೂಪಾಯಿ ಗಳಿಸುತ್ತಿದ್ದ ವಕೀಲರಾಗಿದ್ದರು. ಇನ್ನೊಬ್ಬರು ಲಕ್ಷಾಂತರ ಗಳಿಸುತ್ತಿರುವ ಶ್ರೀಮಂತರು. ಅವರಿಬ್ಬರೂ ಗ್ರಾಮಜೀವನದ ಆದರ್ಶವನ್ನೇ ಹೊಗಳಿದರು. 'ದೇಶಕ್ಕೆ ಗ್ರಾಮಗಳೇ ಜೀವಾಳ! ರೈತನೇ ರಕ್ತನಾಳ!' ಎಂದ ಮೇಲೆ ಕೇಳಬೇಕೆ ಅಚ್ಯುತನ ಹುರುಪನ್ನು! ಇನ್ನೊಮ್ಮೆ ಎಲ್ಲಾದರೂ 'ಗ್ರಾಮವಾಸ, ಪಟ್ಟಣವಾಸಗಳ' ವಿಚಾರ, ತರ್ಕ ಬಂದರೆ ಮಾತಿನ ಬಾಣವನ್ನೇ ಎಸೆಯುತ್ತೇನೆ' ಎಂದುಕೊಂಡನು. ಭಾಷಣಕ್ಕೆ ಬಂದಾಗಲೆಲ್ಲ ಅಚ್ಯುತರಾಯ ಸೈಕಾಲಜಿ ಪಾಠದಲ್ಲಿ ಯಾವ ಶ್ರದ್ಧೆಯಿಂದ ಸಾರಾಂಶ ಬರೆದುಕೊಳ್ಳುತ್ತಿದ್ದನೋ, ಅಷ್ಟೇ ಶ್ರದ್ಧೆಯಿಂದ ಉಪನ್ಯಾಸನಗಳ ಸಾರಾಂಶವನ್ನೂ ಬರೆದಿಡುತಿದ್ದನು. ಎಂಟು ತಿಂಗಳ ಅವಧಿಯಲ್ಲಿ ಅವನ ಮುನ್ನೂರು ಪುಟದ ಖಾಸಗಿಯ ನೋಟು ಬುಕ್ಕಿನಲ್ಲಿ ಖಾಲಿ ಸ್ಥಳವೇ ಉಳಿಯಲಿಲ್ಲ.

ಮನಸ್ಸು ಬರಿಯ ತರ್ಕಕ್ಕೆ ಹೋದುದು ಮಾತ್ರವಲ್ಲ; ಆಚಾರ್ಯರ ಉಪನ್ಯಾಸ, ಯಂಗ್ ಇಂಡಿಯಾ ಪತ್ರಿಕೆಗಳ ವಾಚನಗಳಿಂದ ಅವನಿಗೆ 'ಉಪಾಧ್ಯಾಯನಾದವನು ಗ್ರಾಮೋದ್ಧಾರ ಜೀವನಕ್ಕೆ ತೀರ ಮುಖ್ಯನು; ಅವನಿಂದಲೇ ಬೆಳಕು' ಎಂಬ ಭರವಸೆಯಾಯಿತು.

ವರ್ಷದ ಪ್ರಾರಂಭದಲ್ಲಿ, ತನ್ನ ಜೀವನ ಸಂಗ್ರಾಮಕ್ಕೆ ಈ ವೃತ್ತಿಯು ಸಹಾಯ ಮಾಡೀತು ಎಂದು ನಂಬಿ ಬಂದಿದ್ದ ಅಚ್ಯುತರಾಯ ಈಗ 'ಉಪಾಧ್ಯಾಯರೇ ಗ್ರಾಮಜ್ಯೋತಿಗಳು' ಎಂಬ ತೀರ್ಮಾನಕ್ಕೆ ಬಂದಿದ್ದಾನೆ. ಆಗಾಗ ಕಡಬ ಕ್ಲಬ್ಬಿನ ನೆನಪಾಗುತ್ತಿದೆ. ತಾನು ಅದರ ವಿಷಯದಲ್ಲಿ ಈ ತನಕ ಉದಾಸೀನನಾಗಿದ್ದುದು ಸರಿಯಲ್ಲವೆಂದೂ, ಒಮ್ಮೆ ಊರನ್ನು ಸೇರಿದೆನೆಂದರೆ, ಅದರ ಕಾರ್ಯದರ್ಶಿಯಾಗಿ ಕೆಲಸ ಮಾಡುವೆನೆಂದೂ ಅಂದುಕೊಂಡನು. ಅಲ್ಲಿ ಚರಕಾ ತರಗತಿಗಳನ್ನೇರ್ಪಡಿಸಬೇಕು, ಒಂದು ಹೂದೋಟವನ್ನು ಮಾಡಬೇಕು, ಒಂದು ತಾರ್ಕಿಕ ಸಂಘ ನಡೆಸಬೇಕು, ಯಕ್ಷಗಾನದ ಆದರ್ಶ ಜನಕ್ಕೆ ತೋರಿಸಬೇಕು, ಕನ್ನಡ ಕಾವ್ಯ ಪ್ರವಚನ ನಡೆಸಬೇಕು-ಎಂದು ಒಂದರ ಮೇಲೊಂದು ಆದರ್ಶಗಳನ್ನು ಸಾಧಿಸುವ ಹಗಲುಗನಸ್ಸಿನಲ್ಲೇ ಆತನು ಅಲೆಯ ತೊಡಗಿದನು.

ಸ್ವಪ್ನರಾಜ್ಯವು ಸದಾ ಸುಖದಾಯಕವಾದುದು; ಮನಸ್ಸಿನ ಶಕ್ತಿ ಬಲವಾಗಿದ್ದರೆ ಎಂಥ ವೈರಿಗಳನ್ನೂ ಅಲ್ಲಿ ಕಾಲಿಂದ ಒದೆಯಬಹುದು. ಪ್ರತ್ಯಕ್ಷ ಜೀವನದಲ್ಲಿ ಅವೆಲ್ಲಸಾಧ್ಯವೋ ಇಲ್ಲವೋ, ಯಾರು ಬಲ್ಲರು? ಪ್ರತ್ಯಕ್ಷ ಬದುಕಿಗೆ ಇಳಿಯುವ ತನಕ, ತಮ್ಮ ಕನಸುಗಳ ನಿರಂಕುಶವಾದ ಕನಸಿನ ಪಟ್ಟವು ಅಚ್ಯುತನಿಗೆ ತಾನಾಗಿ ದೊರೆತಿದೆ!

ಆದರೆ, ಕನಸು ಚಿರವಲ್ಲವೆಂದು ಬೇಗನೆ ಮನಗಂಡನು. ಒಮ್ಮೆ ಹೀಗೆಯೇ ಕನಸಿನ ಕರೆಗೆ ಕಿವಿಗೊಟ್ಟು ನಲಿಯುತ್ತಿರುವಾಗ, ಮನೆಯಿಂದ ಒಂದು ಕಾಗದ ಬಂದಿತು. ಅದನ್ನು ಬರೆದವರು ನಾರಾಯಣರಾಯರು. ಲಕ್ಷ್ಮಮ್ಮನ ಪರವಾಗಿ ಆ ಕಾಗದ ಬರೆದಿದ್ದರು. ಅಚ್ಯುತನು ಮನೆಯಿಂದ ಹೊರಟುಬಂದಾಗ, "ಅವಕಾಶವಿದ್ದಾಗ ಮನೆಯ ತನಕ ಹೋಗಿ ಬರುತ್ತೀರಲ್ಲ"—ಎಂದುದಕ್ಕೆ ಅವರು ಹೋಗಿಬರುತ್ತಿದ್ದರು. "ನಮ್ಮ ಆಸ್ತಿಯ ಅಡವಿನ ವಾಯಿದೆ ದಾಟಿತು. ಹಣಕ್ಕೆ ಹೇಳಿ ಕಳುಹಿಸಿದ್ದಾರೆ. ಅದನ್ನು ಬಿಡಿಸಿಕೊಳ್ಳದೆ ಹೋದರೆ, ಅವರು ದಾವೆ ಮಾಡಿ, ಆಸ್ತಿಯನ್ನು ಒಳಗೆ ಹಾಕಿಕೊಳ್ಳುತ್ತಾರೆ" ಎಂಬ ಸುದ್ದಿ ಬಂತು. "ಮಗು, ಪುಟ್ಟಯ್ಯನವರು ತಮ್ಮ ಮಗಳನ್ನು ಕೊಡುವ ವಿಚಾರಕ್ಕಾಗಿ ಮೂರುಮೂರು ಬಾರಿ ಬಂದು ಹೋದರು" ಎಂಬದು ಎರಡನೆ ಸುದ್ದಿ;

"ಉಪ್ಪಿನಂಗಡಿ ಬ್ಯಾಂಕಿನ ವಾಯಿದೆ ಮುಗಿಯುತ್ತ ಬಂದಿದೆ. ಅಲ್ಲಿನ ಚಿನ್ನ ಬಿಡಿಸದಿದ್ದರೆ,ಏಲಂ ಮಾಡುತ್ತಾರೆ"ಂಬುದು ಮೂರನೆಯ ಸುದ್ದಿ. ಹೀಗೆ ಪತ್ರಮುಖೇನ ತಿಳಿಸಿದ್ದಳು.

ಒಮ್ಮೆ, ಪಾಠಗಳ ಎಡೆಯಲ್ಲಿ ನಲಿದ ಕನಸಿನ ತೆರೆಗಳು ಹರಿದು, ಬೇರೊಂದು ಬೇತಾಳ ಎದುರು ನಿಲ್ಲುವಂತಾಯಿತು. ಅಡವಿನ ಭೂಮಿಯನ್ನು ಉಳಿಸಲು ಐದು ಸಾವಿರ ರೂಪಾಯಿಗಳು ಬೇಕು. ತಂದೆಯೇ ಸೋತು,ದಿನದೂಡಲು ಮಾಡಿದ ಆ ಅಡವು ಅವನಿಂದ ಬಗೆಹರಿದೀತೇ? ಅದನ್ನು ಮಾರಾಟಮಾಡಲು, ಇನ್ನೂ ಆಸ್ತಿಯ ಬೆಲೆಗಳು ತಗ್ಗಿನಲ್ಲೇ ಇವೆ. ಇತ್ತ ತಾಯಿಯ ನಗವನ್ನು ಇನ್ನೂರಕ್ಕೆ ಒತ್ತೆಯಿರಿಸಿದುದು, ಅದರಲ್ಲಿ ಬಡ್ಡಿಯನ್ನೂ, ಸ್ವಲ್ಪ ಅಸಲನ್ನೂ ಕೊಟ್ಟು — ಇನ್ನೂ ನೂರೈವತ್ತು ರೂಪಾಯಿಗಳು ಸಲ್ಲುವುದಿದೆ. ಅದನ್ನು ತೀರಿಸದೆ ಹೋದರೆ ಕಷ್ಟವಲ್ಲವೇ? ಪ್ರಾಯಶಃ, ವಾಯಿದೆಗೆ ಸಮನಾಗಿ ಬಡ್ಡಿ ಕೊಡದೇನೆ ಹೀಗಾಯಿತು- ಎಂದು ತರ್ಕಿಸಿದ. ಅವನ ಗುರುಗಳು--"ನೀನೊಮ್ಮೆ ಊರಿಗೆ ಬಂದು ಹೋದರೆ ಎಲ್ಲ ಯೋಚಿಸಬಹುದು. ಶಾಲೆಯ ವಿರಾಮದ ತನಕ ಬ್ಯಾಂಕಿನ ಸಾಲ ತಡೆಯಲಾರದು" ಎಂದೂ ತಿಳಿಸಿದ್ದರು.

ಪಾಪ! ಮರುದಿನ ಬಸ್ಸಿಗೇನೆ ನಾಲ್ಕು ದಿನಗಳ ರಜೆಯ ಮೇಲೆ ಹೊರಡಬೇಕಾಯಿತು. ಅವನ ಮನಸ್ಸು ಎರಡು ಕಡೆಗಳಿಗೆ ತೂಗಿಕೊಂಡಿತ್ತು. ಇನ್ನೊಂದು ಕಡೆಯಿಂದ ಮುಂದಣ ಆದಿತ್ಯವಾರದ ಯಕ್ಷಗಾನ ಕೂಟವಿತ್ತು. ತಾನೇ ಒಂದು ಭೂಮಿಕೆಯನ್ನು ವಹಿಸಿ ಮಾತಾಡಬೇಕೆಂಬ ಬಯಕೆ ಉಂಟಾಗಿತ್ತು — ಇವುಗಳ ತೊಡಕಿಗೆ ಸಿಕ್ಕಿ ಆತ ನರಳುವಂತಾಯಿತು.

ಗತ್ಯಂತರವಿಲ್ಲದೆ ಊರಿಗೆ ಬಂದನು. ಮೊದಲು ಕಡಬದಲ್ಲಿಳಿದು, ಗುರುಗಳನ್ನು ಕಂಡು, ನಾಗರಾಜಗೆ ಮರೆಹೊಗುವುದೆಂದು ನಿರ್ಣಯಿಸಿ, ಮನೆಗೆ ಹೋದನು. ಅಲ್ಲಿ ತಾಯೊಡನೆ-"ಮದುವೆ ಸಂಗತಿಯು ಈಗ ಬೇಡ; ನಾನು ಹೇಗಾದರೂ ಬಂದು ಕಾಲೂರಿಕೊಳ್ಳುತ್ತೇನೆ" — ಎಂದು ನುಡಿದ. ಉಪ್ಪಿನಂಗಡಿಗೆ ಹೋಗಿ, ನಗವನ್ನು ಬಿಡಿಸಿತಂದು, ತಿರುಗಿ ನಾಗರಾಜನಲ್ಲಿ ಅಡವಿರಿಸಿ ಪಾರಾದನು. ಆದರೂ ಆದಿತ್ಯವಾರದ ಸಂಜೆಗೆ ಮಂಗಳೂರನ್ನು ಸೇರುವುದಾಗಲಿಲ್ಲ. ಮರುದಿನ ಯಕ್ಷಗಾನ

"ಬಲು ಚೆನ್ನಾಗಿತ್ತು" ಎಂಬ ಹೊಗಳಿಕೆ ಕೇಳುವುದಕ್ಕಷ್ಟೇ ಬಂದನು. ಅವನ ವೈರಿಸ್ಥಾನದಲ್ಲಿ ಕುಳಿತ ಗೋಪಾಲರಾಯರು "ನಮ್ಮ ವಿಮರ್ಶಕ ಶಿಖಾಮಣಿಗಳು, ಮುಖ್ಯಗಳಿಗೆಯಲ್ಲಿಯೇ ಜಾರಿದರಲ್ಲ. ನನಗೆ ಹಾಗೆ ಮಾಡುವರೆಂದು ತಿಳಿದೂ ಇತ್ತು. ಮಾತನಾಡುವಂತಲ್ಲ ಕಾರ್ಯ" — ಎಂದು ಪರಭಾರೆಯಾಗಿ ಅವನನ್ನು ಹಂಗಿಸಿದರು. ಅಚ್ಯುತನಿಗೆ ಆ ನೋವು ಬಲವಾಗಿ ನಾಟಿತು. ತಾನು, ಉದ್ದೇಶಪೂರ್ವಕ ತಪ್ಪಿಸಿದೆನೆಂದು ಆರೋಪಿಸಿ ಮಾನಕ್ಕೆ ಕುಂದು ತಂದರಲ್ಲಾ, ಹೇಗೆ ತನ್ನ ಗೌರವ ಉಳಿಸಿಕೊಳ್ಳುವುದು — ಎಂಬ ಯೋಚನೆಗೆ ಅವನು ಈಡಾದನು.

ಫೆಬ್ರುವರಿ ಸರಿದು ಮಾರ್ಚಿ ತಿಂಗಳು ಕಾಲಿರಿಸಿತು. ಮೊದಲೇನೆ ಬಿಸಿಯಾಗಿದ್ದ ಊರಿನ ಹವೆ ಮತ್ತಷ್ಟು ಬಿಸಿಯೇರಿತು. 'ದಾಹ, ದಾಹ' ವೆಂದು ಪ್ರತಿಗಂಟಲೂ ಕೂಗಿತು. ಊರ ಹೊಟೇಲುಗಳನ್ನು ಸೊಳ್ಳೆಗಳು ತಮ್ಮವೆಂದೇ ಹಗಲು ರಾತ್ರಿ ಸಾರತೊಡಗಿದುವು. ರಾತ್ರಿ ಮಲಗಿದರೆ ಕಣ್ಣು ಮುಚ್ಚುವಂತಿಲ್ಲ- ಸೆಕೆ! ಸೊಳ್ಳೆ! ದಿನಕ್ಕೆರಡಾವೃತ್ತಿಯಾದರೂ ವೆಂಕಟೇಶನೊಡನೆ ಅಚ್ಯುತರಾಯ 'ಪಟ್ಟಣವಾಸ ಹೇಗೆ ಸ್ವಾಮಿ?' ಎನ್ನುತ್ತಿದ್ದ. ಅದೇ ಕಾಲಕ್ಕೆಂಬಂತೆ ಅವನ ಮಗ್ಗುಲ ಕೊಟಡಿಯಲ್ಲೇ ಬಿಡಾರವನ್ನು ಮಾಡಿದ ಗೋಪಾಲರಾಯರು ಬೇನೆಬಿದ್ದರು. 'ಎರಡು ಮೂರು ದಿನಗಳಿಂದ ಜ್ವರವಂತೆ' ಎಂದರು ಗೆಳೆಯರು. ಅವರನ್ನು ತಾನು ಹೋಗಿ ನೋಡಲು ಅಚ್ಯುತನಿಗೆ ಭೀತಿ. ಅದು ಗೋಪಾಲರಾಯರ ಇಷ್ಟಕ್ಕೆ ಬಾರದೆ ಹೋದಲ್ಲಿ-ಎಂಬ ಅನುಮಾನ. ಆದರೂ ಕಿಟಿಕಿಯ ಬಿರುಕಿನಿಂದ, ಹಾಸುಗೆಯಲ್ಲಿ ನಿಶ್ಚೇಷ್ಟಿತರಾಗಿ ಮಲಗಿದ ಅವರನ್ನು ನೋಡುತ್ತಿದ್ದ. ಏಳನೆಯ ದಿವಸ ಗೋಪಾಲರಾಯರ ಕೂಗೇ ಕೂಗು:"ಎಲ್ಲಿದ್ದಾನೆ ಅಚ್ಯುತ! ಅವನ ಅರ್ಥಗಾರಿಕೆ ನೋಡಿಬಿಡುತ್ತೇನೆ. ಯಾರಿಗೆ? ರೈಗಳಿಗೆ ಅರ್ಥ ತಿಳಿದಿಲ್ಲವೇನು" ಎಂದು ಜ್ವರದ ಪಿತ್ಥೋದ್ರೇಕದಿಂದ ಕಿರುಚುತ್ತಿದ್ದರು. ಅವರ ಮನೆಯವರಿಗೆ ಸಂಗತಿಯೇ ತಿಳಿದಿರಲಿಲ್ಲ. ಇತರರು ತಿಳಿಸಿದರು. ವೈದ್ಯರನ್ನು ಕರೆಯಿಸಿದರು. ಕೊನೆಗೆ — ಹೊಟೇಲಿನಲ್ಲಿ ಅವರಿರುವುದು ಒಳಿತಲ್ಲವೆಂದು ಆಸ್ಪತ್ರೆಗೆ ಸಾಗಿಸುವಂತಾಯಿತು. ಸಾಗಿಸುವ ಮೊದಲ ದಿನ, ಇನ್ನೂ ಜ್ವರದಿಂದ ಕುದಿಯುತ್ತಿದ್ದ ಗೋಪಾಲರಾಯರ ತಲೆಯಲ್ಲಿ, ಯಕ್ಷಗಾನವೇ ನಲಿಯು

ತ್ತಿತ್ತು. ಅಚ್ಯುತ ಮೆಲ್ಲಗೆ ಅವರ ಬಳಿಗೆ ಹೋಗಿ ನಿಂತನು. ಆಚೀಚೆಯಲ್ಲಿ ಗೆಳೆಯರಿರುವಾಗಲೇ "ನೀವು ಸಿಟ್ಟಾಗಬೇಡಿ, ಗೋಪಾಲರಾಯರೇ, ನಾನು ತಪ್ಪಿಬಿದ್ದೆ. ಯಕ್ಷಗಾನದಲ್ಲಿ ನಾನು ಹುಡುಗ, ಏನೋ ತಿಳಿಯದೆ ಹೇಳಿದೆ. ನೀವು ಮನಸ್ಸಿಗೆ ಹಚ್ಚಿಕೊಳ್ಳಬಾರದು" ಎಂದು ಅವರನ್ನು ಸಮಾಧಾನದ ಮಾತುಗಳಿಂದ ಸಂತೈಸಿದನು. ಕೆರಳಿದ ಅವರ ಕಣ್ಣು ಹೊರಳಿತು; ಕೊನೆಗೆ ಸಮಾಧಾನವಾಯಿತು. ತಾವು ಗೆದ್ದೆವೆಂಬ ಹೆಮ್ಮೆಯಿಂದ "ಹೋಗಲಿ, ಕ್ಷಮಿಸಿದ್ದೇನೆ" ಎಂದರು.

ಮರುಗಳಿಗೆಗೆ, "ಅಚ್ಯುತ ಮಾಸ್ತರರೇ, ಪಾಲ್ಕೆಯವರ ಆ ಚಿತ್ರ ಈಗ ಉಂಟೇ ಹೋಯಿತೇ?" ಎಂದರು. ತಣ್ಣೀರಿನ ಅರಿವೆ ತಲೆಗೆ ಒತ್ತಿಹಿಡಿದರೂ ಶಾಂತಿಯಿಲ್ಲ. ಕೊನೆಗೆ ಅಚ್ಯುತನು ಗೆಳೆಯರಿಂದ ವಂತಿಗೆ ಕೂಡಿಸಿದನು. ಅವರೆಲ್ಲರೂ ಸೇರಿ ಅವರನ್ನು ಆಸ್ಪತ್ರೆಗೆ ಸಾಗಿಸಿದರು. ಆದರೆ ಅವರ ಊರಿಂದ ಜನ ಬರುವ ತನಕ, ಆಸ್ಪತ್ರೆಯಲ್ಲಿ ರೋಗಿಯ ಕಾವಲಿಗೆ ಯಾರು? 'ಬರಿದೆ ಆಸ್ಪತ್ರೆಯ ಆಳುಗಳನ್ನು ನಂಬಿ ಬಿಡಲೇ' ಎಂದು ತಮ್ಮಲ್ಲಿ ತರ್ಕಿಸಿದರು. ಆದರೆ ಪರೀಕ್ಷೆ ಸಮಯ. ಯಾರು ರೋಗಿಯ ಬಳಿಯಿರುವವರು? ಯಾರಿಗೂ ಪೂರ್ಣ ಧೈರ್ಯವಾಗದು. ವೆಂಕಟೇಶ, ಅಚ್ಯುತರೇ ಆ ಕೆಲಸ ಒಪ್ಪಿಕೊಂಡರು. ಅವರು ಆಸ್ಪತ್ರೆಯ ಕಾವಲಿಡುತ್ತಿದ್ದಾಗ, ಗೋಪಾಲರಾಯರ ತಮ್ಮ ತನ್ನ ಊರಿಂದ ಮಂಗಳೂರನ್ನು ಬಂದು ಸೇರಿದ. ಎಲ್ಲರಿಗೂ ಟೈಫಾಯ್ಡ್ ಇನಾಕ್ಯುಲೇಶನ್ ಆಯಿತು. ಇತ್ತ ರೋಗಿಯ ಜ್ವರವು, ಒಂದೇ ಭರದಿಂದ ಸಾಗಿತ್ತು. ಗೋಪಾಲರಾಯರ ತಮ್ಮನ ಹೆಸರು ರಮೇಶ. ಅವನು ಹದಿನಾಲ್ಕು ವರ್ಷದ ಹುಡುಗ. "ಇನ್ನಾರಿಲ್ಲವೇ ನಿಮ್ಮ ಮನೆಯಲ್ಲಿ?" ಎಂದು ಕೇಳಿದರೆ "ಅಣ್ಣನ ಹೆಂಡತಿ ಇದ್ದಾಳೆ, ಹದಿನಾರು ವರ್ಷದಾಕೆ; ಏನು ಮಾಡುವುದು" ಎನ್ನುತ್ತಾನೆ ಆತ.

ರಮೇಶನೊಡನೆ ದಿನಕ್ಕೆರಡು ಬಾರಿ "ರಮಾ ಹೇಗಿದ್ದಾಳೆ? ಯಾಕೆ ಬರಲಿಲ್ಲ" ಎಂದು ಕೇಳುತ್ತಾರೆ ಗೋಪಾಲರಾಯರು. ಅವಳು ಬರುವೆನೆಂದರೂ ಬೇಡವೆಂದು ಹೇಳಿ ಈತ ಬಂದಿದ್ದ. ಮನೆಯಲ್ಲಿ ಮುದುಕಿ ತಾಯ ಬಳಿ ಯಾರಾದರೂ ಇರಬೇಡವೇ-ಎಂದು. ಆ ಮಾತುಗಳನ್ನು ಕೇಳಿ ಅಚ್ಯುತನಿಗೆ ತನ್ನ ತಾಯಿಯ ನೆನಪೂ ಆಯಿತು.

ಅಂತು ಮಾರ್ಚಿ ಪರೀಕ್ಷೆಕಾಲದ ಎಂಟು ದಿನಗಳನ್ನು ಬಿಟ್ಟು, ಅದೂ ಆ ವೇಳೆ ಮಾತ್ರ ಬಿಟ್ಟು, ಉಳಿದೆಲ್ಲ ಸಮಯ ಅಚ್ಯುತ ವೆಂಕಟೇಶರು ರೋಗಿಯ ಶುಶ್ರೂಷೆ ಮಾಡಿದರು. ತಿಳಿವು ಸಾಲದ ರಮೇಶನ ಹೊರೆಯನ್ನು ಇಳಿಸಿದರು. ಇಪ್ಪತ್ತೊಂದನೆಯ ದಿನ ಅವರ ಜ್ವರವಂತು ಇಳಿಯಿತು. ಆದರೆ ಒಂದು ತಿಂಗಳ ಕಾಲ ಬಹಳ ಎಚ್ಚರವಿರಬೇಕೆಂಬುದರಿಂದ, ಆಸ್ಪತ್ರೆಯಿಂದ ಕಳುಹುವ ವರೆಗೂ ತಾವೇ ಕಾವಲು ಮಾಡುವುದಾಗಿ ನಿರ್ಣಯಿಸಿದರು. ಅಚ್ಯುತ, ತಾಯಿಗೆ ತನ್ನ ಪರೀಕ್ಷೆ ಮುಗಿದ ಕೂಡಲೇ ಬರುತ್ತೇನೆಂದು ಕಾಗದ ಬರೆದಿದ್ದ. ಆಕೆ ಯೋಚನೆಗೀಡಾಗಬಾರದೆಂದು ತಿರುಗಿ ಕಾಗದ ಬರೆದುಹಾಕಿದನು. ಗೋಪಾಲರಾಯರು ಆಸ್ಪತ್ರೆಯನ್ನು ಬೀಳ್ಕೊಡುವಾಗ ಒಂದು ತಿಂಗಳು ಕಳೆದು ಹದಿನೈದು ದಿನವಾಗಿತ್ತು. ಆಗ ಬರಿಯ ಎಲುಬು ಮೂಳೆಯಾಗಿದ್ದರು. ಆದರೆ ಒಮ್ಮೆ ಪಾರುಗೊಂಡರೆಂಬ ಹಿಗ್ಗು ಗೆಳೆಯರಿಗೆ. ರಜೆಯಲ್ಲಿ ಅವರನ್ನು ಏನು ಮಾಡಲಿ? ಊರಿಗೆ ಸಾಗಿಸಲು ಸಾಧ್ಯವಾಗದೆ ಎಂಟು ದಿನ ಕಾಲ ತಮ್ಮ ಹೊಟೇಲಿನಲ್ಲಿ ಇರಿಸಿಕೊಂಡರು. ಅವರ ಎಲ್ಲ ಸೇವೆಗಳನ್ನೂ ಮಾಡಿದರು. ಕೊನೆಗೆ ಅವರ ಊರಿಗೆ ಹೋಗಲಿರುವ ಒಂದು ಟೇಕ್ಸಿಯವರಿಗೆ ದಮ್ಮಯ್ಯ ಹಾಕಿ, ಅವರನ್ನು ಊರಿಗೆ ಕಳುಹಿಸಿದರು. ಅಚ್ಯುತ ಅಲ್ಲಿಗೂ ಹೋಗುವವನಿದ್ದ; ಆದರೆ ವೆಂಕಟೇಶನಿದ್ದುದರಿಂದ ಬೇಡವೆಂದ. ಮೋಟರಿಗೆ ಎತ್ತಿಕೊಂಡು ಹೋಗಿ ಮಲಗಿಸಿ, ಬೀಳ್ಕೊಡುವ ವೇಳೆಗೆ, ಗೋಪಾಲರಾಯರ ಕಣ್ಣುಗಳಿಂದ ಕೃತಜ್ಞತೆಯ ಕಂಬನಿ ಸುರಿದವು. ತಾನು ಅಚ್ಯುತನೊಡನೆ ಕಾದಾಡಿ ಮಾತು ಬಿಟ್ಟ ನೆನಪು ಅವರಿಗಾಯಿತು. ಅಷ್ಟು ವೈರಿಯೆಂದು ತಿಳಿದವನ ಕಟುತರ ಸೇವೆಗೂ ಸಿದ್ಧನಾದ ಗೆಳೆಯನ ಕರುಣೆಯು ಅವರನ್ನು ಕರಗಿಸಿತು. ಆಗ ಶಿಶುವಿನಂತೆ ಅತ್ತರು. "ತಿರುಗಿ ಎಂದು?" ಎಂದು ಕೇಳಿದರು. "ಬರುತ್ತೇನೆ, ನಿಮ್ಮ ಊರಿಗೇ ಬಂದು ನೋಡುತ್ತೇನೆ" ಎಂದ ಅಚ್ಯುತ.

ಅಚ್ಯುತ ತನ್ನ ಊರನ್ನು ಸೇರಿದರೂ, ದಿನನಿತ್ಯ ಗೆಳೆಯ ಸೌಖ್ಯಗೊಂಡನೇ ಎಂಬ ಪತ್ರ ನಿರೀಕ್ಷಿಸುತ್ತಿದ್ದನು. ಹೀಗೆ ಕಾದು ಬೇಸತ್ತು ಕಾಗದ ಬರೆದನು. ಅವರ ಹೆಂಡತಿಯು ಚೇತರಿಸುತ್ತಿರುವ ಗಂಡನ ಸಲುವಾಗಿ ಮರು ಓಲೆ ಬರೆದಳು. "ನಿಮ್ಮಿಂದ ನನ್ನ ಬದುಕೂ, ಕುಂಕು

ಮವೂ ಉಳಿಯಿತು. ನಿತ್ಯ ಅವರು ನಿಮ್ಮ ಉಪಕಾರವನ್ನು ನೆನೆದು ಅಳುತ್ತಾರೆ. 'ನಾನೆಷ್ಟು ಅಚ್ಯುತನನ್ನು ನೋಯಿಸಿದೆನೋ' ಎಂದು ಹೇಳಿ ಅಳುತ್ತಾರೆ! ನೀವು ಕ್ಷಮಿಸುವಿರೆಂದು ನಂಬಿದ್ದೇವೆ. ಅವರು ಇನ್ನೂ ಅಡ್ಡಾಡುತ್ತಲಿಲ್ಲ, ಆದರೆ ಬೇರಾವ ತೊಡಕೂ ಇಲ್ಲ." ಎಂದು ಬರೆದಿದ್ದಳು. ಗಂಡನು ಹೇಳಿ ಬರೆಯಿಸಿದ ಆ ಕಾಗದಕ್ಕೆ, ತನ್ನ ವಂದನೆ ಕೃತಜ್ಞತೆಗಳನ್ನು ಸೇರಿಸಿ,ಸಂಪೂರ್ಣಮಾಡಿ ಕಳುಹಿಸಿದ್ದಳು. ಅಲ್ಲಿಂದ ಅಚ್ಯುತನ ಎದೆಯೂ, ಮನಸ್ಸೂ ಹಗುರವಾಯಿತು.



## ೯ನೆಯ ಅಧ್ಯಾಯ

ಅಚ್ಯುತ ರಜೆಗೆಂದು ತನ್ನ ಊರಿಗೆ ಬಂದುದು ನಿಜ. ಶಾಲೆಗೆ ರಜೆಯಾಗಿರಬಹುದು. ಆದರೆ ಮನಸ್ಸಿಗೆ ರಜೆಯುಂಟೇ? ಮನೆಗೆ ಬಂದಂದಿನಿಂದ-ಅವನ ತಂದೆಯು ಭೋಗ್ಯಕ್ಕೆ ಕೊಟ್ಟ ಭೂಮಿಯ ವಿಚಾರದ್ದೇ ನೆನಪು. ಐದು ಸಾವಿರ ರೂಪಾಯಿಗಳನ್ನು ಕೊಟ್ಟು ಅದನ್ನು ಬಿಡಿಸಿಕೊಳ್ಳಲು ಬಂದೀತೇ! ಆ ದಿನಗಳಲ್ಲಿ ಅದನ್ನು ವಿಕ್ರಯಿಸಿದರೂ ಅಷ್ಟು ಹಣ ಹುಟ್ಟಲಾರದು. ತಾವು ಬಿಡಿಸಿಕೊಳ್ಳುವ ಕಾಲ ಮುಗಿದು, ಮತ್ತೂ ಮೂರು ತಿಂಗಳು ಸರಿದಿತ್ತು. ಅದನ್ನು ಭೋಗ್ಯಕ್ಕೆ ಮಾಡಿಕೊಂಡವರು —"ಮುಂದೆ ನಮ್ಮನ್ನು ದೂರಬೇಡಿ. ನಾವಿನ್ನು ಕ್ರಮವಾಗಿ ಭೂಮಿಯನ್ನು ನಮ್ಮ ಹಣಕ್ಕೆ ಬರಮಾಡಿಕೊಳ್ಳಬೇಕಾಗುತ್ತದೆ. ನೀವಾಗಿ ಅದನ್ನು ವಿಕ್ರಯಿಸಿಬಿಡಿ. ಆಗ ಕೊಡುವುದೂ ಕೊಳ್ಳುವುದೂ ಎರಡೂ ಇಲ್ಲ" ಎಂದು ತಿಳಿಸಿದ್ದರು. ಆ ಭೂಮಿ ಭೋಗ್ಯಕ್ಕೆ ಹೋಗುವಾಗಲೇ, ಲಕ್ಷ್ಮಮ್ಮನಿಗೆ ಅದು ಕೈಬಿಟ್ಟ ವಸ್ತು ಎಂದು ತಿಳಿದಿತ್ತು. ಆದರೆ ಎಲ್ಲಾದರೊಂದು ಒಳ್ಳೆಯ ಸಮಯ ಒದಗಿದರೆ, ತಿರುಗಿ ಅದರದ್ದೊಂದು ತುಣುಕಾದರೂ ಕೈಗೆ ಬಂದೀತಲ್ಲ ಎಂಬ ಆಸೆ. ಆದರೆ ತಾನಾಗಲೀ ತನ್ನ ಮಗನಾಗಲೀ ಬರಿಯ ಆಸೆಯಿಂದ ಕೊರಗಬೇಕೇ ವಿನಾ, ಅದು ಕೈಗೂಡುವ ಸ್ಥಿತಿಯನ್ನು ಅವರು ಕಾಣದಾದರು.

ಅಚ್ಚುತ ಇಂಥ ದೊಡ್ಡ ವಿಷಯವನ್ನು ಯಾರೊಡನೆ ತರ್ಕಿಸಲಿ? ಉಪದೇಶ ಪಡೆಯಲು ನಾರಾಯಣ ಮಾಸ್ತರರಿದ್ದಾರೆ. ಇನ್ನು ಬೆಂಬಲ ವಾಗುವುದಾದರೆ ನಾಗರಾಜ ಸಮರ್ಥನು. ಅಡವುದಾರರಿಗೆ ಅನು ಕೂಲವಾಗಿರುವಷ್ಟೇ ಸಮೀಪದಲ್ಲಿ, ಆ ಭೂಮಿಯೆಲ್ಲವೂ ಅವನಿಗೆ ಅನುಕೂಲವಾಗಿದೆ. ಆದರೆ ಸಹಾಯ ಮಾಡುವ ದೃಷ್ಟಿಯಿಂದ ಅವ ನೇನೂ ಮಾಡಲಾರ. ಅವನಿಗೂ ಉಪದೇಶಕರಿದ್ದಾರೆ. ಅವನಿಗೂ ಅವನ ಹಿತವಿದೆ. ಹೀಗಿದ್ದುದರಿಂದ ನಾರಾಯಣರಾಯರು ನಾಗರಾಜ ನನ್ನು ಕಂಡು "ನಾಗರಾಜ, ನೀನು ಅದನ್ನು ಬರೆಯಿಸಿಕೋ. ಸಾಲದ ಹಣ ಕೊಟ್ಟ ಮೇಲೆ ಏನಾದರೂ ಸಾವಿರ ಎರಡು ಸಾವಿರವನ್ನು ಅಚ್ಚು ತನಿಗೆ ಕೊಟ್ಟರೆ, ಅವನು ತನಗೆ ಲಗ್ತಾದ ಬೇರೊಂದು ತುಂಡು ಭೂಮಿ ಕೊಂಡುಕೊಂಡಾನು" ಎಂದರು.

ನಾಗರಾಜ ಅದಕ್ಕೆ ನಕ್ಕನು."ಏನು! ಆ ಕೆಲಸಕ್ಕೆ ಬಾರದ ಭೂಮಿಗೆ ಏಳುಸಾವಿರವೇ!" ಎಂದನು. ಕೊನೆಗೆ ನಾರಾಯಣರಾಯರು "ಸಾವಿರ ವಾದರೂ ಹೆಚ್ಚಿಗೆ ಕೊಡು; ಅವನಿಗೆ ಒಂದು ಸಹಾಯವಾದೀತು" ಎಂದರು. "ತಾಯನ್ನು ಕೇಳಿ ಹೇಳುತ್ತೇನೆ" ಎಂದು ಹೋದವನು ಆರು ದಿವಸಗಳ ಬಳಿಕ, "ಅದು ನನಗೆ ಐದು ಸಾವಿರಕ್ಕೂ ಬೇಡ" ಎಂದು ತಿಳಿಸಿಬಿಟ್ಟನು. ಆ ಭೂಮಿಗೆ ತಾವು ಕಟ್ಟಿದ ಬೆಲೆ ನ್ಯಾಯವಾದುದು ಎಂಬುದನ್ನು ನಾರಾಯಣರಾಯರು ಬಲ್ಲರು. "ನನ್ನ ಹತ್ತಿರ ಕಾಸು ಇದ್ದರೆ, ನಾನೇ ಆರು ಸಾವಿರಕ್ಕೆ ಕೊಳ್ಳುತ್ತಿದ್ದೆ" ಎಂಬ ಮನಸ್ಸು ಅವ ರಿಗೂ ಇತ್ತು. ಆದರೆ 'ನಮ್ಮ ಊರಿನ ಶ್ರೀಮಂತರೆಲ್ಲರೂ ಒಂದೇನೆ; ನೂರರ ಆಸ್ತಿಯನ್ನು ಐವತ್ತಕ್ಕೆ ಕಿಸೆಗೆ ತುರುಕಿಸುವ ದಾರಿ ಕಂಡಾರೆಯೇ ವಿನಾ ನೂರಕ್ಕೆ ನೂರು ಕೊಟ್ಟು ಆಸ್ತಿಕೊಂಡೇ ಗೊತ್ತಿಲ್ಲ' ಎಂದುಕೊಂ ಡರು. ಅಚ್ಚುತನ ಸಲುವಾಗಿ ನಾರಾಯಣರಾಯರು ಊರಲ್ಲೆಲ್ಲ ಅಲೆ ದಾಡಿದರು. ಆದರೆ 'ಇದು ತೀರ ಹಾಳುಭೂಮಿ. ಅಲ್ಲಿ ಕಾಡಿನ ತೊಂದರೆ ಯಿದೆ' ಎಂದು ಭೂಮಿಯಲ್ಲಿ ಆಸಕ್ತನಾಗಿದ್ದ ಅಡವುದಾರನೇ, ಬೇಕೆ ನ್ನುವಷ್ಟು ಪ್ರಚಾರಮಾಡಿದ್ದನು. ಹೀಗಾಗಿ ಯಾರೂ ಅದನ್ನು ಕೊಳ್ಳಲು ಮುಂದೆ ಬರಲಿಲ್ಲ.

ಅಚ್ಚುತನ ಬಲವಂತಕ್ಕೆ, ಇನ್ನೊಮ್ಮೆ ನಾಗರಾಜನನ್ನೇ ಕೇಳುವ

ಎಂದು ಮನಸ್ಸಿಲ್ಲದ ಮನಸ್ಸಿನಿಂದ ಅವರೇ ಮಾತನಾಡಿಸಿದರು. ಕೊನೆಗೆ ನಾಗರಾಜನು "ಮಾಸ್ತರರೇ, ನಾನು ನಿಮ್ಮ ದಾಕ್ಷಿಣ್ಯಕ್ಕೆ ಒಪ್ಪುತ್ತೇನಷ್ಟೆ. ಆದರೆ ಹೆಚ್ಚಿನ ಸಾವಿರ ರೂಪಾಯಿಗಳನ್ನು ಈಗಾಗಲೇ ಕೊಡಲಾರೆ; ನನಗೆ ನಿಮ್ಮ ಆಸ್ತಿಯಿಂದ ಗೇಣಿಗೋ, ನೀರಿಗೋ ತೊಂದರೆಯಿಲ್ಲವೆಂಬುದು ಖಾತ್ರಿಯಾದ ಬಳಿಕ ಮಾತ್ರ ಕೊಟ್ಟೇನು. ಅದು ಬಾಯ್ದೆರೆ. ಆ ಮೇಲೆ ಕೊಡುವ ಮಾತು. ರಿಕಾರ್ಡಿನ ವ್ಯಾಪಾರವಲ್ಲ"-ಎಂದನು. ನಾಗರಾಜ ನಾರಾಯಣರಾಯರಿಗೂ ಶಿಷ್ಯನಷ್ಟೆ. ಹೀಗಾಗಿ ಅವನ ಮಾತನ್ನು ಒಪ್ಪಿಕೊಂಡರು. "ಅಚ್ಯುತ, ಹೇಗೂ ನಿನಗೆ ಅದು ಉಳಿಯುವುದಿಲ್ಲ. ಇದೊಂದು ಆಸೆಯಾದರೂ ಉಳಿಯಲಿ" ಎಂದರು.

ಆ ವಾರವೇ ಹಳೆಯ ಭೋಗ್ಯವನ್ನು ಬಿಡಿಸಿದ್ದಾಯಿತು. ಅದೇ ಭೂಮಿಯನ್ನು ನಾಗರಾಜನಿಗೇನೆ ವಿಕ್ರಯಿಸಿದ್ದಾಯಿತು. ಲಕ್ಷ್ಮಮ್ಮನ ಮನಸ್ಸಿನಲ್ಲಿ ಹಿಗ್ಗು ತುಂಬಿತು. "ಮಗುವು ಊರಿಗೆ ಬಂದ ಮೇಲೆ ಚಿನ್ನಗಿನ್ನಗಳ ಸಾಲವನ್ನು ಮುಗಿಸಿದರೆ, ಅವನಿಗೊಂದು ಲಗ್ನಕ್ಕಾದರೂ ದಾರಿಯಾಯಿತಲ್ಲ; ಅಷ್ಟೇ ಸಂತೋಷ"ವೆಂದು ತಿಳಿದಳು.

ಇದಾಗಿ ಕೆಲವು ದಿನಗಳು ಕಳೆದುವು. ಒಂದು ದಿನ ಅಚ್ಯುತನಿಗೆ ತನ್ನ ಅಕ್ಕನ ನೆನಪಾಯಿತು. "ಅಮ್ಮ, ಅಕ್ಕ ಮನೆಗೆ ಬರುತ್ತಿದ್ದಾಳೆಯೇ? ಹೊಸಮಠದಿಂದ ಪಂಜವನ್ನು ಸೇರಿದ ಮೇಲೆ, ಯಾವ ಸ್ಥಿತಿಯಲ್ಲಿದ್ದಾಳೆಂದು ತಿಳಿದಿದೆಯೇ? ಒಮ್ಮೆ ನೋಡಿ ಬರುವ ಎಂದಿದೆ, ಆದರೆ ಭಾವನಿದ್ದಲ್ಲಿಗೆ ನಾನು ಹೋದರೆ, ಏನು ಮಾಡಿಯಾರೆಂದೇ ತಿಳಿಯದು"— ಎಂದನು. "ಹೌದು ಮಗು, ನಾನೂ ಅಲ್ಲಿಗೆ ಹೋಗಲಿಲ್ಲ. ಮನೆಯನ್ನು ಯಾರ ವಶದಲ್ಲಿ ಬಿಟ್ಟುಹೋಗುವುದು? ನಾಲ್ಕು ದಿನ ಬಿಟ್ಟುಹೋದರೆ ಇಲ್ಲಿನ ಪಾತ್ರೆಪರಡಿ ಉಳಿದೀತೆ? ಇಲ್ಲಿನ ದನಕರುಗಳನ್ನು ದೂಮನ ಕೈಯಲ್ಲಿ ಕೊಟ್ಟರೆ, ಬೇಸಗೆ ದಿನಗಳಲ್ಲಿ ಅವನು ನೀರು ಅಕ್ಕಚ್ಚನ್ನು ಕೊಡದೇ ಕೊಂದಾನು. ನಾನು ಎದುರಿಗಿದ್ದೇನೆಂಬು ಎಲ್ಲ ನಡೆಯುತ್ತದೆ. ಆದರೆ ನನ್ನ ಕಣ್ಣುತಪ್ಪಿದರೆ 'ಆಳು ಮಾಡಿದ್ದು ಹಾಳು' ಎಂಬ ಗಾದೆ" ಎಂದಳು.

ಅಂತು ಅಕ್ಕನ ಮನೆಗೆ ಹೋಗಲೇ, ಬೇಡವೇ?— ಎಂಬ ಅನುಮಾನದಲ್ಲೇ ಆ ದಿನವೆಲ್ಲವು ಸರಿಯಿತು. ಮರುದಿನ ಬೆಳಗ್ಗೆ ಎದ್ದು,

"ಹೋಗಿ ಸಂಜೆಯೊಳಗೆ ಬರುತ್ತೇನೆ. ಒಂದಿಷ್ಟು ಅವಲಕ್ಕಿ ಬೆಲ್ಲ ಕಟ್ಟಿಕೊಳ್ಳುತ್ತೇನೆ. ಅಲ್ಲಿನ ಊಟಕ್ಕೆ ಕಾದು ನಿಲ್ಲುವುದಿಲ್ಲ" ಎಂದು ಹೊರಟೇಬಿಟ್ಟನು.

ಭಾವನ ಮನೆಗೆ ಒಳದಾರಿಯಿಂದ ಸುಮಾರು ಒಂಬತ್ತು ಹತ್ತು ಮೈಲಿ ದೂರವಾಗುತ್ತಿತ್ತು. ಅದರಲ್ಲೂ, ಅವರ ಮನೆ ಎಲ್ಲೆಂಬುದೂ ಸಮನಾಗಿ ತಿಳಿದಿರಲಿಲ್ಲ. ಆದರೂ ನಡೆನಡೆದು, ದಣಿದು, ಕುಮಾರಧಾರೆ ನದಿಯನ್ನು ದಾಟಿ, ಈಚೆ ದಡಕ್ಕೆ ಬಂದು, ಕೇಳಿ, ಹೊತ್ತು ಹತ್ತು ಹದಿನೆರಡು ಗಳಿಗೆಯೆನ್ನುವಾಗ ಅವರ ಮನೆ ಸೇರಿದನು. ಮನೆಯು ರಸ್ತೆಗೆ ಸಮೀಪವಾಗಿತ್ತು; ಎದುರೆಲ್ಲ ಹೊಲಗಳು. ಒಂದು ಮಗ್ಗುಲಲ್ಲಿ ಕಾಡು. ಇವನು ಮನೆಯಂಗಳಕ್ಕೆ ಕಾಲಿಡುವ ಮೊದಲೇ ಅವನ ಸೊಸೆ-ಮೂಕಾಂಬಿಕೆ, ಅಲ್ಲಿಂದೆದ್ದು ಓಡಿಹೋಗಿ, "ಅಮ್ಮ ಗುಮ್ಮ ಬಂದಿದೆ" ಎಂದು ಬೊಬ್ಬಿಟ್ಟಳು. ಮಾವನೆಂದು ಗುರುತಿಸುವ ಮೊದಲೇ ಆ ಮಗುವಿಗೆ ಗಾಬರಿಯಾಗಿತ್ತು. ಅಚ್ಯುತನ ಮನಸ್ಸು, ಆಚೀಚೆ ಭಾವನ ಸವಾರಿಯಿದೆಯೇ,ಹೇಗೆ ಅವರನ್ನು ಇದಿರಿಸಲಿ? ಭೇಟಿಯಾದರೆ ಮಾತಾಡಬೇಕೇ ಬೇಡವೇ-ಎಂಬೆಲ್ಲ ಯೋಚನೆಗೀಡಾಯಿತು. ಬಲು ಮೆಲ್ಲಕ್ಕೆ ಹೆಜ್ಜೆಯಿರಿಸಿಕೊಂಡು ಅಂಗಳಕ್ಕೆ ಬಂದನು. ಅಂಗಳದಲ್ಲಿ ಎತ್ತರದ ಹುಲ್ಲಿನ ಬಣವೆಯನ್ನು ಕಂಡು "ನಮ್ಮ ಭಾವ ಸುಮ್ಮನಿಲ್ಲ, ಬೇಸಾಯು ತುಂಬ ಮಾಡಿಸಿರಬೇಕು" ಎಂದು ತಿಳಿದ. ಜಗುಲಿಗೆ ಬಂದು ಕುಳಿತ. ಆಯಾಸವಾಗಿತ್ತು. ಬೆವರನ್ನು ಉಜ್ಜುತ್ತ 'ಮಾಲಕ್ಷ್ಮಿ' ಎಂದ. ಬಾವಿಯ ನೀರನ್ನು ಜಗ್ಗುತ್ತಿದ್ದ ಮಾಲಕ್ಷ್ಮಿ "ಮಾವನ ಸ್ವರವೇ!" ಎಂದು ಯೋಚಿಸಿ ಬೇಗನೆ ಬಂದಳು. ಅವಸರಕ್ಕೆ ಒಳಗೆ ಹೋಗಿ-"ಅಮ್ಮಾ, ಮಾವ ಬಂದಿದ್ದಾನೆ" ಎಂದು ತಿಳಿಸಿದಳು. ಹೊರಕ್ಕೆ ಬಂದು "ಮಾವಾ, ಅಮ್ಮ ಹಡೆದಿದ್ದಾಳೆ. ತಿಂಗಳಾಯಿತು. ಕಾಲು ತೊಳೆದು ಒಳಗೆ ಬಾ' ಎಂದು ನೀರು ತಂದುಕೊಟ್ಟಳು. ಅಚ್ಯುತ ಕಾಲನ್ನು ತೊಳೆಯುತ್ತ "ಭಾವ ಇಲ್ಲವೇ" ಎಂದು ಕೇಳಿದ. "ಅವರು ಬೆಳ್ಳಾರೆಗೆ ಹೋಗಿದ್ದಾರೆ. ನಾಳೆಯೋ ಇನ್ನಾವಾಗಲೋ ಬರುತ್ತಾರಂತೆ" ಎಂದಳು ಅವನ ಸೊಸೆ. "ಹೂಂ! ಮೊದಲಿನಂತೆ ಚಿರಜೀವಿಯೇ ಆಗಿದ್ದಾರೆ. ಚಿಂತೆಯಿಲ್ಲ; ನನಗೇನೋ ಅನುಕೂಲವಾಯಿತು" ಎಂದು ಈಚೆ ಬಂದ. "ಮಾಲಕ್ಷ್ಮಿ—ಇಗೋ ಈ

ಗಂಟಿನಲ್ಲಿ ಅವಲಕ್ಕಿ, ಬೆಲ್ಲವಿದೆ ತಿನ್ನಿ" ಎಂದು ತನ್ನ ಬುತ್ತಿಯನ್ನು ಸೊಸೆಗೆ ಕೊಟ್ಟನು.

ಸೀತೆಗೆ ತನ್ನ ತಮ್ಮನನ್ನು ನೋಡಿ ಪರಮಾನಂದವಾಯಿತು. ಹದಿನೆಂಟು ತಿಂಗಳ ಬಳಿಕ ಈ ಸಂದರ್ಶನ. ತಾಯಿಯ ಸುದ್ದಿಯನ್ನು ಕೇಳಲು ಆತುರವಾಯಿತು. ಆ ವಿಚಾರವನ್ನೂ, ಅವರ ಆಸ್ತಿಯ ವಿಚಾರವನ್ನೂ ಮಾತಾಡಿದರು. ಮಲಗಿದ್ದಲ್ಲಿಂದಲೇ ಸೀತೆ "ಸರಸ್ವತೀ, ಮಾವನಿಗೆ ಇಷ್ಟು ಮಜ್ಜಿಗೆ ನೀರು ಕುಡಿಯಲು ತಂದುಕೊಡು" ಎಂದಳು.

"ನೀನು ಮಲಗಿದ್ದೀಯ; ಅವರೂ ಇಲ್ಲ; ಅಡುಗೆಗೆ ಯಾರಿದ್ದಾರೆ?" ಎಂದು ಕೇಳಿದ ಅಚ್ಯುತ.

"ಅಡುಗೆ ಆಗುತ್ತದೆ. ಮಾಲಕ್ಷ್ಮಿಯೇನು ಸಣ್ಣವಳೇ? ಮದುವೆಯ ಪ್ರಾಯ ಆಗಲಿಲ್ಲವೇ? ದೇವರು ನಡೆಯಿಸಿದರೆ ಮುಂದಲ ವರ್ಷವಾದರೂ ಲಗ್ನಮಾಡಬೇಕು. ಅವಳೂ ಸರಸ್ವತಿಯೂ ಸೇರಿ ಏನಾದರೂ ಒಂದು ಗಂಜಿ ಬೇಯಿಸಿ ಹಾಕುತ್ತಾರೆ."

"ಭಾವನೆಲ್ಲಿ?"

"ಅವರೇ! ತಿರುಗಾಟದಲ್ಲಿ. ಆದರೂ ಮೊದಲಿನಷ್ಟಿಲ್ಲ. ಎಷ್ಟೋ ವಾಸಿ. ಈ ವರ್ಷ ನಾವೇ ನಾಲ್ಕು ಮುಡಿ ಸುಗ್ಗಿ, ಮೂರು ಮುಡಿ ಮಜಲನ್ನು ಸಾಗುವಳಿಮಾಡಿಸಿದೆವು. ಮಾಡಿದರೆ ಯಾಕೆ ಆಗುವುದಿಲ್ಲ? ಹಾಗೆ ಕೇಳಿದರೆ-ಇಲ್ಲಿನ ಸುಗ್ಗಿ ಗದ್ದೆಯಲ್ಲಿ ಅಡಕೆತೋಟವನ್ನೂ ಮಾಡಬಹುದು. ಆದರೆ ಇವರ ತಿರುಗಾಟಕ್ಕೆ ಮಾತ್ರ ತಡೆ ಬೇಕು."

"ನಾನು — ಭಾವನಿದ್ದರೆ ಹೀಗೇನೆ ಹಿಂತಿರುಗುವುದೆಂದು ಹೇಳಿ, ಬರುವಾಗ ಅವಲಕ್ಕಿ ಬೆಲ್ಲ ತಂದಿದ್ದೆ."

ಸೀತೆ ನಕ್ಕಳು. "ಮಾಣಿ, ನಿನಗೆ ಮರುಳು. ಅವರಿದ್ದರೇನಾಯಿತು? ಇದು ನಿನ್ನ ಅಕ್ಕನ ಮನೆಯಲ್ಲವೇನು? ಮನೆಯೆಲ್ಲ ಅವರೊಬ್ಬರಿಗೇ ಮಾರಿಹೋಯಿತೇ" ಎಂದು ಪರಿಹಾಸ್ಯಮಾಡಿದಳು.

ಅಚ್ಯುತ ಆಚೀಚೆ ಕಣ್ಣು ಹೊರಳಿಸಿದ. ಅವನಿಗೆ ಮೂರು, ನಾಲ್ಕನೆಯ ಸೊಸೆಯರ ದರ್ಶನವೇ ಆಗಿರಲಿಲ್ಲ. ಮೂಕಾಂಬಿಕೆ 'ಗುಮ್ಮ' ಬಂದನೆಂದು ನಾಚಿ ಅಡಗಿಕೊಂಡಿದ್ದಳು. ಅಚ್ಯುತ ಆಚೀಚೆ ಕತ್ತು ತಿರುಗಿಸುವುದನ್ನು ಕಂಡು "ಏನು ನೋಡುತ್ತೀ? ಯಾರನ್ನು?" ಎಂದು ಅಕ್ಕ

ಕೇಳಲು, "ಮೂಕಾಂಬಿಕೆ, ಪುಟ್ಟಮ್ಮ?" ಎಂದು ಹೇಳಿದನು.

ಸೀತೆಗೆ ದುಃಖ ಉಕ್ಕಿ ಬಂದಿತು. "ಮೂಕಿ-ಈಗಷ್ಟೆ ಇಲ್ಲಿ ಇದ್ದಳು. ನಿನ್ನನ್ನು ಕಂಡೇ ಕೂಗಿರಬೇಕು 'ಗುಮ್ಮ' ಬಂದಿತೆಂದು. ವರ್ಷ ನಾಲ್ಕೈದು ಆಯಿತು; ಏನೇನೂ ಬುದ್ಧಿಯಿಲ್ಲ' ಎಂದಳು.

ಅಚ್ಯುತನು 'ಪುಟ್ಟಿ ಎಲ್ಲಿ' ಎಂದು ಕೇಳಲು, ತಿರುಗಿ ಅದೇ ದುಃಖ ಮುಂದುವರಿದು "ಈ ಮಕರ ಸಂಕ್ರಾಂತಿ ದಿನವೇ ದೇವರು ಕೊಂಡು ಹೋದರು" ಎಂದಳು. "ಅದು ಯಾವುದೋ ವಿಚಿತ್ರ ಜ್ವರಕ್ಕೆ ತುತ್ತಾಗಿ ನರಳಿನರಳಿ ಸತ್ತಿತು. 'ಅಮ್ಮನ ಕಿವಿಗೆ ಸುದ್ದಿಯನ್ನು ಮುಟ್ಟಿಸಿ' ಎಂದಿದ್ದೆ. ಹೌದು, ಅವರ ಸಿಟ್ಟಿಗೆ ತುದಿಮೊದಲುಂಟೇ? ನಿನಗೆ ಗೊತ್ತೇ ಇರಲಿಲ್ಲವೇ! ಏನೋ ದೇವರು ಇನ್ನೊಂದು ಮಗುವನ್ನು ಕೊಟ್ಟಿದ್ದಾನೆ. ಗಂಡು. ಗಂಡು ಇರಲಿಲ್ಲ ಎಂಬುದಕ್ಕೆ ಒಂದು ಹುಟ್ಟಿಕೊಂಡಿದೆ. ಇನ್ನು ಇದರ ಋಣ ಎಷ್ಟು ದಿವಸಕ್ಕೋ" ಎಂದು ಕಣ್ಣೀರು ಮಿಡಿದಳು.

ಅಚ್ಯುತನ ಎದೆಯೂ ಮಿಡುಕಿತು. "ಯಾಕೆ ಅಳುತ್ತೀ? ದೇವರು ನಡೆಯಿಸುತ್ತಾನೆ. ಅವನಿಗೇನು ಒಬ್ಬೊಬ್ಬರ ಮೇಲೆ ವೈರವೇ? ಚೆನ್ನಾಗಿ ನೋಡಿಕೊಂಡರಾಯಿತು. ಈಗಂತು ಮನೆಯಲ್ಲಿ ಹಾಲುಹೈನ ಇರುವ ಹಾಗಿದೆಯಲ್ಲ" ಎಂದ.

"ಹೌದು, ನೀನೆನ್ನುವುದು; ಆದರೆ ಅವರಿಗೆ ಇನ್ನೂ ಬುದ್ಧಿಯಿಲ್ಲ. ಊರೂರು ತಿರುಗಿ, ಯಾರಾರ ಮನೆಯಲ್ಲಿ ಹಾಳುಹರಟೆ ಮಾಡುತ್ತ ಕುಳಿತಿರುವುದೇ ಚಟವಾಗಿದೆ. ಅಂತು ನನ್ನ ಸಿಟ್ಟು, ಒತ್ತಾಯಕ್ಕೆ ಇಷ್ಟಾದರೂ ಆಯಿತು. ಇನ್ನು ನಾನು ನೋಡಿಕೊಂಡೇನು. ಅಮ್ಮನೀಗ ಅಲ್ಲಿನ ವಹಿವಾಟು ನೋಡುತ್ತಲಿಲ್ಲವೇ! ನಾಲ್ಕು ಆಳು ಮಕ್ಕಳ ಮನೆಗಳೂ ಇವೆ; ಕೂಲಿ ಕೊಟ್ಟರೆ ಬರುತ್ತಾರೆ. ಅವರಿಗೆ ಹೇಳಿದ್ದೇನೆ; 'ಹೇಗಾದರೊಂದು ತೋಟಮಾಡಿ, ಒಂದು ಕೆರೆ ಅಗೆಯಿಸಿದರೆ, ನಮ್ಮ ಮೇಲಿನ ಮೂರು ಮುಡಿ ಮಜಲಲ್ಲೂ ಸುಗ್ಗಿಯನ್ನು ಬೆಳೆಯಬಹುದು. ನಾಳಿನ ಯೋಚನೆ ಬೇಡವೇ? ಎರಡು ಹೆಣ್ಣು ಮಕ್ಕಳಿಗೂ ಎರಡು ಮೂರು ವರ್ಷಗಳೊಳಗೆ ಲಗ್ನವಾಗಬೇಕು-ಎಂದಿದ್ದೇನೆ. ಎಷ್ಟು ಹೇಳಿದರೂ ಅವರ ಸ್ವಭಾವ ಒಂದೇನೆ" ಹೀಗೆಂದು ತನ್ನ ಸುಖದುಃಖಗಳನ್ನು ತಮ್ಮನೊಡನೆ ಉಸುರಿದಳು.

ಮಹಾಲಕ್ಷ್ಮಿಯು ಬಂದು "ಮಾವ ಮಿಂದಾಗಿಲ್ಲವಲ್ಲ; ಬಿಸಿನೀರು ಕಾಯಿಸಿದ್ದೇನೆ, ಮಿಂಯಿರಿ" ಎಂದು ಹೇಳಿಹೋದಳು. ಅವಳನ್ನು ತಡೆದು ಹಿಡಿದು ಅಚ್ಯುತ 'ಮಾಲ; ಏನು ಅಡಿಗೆ ಹೇಳು. ಅನ್ನವುಂಟೋ ಇಲ್ಲವೋ ಮಾವನಿಗೆ?' ಎಂದು ಕೇಳಿದನು. "ಅನ್ನ ಊಹೂಂ! ನಮ್ಮಲ್ಲಿ ಬತ್ತ ಇದ್ದರಲ್ಲವೆ ಅನ್ನ" ಎಂದು ಹೇಳಿ ನಕ್ಕಳು! ಬಾಗಿಲ ಎಡೆಯಿಂದ ಮಾವನ ಮುಖವನ್ನು ಸರಸ್ವತಿ ಇಣಿಕಿ, ಇಣಿಕಿ ನೋಡುತ್ತಿದ್ದಳು. ಎಲ್ಲರೂ ಅಕ್ಕನಂತೆ ತೆಳ್ಳಗಿನ ಜೀವಿಗಳು.

ಅಚ್ಯುತ ಮಿಂಯಲು ಹೋದ. ಮಿಂದವನೇ ಸುಮ್ಮನಿರಲಾರದೆ, "ನಿಮ್ಮ ಗದ್ದೆ ಬಯಲು ನೋಡಿ ಬರುತ್ತೇನೆ"ಂದು ನೋಡಲು ಹೊರಟ. ಗದ್ದೆಯ ಅಂಚಿನಲ್ಲಿ ನಾಲ್ಕಾರು ಜಾನುವಾರುಗಳು ಮೇಯುತಿದ್ದುವು; ಹೊಲ ಕತ್ತರಿಸಿ ಬರಿದು ಆಗಿತ್ತು. ಅವುಗಳ ತೀರ ತುದಿಯ ತನಕ ಹೋದ. ಅಲ್ಲಿ, ಆ ಕಡು ಬೇಸಗೆಯಲ್ಲೂ ನೀರಿನ ಒರತೆಯನ್ನು ನೋಡಿ ಆನಂದವಾಯಿತು. 'ಸುತ್ತಲೂ ಬೆಳೆದ ಕೇದಗೆಯ ಬನಗಳನ್ನು ಸವರಿ, ಒಂದು ಕುಣಿ ಅಗೆಯಿಸಿದರೆ, ಒಂದು ಎಕರೆ, ಎರಡು ಎಕರೆ ಅಡಿಕೆಗಳಷ್ಟು ತೋಟ ಮಾಡಬಹುದು; ಏನಿಲ್ಲದೆ ಹೋದರೆ ಮುಜಲು ಭೂಮಿಯನ್ನು ಸುಗ್ಗಿಯ ಗದ್ದೆಯಾಗಿ ಮಾಡಬಹುದು. ಒಟ್ಟು ಎಂಟು ಮುಡಿ ಭೂಮಿಯಿಂದ-ಎರಡು ಬೆಳೆಗಳಿಂದ-೫೦ ಮುಡಿಗಳಷ್ಟು ಫಸಲು ಬಂದೀತು' ಎಂದೆಣಿಸಿಕೊಂಡ. ತಿರುಗಿ ಮನೆಯ ಭಾಗಕ್ಕೆ ಬಂದನು. ಬಾವಿಯನ್ನು ಸಂದರ್ಶಿಸಿದ. ಬರಿಯ ನಾಲ್ಕು ಮಾರು ಆಳದಲ್ಲಿ ನೀರಿತ್ತು. ಸುತ್ತಲೂ ಶ್ರಮದಿಂದ ಬಾಳೆ, ಮೆಣಸಿನ ಗಿಡ, ಹರಿವೆಯೆಂದು ತುಂಬ ತರಕಾರಿ ಬೆಳೆಯಿಸಿದ್ದರು. ಅಂಗಳದ ಇನ್ನೊಂದು ಪಾರ್ಶ್ವದಲ್ಲಿ ಅವನ ಸೊಸೆ ಮಹಾಲಕ್ಷ್ಮಿಯ ಕೈಗಾರಿಕೆಯ ಪ್ರತಿಫಲ ಕಾಣಿಸಿತು. ನೆಲದಲ್ಲೆಲ್ಲಾ ಬೆರಣಿ ಅಂಟಿಸಿತ್ತು. "ಹೋ, ಅಕ್ಕ ನಮ್ಮ ಮಹಾಲಕ್ಷ್ಮಿಯನ್ನು ಯಾರೋ ಗೌಳಿಗರ ಮನೆಗೇನೆ ಕೊಡುತ್ತಾಳೆ. ಸುಮ್ಮನೆ ಸೆಗಣಿ ಹಾಳಾಗಬಾರದಲ್ಲ" ಎಂದು ನಕ್ಕ. ಮನೆಗೆ ಬರುವಾಗಲೇ "ಮಾವ, ಅಡುಗೆ ಮಾಡಿ ಕಾದು ಕಾದು ಸಾಕಾಯಿತು. ಮಾವನಿಗೆ ಹಸಿವೆಯೇ ಆಗದೇನು?"- ಎಂದುಕೊಂಡು ಮಹಾಲಕ್ಷ್ಮಿ ನಿರೀಕ್ಷಿಸುತ್ತಿದ್ದಳು. ಊಟದ ಮನೆಯ ಮೂಲೆಯಲ್ಲಿ ಮೂಕಿ ಅಡಗಿ ಕುಳಿತಿದ್ದಳು. ಪೂರ್ವದ ಕಿರುಚಾವಡಿ

ಕೆಯು ಈಗ ಆರೋಗ್ಯವಾಗಿ, ತೀರ ಮೂಕಾಂಬಿಕೆಯೇ ಆಗಿದ್ದಾಳೆ. ಅವಳಾಯಿತು; ಅವಳ ಬೆಕ್ಕಿನ ಮರಿಯಾಯಿತು. ಮಾವನು 'ಬಾ.... ಬಾ' ಎಂದು ಕರೆದರೆ ಬಳಿಗೆ ಬರಲೇ ಇಲ್ಲ. ಎಲೆ ಹಾಕಲು, ಸೀತೆಯೂ ಬಂದು, ಗೋಡೆಗೆ ಒರಗಿ ಕುಳಿತಳು. ಆ ದಿನ ಸೊಸೆಯಿಂದಿರ ಕೈಯ ರಸದೂಟ ಅಚ್ಯುತನಿಗೆ. 'ಮಾವ ನಿಜಕ್ಕೂ ಅನ್ನ ಮಾಡಲಿಲ್ಲ' ಎಂದಳು ಸರಸ್ವತಿ. ಬದಲು ದೋಸೆ ಮಾಡಿ ಬಡಿಸಿದ್ದರು. ದೋಸೆ, ತುಪ್ಪ, ಮುದ್ದೆ ಹುಳಿ, ಅವಲಕ್ಕಿ ಪಾಯಸಗಳಿಂದ ಮಾವನನ್ನು ಖುಷಿಗೊಳಿಸಿದರು. ಅಚ್ಯುತ ನಗುತ್ತ "ಇನ್ನಾದರೆ ಮದುವೆ ಮಾಡಬಹುದು" ಎಂದು ಶಿಫಾರಸಿ ಕೊಡುವಂತಾಯಿತು. ಆಗಲೇ ಸೀತೆಯ ಬಾಯಲ್ಲಿ ಏನೋ ಮಾತು ಹೊರಟಿತು. ಆದರೆ ಬೇಕೆಂದೇ ಅದನ್ನು ತಡೆದು, ಸುಮ್ಮನಾದಳು.

ಊಟ ಮುಗಿದು, ಒಂದು ನಿದ್ರೆಯನ್ನು ಕಳೆದು, ತಾನು ಸಂಜೆಗೇ ಹೊರಡುವೆನೆಂದು ಅಚ್ಯುತ ಸಿದ್ಧತೆ ಮಾಡಿದ್ದನು. ಆದರೆ ಸೀತೆ ಕೇಳಲೊಲ್ಲಳು. "ಮಾಣಿ, ಸುಮ್ಮನೆ ಇವತ್ತು ಇಲ್ಲಿ ಇರು. ಅವರ ಹೆದರಿಕೆ ನಿನಗೆ ಇರುವುದಾದರೆ ನಾಳೆ ಬೆಳಗ್ಗೆ ಹೊರಡು. ಇವತ್ತೇನೂ ಅವರು ಬರುವುದಿಲ್ಲ"- ಎಂದು ಅವನಲ್ಲಿ ಧೈರ್ಯ ಹುಟ್ಟಿಸಿದಳು. ಅಚ್ಯುತ ನಗು, ನಾಚಿಕೆಗಳಿಂದ ಕೂಡಿದವನಾದ. ಭಾವ ನರಸಿಂಹಯ್ಯನು ಹೇಗೇ ವರ್ತಿಸಲಿ, ಅವರನ್ನು ತಾನು ಕಾಣದೆ ಹೋಗುವುದು ಚೆನ್ನಲ್ಲ ಎಂದು ಯೋಚಿಸಿದ. ಆದರೆ ಎರಡು ದಿನ ಉಳಿದು ಆ ಸುಸಂಧಿಯನ್ನು ಇದಿರಿಸಲು ಅವನ ಎದೆಯಲ್ಲಿ ತ್ರಾಣವೇ ಹುಟ್ಟಲೊಲ್ಲದು.

ಬೆಳಗ್ಗೆಲ್ಲ ನಡೆದು ಬಂದವನಾದುದರಿಂದ, ಚಾವಡಿಯಲ್ಲಿ ಚಾಪೆ ಬಿಡಿಸಿ ಮಲಗಿಕೊಂಡ. ಮನಸ್ಸಿನಲ್ಲಿ "ಮೂಕಾಂಬಿಕೆ ಬಾಯಿ ತೆರೆದರೆ ಮಾತ್ರ ನಿದ್ರೆ ವಜಾ" ಎಂದು ಯೋಚಿಸಿ ಮಲಗಿದ. ಆದರೆ ಈಗ ಅವಳು ಮುಂಚಿನ ಕಿರುಚಾಂಬಿಕೆಯಲ್ಲ, ಶುದ್ಧ ಮೂಕಾಂಬಿಕೆ. ಅವಳು ಊಟ ಮುಗಿಸಿಕೊಂಡು ಅಂಗಳದಲ್ಲಿ ತನ್ನ ಬೆಕ್ಕಿನ ಮರಿ, ದನದ ಕರುಗಳೊಡನೆ ಆ ಮಧ್ಯಾಹ್ನವೆಲ್ಲ ಮಾತನಾಡುತ್ತಿದ್ದಳು. "ನನ್ನ ಮಾವ ಬಂದಿದ್ದಾರೆ. ನಿನ್ನ ಮಾವನಲ್ಲ. ಬರುವಾಗ ನನಗೆ ಅವಲಕ್ಕಿ ತಂದಿದ್ದಾರೆ. ನಿನಗಲ್ಲ"— ಎಂದು ಪ್ರಸ್ತಾಪ ನಡೆಯಿಸುತ್ತಿದ್ದಳೆಂದು, ಅಚ್ಯುತ ಎದ್ದ ಬಳಿಕ, ಸರಸ್ವತಿ ಅವನಿಗೆ ಬಾತ್ಮಿಕೊಟ್ಟಳು.

ನಿದ್ದೆ ಮುಗಿಯಿತು. ಆಕಳಿಕೆ ಹೊರಡಿಸಿ, ತಿರುಗಿ ತಾಸು ಅರೆ ತಾಸು ಮನೆಯ ಸಮಾಚಾರ ಮಾತನಾಡಿದ. "ಅಕ್ಕ, ಹೇಗೂ ಬಂದಿದ್ದೇನೆ. ಪಂಜದ ಪೇಟೆಯನ್ನು ನೋಡಿಕೊಂಡು ಬರುತ್ತೇನೆ. ಎಷ್ಟು ದೂರ?" ಎಂದು ಕೇಳಿದ. "ಪೇಟೆಗೇನು ಒಂದೆರಡು ಮೈಲೂ ಇಲ್ಲ. ಆದರೆ ಏನು ಮಣ್ಣಿನ ಪೇಟೆಯದು! ಒಂದು ಅಂಗಡಿಯೂ ಗಟ್ಟಿಯಾಗಿಲ್ಲ. ಆಗುತ್ತದೆ- ಈ ಊರಿನವರಿಗೆ ಸಾಕು. ನಮ್ಮ ಚಂದಕ್ಕೆ ಸಾಕು' ಎಂದಳು. "ಆದರೂ ಬಂದಿದ್ದೇನೆ, ನೋಡಿ ಬರುತ್ತೇನೆ" ಎಂದನು. "ಬೇಗ ಬಾ" ಎಂದು ಸೀತೆ ಎಚ್ಚರಿಸಿದಳು, "ಆಗಲಿ" ಎಂದು ನುಡಿದ. "ಮೂಕಿ, ಪೇಟೆಗೆ ಹೋಗುತ್ತೇನೆ. ನೀನು ಬರುತ್ತೀಯೋ" ಎಂದು ಅವಳನ್ನು ಕೇಳಿದನು. ಮೂಕಿಗೆ ತಿರುಗಾಟವೆಂದರೆ ಜೀವ. ಆದರೆ ಹೋಗುವುದಕ್ಕೆ ನಾಚಿಕೆ. ಕೊನೆಗೆ ಬರಲು ನಿರ್ಧರಿಸಿದಳು. "ನಾನೂ ಬತ್ತೇನೆ" ಎಂದಳು. "ನೀನು ಬಂದರೆ ನನ್ನ ಹತ್ತಿರ ಮಾತನಾಡಬೇಕು" ಎಂದು ಕರಾರು ಮಾಡಿದ ಅಚ್ಚ್ಯುತ. "ಮಾತಾಡಿದರೆ ಏನು ಕೊಡುತ್ತೀ ನನಗೆ."

"ಮುತ್ತು"

"ಮುತ್ತು ನನಗೆ ಬೇಡ"

"ಮತ್ತೇನು ಬೇಕು?"

"ಗೇರು ಹಣ್ಣು"

"ಗೇರು ಹಣ್ಣು ಕೊಡುತ್ತೇನೆ; ಎಲ್ಲಾದರೂ ಮರ ನೋಡಲು ಸಿಕ್ಕೀತು."

"ಗೇರು ಹಣ್ಣು ಬೇಡ, ನನಗೊಂದು ಗಾಡಿಮಾಡಿ ಕೊಡುತ್ತೀಯಾ? ಅಕ್ಕ ಮಾಡಿ ಕೊಡುವುದಿಲ್ಲ, ಅಮ್ಮ ಕೊಡುವುದಿಲ್ಲ; ನೀನು ಕೊಡುತ್ತೀಯಾ? ಹಾಗಾದರೆ ನೀನು ಒಳ್ಳೆಯ ಮಾವನೆನ್ನುತ್ತೇನೆ?"- ಎಂದಳು. ಅಚ್ಚ್ಯುತನು ನಕ್ಕನು. "ಪೇಟೆಯಿಂದ ಬಂದ ಮೇಲೆ ಗಾಡಿಯನ್ನು ಮಾಡಿಕೊಡುತ್ತೇನೆ, ಆಯಿತೇ?"

"ಆಯಿತು"

ಹೀಗೆ ಮಾವ ಸೊಸೆಯರಲ್ಲಿ ಸಂಧಾನವಾಗಿ, ಮೂಕಿ ಅಚ್ಚ್ಯುತನೊಡನೆ ಮಾತಾಡುತ್ತ ತೊದಲುತ್ತ ಪಂಜದ ಪೇಟೆಯನ್ನುನೋಡಹೋದಳು. ಅವರು ಹೋದ ಕಾಲದಲ್ಲಿಯೇ, ನರಸಿಂಹಯ್ಯನ ಸವಾರಿಯು

ಮನೆಗೆ ಆಗಮಿಸಿತು. ದಿನಕ್ಕೆ ಮುಂಚಿತವಾಗಿಯೇ ಆಗಮಿಸಿದ್ದು ಎಲ್ಲರಿಗೂ ಆಶ್ಚರ್ಯವಾಯಿತು. ಮನೆಗೆ ಬಂದೊಡನೆಯೇ ಸರಸ್ವತಿಯು "ಅಪ್ಪಯ್ಯ, ಮಾವ ಬಂದಿದ್ದಾನೆ" ಎಂದಳು. ಆಕೆಗೆ ಹಿರಿಯಳಿಗಿಂತ ತಂದೆಯೊಡನೆ ತುಸು ಸಲುಗೆ ಹೆಚ್ಚು. "ಬೆಳಿಗ್ಗೆ ಬಂದರು, ದೋಸೆ ಪಾಯಸ ಮಾಡಿದೆವು" ಎಂದಳು. ನರಸಿಂಹಯ್ಯನಿಗೆ ಏನೋ ಒಂದು ವಿಧವಾಯಿತು ಮನಸ್ಸಿನಲ್ಲಿ! "ಹೂಂ! ಅವನಿಗೆ ನಾಚಿಕೆಯಿಲ್ಲ; ನನಗೆ ಇರಬೇಡವೇ" ಎಂದುಕೊಂಡು ಈಚೆ ಬಂದರು. ಹೆಂಡತಿಯ ಮುಖವನ್ನು ಕಾಣುವುದಕ್ಕೆ ಮುಂಚೆಯೇ "ನನಗೆ ಕಡಬದ ಪೇಟೆಯಲ್ಲಿ ಸ್ವಲ್ಪ ಕೆಲಸವಿದೆ" ಎಂದು ಹೇಳಿ ಹೊರಟೇ ಹೋದರು.

ಸೀತೆಗೆ ಬಲು ವ್ಯಸನವಾಯಿತು. ಆದರೆ ಮರುಗಳಿಗೆಗೆ, "ಹೋಗಲಿ, ಅವನಿಗಾದರೂ ಕಷ್ಟ ತಪ್ಪಿತು" ಎಂದು ಸುಮ್ಮನಾದಳು. ಬಳಿಕ ಸರಸ್ವತಿಯನ್ನು ಕರೆದು, "ಸರಸಿ, ಅಕ್ಕನಿಗೆ ರುಕ್ಮಿಣಿಯನ್ನು ಕರೆದುಕೊಂಡು ಬಾ, ಎಂದಿದ್ದೇನೆ. ನಿಮ್ಮಿಂದ ಸೇವಿಗೆ ಒತ್ತಲಿಕ್ಕೆ ಆಗಲಿಕ್ಕಿಲ್ಲ. ಕರೆಯಲು ಹೋಗಿದ್ದಾಳೆಯೇ" ಎಂದು ಕೇಳಿದಳು. "ಹೋ! ರುಕ್ಮಿಣಿ ಅದಕ್ಕೇನು? ಹಾಂ — ಒಳ್ಳೆಯದಾಯಿತು. ಮಾವ ಬಂದದ್ದಕ್ಕೆ ರಾತ್ರಿಯೇನಾದರೂ ಮಾಡಬೇಕೆಂದಿದ್ದಳು ಅಕ್ಕ! ಆದರೆ ಅಪ್ಪಯ್ಯ ಇಲ್ಲ, ಕಡಬಕ್ಕೆ ಹೋದರಲ್ಲ. ಅವರಿದ್ದರೆ ಲಾಯಕಿತ್ತು. ಮಾವನನ್ನು ಕಾಣದೆ ಹೋಗಿಬಿಟ್ಟರಲ್ಲ" ಎಂದಳು. ಸೀತೆ, ಸಿಡುಕಿನಿಂದ "ಹೋಗಲಿ, ಅವರ ಹಣೆಯಲ್ಲಿ ಸೇವಿಗೆ ಬರೆಯಲಿಲ್ಲ. ಅಲ್ಲವಾದರೆ ಮನೆಗೆ ಬಂದವನನ್ನು ತಾವು ಮಾತನಾಡಿಸಬೇಡವೆ? ಇವರಂತೆಯೇ ಹಗೆ ಹೊತ್ತಿದ್ದರೆ ಅವನು ಇಲ್ಲಿಗೆ ಬರುತ್ತಿದ್ದನೇ? ಇವರು ಅಲ್ಲಿ ಮಾಡಿದ ನಮೂನೆಗೆ ಒಂದು ಭೂತವೂ ಇಲ್ಲಿಗೆ ಬರುತ್ತಿರಲಿಲ್ಲ. ಸಾವು ಹುಟ್ಟು ಸಹ ತಿಳಿಸದ ಇವರ ಮುಖವನ್ನು ಅವರು ನೋಡುವುದೇನೆ ದೊಡ್ಡದು....ಹುಂ, ನನಗೇಕೆ?" ಎಂದು ಉರಿದಾಡಿದಳು.

ತಿರುಗಿ ನೆನಪಾಗಿ "ಸರಸೀ" ಎಂದಳು. "ಏಕಮ್ಮ" ಎಂದು ಉತ್ತರ ಬರಲು, "ಮಗು, ಮಾವನ ಹತ್ತಿರ ಅಪ್ಪಯ್ಯ ಬಂದ ಸುದ್ದಿ ಹೇಳಬೇಡ, ಅವನಿಗೆ ಬೇಸರವಾದೀತು" ಎಂದಳು. "ಆಯಿತಮ್ಮ, ಈಗ ನಾನೇನು ಮಾಡಲಿ! "ಅಕ್ಕಿ ಮಿದುವಾಗಿದ್ದರೆ ಕಡೆಯಬಹುದಿತ್ತು" ಎಂದಳು.

"ಆಯಿತು ನೋಡುತ್ತೇನೆ" ಎಂದು ಸರಸ್ವತಿಯು ಒಳಕ್ಕೆ ಹೋದಳು. ಆಗಲೇ ಹೊರಗಿಂದ ಗಳಗಳ ನಗು ಮಾತು ಕೇಳಿಸಿತು. ರುಕ್ಮಿಣಿಯನ್ನು ಮಹಾಲಕ್ಷ್ಮಿ ಕರೆದುತಂದು ತಾಯ ಬಳಿ ನಿಲ್ಲಿಸಿದಳು. "ಯಾಕೆ ಕರೆದಿರಿ, ಸೀತಕ್ಕ" ಎಂದು ಹದಿನಾರು ವರ್ಷದ ಜವ್ವನಿತಿಯೊಬ್ಬಳು ಬಂದು, ನಿಂತು ಮಾತನಾಡಿಸಿದಳು. "ಮಗು, ಮನೆಗೆ ಯಾರೋ ಬಂದಿದ್ದಾರೆ —ದೂರದ ನೆಂಟರು, ಅಪೂರ್ವಕ್ಕೆ ಬಂದವರು. ಇವತ್ತು ಬಂದು, ನಾಳೆ ಹೋಗುತ್ತಾರೆ. ಏನಾದರೂ ಮಾಡಿ ಬಡಿಸದಿದ್ದರೆ ಚಂದವೇ? ಮಧ್ಯಾಹ್ನ ಈ ಮಕ್ಕಳು ಏನೇನೋ ಮಾಡಿ, ದೋಸೆ ಪಾಯಸ ಬಡಿಸಿದುವು. ಪಾಯಸಕ್ಕೆ ಬೆಲ್ಲ ಸಾಲದು. ದೋಸೆಗೆ ನಾವು ನಿನ್ನೆಯೇ ನೆನಸಿಟ್ಟ ಹಿಟ್ಟಿತ್ತು; ಅದು ತೀರ ಹುಳಿಯಾಗಿ ಹೋಗಿತ್ತು. ನೀನು ಒಂದು ಕೈ ಸಹಾಯ ಮಾಡಿದರೆ, 'ಕಾಯಿ ಹಾಲು ಮತ್ತು ಸೇವಿಗೆ' ಮಾಡಬಹುದಿತ್ತು. ಯುಗಾದಿಗೆ ನಿಮ್ಮ ಮನೆಯಿಂದ ತಂದ ಸೇವಿಗೆ ಮಣೆ ಇನ್ನೂ ಇಲ್ಲೇ ಬಿದ್ದದೆ; ಕೊಡಲೂ ಇಲ್ಲ. ಅದನ್ನು ಕಂಡು ಸೇವಿಗೆ ಮಾಡುವ ಎಂಬ ನೆನಪಾಯಿತು" ಎಂದಳು.

ರುಕ್ಮಿಣಿ ನಕ್ಕಳು. "ಹೂಂ, ಬಂದ ನಂಟರಿಗೆ ನೂಕಡ್ಡೆಯೇ?" ಎಂದಳು. ನೂಕಡ್ಡೆ ಎಂಬುದು ತುಳುವಿನಲ್ಲಿ ಸೇವಿಗೆಗೆ ಹೆಸರು. ಅದನ್ನು ಉಂಡ ಬಳಿಕ ನಂಟರು ಆ ಮನೆಯಲ್ಲಿ ಮತ್ತೆ ಊಟಕ್ಕೆ ಉಳಿಯಬಾರದೆಂಬುದು ಊರಿನ ನಂಬಿಕೆ. ಅದನ್ನು ನೆನೆದೇನೆ ಸೀತೆ ನಕ್ಕಳು. "ಹೂಂ! ಹಾಗೇನು" ಎಂದಳು. ಇತ್ತ ಮಹಾಲಕ್ಷ್ಮಿಗೆ, ಮಾವ ಬಂದ ಸುದ್ದಿಯನ್ನು ಹೇಳುವ ಬದಲು, ಯಾರೋ ನಂಟರು ಬಂದಿದ್ದಾರೆಂದು ತಾಯಿ ಹೇಳಿದಳೇಕೆಂದು, ಬಲುವಾಗಿ ಯೋಚಿಸಿ ಬೆರಗಾದಳು. ರುಕ್ಮಿಣಿಯು "ಮತ್ತೇನಾಗಬೇಕು?-ಕಾಯಿಹುಳಿ, ಗೊಜ್ಜು ಪಲ್ಯ?" ಎಂದು ವಿಚಾರಿಸಿದಳು. "ಇದ್ದೀರಲ್ಲ ನೀವು ಮೂರು ಮಂದಿ-ಏನೂ ಮಾಡಿ. ಮಕ್ಕಳು ಅವಸರದಲ್ಲಿ ಕೆಡಿಸದ ಹಾಗೆ ನೋಡು. ಉಪ್ಪು ಹುಳಿಯನ್ನು ನೀನೇ ಹಾಕು" ಎಂದು ರುಕ್ಮಿಣಿಗೆ ಉಪದೇಶಿಸಿದಳು.

ಒಳಗಿಂದ ಕಡೆಯುವ ಕಲ್ಲಿನ ಸದ್ದು ಕೇಳಿಸತೊಡಗಿತು. ಹೋ! ಸರಸ್ವತಿಗೆ ಇವತ್ತು ಮಾವ ಬಂದ ಹುಮ್ಮಸ ಜೋರು" ಎಂದಳು ಮಹಾಲಕ್ಷ್ಮಿ. "ನಿನ್ನ ಮಾವ ಬಂದಿದ್ದಾರೋ"ಎಂದಳು ರುಕ್ಮಿಣಿ. "ನಿಮ್ಮ ತಮ

ದೂರದ ನಂಟರಾಗುವುದು ಹೇಗೆ ಸೀತಕ್ಕ" ಎಂದು ರುಕ್ಮಿಣಿ ಕೇಳಿಯೇ ಬಿಟ್ಟಳು. ಸೀತೆ ನಗುತ್ತ "ದೂರದಿಂದ ಬಂದಿದ್ದಾನೆ ಎಂದು ಹೇಳಿದೆ. ಮನೆಯವರಿಗೆ ಇಷ್ಟೆಲ್ಲ ಸಂಭ್ರಮವೇಕೆ--ಎಂದು ನೀನು ಚೇಷ್ಟೆ ಮಾಡ ಬಾರದಲ್ಲ! ಅವನು ನಾವಿಲ್ಲಿ ಮನೆ ಮಾಡಿದ ಮೇಲೆ ಬಂದಿರಲಿಲ್ಲ. ಇವತ್ತೇ ಬಂದದ್ದು ಮೊದಲ ಸಲ" ಎಂದಳು.

ರುಕ್ಮಿಣಿ ಬರುವಾಗಲೇ ಹೊತ್ತು ಇಳಿದಿತ್ತು. ಆದ್ದರಿಂದ ಮಾತಿಗೆ ವೇಳೆಯಿಲ್ಲೆಂದು, ಕಾಲು ತೊಳೆದು ಅಡಿಗೆಯ ಮನೆಯನ್ನು ಹೊಕ್ಕಳು. ಮಾಲಕ್ಷ್ಮಿಗೆ ಆ ದಿನ ಸಮಾರಾಧನೆ ಊಟವನ್ನೇ ಜರುಗಿಸುವ ಯೋಚನೆ. ಆದರೆ 'ವೇಳೆಯಿಲ್ಲ' ಎಂದು ಗೊಣಗುತ್ತ, "ಸೌತೆ ಕಾಯಿಹುಳಿ, ಗುಳ್ಳದ ಬೋಳು ಹುಳಿ, ಬಾಳೆ ಹಣ್ಣಿನ ಸಾಸಿವೆ, ಮತ್ತು ಕಾಯಿ ಹಾಲು" -- ಎಂದು ಔತಣಕ್ಕೆ ಪಟ್ಟಿ ತಯಾರಿಸಿದಳು. "ಎಲ್ಲಕ್ಕೂ ಮೊದಲು ಸೇವಿಗೆಯ ಕೆಲಸ ಮುಗಿಯಬೇಕಲ್ಲ" ಎಂದು ರುಕ್ಮಿಣಿ ಹೇಳಿದಳು. ಅಂತು ಅಡುಗೆ ಮನೆಯ ತುಂಬ ಗುಜು ಗುಜು ಸದ್ದು ಮಾಡಿಕೊಂಡು, ಕೆಲಸ ಮಾಡತೊಡಗಿದರು. 'ಹಾಗಲ್ಲವೇ? ಹೀಗಲ್ಲವೇ? ಹೋಳು ದೊಡ್ಡದಾಯಿತು, ಬೆಲ್ಲ ಸಾಲದು' ಎಂದು ನೂರಾರು ಬಗೆಯ ತರ್ಕಗಳನ್ನು ನಡೆಯಿಸಿಕೊಂಡು, ಅನುಮಾನ ಬಂದಾಗಲೆಲ್ಲವೂ ಸೀತೆಯನ್ನು ಕೂಗಿ, ಕರೆದು, ಕೇಳಿ ಕೆಲಸ ಸಾಗಿಸಿದರು. ಅಡುಗೆಯ ಕೆಲಸ ಮುಗಿಯುತ್ತ ಬಂದಂತೆ, ಮಾತಿನ ಗುಲ್ಲು ಮತ್ತಷ್ಟು ಹೆಚ್ಚುತ್ತ ಬಂದಿತು. ರುಕ್ಮಿಣಿ ತೀರ ಮಾತಿನ ಮಲ್ಲಿ. ಮಾತನಾಡಲು ಜನರು ಸಿಗದೇನೆ ಅವಳು ಮೌನವಾಗಿರಬೇಕಷ್ಟೆ. ಕೊನೆಗೆ ನೆಪಕ್ಕೊಂದು ಮನುಷ್ಯನ ಕೊರಡು ಸಿಕ್ಕಿದರೂ ಏನಾದರೂ ಮಾತು, ಆಡುತ್ತಲೇ ಇದ್ದಾಳು. ಹಾಗೆ ಮಾತಿಗೆ ಮುಂದೆಂದು ಅವಳು ಕೆಲಸಕ್ಕೆ ಹಿಂದೆಯೂ ಅಲ್ಲ.

ಆಕೆ ಸೇವಿಗೆಯ ಮಣೆಯನ್ನು ಮೀಟುತ್ತ "ಸರಸೋತಿ, ಅಲ್ಲೆಲ್ಲೋ ಒಂದು ಜಾತಿಯಲ್ಲಂತೆ, ಮಗಳನ್ನು ಕೊಡುವುದು ತಮ್ಮನಿಗೇನೆ ಅಂತೆ!" -ಅಂದಳು. "ಇಸ್ಸಿಸ್ಸೀ" ಎಂದಳು ಸರಸ್ವತಿ. "ಇಸ್ಸಿಸ್ಸಿ ಯಾಕೆ? ಕಳೆದ ವಾರ ನಮ್ಮ ಮನೆಗೆ ಸುಬ್ರಮಣ್ಯಕ್ಕೆ ಹೋದವರು ಬಂದಿದ್ದರು, ಐಯ್ಯರುಗಳಂತೆ. ಅವರಲ್ಲಿ ಮಾವನೇ ಸೊಸೆಯನ್ನು ಮದುವೆಯಾಗುವುದು. ನಾಲ್ಕಾರು ಮಂದಿ ಅವರಿದ್ದರು. ಹಾಗೆ ಮದುವೆಯಾದ ಸೊಸೆಯೂ

ಮಾವನೂ ಬಂದಿದ್ದರು" ಎಂದಳು ರುಕ್ಮಿಣಿ.

"ಹೌದೇನೂ? ಹಾಗೂ ಉಂಟೇ?" ಎಂದಳು ಸರಸ್ವತಿ.

"ಹಾಗೆ ನಮ್ಮ ಜಾತಿಯಲ್ಲೂ ವಾಡಿಕೆಯಿದ್ದರೆ, ನಮ್ಮ ಮಹಾಲಕ್ಷ್ಮಿಗೆ ಗಂಡನನ್ನು ಹುಡುಕಬೇಕೆಂದೇ ಇರಲಿಲ್ಲ" ಎಂದಳು ರುಕ್ಮಿಣಿ. ಮಹಾಲಕ್ಷ್ಮಿ ಮೆಲ್ಲಗೆ ನಗುತ್ತ "ಈಗ ನನಗೆ ಮೊದಲು ಗಂಡನ ಬರುವಿಕೆ ಕಾದಿದೆಯೋ, ಇನ್ನಾರೋ ಒಬ್ಬರಿಗೋ?" ಎಂದಳು.

"ಈಗ ಹಕ್ಕಿನ ಗಂಡ ಯಾರಿಗೆ? ಈ ಸೇವಿಗೆ ಪಾಯಸವನ್ನೆಲ್ಲ ನೋಡಿದರೆ, ಅದೆಲ್ಲ ಹಕ್ಕಿನ ಗಂಡನನ್ನು ಒಲಿಸಲಿಕ್ಕೇನೆ" ಎಂದು ರುಕ್ಮಿಣಿ ಚೇಷ್ಟೆಮಾಡಿದಳು. ಮಹಾಲಕ್ಷ್ಮಿಯು ಅಷ್ಟು ಮಾತಿಗೆ ನುರಿತವಳಲ್ಲ. ಅವಳ ಬೆಂಬಲಕ್ಕೆ ಸರಸ್ವತಿ ನಿಂತಳು. "ರುಕ್ಮಿಣಿ, ನೀನು ಹೇಳುವ ಐಯ್ಯರ ಜಾತಿಯವರು ನಾವೇನಲ್ಲ. ಅಕ್ಕನಿಗೆ ಮದುವೆ ಅವಸರವೋ? ನಿನಗೋ? ವರ್ಷ ಯಾರಿಗೆ ಹೆಚ್ಚು ಹೇಳು?" ಎಂದಳು. "ವರ್ಷ ನನಗೂ ಆಗಿಲ್ಲ. ನನಗಿನ್ನೂ ಹದಿನಾಲ್ಕು ವರ್ಷವಷ್ಟೆ. ಕಾಣಲಿಕ್ಕೆ ದಪ್ಪವಾಗಿದ್ದೇನೆಂದೇ? ಅದು ಒಬ್ಬೊಬ್ಬರ ಮೈಗುಣ" ಎಂದು ವಾದಿಸಿದಳು ರುಕ್ಮಿಣಿ.

"ಹೌದೇನೆ, ನಿನಗೆ ಹದಿನಾಲ್ಕೇ ವರ್ಷವೇ? ಸುಳ್ಳು" ಎಂದಳು ಸರಸ್ವತಿ.

"ನಿಜವೇ"

"ಇಲ್ಲಲ್ಲ. ಹದಿನಾಲ್ಕೇ ನಿನಗೆ? ಯಾರಿಗೆ ಗೊತ್ತಪ್ಪಾ! ಅಮ್ಮನ ಹತ್ತಿರ ಕೇಳಲೇ. ಅಮ್ಮಾ, ನಮ್ಮ ರುಕ್ಮಿಣಿಗೆ ಹದಿನಾಲ್ಕು ವರ್ಷವಂತೆ-ನಿಜವೇ?" ಎಂದು ಸರಸ್ವತಿ ಕೇಳಿದಳು.

"ನನ್ನ ವರ್ಷ ನಿನ್ನ ಅಮ್ಮನಿಗೆ ಹೇಗೆ ಗೊತ್ತು? ನೀವು ಈ ಊರಿಗೆ ಬರುವ ಮುಂಚೆ ನಾನು ಹುಟ್ಟಿದವಳು" ಎಂದಳು ರುಕ್ಮಿಣಿ.

ಅಂಗಳದಲ್ಲಿ ಮೂಕಿ, ಅಚ್ಚುತರ ಧ್ವನಿ ಕೇಳಿದುದರಿಂದ ಸೀತೆಯು "ಸರಸಿ ಏನು ಗಂಟಲು ನಿಮ್ಮದು? ಮನೆಯಲ್ಲಿ ಯಾರಿದ್ದಾರೆಂದು ಇಲ್ಲ" —ಎಂದಳು. "ಹೋ! ಮಾಲಕ್ಷ್ಮಿ ಗಂಡ ಬಂದನೆಂದು ಕಾಣುತ್ತದೆ" —ಎಂದು ಹಗುರವಾಗಿ ರುಕ್ಮಿಣಿ ನುಡಿದಳು. ತಿರುಗಿ "ಸರಸ್ವತಿ, ಗಂಡನಿಗೆ ಪಾಯಸವನ್ನು ಅವಳೇ ಬಳಸಲಿ; ನಾನು ಮುಟ್ಟುವುದಿಲ್ಲ; ನೂಕಡ್ಡೆ ಬಡಿಸಿ, ನಾಳೆ ಹೊರಡುವ ಹಾಗೆ ಬೇಕಾದರೆ ನಾನು ಮಾಡುತ್ತೇನೆ"-

ಎಂದಳು. "ಸಾಕೇ ನಿನ್ನ ಬಾಯಿ. ಅವರು ಅಡಿಗೆ ಮನೆಗೂ ಬಂದಾರು"- ಎಂದಳು ಮಾಲಕ್ಷ್ಮಿ. "ಬಂದರೆ ನನಗೇನು? ನಿನಗೆ ಹೆದರಿಕೆ" ಎಂದಳು ರುಕ್ಮಿಣಿ.

ಅಚ್ಯುತನ ಬೆನ್ನನ್ನು ಮೂಕಿ ಬಿಡಲೇ ಇಲ್ಲ. ಪಂಜಕ್ಕೆ ಹೋಗು ವಾಗಲೂ ಗಾಡಿಯ ವರಾತ. ಹಿಂದಕ್ಕೆ ಬರುವಾಗಲೂ ಹಾಗೇನೆ. ಬರು ವಾಗಲೆಲ್ಲ 'ಗಾಡಿ ಗಾಡಿ' ಎಂದೇ ಕಾಡುತ್ತಿದ್ದಳು. ಮಾವನಿಗೆ ಅವಳನ್ನು ಹೊತ್ತು ಹೊತ್ತು ಸಾಕಾಗಿತ್ತು. ಈಗ ಕೊಟ್ಟ ಮಾತನ್ನು ಪೂರೈಸಬೇ ಕೆಂದು, ಗಾಡಿ ಯಾವುದರಿಂದ ಮಾಡಲಿ, ಎಂದು ಯೋಚಿಸುತ್ತಿದ್ದನು. ಏನೋ ಥಟ್ಟನೆ ಯೋಚನೆಯೊಂದು ಹೊಳೆದು, ಅಡುಗೆ ಮನೆಗೇನೇ ಕಾಲಿರಿಸಿದನು. ಬಂದು "ಮಾಲಕ್ಷ್ಮಿ. ಎರಡು ಹೆಣ್ಣು ಕರಟ ಕೊಡು" ಎಂದು ಕೇಳಿದನು. ಅವಳು ಏನೆಂದು ತಿಳಿಯದೆ "ಏನು? ಯಾಕೆ?" ಎಂದು ಕೇಳಿದಳು. "ನಿನ್ನ ತಂಗಿಗೊಂದು ಗಾಡಿಯಾಗಬೇಕಂತೆ; ಚಕ್ರ ಬೇಕಲ್ಲ ಅದಕ್ಕೆ" ಎಂದನು. ಸರಸ್ವತಿಯು ಚಿಪ್ಪನ್ನು ತಂದುಕೊಟ್ಟಳು. ರುಕ್ಮಿಣಿ ಒಮ್ಮೆಗೆ ಮೂಕಿಯಾಗಿ, ಸೇವಿಗೆ ಒತ್ತುವುದನ್ನು ನಿಲ್ಲಿಸಿ, ಕಾಲಿ ನಿಂದ ನೆಲ ಸವೆಯುತ್ತ, ತಲೆತಗ್ಗಿಸಿ ನಿಂತಳು. ಅಚ್ಯುತ ಹೊರಟುಹೋದ ಮೇಲೆ "ಅದೇ ನನ್ನ ಮಾವ" ಎಂದಳು ಸರಸ್ವತಿ. ರುಕ್ಮಿಣಿ "ಅದೋ! ಇದೋ, ಯಾರು ನೋಡಿದ್ದಾರೆ?" ಎಂದಳು. ಕೆಲಸ ಮುಂದುವರಿ ಯಿತು. ಹೊರಗೆ ಅಚ್ಯುತ—ಕಡ್ಡಿ, ಕೋಲು, ಕರಟಗಳನ್ನು ಬಿಗಿದು ಒಂದು ಗಾಡಿ ಮಾಡಿಕೊಟ್ಟ ಬಳಿಕ—ಮೂಕಿಯೆಲ್ಲಿ? ಅವಳು ಅಂಗಳ ದಲ್ಲಿ 'ಹೋಹೋ' ಎಂದು ಗಾಡಿ ಓಡಿಸುತ್ತ ಅಲೆದಾಡಿದಳು. ತನ್ನ ಬೆಕ್ಕನ್ನು ಗಾಡಿಗೆ ಕಟ್ಟಬೇಕೆಂದು ಸಹಾಸ ಮಾಡಿದಳು. ಅದು ಅವಳನ್ನು ಪರಚಿ ಓಡಿಹೋಯಿತು. ಅದಕ್ಕಾಗಿ ಒಮ್ಮೆ ರಾಗವನ್ನೂ ಮಾಡಿದಳು.

ಅಚ್ಯುತ, ಪಂಜದ ಪೇಟೆಯ ಅನುಭವವನ್ನು ಅಕ್ಕನೊಂದಿಗೆ ಬಣ್ಣಿಸುತ್ತ ಕುಳಿತ. ನಮ್ಮ ಕಡಬ ಇದರ ಮುಂದೆ ಸಿಟಿ! ಏನು ಪೇಟೆ ಇದು? ಒಂದು ಅಂಗಡಿ, ಒಂದು ಬಸ್ಸು ಆಫೀಸು, ಒಂದು ಶಾಲೆ— ಅಷ್ಟಕ್ಕಾಯಿತು ಪೇಟೆ"-ಎಂದು ಪರಿಹಾಸ್ಯ ಮಾಡಿದ. ಸೀತೆ "ಹೌದು, ನಾಳೆ ನಿನಗೆ ಇಲ್ಲೇ ಒಂದು ಮಾಸ್ತರಿಕೆ ಸಿಕ್ಕಿ, ಈ ಊರಿಗೇನೆ ಕಳುಹಿ ಸಿದರೆ ಏನು ಮಾಡುತ್ತೀ" ಎಂದು ಪರಿಹಾಸ್ಯ ಮಾಡಿದಳು. "ಇಲ್ಲಿಗೆ

ಯಾವ ಭೂತ ಬರುತ್ತದೆ?"--ಎಂದ ಆತ. "ಯಾಕೆ? ನಿನ್ನ ಬೊಗ್ಗಾಡಿ, ಕೊಂಬಾರಿಗಿಂತ ಪಂಜ ಏನು ಕೆಟ್ಟಿತು" ಎಂದು ಅಕ್ಕ ವಾದಿಸಿದ ಬಳಿಕ, "ಈ ಊರುಗಳೆಲ್ಲವೂ ಒಂದೆಯೇ. ನಿರ್ಜನಾರಣ್ಯಗಳು" ಎಂದು ಒಪ್ಪಿದ. ಊಟಕ್ಕೆ ಕರೆಯುವ ವರೆಗೂ ಇಬ್ಬರೂ ಮಾತನಾಡುತ್ತಲೇ ಇದ್ದರು. ಕೊನೆಗೆ ಸರಸಿ ಊಟಕ್ಕೆ ಕರೆಯಬಂದಳು. ಬಾಳೆ ಎಲೆಗಳನ್ನು ಹರವಿ, ಎಲ್ಲವನ್ನು ಬಡಿಸಿ, ಆ ಮೇಲೆ ಕರೆಯುವ ಎಂದು ಆ ತ್ರಿಮೂರ್ತಿಗಳಲ್ಲಿ ತೀರ್ಮಾನವಾಗಿತ್ತು. ಬಾಗಿಲು ದಾಟುವಾಗಲೇ "ಪರಿಮಳ ಮೂಗನ್ನು ಒಡೆಯುತ್ತದೆ. ಒಂದಂತು ಕಾಯಿ ಹಾಲು! ಇನ್ನು ಮತ್ತೇನಿದೆ?" ಎನ್ನುವಾಗ ಸೇವಿಗೆ ಕಾಣಿಸಿತು. "ಅಕ್ಕ, ಸೇವಿಗೆ ಮಾಡದೇನೆ ನಾನು ನಾಳೆ ಹೊರಡುತ್ತಿದ್ದೆನಲ್ಲ; ಖಂಡಿತವಾಡಿಕೊಳ್ಳಲು ಮಾಡಿಸಿದೆಯಾ?" ಎಂದ ಅಚ್ಯುತ.

ಅಚ್ಯುತ, ಸೀತೆ, ಮೂಕಿಯರು, ಕುಳಿತರು. "ನಿಮ್ಮಲ್ಲಿ ಒಬ್ಬರು ಕುಳಿತಿರಿ, ಇಬ್ಬರು ಸಾಲದೇ ಬಡಿಸಲು" ಎಂದಳು ಸೀತೆ. "ನೀನು ಕುಳಿತಿರು. ನೀನು ಕುಳಿತುಕೋ" ಎಂದು ಮಹಾತರ್ಕ ನಡೆದು ಸರಸ್ವತಿಯೂ ಕುಳಿತಳು. ಗೊಜ್ಜು ಹುಳಿಗಳ ಊಟವಾಯಿತು. ಕಾಯಿಹಾಲು ಬಡಿಸುವ ವೇಳೆಗೆ ರುಕ್ಮಿಣಿಯೂ ತಟಸ್ಥಳಾದಳು; ಮಹಾಲಕ್ಷ್ಮಿಯೂ ತಟಸ್ಥ. "ಅದೇನು ನಿಂತಿರಿ-ಕಾಯಿಹಾಲು ಬಡಿಸಿ" ಎನ್ನುವಾಗ ಇಬ್ಬರೂ ನಾಚಿ ನಗುತ್ತಾರೆಯೇ ವಿನಾ ಮತ್ತೇನಿಲ್ಲ. ಆಗ ಸರಸ್ವತಿಯೂ ನಕ್ಕಳು. ಸೀತೆಗೆ ತಿಳಿಯದಾಯಿತು. ಕೋಪಿಸಿ, "ಮಾಲಕ್ಷ್ಮಿ, ನೀನು ಬಡಿಸಬಾರದೇ? ಏನು ಅದರಲ್ಲಿ? ಸ್ವಲ್ಪ ಬೆಲ್ಲ ಹೆಚ್ಚು ಕಡಿಮೆಯಾಗಿದ್ದೀತೆಂದು ಹೆದರಿಕೆಯೇ. ಮನೆಯವರೇ ಅಲ್ಲವೇ-ಎಲ್ಲ" ಎಂದಳು. ಮಾಲಕ್ಷ್ಮಿ ಮತ್ತೂ ಮೂಲೆಗೆ ಸರಿದಳು. "ಅಯ್ಯೋ! ಎಂಥ ಹೆಣ್ಣೇ-ನೀನು! ಬಡಿಸು ಮಗು, ರುಕ್ಮಿಣಿ" ಎಂದಳು ಸೀತೆ. ರುಕ್ಮಿಣಿಯು ತುಟಿಕಚ್ಚಿಕೊಂಡು, ಕಾಯಿಹಾಲನ್ನು ಬಡಿಸಲು ಬಂದಳು. ತನ್ನೆಲೆಯ ಮುಂದೆ ಬರಲು ಸರಸಿಗೆ ನಗುವು ಬಂದಿತು. ರುಕ್ಮಿಣಿಗೂ ನಗುವೇ! ಅವಳು ಅವಸರದಿಂದ ಓಡಿಯೇ ಹೋದಳು. ಊಟ ಮುಗಿಯಿತು. ಅಚ್ಯುತ ಚಾವಡಿಗೆ ಬಂದನು.

ಊಟವೆಲ್ಲ ಮುಗಿದಮೇಲೆ-"ಅಕ್ಕ ಅದಾರು ಮನೆಗೆಬಂದದ್ದು?" ಎಂದು ಕೇಳಿದ. "ಇಲ್ಲೇ ನೆರೆಮನೆಯವಳು. ನೀನು ಕೇಳಿರಬಹುದು:

ನಿನ್ನ ಅಪ್ಪಯ್ಯ ಇರುವಾಗ ನಿನಗೆ ತರಬೇಕೆಂದದ್ದು ಅವಳನ್ನೇ. ಪಾಪ! ಇನ್ನೂ ಅವಳಿಗೆ ಲಗ್ನವಾಗಲೇ ಇಲ್ಲ. ಜಾತಕ ಕಷ್ಟದ್ದೆಂದು ಯಾರೂ ಬರುವುದಿಲ್ಲ. ಚಿನ್ನದಂಥಾ ಹುಡುಗಿ. ಮನೆಯ ಕೆಲಸ ಅಷ್ಟು ಸಾಪಿನಿಂದ ಮಾಡುತ್ತಾಳೆ. ನಮ್ಮ ಪುಟ್ಟಯ್ಯನವರ ಮಗಳದು. ಅವರ ಮನೆಗೆ ಇಲ್ಲಿಂದ ಅರ್ಧ ಮೈಲೂ ಇಲ್ಲ. ಅವಳು ಬಂದು ಏನಾದರೂ ಸಹಾಯ ಮಾಡಿ ಹೋಗುತ್ತಾಳೆ. ಪಾಪ! ಅಂಥವಳಿಗೇ ಗಂಡ ಬರಲಿಲ್ಲ ಎಂದ ಮೇಲೆ ಇನ್ನು ನನ್ನ ಮಕ್ಕಳಿಗೆ ಎಲ್ಲಿಂದ ಬರಬೇಕೋ" — ಎಂದಳು. ಅಚ್ಚುತ ಆ ವಿಷಯದಲ್ಲಿ ಉತ್ಸಾಹಿತನಾಗಿರಲಿಲ್ಲ. ನೋಡಿದ್ದಕ್ಕೆ ಕೇಳಿದ.

ಆದರೆ ಸೀತೆ ರುಕ್ಮಿಣಿಯನ್ನು ಕರೆಯಿಸುವುದರಲ್ಲಿ ಬೇರೆಯೇ ಆಶಯವಿರಿಸಿಕೊಂಡಿದ್ದಳು. ಅದಕ್ಕಾಗಿಯೇ ಅವಳನ್ನು ಮನೆಗೆ ಬರ ಮಾಡಿಕೊಂಡುದು. ಹಿಂದೆ ಅಚ್ಚುತನೊಡನೆ 'ಅವಳು ನಿನ್ನ ಸಮಪ್ರಾಯದ ಹುಡುಗಿ, ನಾಳೆ ನೀನು ಅವಳನ್ನು ಆಳಬೇಡವೇ' ಎಂದು ಸೀತೆಯೇ ಅಂದಿದ್ದಳು. ನಿಜಕ್ಕೂ ಆಕೆ ಅಚ್ಚುತನ ಸಮಪ್ರಾಯದವಳೆಂದರೂ ಸರಿಯೆ. ಆದರೆ ನೋಟಕ್ಕೆ ಹಾಗೆ ಕಾಣುತ್ತಿರಲಿಲ್ಲ. ಅವಳಿಗೂ ಮದುವೆಯ ಉತ್ಕಟ ಅಪೇಕ್ಷೆಯಿತ್ತು. ತಾನು ನೆರೆದವಳಾದರೂ ಲಗ್ನವಾಗದೆ ಉಳಿದೆನಲ್ಲ-ಎಂಬ ಯೋಚನೆ ಬಾಧಿಸುತಿತ್ತು. ರುಕ್ಮಿಣಿಗೆ ಸಹಜ ಬೆಳವಣಿಗೆಯಾಗಿದ್ದರೆ ಈಗಾಗಲೇ ಹೆಂಗುಸಾಗಿಬಿಡುತ್ತಿದ್ದಳೋ ಏನೋ. ಆದರೆ ಈ ವಿಷಯದಲ್ಲಿ ಸೀತೆಯು ಅಚ್ಚುತನಿಗೆ ಒಪ್ಪದೆ ಮಾತನಾಡಲಾರಳು. ಅದಕ್ಕೆ ತಕ್ಕ ಕಾಲ ಬರಲಿಲ್ಲ—ಎಂದು ತಿಳಿದು ಬೇರೆ ವಿಷಯಕ್ಕೆ ತಿರುಗಿದಳು.

ಮರುದಿನ ಮುಂಜಾನೆಯೇ ಅಚ್ಚುತ ಅಕ್ಕನನ್ನು ಎಬ್ಬಿಸಿ, ಹೇಳಿ ಊರಿಗೆ ಹೊರಟನು. "ಯಾಕಿಷ್ಟು ಅವಸರ? ಒಂದು ದಿವಸ ಇರು" ಎಂದು ಎಷ್ಟು ಹೇಳಿದರೂ ಕೇಳಲಿಲ್ಲ. 'ಇನ್ನು ಎಂಟು ದಿವಸಗಳಲ್ಲಿ ಮಂಗಳೂರಿನ ಹಾದಿಯನ್ನು ಹಿಡಿಯಬೇಕು. ಮುಂದಿನ ವರ್ಷಕ್ಕೆ ಕಂಡಿತ ಬರುತ್ತೇನೆ. ಆದರೆ ಭಾವನಿಲ್ಲದ ದಿವಸ ಹುಡುಕಿಕೊಂಡು ಬರಬೇಕಲ್ಲ' ಎಂದನು. ಅನಂತರ "ಅಕ್ಕಾ, ನೀನು ಅಮ್ಮನನ್ನು ನೋಡಲು ಬರುವುದಿಲ್ಲವೇ?" ಎಂದು ಕೇಳಿದುದಕ್ಕೆ 'ದೇವರು ನಡೆಯಿಸಬೇಕು' ಎಂದಳು. ಪತಿದೇವರನ್ನು ನೆನೆದು ಹಾಗೆ ಹೇಳಿದಳೋ ಏನೋ.

ಈ ಬಾರಿ ರಜೆಯ ಕಾಲದಲ್ಲಿ ಅಚ್ಯುತನ ಯಾವೊಂದು ತಪಸ್ಸೂ ನೆರವೇರಿರಲಿಲ್ಲ. ಒಂದೆರಡು ಆದರ್ಶ ಯಕ್ಷಗಾನಗಳನ್ನು 'ಉಡಾಯಿಸ' ಬೇಕೆಂದಿದ್ದ. ಅದೂ ಸಾಧ್ಯವಾಗಲಿಲ್ಲ. ಗ್ರಾಮೋದ್ಧಾರವನ್ನು ಕುರಿತು ಉಪನ್ಯಾಸ ಮಾಡಬೇಕೆಂದು ಹಂಬಲಿಸಿದ್ದ. ಅದೂ ನಡೆಯಲಿಲ್ಲ. ಎಲ್ಲ ಸಮಯವೂ ಅವರ ಸಾಲ ಭೋಗ್ಯಗಳ ತಾಪನಿವಾರಣೆಯಲ್ಲೇ ಹೋಯಿತು. ಅದೇನೋ ಈಗ ಮುಗಿಯಿತು. ಆದರೆ ಅವನಿಗಾಗಲೀ, ಅವನ ತಾಯಿಗಾಗಲೀ ನಾಗರಾಜನಿಂದ ಹೆಚ್ಚಿಗೆ ಬರಬೇಕಾಗಿದ್ದ ಸಾವಿರ ರೂಪಾಯಿ ಬಂದೀತೇ ಎಂಬುದು ಅನುಮಾನವೇ ಆಗಿತ್ತು. ಆದರೆ—ನಾಗರಾಜ ತನ್ನ ಗೆಳೆಯ, ಅವನಿಗೇನು ಧಾಡಿ; ಕೊಟ್ಟಾನು. ಕೊಡದೆ ಹೋದರೆ ನಾರಾಯಣ ಮಾಸ್ತರರು ಕೊಡಿಸಬಹುದು-ಎಂದು ಅಚ್ಯುತ ಊಹಿಸಿದ. ಹೀಗೆ ಹೆಚ್ಚಿನ ಉದ್ಯೋಗವಿಲ್ಲದೆಯೆ ಅವನ ರಜೆ ಕಳೆಯುತ್ತ ಬಂತು.

ಈಗ ಜೂನು ಮೊದಲ ವಾರವೂ ಕಾಲಿರಿಸಿತು. ಬಸ್ಸುಗಳನ್ನು ಕಂಪೆನಿಯವರು ಮಳೆಯ ನಿಮಿತ್ತ ತಾವಾಗಿ ನಿಲ್ಲಿಸುವ ಮೊದಲು, ಹೊರಡುವೆನೆಂದು ಅಚ್ಯುತ ಮಂಗಳೂರನ್ನು ಬಂದು ಸೇರಿದ. ಅದೇ ಹೊಟೇಲು—ಅದೇ ವೆಂಕಟೇಶ, ಗೋಪಾಲರಾಯರ ಗೆಳೆತನ ತಿರುಗಿ ಪ್ರಾಪ್ತಿಸಿತು. ಈ ಬಾರಿಯ ಗೋಪಾಲರಾಯರೇ ಬೇರೆ. ಅಚ್ಯುತನನ್ನು ಅವರು ತಮ್ಮ ತಲೆಯ ಮೇಲಕ್ಕೆ ಮಾತ್ರ ಏರಿಸಿಕೊಳ್ಳಲಿಲ್ಲ; ಏನೆಲ್ಲ ಮಾಡಿದರು. ವೆಂಕಟೇಶನಾದರೂ ಅವರಿಗೆ ಸಮೀಪದವನು, ಈತನು ದೂರದವ. ಮೇಲಾಗಿ ಕೆಲವು ದಿನ ವೈರಿಯೆನಿಸಿಯೂ ಇದ್ದವ. ಅಂಥವನು ತನ್ನನ್ನು ಉಪಚರಿಸಿದ ವಿಚಾರ ನೆನಪಾದಂತೆಲ್ಲ ಗೋಪಾಲರಾಯರಿಗೆ ತುಂಬ ವ್ಯಥೆಯುಂಟಾಗುತಿತ್ತು.

ಈ ಬಾರಿನ ಅವರ ಶಾಲೆಯ ಯೂನಿಯನ್, ಚುನಾವಣೆಯಾಗುವಾಗ, ತಮ್ಮ ಆದರ್ಶನಾದ ಅಚ್ಯುತನನ್ನು "ನೀವು ಕಾರ್ಯದರ್ಶಿಯಾಗಬೇಕು" ಎಂದು ಬಲವಂತಪಡಿಸಿದರು. ಕೆಲವೊಂದು ಮಿತ್ರರ ಸಹಾನುಭೂತಿಯಿಂದ ಅಚ್ಯುತನಿಗೆ ಉಪಾಧ್ಯಾಯ ಸಂಘದ ಕಾರ್ಯದರ್ಶಿತ್ವವೂ ದೊರೆಯಿತು. ಅವರ ಸಂಘದ ಚಟುವಟಿಕೆಗಳೆಲ್ಲವೂ, 'ಅಚ್ಯುತರಾವ್ ಕೊಂಬಾರ್' ಇವರ ಮುಂದಾಳುತನದಲ್ಲಿ ಸಾಗಿದುವು.

ಬರಿ ಅಚ್ಚುತ,ಅಚ್ಚುತರಾಯ ಎಂದರೆ ಭರಮು ಸಾಲದೆಂದು ತೋರಿತು. 'ಹೌದಯ್ಯ, ನಾನು ಕೊಂಬಾರ್ ಅಚ್ಚುತ ಎಂದು ಸಹಿ ಮಾಡಲೇ, ಅಚ್ಚುತರಾವ್ ಕೊಂಬಾರ್ ಎಂದು ಬರೆಯಲೇ! ಅಚ್ಚುತರಾವ್ ಕೊಂಬಾರ್‌ಕರ್-ಎನ್ನಲೇ' ಎಂದು ವಾಗ್ವಾದವನ್ನು ನಡೆಯಿಸಿ, ಬಹುಮತದಿಂದ ನಡುವಣ ಹೆಸರನ್ನು ಆರಿಸಬೇಕಾಯಿತು.

ತಾನು ಸಂಘದ ಕಾರ್ಯದರ್ಶಿಯಾದ ಮೇಲೆ, ಪ್ರಗತಿಯನ್ನು ತೋರಿಸಲೇಬೇಕೆಂದು ಅಚ್ಚುತನ ಹಟ. ಅದಕ್ಕಾಗಿ ಆಗಾಗ ತರ್ಕಗಳನ್ನೂ, ಯಕ್ಷಗಾನ ಕೂಟಗಳನ್ನೂ, ಮಾದರಿ ಉಪನ್ಯಾಸಗಳನ್ನೂ ವ್ಯವಸ್ಥೆಗೊಳಿಸಿದ. ನಡುನಡುವೆ ವೆಂಕಟೇಶನ ಆಗ್ರಹದಂತೆ ವಿದ್ವಾನ್ ಪರೀಕ್ಷೆಯ ತರಗತಿಯೂ ನಡೆಯುತ್ತಿತ್ತು. ಈಗ ಅಚ್ಚುತ ವೆಂಕಟೇಶರಿಗೆ ಟ್ರೈನಿಂಗ್ ಮತ್ತು ವಿದ್ವಾನ್ ಪರೀಕ್ಷೆಗಳೆರಡಕ್ಕೂ ನಿಂತುಬಿಡುವ ಹಂಬಲ. ಒಂದೇ ಗುಂಡಿಗೆ ಎರಡೆರಡು ಹಕ್ಕಿ ಕೊಲ್ಲಬೇಕೆಂಬ ಹಟ.

ಸಪ್ಟಂಬರ ತಿಂಗಳೊಳಗಾಗಿಯೇ ಅಚ್ಚುತರಾವ್ ಕೊಂಬಾರರ ಸಂಘದ ವರದಿ ಪುಸ್ತಕದಲ್ಲಿ ಬಿಡು ಹಾಳೆಗಳೇ ಇಲ್ಲದಾದುವು. ಅಚ್ಚುತನ ಪ್ರೇರಣೆಯಿಂದ ಅನೇಕ ಹೊಸ ವಿಷಯಗಳ ಚರ್ಚೆ ನಡೆಯಿಸಿದರು. 'ಯಾವ ಹಳಸಲು ವಿಷಯವೂ ಬೇಡ' ಎಂದು ಆತನೇ ವಿಷಯಗಳನ್ನು ಆರಿಸುವುದರಲ್ಲಿ ಮುಂದಾಗುತ್ತಿದ್ದ. ಯಾವ ವಿಷಯವೂ ಸೂಚಿಸದೆ ಹೋದರೆ 'ಹಸ್ಬೆಂಡ್ ಎಂಡ್ ವೈಫ್-ಚಿತ್ರ ಚೆನ್ನಾಗಿತ್ತೇ?' 'ಸುಲೋಚನೆ ಅಭಿನೇತ್ರಿಯೇ—ಅಲ್ಲವೇ' ಎಂಬ ಚಿತ್ರಪ್ರಪಂಚದ ವಿಷಯಗಳನ್ನಾದರೂ ಚರ್ಚಿಸುತ್ತಿದ್ದರು. ಹೀಗೆ ಅನೇಕ ಚಟುವಟಿಕೆಗಳ ದೆಸೆಯಿಂದ, ಅಚ್ಚುತರಾಯನ ಶಾಲೆಯ ಓದು ತುಸು ಹಿಂದೆಯೇ ಬಿತ್ತು. ಮನಶ್ಶಾಸ್ತ್ರದ ವಿಷಯ, ವಿವರಗಳನ್ನು ಕಂಠಪಾಠ ಮಾಡಲು ಅವನಿಗೆ ವಿರಾಮವು ಸಾಲದಾಯಿತು. ಆತ ಕ್ರಿಸ್‌ಮಸ್ ರಜೆಯನ್ನು ಊರಲ್ಲಿ ಕಳೆದು ತಿರುಗಿ ಮಂಗಳೂರಿಗೆ ಬಂದ. ತರಗತಿಯಲ್ಲಿ ಕುಳಿತಾಗ ಅವನ ಗುರುಗಳು-"ಅಚ್ಚುತ ಮಾಸ್ತರರೇ, ನಿಮ್ಮ ಸಾರ್ವಜನಿಕ ಚಟುವಟಿಕೆಯ ಗದ್ದಲದಲ್ಲಿ ಮನೆಯ ಮಗುವಿಗೆ ಹಾಲಿಲ್ಲದಂತಾಗಿದೆ"-- ಎಂದರು. ಅವರ ಪಾಠದಲ್ಲಿ, ಅದೇ ಹಾಳು ಸೈಕಾಲಜಿಯಲ್ಲಿ, ನೂರರಲ್ಲಿ ಬರಿಯ ಇಪ್ಪತ್ತೈದು ಮಾರ್ಕು ಸಿಗಬೇಕೇ? ಗುರುಗಳು

ಬಹಿರಂಗವಾಗಿ ಮಾಡಿದ ಈ ಟೀಕೆಯನ್ನು ನಾಲ್ಕು ದಿನಗಳ ತನಕ ಅಚ್ಯುತ ಚಿಂತಿಸುತ್ತಲೇ ಇದ್ದ. ಅದರಿಂದ ವಾರದ ಸಿನೆಮ ಹೋಯಿತು; ಚರ್ಚೆ ಹೋಯಿತು; ತರ್ಕ ಹೋಯಿತು; ವಿದ್ವಾನ್ ಪಾಠವೂ ಹೋಯಿತು. ಶಾಲೆಯಾಯಿತು; ನೇರಾಗಿ ಹೊಟೇಲಿನ ಕೊಟಡಿಯಾಯಿತು. ವಿರಕ್ತನಂತೆ ಕುಳಿತುಬಿಡುವ. ಅವನ ಅಹಂಕಾರ ತೀರ ನೊಂದಿದೆ. ಮಾನಕ್ಕೆ ಕಡಿಮೆತನ ಬಂದಿತು. ತನ್ನ ಕಾರ್ಯದರ್ಶಿತ್ವಕ್ಕೆ ರಾಜಿಕೊಡಲು ಸಿದ್ಧನಾಗಿ ಕುಳಿತ. ಆತನ ಈ ದುರವಸ್ಥೆಯು ವಿಚಾರ ಗೋಪಾಲರಾಯರಿಂದ ಗುರುಗಳ ತನಕ ದೂರು ಹೋಗಿ, ಅವರೇ ಅವನನ್ನು ಕರೆದರು. "ಮಾಸ್ತರರೇ, ನಿಮ್ಮ ಕೆಟ್ಟದ್ದಕ್ಕೆ ನಾನು ಹೇಳಲಿಲ್ಲ. ನಿಮ್ಮ ಮರ್ಯಾದೆಯನ್ನು ಕಳೆಯಲಿಕ್ಕೂ ಅಲ್ಲ; ನಿಮ್ಮ ಚಟುವಟಿಕೆ ನೋಡಿ ನನಗೂ ಸಂತೋಷವೇ. ಆದರೆ ತೀರ ಕಷ್ಟದಿಂದ ಮಂಗಳೂರಿಗೆ ಬಂದು, ಶಾಲೆ ಓದುವ ನೀವು, ಪಾಠದಲ್ಲಿ ಹಿಂದಾದರೆ, ನಾಳೆ ಯಾರಿಗೆ ಹೆಚ್ಚಿನ ನಷ್ಟ? ನೀವು ಒಳ್ಳೆಯದಾಗಬೇಕೆಂದಲ್ಲವೇ ನಾನೆಂದದ್ದು. ನಾನು ನಿಮಗೆ, ಇದ್ದ ಸಮಯವನ್ನು ಸರಿಯಾಗಿ ವಿತರಣೆಮಾಡಿ ಎಂದೆನೇ ಹೊರತು, ಸಾರ್ವಜನಿಕ ಚಟುವಟಿಕೆ ಮಾಡಕೂಡದು — ಎಂದುದಲ್ಲ. ಹಾಗಿದ್ದರೆ ನಾವೇ ಅದನ್ನೆಲ್ಲ ನಿಲ್ಲಿಸುತ್ತಿರಲಿಲ್ಲವೇ"-ಎಂದು ಸಮಾಧಾನ ಹೇಳಬೇಕಾಯಿತು.

ಅಂತು ಅಚ್ಯುತನಿಗೆ ತುಸು ಧೈರ್ಯ ಬಂದಿತು; ಸಮಾಧಾನವಾಯಿತು. ಅಲ್ಲಿಂದ ಆತ ತನ್ನ ನಿಮಿಷಗಳನ್ನು ಸಹ ಸಮನಾಗಿ ಹಂಚಿ ಹಾಕಿ, ಸೈಕಾಲಜಿ ಮಾಸ್ತರರಿಗೆ ಕೋಪಬಾರದಂತೆ ವರ್ತಿಸುವೆನೆಂದು ಯೋಚಿಸಿದನು. ಮುಂದಿನ ಮೂರು ತಿಂಗಳ ಕಾಲ ಅವನಿಗೆ ಬಿಡುವೇ ದೊರೆಯಲಿಲ್ಲ. ಸಂಘದ ವಾರ್ಷಿಕೋತ್ಸವದ ನಾಟಕ, ಸ್ಪರ್ಧೆಗಳಿಗೂ ಸಮಯ ವ್ಯಯಿಸಬೇಕಿತ್ತು; ಇತ್ತ ಪರೀಕ್ಷೆಯ ತಯಾರಿಯೂ ಆಗಬೇಕಿತ್ತು. ತೀರ ಕೊನೆಯ ತಿಂಗಳು ಕಾಲಿರಿಸುವಾಗ, "ಬೇಡ, ವಿದ್ವಾನ್ ಪರೀಕ್ಷೆಯ ಹುಚ್ಚು! ಅದು ಮುಂದಿನ ವರ್ಷಕ್ಕಿರಲಿ"-ಎಂದು ವೆಂಕಟೇಶನೊಡನೆ ಹೇಳುವಂತಾಯಿತು. ಆತ "ನೀವೇನೂ ಮಾಡಿ; ನಾನು ಕಂಡಿತ ಎರಡಕ್ಕೂ ಕೂತುಬಿಡುತ್ತೇನೆ. ಪ್ರಾಣಹೋದರೂ ನಾನು ತಿರುಗಿ ಹೈಯರ್ ಎಲಿಮೆಂಟರಿ ಶಾಲೆಗೆ ಕಾಲಿಡುವುದಿಲ್ಲ. ಒಂದೂ ಹಾಗೆ, ಇಲ್ಲ

ವಾದರೆ ನಮ್ಮ ನಾಟಕದ ಕೃಷ್ಣಭಟ್ಟರಂತೆ, ಹೈಯರ್ ಎಲಿಮೆಂಟರಿ ಸೇರುವುದಾದರೂ, ಆ ಕೆಲಸ ನನಗೆ ಮಂಗಳೂರಲ್ಲಿಯೇ ಸಿಗಬೇಕು. ಹಳ್ಳಿಯ ಮಂಗನಾಗಿ ನಾನು ಸಾಯುವವನಲ್ಲ" ಎಂದು ನಿರ್ಧಾರದ ಮಾತುಗಳನ್ನು ಆಡಿದನು.

'ನಾಟಕದ ಕೃಷ್ಣಭಟ್ಟ'ರು ಅವರ ಸಹ-ವಿದ್ಯಾರ್ಥಿಗಳು. ಹಳ್ಳಿಯಿಂದ ಬಂದ ಮುಂದಾಳುಗಳ ಸಾಲಿನಲ್ಲಿ ಅಚ್ಯುತನಂತೆ ಅವರೂ ಒಬ್ಬರೆನ್ನಲು ಅಡ್ಡಿಯಿಲ್ಲ. ಕೃಷ್ಣಭಟ್ಟರಿಗೆ ನಾಟಕವೆಂದರೆ ನೀರು ಕುಡಿದಂತೆ. ಇಡೀ ಕಾಲೇಜೇ ಅವರಿಗೆ ಶರಣಾಗಿತ್ತು. ಅಷ್ಟೇನು! ಊರಿನಲ್ಲಿ ಯಾವ ವಿನೋದಾವಳಿಯಾಗುವುದಾದರೂ, ಆ ಸಂಘ, ಸಂಸ್ಥೆಗಳು ಕೃಷ್ಣಭಟ್ಟರನ್ನು ಎರವಾಗಿ ಕೊಂಡುಹೋಗುತ್ತಿದ್ದುವು. ಅವರ ನಕಲಿಯಿಲ್ಲದೆ, ಯಾವ ಕಾರ್ಯಕ್ರಮವೂ 'ರೈಸ'ಲಾರದು. ಈಗ ಅವರನ್ನೇ ಎದುರಿಸಿದವನೆಂದರೆ ಅಚ್ಯುತನೊಬ್ಬನೇ. 'ಈ ಬಾರಿಯ ಶಾಲಾ ವರ್ಧಂತಿಯ ನಾಟಕದ ಎಡೆಯಲ್ಲಿ ನನ್ನದೊಂದು ಹಾಸ್ಯ ಇರಿಸಬೇಕೆ'ಂದು ಭಟ್ಟರ ತಾಕೀತಾಗಿತ್ತು. ಅವನು ರಂಗಭೂಮಿಗೆ ಬಾರದಿದ್ದರೆ ಸ್ವತಃ ಪ್ರಿನ್ಸಿಪಾಲರೇ, 'ಕಾಮೆಡಿಯನ್ ಕೃಷ್ಣಭಟ್ಟರಿಲ್ಲವಲ್ಲ' ಅನ್ನುತ್ತಿದ್ದರು. ತನ್ನಷ್ಟು ಶಾಲಾ ಕಾಲೇಜಿನಲ್ಲಿ ಪ್ರಾಧಾನ್ಯ ಪಡೆಯಲು ಯಾರಿಂದಲೂ ಆಗದೆಂದು ಕೃಷ್ಣಭಟ್ಟರಿಗೆ ಗೊತ್ತು. ಹಿಂದೆ ಸಂಘದ ಚುನಾವಣೆಯಲ್ಲಿ ಕಾರ್ಯದರ್ಶಿತ್ವಕ್ಕೆ ಹಸಿದುಕೊಂಡಿದ್ದ ಅವರ ಕೈಯಿಂದ, ಅದು ಅಚ್ಯುತನ ಕೈಗೆ ಹೋದುದೇ ಇಷ್ಟವೆನಿಸಿರಲಿಲ್ಲ. ಈಗ ಕೃಷ್ಣಭಟ್ಟರ ಹಾಸ್ಯ ಅಚ್ಯುತನಿಗೊಂದು ಸಮಸ್ಯೆಯಾಗಿ ನಿಂತಿತು.

"ಭಟ್ಟರೇ, ನಿಮ್ಮ ಹಾಸ್ಯ ನನಗೂ ಮೆಚ್ಚಿಗೆಯೇ. ಆದರೆ ನಮ್ಮ ನಾಟಕದ ನಡುವಿನಲ್ಲಿ ಅದು ಬೇಡ. ಅದನ್ನು ನೀವು ಪ್ರಾರಂಭದಲ್ಲಿ ತೋರಿಸಿದರೂ ಸಂತೋಷ; ಅನಂತರ ಮಾಡಿದರೂ ಸಂತೋಷವೇ! ಅಲ್ಲದೆ ನಾಟಕದಲ್ಲಿ ನಿಮಗೆ ಮುಖ್ಯ ಪಾರ್ಟು ಕೊಡುವುದಕ್ಕೂ ಅಡ್ಡಿಯಿರಲಿಲ್ಲ. ಆದರೆ ನೀವು ಯಾವ ರಿಹರ್ಸಲಿಗೂ ಬರುವವರಲ್ಲವೆಂದು ನಿಮ್ಮನ್ನು ಕೇಳಲಿಲ್ಲ" ಎಂದು ಅಚ್ಯುತ ಅವರನ್ನು ಇದಿರಿಸಿದನು.

"ನಾನು ನಾಟಕದ ಮುಂಚಿನ ದಿವಸ ಪಾರ್ಟು ಕಲಿತು,ರೆಡಿಯಾದರೆ ಸರಿಯಲ್ಲ! ಉಳಿದವರ ಹಾಗೋ ನಾನು?"

"ಅದರಲ್ಲಿ ಮಾತ್ರ ನನಗೆ ಧೈರ್ಯವಿಲ್ಲ. ನಾನು ಅಭ್ಯಾಸ ಚೆನ್ನಾಗಿ ಆದದ್ದನ್ನು ಕಾಣದೆ, ಆಮಂತ್ರಣ ಪತ್ರಿಕೆಯನ್ನು ಮುದ್ರಿಸುವುದೂ ಇಲ್ಲ. ಹೋಗಲಿ— ಈಗ ನಿಮ್ಮ ಪಾರ್ಟಿ ಬಿಟ್ಟ್ಯಾಯಿತಲ್ಲ; ನನ್ನ ಸೂಚನೆಗೆ ಏನೆನ್ನುತ್ತೀರಿ?"

"ನಿಮ್ಮ ನಾಟಕ ಹಾಳು ಬೀಳುವಾಗ, ನಡುವಿಗೆ ನನ್ನ ಹಾಸ್ಯ ಇರಲಿ!"

"ಅದು ಹಾಳು ಬೀಳಲಿ— ಏನೇ ಆಗಲಿ; ನಡುವಿಗೆ ಆ ಹಾಸ್ಯ ಬೇಡ"—ಎಂದನು ಅಚ್ಯುತ. ಅಲ್ಲಿಯೇ ಅವರಲ್ಲಿ ಕದನವಾಯಿತು; ಕೊನೆಗೆ ಉಪಾಧ್ಯಾಯರ ವರೆಗೂ ಆ ವಿಷಯವಾದ ದೂರು ಹೋಯಿತು. ಅಲ್ಲಿಯೂ ಅಚ್ಯುತನಿಗೆ ಜಯ ದೊರಕಿದುದರಿಂದ ಕೃಷ್ಣಭಟ್ಟರ ವೈರ ಇನ್ನಷ್ಟು ಹೆಚ್ಚಿತು. ವೆಂಕಟೇಶನು ಆ ಕೃಷ್ಣಭಟ್ಟರ ಆದರ್ಶವನ್ನು ಅಚ್ಯುತನ ಮುಂದೆ ಹಿಡಿಯುವಾಗ, ಅವನು ಹಿಗ್ಗುವಂತಿದೆಯೇ? "ಹೌದು ವೆಂಕಟೇಶ್, ನೀವು ಆ ಕೃಷ್ಣಭಟ್ಟರನ್ನು ಆದರ್ಶವಾಗಿರಿಸಿಕೊಂಡಿರಾ? ಅವರಿಗೆ ಪೇಟೆಯಲ್ಲೇ ಕೊಳೆಯುವ ಭ್ರಮೆಯಾಗಿದೆ. ಮದುವೆಯಾಗಿ ನಿಮ್ಮಂತೆ ಎರಡೋ ಮೂರೋ ಮಕ್ಕಳು ಅವರಿಗೂ ಇವೆ. ಅವರಗೆ ಸಿಗುವ ಅಷ್ಟು ಕಡಿಮೆ ಸಂಬಳದಲ್ಲಿ ಅವರು ಪೇಟೆಗೆ ಬಂದು ಸಂಸಾರ ಮಾಡಲಿಕ್ಕಿದೆಯೇ? ನಿಮಗೂ ಅದೇ ಹುಚ್ಚೇ" ಎಂದ ಅಚ್ಯುತ.

"ಅದಕ್ಕೇನೆ ವಿದ್ವಾನ್ ಆಗಬೇಕೆಂದು ನನ್ನ ಹಟ. ನಾಳೆ ಇಲ್ಲಿಯೇ ಇದ್ದರೆ, ಖಾಸಗಿ ಓದಿ, ಎಲ್. ಟಿ. ವರೆಗೂ ಆಗುವ ಚಾನ್ಸ್ ಇದೆ. ಅದರ ಬದಲು ನಾನು ಕಲ್ಯಾಣಪುರ, ತೋನ್ಸೆ ಊರುಗಳನ್ನು ಸೇರಿದರೆ ಅಲ್ಲಿ ಕಾಯಿಕತ್ತ ಗುದ್ದಬೇಕಾದೀತು" ಎಂದ.

ಕೃಷ್ಣಭಟ್ಟರಂತೆ, ಒಮ್ಮೆ ಪೇಟೆಗೆ ಬಂದು ಬಿದ್ದು, ತಿರುಗಿ ಹಳ್ಳಿಗೆ ಮರಳಲು ಇಷ್ಟವಾಗದ ಎಷ್ಟೋ ವಿದ್ಯಾರ್ಥಿ ಗೆಳೆಯರು ಅವರಲ್ಲಿದ್ದರು. "ಪೇಟೆವಾಸ, ಹಳ್ಳಿವಾಸ" ಎಂದು ತರ್ಕಸಭೆ ಜರುಗಿಸಿದಾಗ ಅಚ್ಯುತನ ಮೇಲೆ ಉರಿದು ಬೀಳುತ್ತಿದ್ದ ವರ್ಗದವರು. ಆದರೆ ಅಚ್ಯುತನಿಗೆ ಪೇಟೆಯ ಅನುಕೂಲತೆಗಳನ್ನು ಕಂಡು ಮೋಹವಾದರೂ, "ಅದು ದುಂದುಗಾರಿಕೆಯ ರಾಜ್ಯ! ಬಡ ಬಗ್ಗರಿಗೆ ಹೇಳಿಸಿದ್ದಲ್ಲ"-ಎಂಬ ಖಚಿತ

ಅಭಿಪ್ರಾಯವಾಗಿತ್ತು. ಆದುದರಿಂದ ಅವನು ಪರೀಕ್ಷೆ ಮುಗಿಸಲು ಕಾದಿದ್ದ. "ಈಗ ವೆಂಕಟೇಶನ ಹೇಳಿಕೆಯಂತೆ ಎರಡು ಪರೀಕ್ಷೆಗಳಿಗೂ ಕುಳಿತುಕೊಳ್ಳುವುದು. ವಿದ್ವಾನ್ ಪರೀಕ್ಷೆಯಲ್ಲಿ ಏನಾದರೂ ಒಂದು ಭಾಗದಲ್ಲಿ ಪಾಸಾದರೂ ಸಾಕು. ಉಳಿದುದು ಮುಂದಿನ ವರ್ಷಕ್ಕೆ" ಎಂದುಕೊಂಡ. ಅವರ ಪರೀಕ್ಷೆಗಿಂತ ಕೆಲವು ದಿನಗಳ ಮುಂಚೆ ಶಾಲಾ ವರ್ಧಂತಿಯನ್ನು ಅವರು ಜರುಗಿಸಿದರು. ಕಾರ್ಯದರ್ಶಿಯಾದ ಅಚ್ಯುತನ ಪಾಲಿಗೆ ಅದು ಬೇಸರದ ದಿನವೇ ಆಯಿತು ಕೃಷ್ಣಭಟ್ಟರನ್ನು ಒಲಿಸಿ, ಒಂದು ಹಾಸ್ಯ ಅವರಿಂದ ಮಾಡಿಸಬೇಕೆಂದು ಉಳಿದ ವಿದ್ಯಾರ್ಥಿಗಳ ಒತ್ತಾಯ. ಆದರೆ ತನ್ನ ಕುದುರೆಗೆ ಮೂರು ಕಾಲೆಂದು ಅಚ್ಯುತನ ಹಟ. ಶಾಲಾ ಉತ್ಸವದ ದಿನ ಅಚ್ಯುತನನ್ನು ಕೇಳದೇನೆ, ಇವರಾಡಿದ 'ರೈತನ ಜಾಡ್ಯ' ಎಂಬ ನಾಟಕದ ನಡುವೆ ಕೃಷ್ಣಭಟ್ಟರು ಕಾಲಿರಿಸಿಯೇ ಬಿಟ್ಟರು. ರೈತನ ಭೂಮಿಕೆಯನ್ನೂ ಹಾಕಿಕೊಂಡು ಲೇವಡಿ ಎಸಗಿ, ಎಲ್ಲರನ್ನೂ ನಗಿಸಿದ್ದೂ ಆಯಿತು. ನಾಟಕದ ಪರಿಣಾಮ ಅದರಿಂದ ಕೆಟ್ಟಿತು. ಅಚ್ಯುತ ರೇಗಿ, ಉರಿದು, "ಹಾಳಾಯ್ತು ನನ್ನ ಕಾರ್ಯದರ್ಶಿತ್ವ"— ಎಂದುಕೊಳ್ಳುವಂತಾಯಿತು. ಆ ನೋವು ಅಚ್ಯುತನನ್ನು ತುಂಬ ಬಾಧಿಸಿತು. ಕೊನೆಗೆ ಅದನ್ನು ಸಹ ಮರೆತು, ಆತ ಪರೀಕ್ಷೆಗೆ ಅಣಿಯಾದನು. ಪರೀಕ್ಷಾ ಕಾಲವು ಹಾಹೂಂ ಅನ್ನುವುದರಲ್ಲಿ ಕಳೆದು ಸೆರೆಮನೆಯಿಂದ ಹೊರಕ್ಕೆ ಬಂದಷ್ಟು ಮನಸ್ಸು ಅರಳಿಯೂ ಬಿಟ್ಟಿತು. ಆ ದಿನ ಗೋಪಾಲರಾಯರ ಒತ್ತಾಯಕ್ಕೆ ಎಲ್ಲರೂ ಸಿನೇಮಾಕ್ಕೆ ಹೋದರು. ಹೋದಲ್ಲಿ ಸಿನೇಮಾ ನೋಡುವ ಬದಲು ಗೋಪಾಲರಾಯರು ಗೆಳೆಯನಿಗೆ "ನನ್ನಾಣೆಯಿದೆ ಅಚ್ಯುತ ರಾವ್, ನಮ್ಮ ಮನೆಯ ತನಕ ಬಂದು ನಾಲ್ಕು ದಿನ ಇದ್ದು ಹೋಗಬೇಕು" ಎಂದು ಬಲವಂತ ಪಡಿಸುತ್ತಿದ್ದರು. ಹೀಗಾಗಿ ಮರುದಿನ ಆತ ಕಡಬಕ್ಕೆ ಹೊರಡುವ ಬದಲು, ಅವರ ಜತೆಗೆ ಹೊರಟನು. ಜತೆಗೆ ವೆಂಕಟೇಶನೂ ಇದ್ದ. ನಿಜಕ್ಕೂ ಅಷ್ಟು ಆತ್ಮೀಯವಾಗಿ ಬೆರೆತಿದ್ದ ಅವರ ವಿದ್ಯಾರ್ಥಿ ಜೀವನವನ್ನು, ಬಿಡಿಸಿ ದೂರಾಗುವುದು ಮೂವರಿಗೂ ಕಷ್ಟವಾಗಿತ್ತು. ಹೇಗೂ ರಜೆಯಿದೆ, ಇಲ್ಲಿ ಕೆಲಸವೆಂಬ ಗೊತ್ತೂ ಇಲ್ಲ. ನಾಲ್ಕು ದಿನ ಸುಖವಾಗಿ ಕಳೆದು ಬರುವ"-ಎಂಬ ಮಿತ್ರನ ಆಮಂತ್ರಣಕ್ಕೆ ಅಚ್ಯುತ ಸೋತುಬಿಟ್ಟ.

## ೧೦ನೆಯ ಅಧ್ಯಾಯ

ಪಂಜದ ಪುಟ್ಟಯ್ಯನವರೇನೋ ಸಾಕಷ್ಟು ಅನುಕೂಲವಂತರೇ, ಅವರಿಗೆ ಸ್ವಲ್ಪ ಮಟ್ಟಿಗೆ ಅಡಿಕೆತೋಟವೂ ಇದೆ, ಜತೆಗೆ ಗದ್ದೆಗಳೂ ಇವೆ. ಅವರಿಗೆ ಇರುವವರು ಇಬ್ಬರು ಗಂಡು ಮಕ್ಕಳು; ಒಬ್ಬಳೇ ಹೆಣ್ಣು. ಆ ಹುಡುಗಿಯೇ ಆ ದಿನ ಸೀತೆಯ ಮನೆಗೆ ಬಂದ ರುಕ್ಮಿಣಿ. ಅವರ ಮನೆಯು ಸೀತೆಯ ಮನೆಗೆ ತೀರ ಸಮೀಪದಲ್ಲಿದ್ದುದರಿಂದಲೇ, ರುಕ್ಮಿಣಿ ಆಗಾಗ ಅಲ್ಲಿಗೆ ಬಂದು ಹೋಗುತ್ತಿದ್ದಳು. ಅಲ್ಲದೆ ಕೊಂಬಾರು ಕೃಷ್ಣರಾಯರು ಚೆನ್ನಾಗಿದ್ದ ಕಾಲದಲ್ಲಿ, ಅವರಿಗೂ ಪುಟ್ಟಯ್ಯನವರಿಗೂ ತುಂಬ ಬಳಕೆ, ಸ್ನೇಹಗಳೂ ಇದ್ದುವು. ಪುಟ್ಟಯ್ಯನವರ ಮನಸ್ಸಿನಲ್ಲಿ ಏನೋ ಒಂದು ಅಸ್ಪಷ್ಟವಾದ ಆಸೆ, ತಮ್ಮೆರಡು ಮನೆಗಳಲ್ಲಿ ಬಾಂಧವ್ಯವಾಗುವ ವಿಷಯದಲ್ಲಿತ್ತು. ಕೃಷ್ಣಯ್ಯನವರು ತೀರಿಕೊಂಡರೂ, ಪುಟ್ಟಯ್ಯನವರಿಗೆ ಆ ಹಂಬಲವೇನೂ ಕಡಮೆಯಾಗಲಿಲ್ಲ. ಅವರು ಸ್ನೇಹಿತರ ಮುಖಾಂತರ ಲಕ್ಷ್ಮಮ್ಮನಿಗೂ ಈ ಬಯಕೆ ತಿಳಿಸಿದ್ದರು. ಸೀತೆಗಂತು ಆ ವಿಚಾರ ತಿಳಿದೇ ಇತ್ತು. ಆದರೆ, ಅಚ್ಚುತ ಒಂದು ಕೆಲಸ ದೊರಕಿಸಿಕೊಳ್ಳುವ ತನಕ, ಯಾವ ಯೋಚನೆಗೂ ಒಲಿಯಲಾರನು ಎಂಬುದರಿಂದ ಸೀತೆಯು ಸುಮ್ಮನೆ ಕುಳಿತಿದ್ದಳು. ಅವಳಿಗೆ ಈ ಸಂಬಂಧ ಹೊಂದಿಕೆ ಆದೀತೇ ಎಂಬ ವಿಷಯದಲ್ಲಿ ಧೈರ್ಯವೂ ಇರಲಿಲ್ಲ. ಹುಡುಗಿ ದೊಡ್ಡವಳು, ಅಚ್ಚುತನಿಗೆ ಒಂದೆರಡು ವರ್ಷ ಕಡಮೆಯೋ ಏನೋ-ಎಂದು ತಿಳಿದಿತ್ತು. ಆದುದರಿಂದ ಆಕೆಗೆ ಅರೆ ಮನಸ್ಸು ಆ ವಿಷಯದಲ್ಲಿ. ಉಳಿದೆಲ್ಲ ವಿಷಯಗಳನ್ನು ಒಪ್ಪಿದರೂ, ಅಚ್ಚುತನಿಗೆ ರುಕ್ಮಿಣಿ ದೊಡ್ಡವಳಾದಾಳೇಯೋ ಎಂಬ ಅನುಮಾನ!

ಪುಟ್ಟಯ್ಯನವರ ವರ್ಚಸ್ಸು ಸುತ್ತುಮುತ್ತಲಲ್ಲಿ ಸಾಕಷ್ಟು ಬಲವಾಗಿದ್ದರೂ, ಅದು ಮಗಳ ಮದುವೆಯ ವಿಷಯದಲ್ಲಿ ಮಾತ್ರ ನೆರವಿಗೆ ಬರಲಿಲ್ಲ. ಮದುವೆಗೆ ಜಾತಕವೇ ಮುಖ್ಯವಾಗಿದ್ದ ಆ ಊರಲ್ಲಿ, ಅಪ್ರಶಸ್ತ ಜಾತಕವುಳ್ಳ ಹುಡುಗಿಯನ್ನು ಯಾರು ಕೊಂಡು ಹೋಗುವವರು? ಅದರಿಂದಾಗಿ ಮಗಳು ಬೆಳೆಯುವ ತನಕವೂ ಮನೆಯಲ್ಲಿರಿಸಿಕೊಳ್ಳಬೇಕಾಗಿ ಬಂದಿತು. ಇನ್ನಾದರೂ ಏನು ಗತಿ! ಅವರೂ ತೀರ

ನಿರಾಶೆ ತಾಳಿದರು. "ಏನೋ ಎರಡು ಮಾಣಿಗಳ ಜತೆಗೆ ಇದೂ ಒಂದು ಮಾಣಿಯೆಂದು ತಿಳಿಯುತ್ತೇನೆ. ಅವಳ ಅನ್ನ, ಊಟಕ್ಕೆ ಮನೆಯಲ್ಲಿ ಕೊರತೆಯಾಗದಲ್ಲ"-ಎನ್ನುವಷ್ಟು ಹತಾಶರಾಗಿ ಕುಳಿತರು. ಇತ್ತ ಬೆಳೆದ ಹುಡುಗಿಯೂ ತುಂಬ ವಾಚಾಳಿಯೂ ಆದ ರುಕ್ಮಿಣಿಯ ವಿಷಯದಲ್ಲಿ, ನೆರೆಕರೆಯವರಿಗೆ ಅಭಿಮಾನವೂ, ದುರ್ಮಾನವೂ ಉಂಟಾಗಿದ್ದುವು-'ಅವಳು ಬಲು ಜಾಣೆ' ಎಂದು ಸೀತೆಯಂತಹರು ಶ್ಲಾಘಿಸಿದರೆ-"ಅಬ್ಬಾ! ಆಕೆಯ ಬಾಯಿಯೇ! ಹೆಣ್ಣು ಮಕ್ಕಳು ಹಾಗೆ ಮಾತು ಕಲಿತರೆ ಹೇಗೆ? ತೀರ ಹರಕುಬಾಯ ಹುಡುಗಿ. 'ತನ್ನ ಯೋಗ್ಯತೆ ಕೆಟ್ಟುದರಿಂದ ಗಂಡ ಬರಲಿಲ್ಲ'ವೆಂಬ ಚಿಂತೆ ಇರಬೇಡವೇ"-ಎಂದು ಇನ್ನೊಂದು ಸ್ತ್ರೀವರ್ಗ ಅವಳ ವಿಷಯದಲ್ಲಿ ಅಪಪ್ರಚಾರ ಮಾಡುತ್ತಿತ್ತು. ರುಕ್ಮಿಣಿ ವಾಚಾಳಿ ಎಂಬುದು ನಿಜ. ಅವಳ ಬಾಯಿಗೆ ಸದಾ ಕೆಲಸ ಬೇಕು. ಆಕೆ ಮನೆಯಲ್ಲಿ ಸಲುಗೆಯಲ್ಲಿ ಬೆಳೆದವಳು; ಇಬ್ಬರು ಅಣ್ಣಂದಿರ ಜತೆಯಲ್ಲಿ ಮನೆಯಲ್ಲಿ ನಲಿದಾಡಿದವಳು. ಪುಟ್ಟಯ್ಯನವರು ಪ್ರೀತಿಯಿಂದ "ನೀನು ಹೆಣ್ಣು, ನೀನು ಹೆಣ್ಣು!" ಎಂದು ಅವಳ ನಾಲಿಗೆಯನ್ನು ಕತ್ತರಿಸಲೂ ಇಲ್ಲ. ಈಗ ಅದೇ ತನ್ನ ಕೊರಳಿಗೆ ಬಂದಿದೆ ಎನ್ನುತ್ತಾರೆ. ಹೀಗಾಗಿ ರುಕ್ಮಿಣಿ, ಮನೆಯಲ್ಲಿ ತನ್ನ ಮಾತುಗಾರಿಕೆ ತಡೆದು ಹಿಡಿದ್ದರೂ ಹೋದಲ್ಲಿ ತುಂಬ ಮಾತನಾಡುತ್ತಾಳೆ. ಬದುಕಿನ ವಿಷಯ ಅವಳಿಗೇನು ತಿಳಿದಿದೆ? ಎಳೆಯ ವಯಸ್ಸು! ಎಳೆಯ ಮನಸ್ಸು!

ಅವಳು ಸೀತೆಯ ಮನೆಗೆ ಬಂದಾಗ, ಮಾಲಕ್ಷ್ಮಿಯನ್ನು ಕುರಿತು ನಕಲಿ ಎಸಗಿದ್ದು, ಕಾಯಿಹಾಲು ಬಡಿಸುವಾಗ ನಡೆದ ಪ್ರಸಂಗವನ್ನು ಕಂಡಿಲ್ಲವೆ? ಅಚ್ಯುತ ಅಕ್ಕನ ಮನೆಯಿಂದ ತೆರಳಿದ ಬಳಿಕ ಆ ಇಬ್ಬರು ಹುಡುಗಿಯರು, ಪರಿಹಾಸ್ಯಕ್ಕೆ ರುಕ್ಮಿಣಿಯನ್ನು ಗುಟ್ಟಾಗಿ "ಮಾವನ ಹೆಂಡತಿ – ಅತ್ತೆ" ಎಂದು ಕರೆಯತೊಡಗಿದರು. ರುಕ್ಮಿಣಿಗೆ ಅದರಿಂದ ನಗು, ವ್ಯಥೆಗಳು ಏಕ ಕಾಲದಲ್ಲಿ ಮೂಡಿದುವು. ತನಗೆ ಮದುವೆಯಾಗದಿದ್ದುದಕ್ಕೆ ತುಂಬ ವ್ಯಥೆಯಾಯಿತು, ಅಚ್ಯುತನು ತನ್ನ ಗಂಡನಾಗಲಾರನೇ ಎಂಬ ಬಯಕೆಯಿಂದ ಹಿಗ್ಗೂ ಉಂಟಾಯಿತು. ದಿನ ಹೋದಂತೆ ಅವಳ ಮನಸ್ಸಿನ ಆ ಬಯಕೆ ಬಲವಾಯಿತು. ತಾನು ಅಲ್ಲಿಗೆ ಬಂದಾಗಲೆಲ್ಲ ಸರಸಿ ಲಕ್ಷ್ಮಿಯರೊಡನೆ ಅವರ ಮಾವನನ್ನು ಕುರಿತು ಕೇಳುವು

ದರಲ್ಲಿ ಅವಳು ಆತುರತಾಳಿದಳು. ಈ ಆತುರ ಸೀತೆಯ ಕಿವಿಗೂ ಬಿದ್ದಿತು. ಸೀತೆಯೂ ಸಹಾನುಭೂತಿ ತೋರಿದಳು. ಯಾಕೋ ರುಕ್ಮಿಣಿಯ ಮನಸ್ಸು ಅಚ್ಚುತನ ವಿಷಯವಾಗಿ ಹರಿದಿದೆ— ಎಂಬುದನ್ನು ಅವಳು ಚೆನ್ನಾಗಿ ತಿಳಿದಳು. ರುಕ್ಮಿಣಿಯ ಸರಳತೆ, ಸಹಾಯಪರತೆಗಳನ್ನು ಕಂಡು ಅವಳಿಗೂ ಅಭಿಮಾನವೇ. 'ಒಮ್ಮೆ ತಮ್ಮನ ಓದು ಮುಗಿದರೆ, ಅವನನ್ನು ಬಲವಂತ ಪಡಿಸಿಯಾದರೂ, ಈ ಸಂಬಂಧ ಹೊಂದಿಸಬೇಕು" ಎಂದು ಅವಳಿಗೂ ಮನಸ್ಸುಂಟಾಯಿತು. ಒಮ್ಮೆ ತಾವು ತಾಯಿಯ ಸಂದರ್ಶನಕ್ಕೆ ಹೋದರೆ, ಅದು ತನ್ನಿಂದಾಗದ ಕೆಲಸವಲ್ಲ ಎಂದೂ ಅರಿತಿದ್ದಳು. ಆದರೆ ತಾನು ತವರಿಗೆ ಹೊರಡಬೇಕಾದರೆ ಪತಿರಾಯರ ಅಪ್ಪಣೆ ಬೇಕಲ್ಲ. ಇತ್ತ 'ಅಚ್ಚುತನು ರಜೆಗೆ ಊರಿಗೆ ಬರುತ್ತಾನೆ; ಇಲ್ಲಿಗೂ ಬಂದಾನು'— ಎಂದು ರುಕ್ಮಿಣಿಯನ್ನು ಆಕೆ ಸಂತೈಸತೊಡಗಿದಳು. ಈ ನಡುವೆ ಪುಟ್ಟಯ್ಯನವರು ಆಕೆಗೆ ಎಲ್ಲೋ ದೂರದ ಒಂದು ಸಾಮಾನ್ಯ ನಂಟುತನ ನೋಡಿಕೊಂಡು ಬಂದಿದ್ದರು. 'ಇನ್ನು ಯಾವುದಾಗದೆ ಹೋದರೆ ಅದೇ ಗತಿ. ಹತ್ತಿಪ್ಪತ್ತು ಮುಡಿ ಅಕ್ಕಿ ವರಮಾನವಿದೆ. ಎಲ್ಲಿ ಋಣ ಬರೆದಿದೆಯೋ ಅಲ್ಲಿಗೆ ಕೊಡುವುದು. ಬೇರೆ ಗಂಡ ಸಿಗದೆಹೋದರೆ ಮಾಡಬೇಕೇನು?' ಎಂದುಕೊಂಡರು. ಆದರೆ ರುಕ್ಮಿಣಿಯ ಮುಂದೆ ಆ ಪ್ರಸ್ತಾಪ ತೆಗೆದಾಗಲೆಲ್ಲ, ಅವಳು ಅಲ್ಲಿಂದ ಮಾಯವಾಗುತ್ತಿದ್ದಳು. ನೆಟ್ಟಗೆ ಸೀತೆಯ ಮನೆಗೆ ಹೋಗಿ, "ಅಕ್ಕ, ಅಪ್ಪ ಹೀಗೆನ್ನುತ್ತಾರೆ. ನಾನು ಬದುಕುವುದಕ್ಕಿಂತ, ಸಾಯಬಹುದು. ನೀವು ನಿಮ್ಮ ತಾಯಿ ಮನೆಗೆ ಎಂದು ಹೋಗುತ್ತೀರಿ? ಯುಗಾದಿ ದಾಟಿತು; ಅವರು ಬಂದಿರಬಹುದು" ಎಂದು ಮರುಗುವಳು. "ಇಲ್ಲ ಮಗು, ನಾನು ಎಂದು ಹೊರಡಲಿಕ್ಕೆ ಬಂದೀತೆಂದು ಹೇಳುವುದು? ನಮ್ಮ ಯಜಮಾನರ ಮನಸ್ಸು ಹೇಗಿದೆಯೋ? ಆದರೂ ನೋಡುತ್ತೇನೆ. ಅವನಿಗೇನೆ ಬರಲು ಬರೆಸುತ್ತೇನೆ" ಎಂದು ಹೇಳುವಳು. ಯಾರ ಮುಖಾಂತರ ಕಾಗದ ಬರೆಯಿಸಬೇಕೆಂಬ ವಿಚಾರ ಮಾತ್ರ ಅವಳಿಗೆ ತಿಳಿಯದು. ಅವಳ ಪತಿದೇವರು ಅದನ್ನು ಮಾಡುವವರಲ್ಲವಷ್ಟೆ?

ಅಚ್ಚುತನು ಊರಿಗೆ ಬಂದಿದ್ದಾನೆಂಬ ವಾರ್ತೆಯು ಅವಳಿಗೆ ಸಿಕ್ಕಿತು. 'ಏನಾದರೊಂದು ನಿಶ್ಚಯ ಮಾಡಿಬಿಟ್ಟರೆ, ರುಕ್ಮಿಣಿಯ ಹಣೆಯ

ಬರಹ ನಿರ್ಣಯವಾದೀತಲ್ಲ. ಈಗ ಆಚೆಯೂ ಅಲ್ಲ, ಈಚೆಯೂ ಅಲ್ಲ; ನಡು ಹೊಳೆಯಲ್ಲಿ ಅವಳು ಬೀಳಬಾರದಲ್ಲ'-ಎಂದು ಸೀತೆ ಯೋಚಿಸಿ, ಒಂದು ದಿನ ಊಟಕ್ಕೆ ಕುಳಿತಾಗ ಗಂಡನೊಡನೆ "ನನಗೇಕೋ ಅಮ್ಮ ನನ್ನು ಕಾಣಬೇಕೆಂದು ಆಸೆಯಾಗಿದೆ. ಮಗುವೂ ಮಂಗಳೂರಿಂದ ಬಂದಿದೆಯಂತೆ" ಎಂದಳು.

"ಯಾವ ಮಗು? ಹುಟ್ಟುವ ಮೊದಲೇ ಮೀಸೆ ಬಂದ ನಮ್ಮ ಭಾವರಾಯರೋ?" ಎಂದರು ಉಗ್ರ ನರಸಿಂಹಯ್ಯ.

"ನಿಮಗೇನು! ಅವನ ಹೆಸರು ಕೇಳಿದರೇ ಆಗುವುದಿಲ್ಲ! ಆ ದಿನ ಅವನು ಬಂದನೆಂದು ಕೇಳಿಯೇ, ಕಡಬಕ್ಕೆ ಹೋಗಿಬಿಟ್ಟಿರಿ. ಆ ಹುಡುಗ ನೊಂದಿಗೆ ಎಂಥ ವೈರವಪ್ಪ!"

"ಅವನು ಹುಡುಗ-ಮಗು, ಅಲ್ಲವೆ?-ಇರಲಿ...ಅದೆಲ್ಲ ನಿನಗೇಕೆ? ನಾನು ಅವನ ಮುಖ ಕಾಣುವುದಿಲ್ಲವೆಂದು ಶಪಥ ಮಾಡಿಕೊಂಡಿದ್ದೇನೆ, ಸರಿ, ಮುಗಿಯಿತು; ಅವನ ತಂಟೆ ನನಗಿಲ್ಲ, ನನ್ನ ತಂಟೆ ಅವನಿಗಿಲ್ಲ. ನೀನು ಅವನ ವಿಷಯ ನನಗೆ ಹೇಳಬೇಡ."

"ಆಗಲಿ, ನಿಮಗೆ ದೇವರು ಬುದ್ಧಿ ಕೊಟ್ಟ ಹಾಗೆ ಆಗಲಿ. ನೀವು ನಿಮ್ಮ ಕುದುರೆಗೆ ಮೂರು ಕಾಲು ಎಂದರೆ, ನಾನು ಹೆಣ್ಣು ಹೆಂಗಸು, ಅದನ್ನು ನಾಲ್ಕು ಕಾಲಾಗಿ ಮಾಡಿ ತೋರಿಸಲು ಬರುತ್ತದೆಯೇ? ಈಗ ಆ ಪಂಚಾಯತಿಕೆ ಬೇಡ. ನಾನೊಂದು ಸಾರಿ ಕೊಂಬಾರಿನ ವರೆಗೆ ಹೋಗಿ ಬರಲೇ ಹೇಗೆ? ಅದನ್ನು ಹೇಳಿಬಿಡಿ. ಅವರನ್ನೆಲ್ಲ ನೋಡಿಕೊಂಡು ಬರುವ ಆಸೆಯಾಗಿದೆ ನನಗೆ" ಎಂದಳು.

"ನನಗೇನು? ಹೋಗು, ಬಿಡು" ಎಂದರು.

ಸೀತೆ ಅವರ ಕೊನೆಯ ಮಾತನ್ನು ಬಿಟ್ಟು, ಮೊದಲಿನದನ್ನೇ ಗಟ್ಟಿ ಹಿಡಿದುಕೊಂಡಳು.

"ನನಗೆ ಹೋಗಬೇಕೆಂತಾಗಿದೆ. ಆದರೆ ನಾನು ಮನೆ ಬಿಡುವಾಗ, ನೀವು ಊರಲ್ಲಿ ಇರಬೇಕಲ್ಲ ಎಂದು ಹೇಳಿದ್ದು."

"ಏನು? ತಿಂಗಳ ದಿವಸ ತಾಯಿ ಮನೆಯಲ್ಲಿ ಬಿಡಾರ ಮಾಡುತ್ತೀಯಾ? ನೀನು ಹೇಳುವ ರೀತಿ ನೋಡಿದರೆ ಹಾಗೆನಿಸುತ್ತದೆ?"

"ಇದ್ದರೆ ಎರಡು ದಿನ ಇರಬಹುದು; ಅಲ್ಲವೇ ಮೂರು ದಿನ ಇರ

ಬಹುದು. ಅಲ್ಲಿ ಬಿಡಾರ ಮಾಡಲಿಕ್ಕೆ,-ಇಲ್ಲಿ ಯಾರಿದ್ದಾರೆ? ಆದರೆ ಕೈಗೂಸು ಕಟ್ಟಿಕೊಂಡು ಹೋಗಿಬರುವುದು ಹೇಗೆ ಎಂದು ಯೋಚನೆ. ಸರಸ್ವತಿಯನ್ನೋ ಮಾಲಕ್ಷ್ಮಿಯನ್ನೋ ಕರೆದುಕೊಂಡು ಹೋಗಬೇಕಾಗುತ್ತದೆ. ಮೂರು ನಾಲ್ಕು ಹರದಾರಿ ದೂರ ನಾನೊಬ್ಬಳೇ ಮಗುವನ್ನು ಹೊತ್ತುಕೊಂಡು ಹೋಗುವುದಾದೀತೆ?"

"ಹೌದು, ಅವರನ್ನೂ ನೀನು ಹೊರಡಿಸಿದರೆ ನಾನು ಕೈ ಅಡುಗೆ ಮಾಡಿಕೊಂಡು ಒದ್ದಾಡಬೇಕೆಂದು ಕಾಣುತ್ತದೆ!"

"ಬೇಡ ಮಹಾರಾಯರೇ, ನೀವು ಅಡುಗೆ ಮನೆಗೆ ಹೋಗುವುದೇ ಬೇಡ. ಮಕ್ಕಳೆಲ್ಲರೂ ಇಲ್ಲಿಯೇ ಇರಲಿ. ನಾನು ಒಕ್ಕಲುಗಿತ್ತಿಯರ ಪೈಕಿ ಯಾರನ್ನಾದರೂ ಕರೆದುಕೊಂಡು ಹೋಗುತ್ತೇನೆ,ಆಗಬಹುದಲ್ಲ"

"ಅದೇನು? ನೀನೇ ಹೋಗಬೇಕೆಂಭ ಮರಾತ ಇಷ್ಟು? ನಿನ್ನ ಅಮ್ಮನೇ ಇಲ್ಲಿಗೆ ಬರಬಾರದೇನು?"

"ಕಳೆದ ವರ್ಷ ಅಚ್ಯುತ ಬರಲಿಲ್ಲವೇ? ಹಾಗೆ ಸಿಟ್ಟು, ಜಿದ್ದು ಇರುವುದು ನಿಮಗೆ; ಅವರಿಗೆ ಅದೇನೂ ಇಲ್ಲ."

"ಹೌದಪ್ಪ, ನಿನ್ನ ತಾಯಿ ಮನೆಯವರೆಲ್ಲ ಇಂದ್ರಲೋಕದವರು; ದೇವತೆಗಳು; ಅಪರಂಜಿಗಳು. ನಾನು ಮಾತ್ರ ಪಾತಾಳದವ; ರಾಕ್ಷಸ! ನನಗೇ ಎಲ್ಲಾ ಜಿದ್ದು, ಹಟ, ಸೇಡು, ಶಠ!"

"ಏನೊಂದು ಆಡಿದರೂ, ಒಂದಕ್ಕೆ ನಾಲ್ಕು ಮಾಡಿ ತಿರುಗಿಸುವುದರಲ್ಲಿ ಬಹಳ ಬುದ್ಧಿವಂತರು ನೀವು!"

ಸೀತೆಗೆ ಜಿಗುಪ್ಸೆ ಬಂದು, ಮಗುವನ್ನು ತೂಗಲು ಹೊರಟು ಹೋದಳು. ನರಸಿಂಹಯ್ಯನವರಿಗೆ ತುಂಬ ಅಸಂತೃಪ್ತಿ. ತಾನು ಬೇಡವೆಂದರೆ, ಸೀತೆ ಕೇಳುವಳೋ ಇಲ್ಲವೋ ಎಂಬ ಅನುಮಾನ. ಅದರಿಂದ ಅವರು ಅಂದಿನ ವಾಗ್ಯುದ್ಧವನ್ನು ಮುಂದುವರಿಸದೆ ಅಲ್ಲಿಗೇ ಬಿಟ್ಟು ಕುಳಿತರು.

ರಾತ್ರಿ ಊಟ ಮಾಡುವಾಗ-"ನೀನು ಎಂದು ಹೊರಡುವುದೆಂದು ಮೊದಲೇ ಹೇಳಿಬಿಡು. ಕೊನೆಗೆ ನಾನೆಲ್ಲಾದರೂ ಹೊರಕ್ಕೆ ಹೊರಡಲು ನಿಂತಾಗ, 'ನನಗೆ ಇವತ್ತು ಹೊರಡಬೇಕು' ಎನ್ನಬೇಡ" ಎಂದರು. ಆಕೆ ಮೆಲ್ಲಗೆ "ಹೌದು ಗಂಡಸರಿಗೇನು! ತಕ್ಷಣ ಎಲ್ಲಿಗೂ ಹೊರಡ

ಬಹುದು. ಕೆಲಸವಿರಲಿ, ಇಲ್ಲದಿರಲಿ ತಿರುಗಾಡಿಕೊಂಡಿರಬಹುದು" ಎಂದಳು. "ಹೋ! ನಾನೀಗ ಕೆಲಸವಿಲ್ಲದೆ ತಿರುಗುತ್ತೇನೆಂದು ನಿನ್ನ ಆಕ್ಷೇಪವೇ" ಎಂದರು. "ಇಲ್ಲ, ಕೆಲಸ ಹೆಚ್ಚಾಗಿ. ಏನು ಕೆಲಸವಿದೆಯೆಂದು ಆ ಪರಮಾತ್ಮನಿಗೇನೆ ಗೊತ್ತು! ಸುಗ್ಗಿ ತಿಂಗಳ ಮೇಲೆ ನೀವೆಷ್ಟು ದಿನ ಮನೆಯಲ್ಲಿದ್ದಿರಂತೆ? ಮನೆಯಲ್ಲೇ ಇದ್ದು ಭೂಮಿ. ಹಿತ್ತಿಲು ರೂಢಿ ಮಾಡಬಾರದೋ ಏನೋ"

"ಹೂಂ! ಭೂಮಿ ರೂಢಿ ಮಾಡುವುದೇ? ಏನಾಗಿದೆ ಭೂಮಿಗೆ?"

"ಏನಾಗಿದೆ ಭೂಮಿಗೆ! ಏನಾಗಲಿಲ್ಲ? ಬರುವಾಗ ನನ್ನ ಕಿವಿ ನೆಟ್ಟಗಾಗುತ್ತದೆಂದು ಅಪ್ಪಲ್ಲಿ ಹೇಳಿದ್ದಿರಬೇಕು. ಎರಡು ಎಕರೆ ಅಡಕೆ ತೋಟ ಮಾಡಬಹುದು ಎಂದದ್ದು. ಆ ಪಾಟಿ ನೀರಿನ ಒರತೆ ಉಂಟು. ಏನೇನೂ ಒದ್ದಾಟವಿಲ್ಲದೆ ತೋಟವಾಗುತ್ತಿತ್ತು. ಆದರೆ ಅಡಕೆ ತೋಟ ಕಟ್ಟಿಕೊಂಡರೆ, ಹೀಗೆ ಕ್ಯಾನುಭಾಗ, ಮುಕೆಗಾರರ ಹಾಗೆ ಊರೂರು ತಿರುಗಾಡಲು ಇರುವುದಿಲ್ಲ!"

"ಅಡಕೆ ತೋಟವಂತೆ! ಅದು ಸುಮ್ಮನೆ ಆಗುತ್ತದೆಯೇನು? ಎಂಟು, ಹತ್ತು ನೂರು ಹಣ ಸುರಿದ ಮೇಲೆ ತೋಟ! ಅಲ್ಲಿಯ ತನಕ ಬರುವ ಹತ್ತು ಮುಡಿ ಅಕ್ಕಿಯನ್ನು ಕಳೆದುಕೊಳ್ಳಬೇಕು. ಅಲ್ಲವೆ! ನಾನು ಅಷ್ಟು ಶ್ರೀಮಂತನಲ್ಲ, ಏನು ಮಾಡುವುದು? ನೀನು ಬರುವಾಗ ತಂದೆಯ ಮನೆಯಿಂದ ಇಷ್ಟು ಗಂಟು ತಂದಿದ್ದರೆ, ನಾನು ಅದನ್ನು ಕರಗಿಸಲು ಒಂದು ಕೈ ನೋಡುತ್ತಿದ್ದೆ."

"ಹಾಗಿದ್ದರೆ ಅಡಕೆತೋಟವಾಗುವ ಜಾಗವಿದು ಎಂದು ನನಗೇಕೆ ಹೇಳಬೇಕಿತ್ತು? ನಾನು ತಂದೆ ಮನೆಯಿಂದ ಕೈ ಬೀಸಿಕೊಂಡು ಬಂದವಳೆಂದು, ನಿಮಗೆ ಈಗ ಗೊತ್ತಾದುದೇನು"

ಸೀತೆಗೆ ಈ ಎಲ್ಲ ಮಾತುಗಳು, ತಾನು ತಾಯಿಮನೆಗೆ ಹೋಗುವ ಬಗ್ಗೆ ಉಂಟಾದ ಅಸಮಾಧಾನದ ಫಲಗಳೆಂದು ತಿಳಿಯಿತು. "ಬೇಡ. ನಾನು ಇಲ್ಲೇ ಇದ್ದು ಸಾಯುತ್ತೇನೆ" ಎಂದು ಯೋಚಿಸಿದಳು. ಆದರೆ ಮರುಗಳಿಗೆಗೆ ರುಕ್ಮಿಣಿಯ ನೆನಪಾಯಿತು. "ಇಲ್ಲ ಹೋಗುತ್ತೇನೆ. ನಾಳೆಯೇ ಹೊರಡುತ್ತೇನೆ. ಬಯ್ಯುವುದು, ಸೊಣಗುವುದು ಅವರ ಹಣೆಯ ಬರಹ. ಯಾವ ದಿನ ಅದು ತಪ್ಪಿದ್ದಿದೆ!" ಎಂದುಕೊಂಡಳು.

ಸೀತೆ ಮರುದಿನ ಬೆಳಗ್ಗೇನೆ "ನಾನು ಒಕ್ಕಲಗಿತ್ತಿಯನ್ನು ಬರ ಹೇಳಿದ್ದೇನೆ. ಮಧ್ಯಾಹ್ನ ಊಟ ಮಾಡಿ ಕೊಂಬಾರಿಗೆ ಹೊರಡುತ್ತೇನೆ" -ಎಂದಳು. ತಮ್ಮ ಅಜ್ಜಿಯ ಮನೆಗೆ ಹೋಗಲು ಸರಸ್ವತಿ, ಮಾಲಕ್ಷ್ಮಿಯರು ಹಾತೊರೆದು ಕುಳಿತಿದ್ದರು. ಆದರೆ ತಾಯಿ ಅವರನ್ನು ಒಳದನಿಯಲ್ಲಿ ಸಮಾಧಾನಪಡಿಸಬೇಕಾಯಿತು. "ನಾನಿಲ್ಲದಾಗ ರುಕ್ಮಿಣಿಯನ್ನು ಬರಹೇಳಿ. ಅವರ ಊಟಕ್ಕೆ ಹೊತ್ತು ಮಾಡಬೇಡಿ; ಮನೆಯಿಂದ ದೂರ ಹೋಗಬೇಡಿ; ದನಕರು ನೋಡಿಕೊಳ್ಳಿ,"-ಎಂದು ಜಾಗ್ರತೆ ಹೇಳಿದಳು. ಮಧ್ಯಾಹ್ನ ಹೊರಡುವ ಗಳಿಗೆಗೆ "ಅಕ್ಕ" ಎಂಬ ಧ್ವನಿ ಕೇಳಿಸಿತು ಹಿತ್ತಿಲಿಂದ. ಯಾರು ಎಂದರೆ.....ರುಕ್ಮಿಣಿ? "ಹೋಗಿ ಬರುತ್ತೇನೆ ಮಗು, ಕೊಂಬಾರಿಗೆ. ಇಲ್ಲಿ ಎರಡು ದಿನ ಬಂದು ನೋಡಿಕೊಂಡಿರು" ಎಂದು ಹೇಳಿ ಸೀತೆ ಹೊರಟು ಹೋಗಿಯೇ ಬಿಟ್ಟಳು. ಅವಳನ್ನು ನೋಡುತ್ತ ನಿಂತಳು ರುಕ್ಮಿಣಿ.

ರುಕ್ಮಿಣಿಗೆ ಅಪಾರ ಆನಂದವಾಯಿತು. ಆದರೆ ಸೀತೆ ಮರಳಿ ಬರಲು ನಾಲ್ಕೈದು ದಿನಗಳು ಹಿಡಿದುವು. ಆಕೆ ದಿನಕ್ಕೆರಡು ಮೂರು ಬಾರಿಯೂ ಸೀತೆಯ ಮನೆಗೆ ಬಂದು ಹೋಗುತ್ತಾಳೆ. "ಅಕ್ಕ ಬಂದಳೇ" ಎಂದು ಕೇಳುತ್ತಾಳೆ. ಅವಳ ಧನಿಯಲ್ಲಿ ಒಂದು ಬಗೆ ಭೀತಿ ತುಂಬಿಕೊಂಡಿತ್ತು. ಅವಳ ಗೆಳತಿಯರಿಗೆ ಆ ಆತುರದ ಧ್ವನಿ ಮಾತ್ರ ಅರ್ಥವಾಗದಾಯಿತು. "ಯಾಕೆ ರುಕ್ಮಿಣಿ! ಮೇಲಿಂದ ಮೇಲೆ ಅಮ್ಮನನ್ನು ಕೇಳುತ್ತೀ? ಅಮ್ಮನನ್ನು ಕೊಂಬಾರಿನಲ್ಲಿ ಹುಲಿ ಹಿಡಿಯುತ್ತದೆಯೇ? ಬರುತ್ತಾಳೆ. ಇವತ್ತೋ ನಾಳೆಗೋ" ಎಂದಳು ಮಾಲಕ್ಷ್ಮಿ. "ನಾನೆಂದಿದ್ದೆ, ಮಾವನನ್ನು ಕರೆದು ತರಬೇಕು ಎಂದು" ಎಂದಳು ಸರಸ್ವತಿ. ಮಾಲಕ್ಷ್ಮಿ ನಗುತ್ತ-"ರುಕ್ಮಿಣಿ, ಈ ಸಾರಿ ಮಾವ ಬಂದರೆ ಸೇವಿಗೆ ಪಾಯಸ ಮಾಡುವ. ಆದರೆ ಕಾಯಿಹಾಲು ಸೇವಿಗೆ ಬಡಿಸುವುದಕ್ಕೆ ನಾನು ಬರುವುದಿಲ್ಲ" ಎಂದಳು. ರುಕ್ಮಿಣಿಗೆ ನಗು ಬಂದಿತು.

"ನೀನು ಬಡಿಸದೆ ಹೋದರೆ ನಿನ್ನಮ್ಮ ಬಡಿಸಲಿ. ನಾನೇನು ಅವರ....ಅಲ್ಲ" ಎಂದಳು. ಕೊನೆಯ ಮಾತು ಬರುವುದರಲ್ಲಿ ಅವಳ ಗಂಟಲು ಹಿಡಿಯಿತು. ಆಕೆ ಮುಖವನ್ನು ತಿರುಗಿಸಿಕೊಂಡು ಆಚೆ ಹೋದಳು. ಪಾಪ! ಕಾತರತೆಯಿಂದ, ತನ್ನ ಸ್ಥಿತಿಯ ನೆನಹಿಂದ ಅವಳ ಕಣ್ಣು

ಗಳಿಂದ ನಾಲ್ಕು ಹನಿಗಳೂ ಉದುರಿದುವು. ಅಲ್ಲಿಂದ ತಮ್ಮ ಮನೆಗೆ ಹೊರಟಳು. ಆ ಕಾಡಿನ ದಾರಿಯಲ್ಲಿ ಅವಳನ್ನು ಯಾರೂ ಕಂಡು ಸಂಶೈಸುವವರಿದ್ದಿಲ್ಲ. ಹಾಗೆಯೇ ಈ ನೇತ್ರಾಭರಣ ಧರಿಸಿಕೊಂಡು, ಮನೆ ಹಿತ್ತಿಲನ್ನು ಸೇರುತ್ತ ಅದನ್ನು ಉಜ್ಜಿಕೊಂಡಳು.

ಇತ್ತ ದಿಗ್ವಿಜಯಕ್ಕೆ ಹೊರಟ ಸೀತೆ ತವರುಮನೆಯನ್ನು ಸೇರುವಾಗ ಜಾವರಾತ್ರಿ ಕಳೆದಿತ್ತು. ಹಳ್ಳಿಯ ಬಳಸಾದ ದಾರಿಯಲ್ಲಿ ದಾರಿ ತಪ್ಪಿ, ಅಲೆದು ದಣಿದು, ಅಲ್ಲಲ್ಲಿ ಕುಳಿತು ಮುಂದುವರಿದಳು. ಬಿಸಿಲಿನ ತಾಪಕ್ಕೆ ಅವಳ, ಆ ವರ್ಷದ ಕೂಸು ಸುಮ್ಮನಿದ್ದೀತೆ? ಅದು ದಣವಿನಿಂದ ಕಿರುಚುತ್ತಲೇ ಇತ್ತು. ಒಕ್ಕಲಿಗಿತ್ತಿಯ ಕೈಗೆ ಅದು ಹೋಗಲೇ ಇಲ್ಲ. ಅದರಿಂದ ತಾಯಿಯೇ ಎತ್ತಿಕೊಂಡು, ದಣಿದು, ಅಲ್ಲಲ್ಲಿ ನಿಂತು -ನಾಲ್ಕು ಹರದಾರಿಯ ದೂರವನ್ನು ಆರು ಹರದಾರಿಯಾಗಿ ಮಾಡಿಕೊಂಡು, ತನ್ನ ಕೊಂಬಾರು ಮನೆಯನ್ನು ಸೇರಿದಳು. ಅವರು ಮನೆ ಸೇರುವಾಗ ಮನೆಯ ದೀಪ ನೊಂದಿಯಾಗಿತ್ತು.

ಅವಳು ಅಂಗಳಕ್ಕೆ ಇಳಿಯುತ್ತಲೇ 'ದೂಮ, ಅಮ್ಮನಿಗೆ ನಿದ್ದೆ ಬಂದಾಯಿತೇ?' ಎಂದು ಕೂಗಿ ಕೇಳಿದಳು. ದೂಮ ಎಚ್ಚರವಾಗಿದ್ದ. ''ಯಾರು ಸಣ್ಣ ಒಡತಿಯರೇ? ಅಯ್ಯೋ, ಇದೇನು ಈ ಕತ್ತಲಲ್ಲಿ ಬಂದುಬಿಟ್ಟರಿ? ಒಡತಿ ಈಗಷ್ಟೆ ಮಲಗಿಕೊಂಡರು." ಹೀಗೆಂದು ಮನೆಯ ಸಮೀಪಕ್ಕೆ ಹೋಗಿ—"ಒಡತಿ, ನಿಮ್ಮ ಮಗಳು ಬಂದಿದ್ದಾರೆ" ಎಂದು ಕೂಗಿ ಹೇಳಿದ. ಅದು ಕಣ್ಣು ಬಾಡುವ ಸಮಯವಷ್ಟೆ-ಅಚ್ಯುತ ಲಕ್ಷ್ಮಿಯರಿಗೆ.

"ಯಾರು ಸೀತೆಯೇ?" ಎಂದು ತೀರ ಆಶ್ಚರ್ಯಗೊಂಡು ಎದ್ದಳು ಲಕ್ಷ್ಮಿ. "ಯಾರು ಅಕ್ಕನೇ" — ಎಂದು ಚಕಿತನಾಗಿ ಓಡೋಡಿ ಹೊರಕ್ಕೆ ಬಂದನು ಅಚ್ಯುತ. "ಅದೇನು ಇಷ್ಟು ಕತ್ತಲೆಮಾಡಿಕೊಂಡು ಬಂದೆ ಅಕ್ಕ" ಎಂದು ಕೇಳಿದ.

"ನಿನ್ನ ಉಪದ್ರಕ್ಕೆ" ಎಂದು ಚೇಷ್ಟೆಮಾಡಿ ಸೀತೆ ಉತ್ತರವಿತ್ತಳು. "ಈ ಬೇಸಿಗೆಯ ದಿನ ಬೀಸಿ ನಡೆಯಲಿಕ್ಕಾಗುತ್ತದೆಯೇ? ನಾನು ಈ ಆಳನ್ನು ಕರಕೊಂಡು ಬಂದರೇನಾಯಿತು? ಅವಳಿಗೂ ಇಲ್ಲಿನ ದಾರಿ ಗೊತ್ತಿರಲಿಲ್ಲ"

"ಒಳದಾರಿ ಹಿಡಿದದ್ದೇಕೆ? ರಸ್ತೆಯಲ್ಲಿ ನೆಟ್ಟಗೆ ಬರುತಿತ್ತಲ್ಲ; ಒಳ ದಾರಿ ಸುಲಭ ಎಂಬುದು ಸುಳ್ಳೇ" ಎಂದನು ಅಚ್ಯುತ.

ಸರಿ; ಅವಳು ಕಾಲು ತೊಳೆದುಕೊಂಡು ಕುಳಿತಳು. ಮಗುವು ನಿದ್ರೆಯಿಂದ ತೂಕಡಿಸುತ್ತಿತ್ತು. ಹಾಸುಗೆ ಬಿಡಿಸಿ ಅದನ್ನು ಅಲ್ಲಿ ಮಲಗಿಸಿದಳು. ತಾಯಿ ಅವಸರ, ಅವಸರದಿಂದ ಅಡುಗೆ ಮಾಡತೊಡಗಿದಳು. ಚಾವಡಿಯ ಮೂಲೆಯಲ್ಲಿ ದಣಿದು ಬಂದ ಒಕ್ಕಲಗಿತ್ತಿ, ಕುಳಿತಲ್ಲಿಂದಲೇ ಗೊರಕೆ ಹೊಡೆಯತೊಡಗಿದಳು. ಅಚ್ಯುತನೊಬ್ಬನೇ ಅಕ್ಕನೊಂದಿಗೆ ಮಾತಾಡುತ್ತ ಕುಳಿತ. ಕೊನೆಗೆ ಇಬ್ಬರೂ ಅಡುಗೆಮನೆಯ ತನಕ ಹೋಗಿ, ಕೆಲಸಮಾಡುತ್ತಿರುವ ತಾಯಿಯ ಬಳಿಯಲ್ಲಿ ಸ್ಥಾಪಿತರಾದರು.

"ಅಕ್ಕ, ನಿಜಕ್ಕೂ ಹೇಳು; ನೀನು ಹೇಳದೆ ಓಡಿಬಂದದ್ದೇ? ಅಲ್ಲವೆ ಭಾವನ ಹತ್ತಿರ ಕೇಳಿ ಬಂದದ್ದೇ" ಎಂದು ಅಚ್ಯುತ ಪರಿಹಾಸ್ಯಮಾಡಿದ.

"ಹಾಗೂ ಸಮ, ಹೀಗೂ ಸಮ" ಎಂದು ನಕ್ಕಳು ಸೀತೆ. "ಅವರಿಗೆ ನಾನು ಇಲ್ಲಿ ಬರುವುದು ಅಷ್ಟೊಂದು ಮನಸ್ಸಿಗೆ ಬರಲಿಲ್ಲ. ಆದರೆ ನನ್ನ ಬಾಯ ಜೋರಿಗೆ ಸುಮ್ಮನಾದರು. ಏನು ಬಂದರೆ? ಅಲ್ಲಿ ಅಡುಗೆಗೆ ಮಕ್ಕಳಿದ್ದಾವೆ. ಹಾಗೆ ರುಕ್ಮಿಣಿಯನ್ನು ಬರಲಿಕ್ಕೆ ಹೇಳಿದ್ದೇನೆ. ಇವರಿಗೆ ಅಪ್ಪ ಅಬ್ಬೆ ಯಾರೂ ಇಲ್ಲವೆಂದು, ನಾನು ಇದ್ದವರನ್ನು ಮರೆಯಬೇಕೇನು?" ಎಂದಳು.

ತಾಯಿಯ ಮುಂದೆ, ತಾವು ಹಿಂದೆ ತವರನ್ನು ತೊಲಗಿದ ದಿನದಿಂದ ಆ ಗಳಿಗೆಯ ತನಕ ನಡೆದ, ಯಾವತ್ತು ಸುಖದುಃಖಗಳ ವರದಿಯಾಯಿತು. ಹೊಸಮಠದ ಬಿಡಾರದ ದಿವ್ಯ ಕಥನವಾಯಿತು. ಅಲ್ಲಿಂದ ಗಂಡನನ್ನು ಎಬ್ಬಿಸಿದ ಬಗೆಯನ್ನು ಬಲು ಹಿಗ್ಗಿನಿಂದ ಹೇಳಿದಳು. "ಹಾಗೀಗ ವರ್ಷಕ್ಕೆ ನೂರು, ನೂರ ಇಪ್ಪತ್ತುರೂಪಾಯಿ, ಬಡ್ಡಿಯಿಂದ ಹಣ ಬರುತ್ತದೆ" ಎಂದಳು. ನಡುವೆ, ತನ್ನ ನಾಲ್ಕನೆಯ ಕೂಸು ಪುಟ್ಟಿ ತೀರಿಕೊಂಡ ಕತೆಯೂ ನೆನಪಾಗಿ ತುಂಬ ರೋದಿಸಿದಳು. ಅದನ್ನು ಕೇಳಿ ತಾಯಿಯೂ ಅತ್ತಳು. "ನನ್ನನ್ನು ಬರಹೇಳ ಬೇಡವಿತ್ತೇ?" — ಎಂದಳು ಅವಳು. ಮೊಮ್ಮಗಳನ್ನು, ಸಾಯುವ ಕಾಲದಲ್ಲೂ ಕಾಣದಾದುದಕ್ಕೆ ಅವಳೂ ತುಂಬ ವ್ಯಥಿಸಿದಳು.

ಮೆಲ್ಲಗೆ ಊಟವಾಯಿತು. ಒಕ್ಕಲಗಿತ್ತಿಗೂ ಊಟ ಹಾಕಿ, ತಾವು ಮಲಗಿಕೊಳ್ಳಲು ಅಣಿಮಾಡಿದರು. "ಮಾಣಿ, ನೀನೆಂದು ಬಂದೆ?" ಎಂದು ಸೀತೆ ಕೇಳಿದಳು. ಬಂದೆಷ್ಟು ದಿನವಾಯಿತು ಎಂಬ ಮಾತಿಗೆ ಆತ "ಹದಿನೈದು ದಿನ ಕಳೆಯಿತು" ಎಂದನು. "ಏ ಕಳ್ಳ! ಹದಿನೈದು ದಿನವಾದರೂ ನಮ್ಮ ಮನೆಗೆ ಬರಲೇ ಇಲ್ಲವಲ್ಲ" ಎಂದಳು ಸೀತೆ.

"ಹೌದು; ನಾನು ಬಂದು, ನಿನ್ನ ಗಂಡನು ತಿರುಗಿ ವನವಾಸಕ್ಕೆ ಹೊರಡಬಾರದಲ್ಲ" ಎಂದನು. ಸೀತೆ ನಕ್ಕಳು. ಆ ವಿಚಾರ ಅಚ್ಯುತನಿಗೆ ತಿಳಿದಿಲ್ಲವೆಂದೇ ಅವಳು ಗ್ರಹಿಸಿದ್ದಳು. "ನಿನಗೆ ಯಾರು ಹೇಳಿದ್ದು?" ಎಂದು ಕೇಳಿದಳು. "ಆ ದಿನವೇ ಅದು ತಿಳಿದಿತ್ತು, ಸರಸಿಯ ಬಾಯಿಯಿಂದ ಬಂದಿತ್ತು" ಎಂದನು.

"ಹಾಗೆ ಹೋದರೆ ಅವರಿಗೇನೆ ಕಡಮೆ. ನಿನಗೇನು-ನಿನ್ನ ಅಕ್ಕನ ಮನೆಗೆ ಬರಲು ದಾಕ್ಷಿಣ್ಯವೇ? ನೀನು ಬರಬಹುದಿತ್ತಲ್ಲ" ಎಂದಳು.

ಮಾತನಾಡುತ್ತ, ಆಡುತ್ತ ಸೀತೆಗೆ ನಿದ್ದೆಯೂ ಬಂದಿತು. ಇಲ್ಲದಿದ್ದರೆ ತನ್ನ ರಾಮಭಾರವನ್ನು ಆಗಲೇ ಮುಗಿಸಿಬಿಡುತ್ತಿದ್ದಳೋ ಏನೋ! ಎಲ್ಲರು ಮಲಗಿ ನಿದ್ದೆಹೋದರು.

ಬೆಳಕು ಹರಿಯಲು ದಿನದ ಕತೆಗಳು ತಿರುಗಿ ತೊಡಗಿದುವು. ಸೀತೆ, ತಾಯಿ ಮುಸುರೆ ಹೊರುವುದನ್ನು ಕಂಡು, ಅವಳಿಗೆ ಸಹಾಯವಾದಳು. ಅಚ್ಯುತನಿಗೆ ಕೇಳಿಸುವಂತೆ "ಅಮ್ಮ ಇನ್ನು ನೀನೇ ಈ ಕೆಲಸ ಮಾಡುತ್ತಿರಬೇಡ. ಎಷ್ಟು ದಿನ ನೀನು ಹೀಗೆ ದಣಿಯುವುದಂತೆ. ತರಬಾರದೇ ಮನೆಗೊಬ್ಬಳು ಸೊಸೆಯನ್ನು?" ಎಂದಳು.

ಅಚ್ಯುತನಿಗೆ ಆ ಮಾತು ಕೇಳಿ ನಗು ಬಂದಿತು. ಅವನೆಂದನು: "ಅಕ್ಕ, ನಾಳೆ ನಾಡಿದ್ದು ಟಪ್ಪಾಲಲ್ಲಿ ಸೊಸೆ ಬಂದಾಳು. ನಾನು ಒಂದಕ್ಕೆ ಬರೆದು ಹಾಕಿದ್ದೇನೆ" ಎಂದು ಅಣಕಿಸಿದ.

"ಅಮ್ಮ, ನೀನು ಈ ವರ್ಷ ಮಾಣಿಗೆ ಲಗ್ನಮಾಡಿಸಬೇಕು. ಈಗ ಪ್ರಾಯವಾದದ್ದು ಸಾಕು. ಮೊದಲಾದರೆ ಮಗುವಾಗಿದ್ದ. ಇನ್ನೇನು? ಕೂದಲು ಬೆಳ್ಳಗಾದ ಬಳಿಕ ಮದುವೆಯೇ? ಈ ವರ್ಷ ಇಲ್ಲಿ ಲಗ್ನವಾದರೆ, ಮುಂದಿನ ವರ್ಷ ದೇವರು ನಡೆಯಿಸಿದರೆ, ನಮ್ಮ ಮಾಲಕ್ಷ್ಮಿಗೊಂದು ಒಳ್ಳೆಯ ಗಂಡನನ್ನು ತಂದು, ಲಗ್ನಮಾಡಬೇಕೆಂದಿದೆ."

"ಹಾಗಾದರೆ ನನಗೆ ಎರಡೆರಡು ಪಾಯಸದ ಊಟ ಉಂಟು" ಎಂದ ಅಚ್ಯುತ.

"ಒಂದು ನೀನು ಕೊಡುವ ಊಟವಲ್ಲವೇ"

"ನಾನೇನು ಕೊಡುವುದು? ನನ್ನ ಮದುವೆಯಾದರೂ ಮಾವನ ಮನೆಯಲ್ಲಿ ಮಾಡುವ ಊಟವಲ್ಲವೇ?" ಎಂದ ಅಚ್ಯುತ.

ಆ ದಿನ ಮಧ್ಯಾಹ್ನ ಊಟವಾಗಿ, ಅವರು ಹರಟೆಗೆ ಕುಳಿತಾಗ, ಸೀತೆ ಮುಚ್ಚುಮರೆಯಿಲ್ಲದೆ ಅರೆತಾಸಿನ ತನಕ ಮದುವೆಯನ್ನು ಕುರಿತು ಉಪನ್ಯಾಸ ಮಾಡಿದಳು. ತಾನು ತಂದ ರಾಯಭಾರದ ಹೊರೆಯನ್ನು ತಾಯಿಯ ಮುಂದೆ ತೋಡಿಕೊಂಡಳು. ಅಚ್ಯುತ ಮಾತುಕೇಳಿ ಎದ್ದು ಹೋಗದಂತೆ, ಎಚ್ಚರದಿಂದ ತಾನು ಹೊಸ್ತಿಲಲ್ಲಿ ಕುಳಿತುಕೊಂಡಳು. "ನನಗೆ ಹೊರಗೆ ಹೋಗಬೇಕಾಗಿದೆ" ಎಂದ ಅಚ್ಯುತ. "ಬೇಡ, ಕೇಳಲಾಗದೆ ಹೋದರೆ ಕಿವಿ ಮುಚ್ಚಿಕೊಂಡು ಇಲ್ಲೇ ಕುಳಿತಿರು" ಎಂದು ಸೀತೆ ಅಣಕಿಸಿದಳು.

ತಾಯ ಮುಂದೆ ರುಕ್ಮಿಣಿಯ ಗುಣವನ್ನು ಬಣ್ಣಿಸಿ, ಆಕೆಗೆ ಬಾಯಿ ದಣಿಯಲಿಲ್ಲ. "ಅಮ್ಮ, ಈ ಕಳ್ಳನೂ ಅವಳನ್ನು ಕಂಡಿದ್ದಾನೆ. ಊರವರು ಹೇಳುವಂತೆ ಅವಳು ಎಮ್ಮೆಯೂ ಅಲ್ಲ, ಕೋಣವೂ ಅಲ್ಲ; ಸಮನಾಗಿದ್ದಾಳೆ ನೋಡುವುದಕ್ಕೆ. ಮನೆಯ ಕೆಲಸವೆಲ್ಲ ಬರುತ್ತದೆ. ಅವಳೇಯಾಕಾಗಬಾರದು?

ತಾಯಿಯೊಮ್ಮೆ "ಏನೋ ಮಗು, ಅದೇ ನಂಟಸ್ತಿಕೆ ಅವರ ಮನಸ್ಸಿನಲ್ಲೂ ಇತ್ತು. ಆದರೂ ಯಾರೋ ಒಬ್ಬರು ಬಂದು-'ಅದು ಮಹಾಬಾಯಿಯ ಹುಡುಗಿ; ಅವಳು ಹುಟ್ಟಿದ ನಕ್ಷತ್ರವೂ ಕೆಟ್ಟದ್ದು — ಹುಡುಗನ ತಂದೆತಾಯಿಗಳಿಗೆ ಒಳ್ಳೆಯದಲ್ಲ' ಎಂದರು. ಅದಕ್ಕೆ ಸೀತೆ "ಹಾಗೆ ಬಾಯಿ ನನಗಿಲ್ಲವೇ. ಪಾಪ! ಅವಳಿಗೆ ತುಂಬ ಮಾತನಾಡಬೇಕು, ನಿಜ. ಆದರೆ ಒಂದೇ ಒಂದು ತಪ್ಪಿ ಆಡಿದ್ದನ್ನು ನಾನು ಕೇಳಲಿಲ್ಲ. ಇನ್ನು ನಕ್ಷತ್ರದ ಸುದ್ದಿಯೇಕೆ? ಅಪ್ಪಯ್ಯ ತೀರಿಕೊಂಡಾಯಿತಲ್ಲ. ಮದುವೆಯಾಗಿದ್ದರೂ ತೀರಿಕೊಳ್ಳುತ್ತಿದ್ದರು. ಅದು ಹಾಗೆ, ಹೀಗೆ ಎಂದು ಹೇಳಬರುತ್ತದೆಯೇ? ನಾನು ಜಾತಕ ತೋರಿಸಿ ನೋಡಿದ್ದೇನೆ. ಒಳ್ಳೆಯದಾಗಿ ಕೂಡುತ್ತದೆ. ಒಂದು ದೋಷವಿದೆ. ನಾನು ಇಲ್ಲವೆನ್ನುವುದಿಲ್ಲ. ಅವಳ

ಪ್ರಾಯ ಸ್ವಲ್ಪ ಕಡಮೆ ಆಗಿದ್ದರೆ ಆಗುತ್ತಿತ್ತು. ಹಾಗೆ ಒಂದು ಎಳೆಯ ಕೂಸುಕಟ್ಟಿಕೊಂಡು ಅವನ ಸಂಸಾರಹೋದೀತೆ? ನಿನ್ನದು ಹೋದೀತೆ? ನೋಡುವ. ನಾಳೆ ಅವನಿಗೆ ಮಾಸ್ತರಿಕೆಯಾಗಿ, ಯಾವುದಾದರೂ ಒಂದು ಊರಿಗೆ ವರ್ಗವಾದರೆ, ಇವನೇ ಅವಳಿಗೆ ಅಡುಗೆ ಮಾಡಿ, ಬಡಿಸುವ ಸ್ಥಿತಿ ಬರಬಾರದಲ್ಲ"

"ಅದಕ್ಕೇನು? ಒಂದು ಒಳ್ಳೆಯ ಅಡುಗೆಯ ಹೆಂಗಸನ್ನು, ಹಾಗೆ ಪರ ಊರಿಗೆ ವರ್ಗವಾದ ಮೇಲೆ ಹುಡುಕಿ, ಮದುವೆಯಾದರೆ ಸರಿ" ಎಂದ ಅಚ್ಯುತ.

"ನಿನ್ನ ಮಾತಿನ ಪಟಾಕಿ ಸಾಕು. ನಾನು ಹೇಳಿದ್ದನ್ನು ಕೇಳು. ಅಮ್ಮ ಬೇಡ ಅನ್ನಲಿಕ್ಕಿಲ್ಲ. ಈ ವರ್ಷ ಮದುವೆಗೆ ಲಗ್ನಗಳೂ ತುಂಬ ಇವೆ. ಆದಷ್ಟು ಸಣ್ಣ ಖರ್ಚಿನಲ್ಲಿ ಒಂದು ಲಗ್ನವಾಗಲಿ. ಹುಡುಗಿಯ ಅದೃಷ್ಟದಿಂದ ಒಂದು ಒಳ್ಳೆಯ ಚಾಕರಿಯೂ ನಿನಗೆ ಸಿಕ್ಕೀತು." ಎಂದಳು ಸೀತೆ.

ಅಚ್ಯುತ ಅಕ್ಕನನ್ನು ಕಂಡು—"ಅಕ್ಕ, ಏಳು, ಅಲ್ಲಿಂದೇಳು; ನೀನು ಕುಳಿತಲ್ಲಿಯೇ ಒಂದು ಚೇಳಿದೆ; ಲಕ್ಷ್ಮಿಚೇಳು" ಎಂದ. "ಎಲ್ಲಿ ಎಲ್ಲಿ?" ಎಂದು ಅವಳು ಗಾಬರಿಗೊಂಡು ಬಾಗಿಲಿಂದೆದ್ದಳು. "ಚೇಳು ಕಂಡರೆ ಒಳ್ಳೆಯ ಶಕುನ" ಎಂದಾಡುವಾಗಲೇ, ಅಚ್ಯುತ ಹೊಸ್ತಿಲು ದಾಟಿ ಕೋಣೆಯಿಂದ ಹೊರಕ್ಕೆ ಹೋಗಿಬಿಟ್ಟ.

"ಏ ಕಳ್ಳನೇ! ನನ್ನನ್ನೆಬ್ಬಿಸಲು ಈ ಉಪಾಯ ಹೂಡಿದನೇ!" ಎಂದು ನಕ್ಕಳು ಸೀತೆ. ಮುಂದೆ ತಾಯಿ ಮಗಳು ಸೇರಿ ಬಲು ಹೊತ್ತು ಯೋಚಿಸಿದರು. ತಾಯ ಮನಸ್ಸಿಗೆ ಮಗಳ ಒಗ್ಗರಣೆ ಚೆನ್ನಾಗಿ ಹಿಡಿಯಿತು. ಆದರೆ ಅಚ್ಯುತ ಒಲಿಯಬೇಕಲ್ಲ. ಬಲವಂತದಿಂದ ಈ ಕೆಲಸ ಮಾಡಿದರೆ, ಚಂದವಲ್ಲವೆಂದು ಅವರು ತಿಳಿದಿಲ್ಲವೇ?

ಆ ರಾತ್ರಿ ಅವರು ಅಚ್ಯುತನ ಹಾದಿಯನ್ನು ಕಾದು, ಕಾದು ದಣಿದರು. "ಹುಚ್ಚ ಓಡಿಯೇ ಬಿಟ್ಟನೇ? ಕಡಬಕ್ಕೆ ಹೋಗಿರಬೇಕು" ಎಂದುಕೊಂಡಳು ತಾಯಿ.

"ಪ್ರಾಯಶಃ ಅವನಿಗೆ ನಮ್ಮ ಮಾತು ಕೇಳಿ ಬೇಸರವಾಯಿತೋ ಏನೋ" ಎಂದಳು ಸೀತೆ.

"ಇರಲಾರದು; ಅವನು ರಜೆಗೆ ಬಂದರೆ, ಹಾಗೇ ನಾಲ್ಕು ದಿನ

ಕ್ಕೊಂದು ಸಾರಿ, ಕಡಬಕ್ಕೆ ಹೋಗುತ್ತಿರುತ್ತಾನೆ. ಅಲ್ಲೇನೋ ಒಂದು ಕ್ಲಬ್ಬಂತೆ. ಸಭೆ ಮಾಡುವುದಂತೆ. ಅಲ್ಲಿಗೆ ಹೋಗಿರಬೇಕು. ನನಗೆ ಒಂದು ಕಾಣುತ್ತದೆ ಸೀತೆ, ಅವನ ಮಾಸ್ತರರು ಅಲ್ಲಿದ್ದಾರೆ. ನಾರಾಯಣರಾಯರು, ಬಹಳ ಒಳ್ಳೆಯವರು. ಅವನು ಮಂಗಳೂರಿಗೆ ಹೋದಾಗ ವಾರಕ್ಕೊಂದು ಸಾರಿ ಇಲ್ಲಿಗೆ ಬಂದು--'ಅಮ್ಮ ಹ್ಯಾಗಿದ್ದೀರಿ'? ಎಂದು ಕೇಳಿಕೊಂಡು ಹೋಗುತ್ತಿದ್ದರು. ಅವರ ಮಾತು ಅಚ್ಯುತನಿಗೆ ಹಿಡಿಯುತ್ತದೆ. ಅವರಿಂದ ಹೇಳಿಸುವ. ಈಗ ಇದೇ ಹುಡುಗಿ ಅಲ್ಲವಾದರೂ ಬೇರೊಂದೇ ನಂಟಸ್ಥಿಕೆ ಆಗದೆ ಉಪಾಯವಿದೆಯೇ?"

"ಇದೇ ಹುಡುಗಿ ಅಲ್ಲವೆಂದರೇನು?" ಎಂದಳು ಸೀತೆ!

"ಅದು ಋಣಾನುಬಂಧ; ಹೀಗೆಯೇ ಆದೀತೆಂದು ನಾವು ಹೇಗೆ ಹೇಳುವುದು, ಮಗು. ಲಗ್ನ ಎಂಬುದು ಅಂಥದಲ್ಲವೆ-ಅದು ಬ್ರಹ್ಮನ ಆಟ. ಮನುಷ್ಯರದ್ದಲ್ಲ" ಎಂದಳು.

ಮರುದಿನವೂ ತಾಯಿ, ಮಗಳು ಅಚ್ಯುತನಿಗಾಗಿ ಕಾದು ಕುಳಿತರು. ಈ ಸಂಗತಿ ತೀರ್ಮಾನವಾಗುವ ತನಕ ಸೀತೆಗೆ ಸಮಾಧಾನವೆಲ್ಲಿಂದ ಬಂದೀತು? ಆದ್ದರಿಂದ "ಅಮ್ಮ! ನಾನು ಮನೆಯಲ್ಲಿದ್ದೇನಲ್ಲ. ನೀನು ಇವತ್ತು ಕಡಬಕ್ಕೆ ಹೋದರೂ ಚಿಂತೆಯಿಲ್ಲ" ಎಂದಳು. ಆ ಮಧ್ಯಾಹ್ನ ಅವಳು ಹಾಗೆಯೇ ಮಾಡುವುದೆಂದು ನಿರ್ಣಯವಾಯಿತು.

ಅಚ್ಯುತ ಮುಂಚಿನ ದಿವಸ ಮಧ್ಯಾಹ್ನ ಹೊರಟುದಾದರೂ ಅಲ್ಲಿಗೇನೆ. ಅವನಿಗಾದರೂ ತನ್ನ ಮೇಲೆ ಬಂದಿರುವ ಈ ಸು—ಅಪಾಯಕ್ಕೆ ಏನು ಮಾಡಬೇಕೆಂದು ದಾರಿ ತಿಳಿಯದಾಗಿತ್ತು. ಬಿಸಿಲಿನ ದಾರಿಯಲ್ಲಿ ಏಗುತ್ತ ಬರುತ್ತಿರಲು ಅವನ ಮನಸ್ಸಿಗೊಂದೊಂದು ಬಗೆಯ ಯೋಚನೆಗಳು! ತಾನು ಮದುವೆಗೇಕೆ ಅವಸರಮಾಡಬೇಕು? ತನಗೇನು ವಯಸ್ಸು ಸಲ್ಲುತ್ತ ಬಂದಿದೆಯೇ? ಒಂದು ಕೆಲಸವಾದರೂ ಸಿಕ್ಕಿ, ಅದು ಭದ್ರವಾಗದೆ, ಸಂಸಾರಕ್ಕೆ ಸಿಲುಕಿಕೊಂಡರೆ ಹೇಗಾದೀತು ಎಂದು ಯೋಚಿಸಿದನು. ಮರುಗಳಿಗೆಗೆ ಅಕ್ಕ ಹೇಳಿದ ವಾದಗಳು ಮುಂದುಗಡೆ ಕಾಣಿಸಿದುವು. ತಾಯೊಬ್ಬಳೇ ಸಂಸಾರದ ಹೊರೆಯನ್ನೂ ಮನೆ ಬೇಸಾಯದ ಭಾರವನ್ನೂ ಹೊತ್ತು ಸಾಯಬೇಕೆ? ಮನೆಗೆಲಸ ನಿರ್ವಹಿಸುವವರು ಒಬ್ಬರಿದ್ದರೆ, ಹೊರಗಿನ ಕೆಲಸ ಅವಳು ನೋಡಿಕೊಳ್ಳ

ಬಹುದು; ಎಲ್ಲವೂ ಅವಳಿಂದಾದೀತೆ? ಹಾಗಿರಲು ಮನೆಗೆ ಇನ್ನಾರು ಬಂದು ನೆರವಾಗಬೇಕು? — ಎಂಬ ಹಲವಾರು ಯೋಚನೆಗಳು ಮೂಡಿದುವು.

ಅಲ್ಲಿಂದ ಮುಂದೆ, ಮನಸ್ಸು ರುಕ್ಮಿಣಿಯ ವಿಚಾರವಾಗಿ ಹರಿಯಿತು. ಹಿಂದೆ ಅಕ್ಕನ ಮನೆಯಲ್ಲಿ, ಅಡಿಗೆ ಕೋಣೆಯಲ್ಲಿ ಬಡಿಸುವಾಗ ನೋಡಿದ ಆ ಹುಡುಗಿಯನ್ನು ನೆನೆಯಲೆತ್ನಿಸಿದನು. ನೋಡಿದ್ದರೂ ನೆನಪಿಗೆ ಬರಲಾರದು. ಅಷ್ಟು ಕುರೂಪಿಯೆನಿಸಲಿಲ್ಲ. ಅಲ್ಲದೆ ವಯಸ್ಸು ಇವರೆನ್ನುವಷ್ಟು ಹೆಚ್ಚಿಗೆಯೂ ಅನಿಸಿರಲಿಲ್ಲ. ತುಂಬಾ ಚೆಲುವೆಯಾಗಿದ್ದರೆ ಆಗುತಿತ್ತು ಎಂದು ಮನಸ್ಸು ಹೇಳುತಿತ್ತು. ಆದರೆ 'ಸಿನೆಮಾ ತಾರೆಯರೆಲ್ಲ ಮುಂಬಯಿಯಲ್ಲಿ ನೆಲೆಸಿದ್ದಾರೆ; ಕೊಂಬಾರಿನ ಅಡುಗೆಗೆ ಬಂದಾರೇ?' ಎಂದೂ ಅನಿಸಿತು. ಆದರೆ ಒಂದು ಅನುಮಾನವು ಮಾತ್ರ ಉಳಿದುಬಿಟ್ಟಿತು. ಆಕೆಗೆ ಓದುಬರಹ ಗೊತ್ತಿರಬಹುದೇ? ಅಕ್ಕನನ್ನು ಕೇಳಿಯೇ ಬಿಡಬಹುದಿತ್ತಲ್ಲ. ತನ್ನಷ್ಟು ಓದು ಬಾರದಿದ್ದರೂ, ಒಂದು ಕಾಗದ ಬರೆಯಲು ತಿಳಿದಿರಬೇಡವೇ? ತನಗೆ ವರ್ಗವಾಗಿ ದೂರ ಹೋದಾಗ 'ಮನೆಯವರೆಲ್ಲ ಬದುಕಿದ್ದೇವೆ' ಎಂಬ ಸಮಾಚಾರವನ್ನಾದರೂ ತಿಳಿಸುವವರು ಬರಬೇಡವೇ ಎನಿಸಿತು. ತನ್ನಿಂದ ಬಗೆಹರಿಯದ ಈ ಸಂಗತಿಯನ್ನು ನಾರಾಯಣ ಮಾಸ್ತರರಿಂದ ಕೇಳಿ ತಿಳಿದು ತೀರ್ಮಾನಿಸುವೆನೆಂದು ಮುಂದುವರಿದ. ಅಕ್ಕ ತನ್ನ ಕೊರಳು ಹಿಚುಕಿಯಾದರೂ, ಒಪ್ಪಿಗೆ ಗಳಿಸುವ ದಿಟ್ಟೆಯೆಂದು ಅವನು ಬಲ್ಲ. ಆದರೂ ತಾನು ವಿದ್ಯಾವಂತ; ತನ್ನದೇ ಆದ ಒಂದು ನಿರ್ಧಾರಕ್ಕೆ ಬರದೇ ಹೋದರೆ ಹೇಗೆ-- ಎಂದು ಅವನ ಮನಸ್ಸು ಹೇಳಿತು.

ಗುರುಗಳಿಗೆ ರಜಾ ಸಮಯ. ಮಧ್ಯಾಹ್ನ ಮಲಗಿ ಗೊರಕೆ ಹೊಡೆದರೆ, ತಮ್ಮ ಇಂಟರ್‌ನೇಶನಲ್ ಕ್ಲಬ್ ತೆರೆಯುವ ಗಳಿಗೆಗೇನೆ ಅವರಿಗೆ ಎಚ್ಚರ. ಆ ದಿನ ಅವರು ನಿದ್ದೆಯಿಂದ ಏಳುವ ಸಮಯಕ್ಕೇನೆ ಅವರಿಗೆ ಅಚ್ಯುತನ ಮುಖದರ್ಶನವಾಯಿತು. "ಏನು ಅಚ್ಯುತ, ಬೆಳಗ್ಗೆ ಬಾರದೆ ಒಳ್ಳೆಯ ಉರಿಬಿಸಿಲಲ್ಲಿ ಬಂದುಬಿಟ್ಟೆ? ನಿನಗೆ ಹೇಳಿ ಕಳಿಸಬೇಕೆಂದು ತೋರಿತ್ತು. ಅಂದರೆ ನೋಡು! ಬೆಳ್ತಂಗಡಿ ಶಾಲೆಯಲ್ಲಿ ಒಂದು ಜಾಗ ಖಾಲಿಯಿದೆಯಂತೆ. ನಮ್ಮ ಮಂಜಯ್ಯ ಮಾಸ್ತರರು ರಿಟೈಯರ್ ಆದ

ಸ್ಥಾನವಲ್ಲದೆ, ಅಲ್ಲಿಗೇ ಇನ್ನೊಂದು ಹೆಚ್ಚಿನ ಕೈ ಬೇಕಾಗಬಹುದು. ನೀನು ಒಂದು ಸಾರಿ ಡಿಪ್ಯುಟಿ ಇನ್ಸ್‌ಪೆಕ್ಟರ್ ಸದಾನಂದ ರಾಯರನ್ನು ಕಂಡು, ಅವರ ಮೂಲಕ ಒಂದು ಅರ್ಜಿ ದಬಾಯಿಸು. ಒಂದು ಸಾರಿ ಬೋರ್ಡು ಕೆಲಸಕ್ಕೆ ಸೇರಿದರೆ, ಮುಂದೆ ನಮ್ಮ ಭಾಗವತ ಸಂಕಪ್ಪ ಗೌಡರ ಗಡು ಬರುತ್ತದೆ. ಏನು! ಇನ್ನು ಬರಿಯ ಆರು ತಿಂಗಳಿದೆ. ಆಗ ಇಲ್ಲಿಗೆ ವರ್ಗ ಮಾಡಿಸಿಕೊಳ್ಳಬಹುದು" ಎಂದರು. ಅಚ್ಯುತನ ಕಿವಿ ನೆಟ್ಟಗಾಯಿತು. "ಹಾಗಾದರೆ ನಾನು ನೆಟ್ಟಗೆ ಪುತ್ತೂರಿಗೆ ಹೋಗಿ, ಅಲ್ಲಿಂದ ಮಂಗಳೂರಿಗೆ ಹೋಗಿ, ಬೋರ್ಡು ಪ್ರೆಸಿಡೆಂಟರನ್ನು ಕಾಣುತ್ತೇನೆ. ಆದರೆ ಎಷ್ಟೆಲ್ಲ ಅರ್ಜಿಗಳು ಬಂದಿರುತ್ತವೆಯೋ" ಎಂದು ಅನುಮಾನಿಸಿ ನುಡಿದ. "ಅರ್ಜಿಗಳೆಷ್ಟೇ ಇರಲಿ; ಡಿಪ್ಯುಟಿ ಇನ್ಸ್‌ಪೆಕ್ಟರರ ಮಾತು ಮೀರಿ ಕೆಲಸವಾಗಲಿಕ್ಕಿಲ್ಲ. ಹೋಗು, ಇನ್ನೂ ಸುಬ್ರಮಣ್ಯದಿಂದ ಬಸ್ಸು ಬಂದಿಲ್ಲ. ನಾಳೆ ಬೆಳಿಗ್ಗೇನೆ ಮಂಗಳೂರಿಗೆ ಹೋಗಿ ಬಾ" ಎಂದರು. ಮುಂದೆ ಕೊತ್ತಂಬರಿ ಕಷಾಯದ ಸೇವನೆಯಾಯಿತು. "ಇನ್ನು ನಮ್ಮ ಇಂಟರ್‌ನೇಶನಲ್ ಕ್ಲಬ್ಬಿಗೆ ಹೊರಡುವ; ಬಸ್ಸು ಬಂದರೆ ಗೊತ್ತಾಗುತ್ತದೆ" ಎಂದು ನಾರಾಯಣರಾಯರು ಎದ್ದರು. ಆಗಲೇ, ಅಚ್ಯುತ ಅಳುಕಳುಕಿ, ನಾಚಿ, ನಾಚಿ ತನ್ನ ಮುಖವನ್ನು ಚುಳ್ಳಿಮಾಡಿಕೊಂಡು, ಮಗುವಿನಂತೆ-ತಾನು ನಿಜವಾಗಿ ಬಂದ ಕಾರ್ಯೋದ್ದೇಶವನ್ನು ವಿವರಿಸಿದ.

"ನನಗೊಂದೂ ತಿಳಿಯದು, ನೀವೆಂದಹಾಗೆ ಮಾಡುತ್ತೇನೆ. ನಾನು ಸಮನಾಗಿ ಅವಳನ್ನು ನೋಡಿಲ್ಲವನಲ್ಲ" ಎಂದನು.

"ಆ ಸಂಗತಿಯನ್ನೆಲ್ಲ ನನಗೆ ಬಿಡು; ನಾನು ಹುಡುಗಿ ನೋಡಿ ಬರುತ್ತೇನೆ. ನನ್ನ ಶಿಫಾರಸು ಸಾಕೇ ನಿನಗೆ?" ಎಂದರು ನಾರಾಯಣ ರಾಯರು.

"ನನಗೆ ಬೇರೆ ಯಾರು ತಿಳಿದು ಹೇಳುವವರಿದ್ದಾರೆ. ಯಾರ ದಾಕ್ಷಿಣ್ಯಕ್ಕೂ ನೀವು ಬೀಳದೆ ತೀರ್ಮಾನ ಮಾಡಿದುದೇ, ನನ್ನ ತೀರ್ಮಾನ" ಎಂದನು.

"ಹಾಗಾದರೆ, ನೀನು ಅತ್ತಲಾಗಿ ಹೋದರೆ, ನಾನು ಇತ್ತಲಾಗಿ ಹೋಗುತ್ತೇನೆ. ನೀನು ಬರುವುದರೊಳಗೆ ನಾನು ಎಲ್ಲವನ್ನು ತಿಳಿದು ಬರುತ್ತೇನೆ. ಆದರೆ ಆಗಲಿ, ಒಂದು ಕಾಲಕ್ಕೆ ಎರಡೆರಡು ಲಗ್ನ" ಎಂದು

ನಕ್ಕರು ಗುರುಗಳು.

"ಎರಡೆರಡು ಲಗ್ನ" ಎಂದು ಆಶ್ಚರ್ಯದಿಂದ ಕೇಳಿದ ಅಚ್ಯುತ.

"ಒಂದು ಮಾಸ್ತರಿಕೆ! ಮತ್ತೊಂದು ಗೃಹಸ್ತಿಕೆ! ಎರಡೂ ಲಗ್ನಗಳೇ ಅಲ್ಲವೇ" ಎಂದರು.

ಅಚ್ಯುತ ನಕ್ಕನು. ಮುಂದೆ ಲಘು ಮನಸ್ಸಿನಿಂದ ಪಯಣ ಹೊರಟನು. ಬಸ್ಸನ್ನು ಏರುವ ತನಕ, ಅವನ ಮನಸ್ಸು ಲಘುವಾಗಿತ್ತು. ಅನಂತರ 'ಏನಾದೀತೋ ಏನೋ'—ಎಂದು ಯೋಚನೆಯನ್ನು ಹೊತ್ತು ಪುತ್ತೂರನ್ನು ಸೇರಿದನು.

ಇತ್ತ ನಾರಾಯಣರಾಯರು ಆರು ಮೈಲು ದೂರದ ಪಂಜಕ್ಕೆ ಸವಾರಿ ಬೆಳೆಸಲು ನಿಶ್ಚಯಿಸಿದರು. ಅವರಿಗೆ ಎಲ್ಲಿಯೂ ಒಬ್ಬಂಟಿಗರಾಗಿ ತಿರುಗಾಡಿ ಅಭ್ಯಾಸವಿಲ್ಲ. ಜತೆಗೊಬ್ಬರು ಬೇಕೇಬೇಕು. 'ಯಾರನ್ನು ಕರೆಯಲಿ?' ಎಂದು ಯೋಚನೆಮಾಡುವಾಗ ಜಾನ್‌ಸನ್ ಮಾಸ್ತರರು ಇದಿರಾದರು, "ಹಲ್ಲೋ, ಎಚ್, ಎಮ್!" ಎಂದರು. ನಾರಾಯಣರಾಯರು "ಜಾನ್‌ಸನ್‌ರೇ, ನೀವು ಎಮ್ಮೆಯ ಪರೀಕ್ಷೆಯಲ್ಲಿ ಬಹಳ ಹುಷಾರಂತೆ. ನೋಡಿ, ನನಗೊಂದು ಎಮ್ಮೆ ಕೊಳ್ಳುವ ಯೋಚನೆಯಾಗಿದೆ. ಪಂಜದ ಹತ್ತಿರ ಅಲ್ಲೆಲ್ಲೋ ಒಂದು ಎಮ್ಮೆಯಿದೆಯಂತೆ! ಪರಮಾಶಿ ಎಮ್ಮೆ ಎನ್ನುತ್ತಾರೆ!"

"ನಿಮಗೇಕಯ್ಯ ಎಮ್ಮೆ? ನಮ್ಮ ಐತುಮೂಲ್ಯರ ಹಾಗೆ ಹೊಟೇಲಿಗೆ ಹಾಲು ಮಾರಲಿಕ್ಕೇನು? Don't angry be" ಎಂದು ಪರಿಹಾಸ್ಯ ಮಾಡಿದರು.

"ಮನೆಯ ದನ ಬತ್ತಿದೆ. ಹೆಚ್ಚಿಗೆ ಹಾಲು ಮಿಕ್ಕಿದರೆ ಮಾರಬಹುದಲ್ಲ. ಈ ದರಿದ್ರ ಮೂವತ್ತೈದು ರೂಪಾಯಿ ಸಂಬಳದಲ್ಲಿ ಸಂಸಾರದ ಖರ್ಚು ಹೋದೀತೆನ್ನುತ್ತೀರಾ? ನೀವು ಬರುತ್ತೀರಾ ಹೇಳಿ! ನಿಮ್ಮ ಸೈಕಲಿನಲ್ಲಿ ಕುಳಿತರೆ ಒಂದು ಘಂಟೆಯಲ್ಲಿ ಪಂಜ ಸೇರಬಹುದಲ್ಲ."

ಜಾನ್‌ಸರರು ಸೈಕಲು ಪ್ರವೀಣರು. ಅವರ ಸೈಕಲು ಸವಾರಿಯನ್ನು ಪ್ರಶಂಸಿಸಿದರೆ, ಕತ್ತೆಯನ್ನಾದರೂ ಹೊತ್ತು, ಹತ್ತು ಮೈಲು ತಿರುಗುವ ಭೂಪತಿ ಅವರು! "One single coffee first" ಎಂದರು. ಇಬ್ಬರೂ ಕುಡುಮತ್ತಾಯರಲ್ಲಿಗೆ ಹೋಗಿ ಕಾಫಿ ಕುಡಿದು, ಪಂಜಕ್ಕೆ

ಹೊರಟೇಹೊರಟರು. ಮುಂದಕ್ಕೆ ನಮ್ಮ ಇಂಗ್ಲಿಷ್ ಪ್ರೊಫೆಸರರು, ಹಿಂದಕ್ಕೆ ನಾರಾಯಣರಾಯರು! ಸಂಜೆ ಆರು ಘಂಟೆಗೆ, ಇಬ್ಬರೂ ನೇರಾಗಿ ಪಂಜಕ್ಕೆ ಸೇರಿದರು. "ನಮ್ಮ ಕೆಲಸವಾಗಿ ನಾವು ಹಿಂದೆ ಬರುವುದೆಷ್ಟು ಹೊತ್ತಿಗೆ?" ಎಂದು ಜಾನ್ ಸನರು ಕೇಳಿದರು. "ನಮಗೇನು? ಅಲ್ಲಿ ಪುಟ್ಟಯ್ಯನವರ ಹತ್ತಿರ ಕೇಳುವ. ಒಂದು ಚರುವನ್ನು ರಾತ್ರಿ ಅವರಲ್ಲಿಯೇ ತೆಗೆಯುವ. ಮೊದಲು ಎಮ್ಮೆ ಎಲ್ಲಿರುವುದೆಂದು ವಿಚಾರಿಸಿ ತಿಳಿಯಬೇಕಲ್ಲ" ಎಂದರು.

ನೆಟ್ಟಗೆ ಇಬ್ಬರೂ ಪುಟ್ಟಯ್ಯನವರ ಮನೆಗೆ ಹೋದರು. ನಾರಾಯಣರಾಯರಿಗೆ ಆ ಹತ್ತು ಮೈಲಿನ ವಠಾರದೊಳಗೆ ಗುರುತಿಲ್ಲದವರು ಇದ್ದಾರೆಯೇ? ಪುಟ್ಟಯ್ಯನವರು ಇವರನ್ನು ಕಂಡು "ಹೋಯ್, ಹೆಡ್ ಮಾಸ್ತರರೇ, ಬನ್ನಿ!" ಎಂದು ಕರೆದರು.

"ಹೌದು ನಿಮ್ಮಲ್ಲಿಗೇನೆ ನಾವು ಬಂದದ್ದು. ರಾತ್ರಿ ಊಟವೂ ಇಲ್ಲೇನೆ" ಎಂದರು ನಾರಾಯಣರಾಯರು.

"ಒಳ್ಳೆಯದೇ ಆಯಿತಲ್ಲ. ಇವರು ಯಾರು?" ಎಂದು ಜತೆಯಾಗೆಳೆಯರನ್ನು ವಿಚಾರಿಸಿದರು.

"ಇವರೋ! ನಮ್ಮ ಶಾಲೆ ಮಾಸ್ತರು; ನಮ್ಮಲ್ಲಿ ತಲೆಯಿಂದ ತಲೆವರೆಗೂ ಇಂಗ್ಲೀಷು ಹೇಳುವವರು ಇವರೇ!"

"ಅಷ್ಟು ಓದಿದ್ದಾರೆಯೇ, ಬಿ. ಎ. ಗೀಯೆ ಆಗಿದೆಯೋ"

"ಬಿ. ಎ. ಯವರು ಇವರ ಮುಂದೆ ನಿಲ್ಲಲು ಸಾಧ್ಯವಿಲ್ಲ. ಇವರು ಅಷ್ಟು ಜೋರು."

ಬಾಯಾರಿಕೆಗೆ ಬೆಲ್ಲ ನೀರು ಬಂದಿತು. ಒಂದು ಹಣತೆ ಬಾಳೆ ಹಣ್ಣು ಬಂದಿತು. ಅದನ್ನು ಸೇವಿಸುತ್ತ ನಾರಾಯಣರಾಯರು "ಈಗ, ನಾವು ಬಂದುದೆಂದರೆ–ಒಂದು ಎಮ್ಮೆಯ ಖರೀದಿಗೆ. ಇಲ್ಲೆಲ್ಲೋ ಬಳ್ಪದ ಹತ್ತಿರವೋ, ಸ್ವಲ್ಪ ಈಚೆಯೋ, ಒಂದು ಒಳ್ಳೆ ಎಮ್ಮೆಯಿದೆಯಂತಲ್ಲ. ಯಾವನೋ ಗೌಡನ ಹತ್ತಿರವಂತೆ. ಮೊನ್ನೆ ಕರು ಹಾಕಿದ್ದಂತೆ; ಹದಿನೈದು ಕುಡತೆ ಹಾಲಾದೀತು. ಹೆಚ್ಚಿಗೆ ತಿಂಡಿಕೊಟ್ಟರೆ ಎರಡು ಬೇಳೆ ಹಾಲೇ ತೆಗೆಯಬಹುದು–ಎಂದು ಕೇಳಿದ್ದೆ. ಎಲ್ಲಿ ಅದಿರುವುದು?" ಎಂದು ವಿಚಾರಿಸಿದರು. ಪುಟ್ಟಯ್ಯನವರು ಎಣ್ಮೂರಿಂದ ಏನೆಕಲ್ಲಿನ ತನಕ ಪ್ರತಿ

ಗೌಡರ ಮನೆಯನ್ನು ಸ್ಮರಿಸಿಕೊಂಡರು. ಕೊನೆಗೆ "ಕುಂಜಿಮಿತ್ತಿಲಿನಲ್ಲೇನು? ಅಲ್ಲೊಂದಿದೆಯಂತೆ. ಆದರೆ, ಐದು ಕುಡ್ತೆಯೂ ಕೊಡಲಾರದು. ಇನ್ನೊಂದು ಕರಿಕಳದಲ್ಲಿದೆಯಂತೆ; ಅದೂ ಅಂಥಾದ್ದಲ್ಲ. ನೀವು ಅವನ ಹೆಸರನ್ನು ಮರೆತಿರಲ್ಲ. ಪುಟ್ಟಣ್ಣನೋ ಊಹೂಂ.....ಥೂತ್, ಗಂಟಲಲ್ಲಿ ಉಂಟು ಬಾಯಲ್ಲಿಲ್ಲ" ಎಂದರು. ಮತ್ತೂ ಸಮಾಧಾನವಾಗದೆ-"ನೀವು ಕುಳಿತಿರಿ. ನಾನು ಪೇಟೆಯ ತನಕ ಹೋಗಿಬರುತ್ತೇನೆ ವಿಚಾರಿಸಿಕೊಂಡು" ಎಂದು ಹೊರಟರು. "ನಮಗೂ ಕೆಲಸವೇನಿಲ್ಲ, ನಿಮ್ಮ ಜತೆಗೆ ನಾವೂ ಬರುತ್ತೇವೆ" ಎಂದು ಮೂವರೂ ಹೊರಟರು.

ಜಾನ್‌ಸನರಿಗೆ ಏನೋ ಯೋಚನೆ ಹುಟ್ಟಿತು. "ಮಿ। ಎಚ್. ಎಂ. ಒಂದು ಮೋಸಬಿದ್ದೆನಲ್ಲ, ಈ side ನಲ್ಲಿ ಬರ್ಕ ತುಂಬ ಇವೆ ಎನ್ನುತ್ತಾರೆ. ಬರುವಾಗ ಸರ್ಚ್‌ಲೈಟು ತಂದಿದ್ದರೆ grand ಶಿಖಾರಿ ಮಾಡಬಹುದಿತ್ತು" ಎಂದರು. ಎಲ್ಲರೂ ಪಂಜ ಪೇಟೆಗೆ ಹೋಗಿ ಬಂದರು. ಕೊನೆಗೆ ಎಣ್ಮೂರಿನ ಸಮೀಪ, ಪಳ್ಳಿಬ್ಯಾರಿಯಲ್ಲಿ, ಹತ್ತು ಕುಡತೆ ಹಾಲು ಕೊಡುವ ಒಂದು ಎಮ್ಮೆಯಿದೆಯೆಂದೂ ಅವನು ಅದಕ್ಕೆ ಐವತ್ತು ರೂಪಾಯಿ ಕ್ರಯ ಹೇಳುತ್ತಾನೆಂದೂ ವರ್ತಮಾನ ಸಂಗ್ರಹವಾಯಿತು. ಅಸಮಾಧಾನಪಟ್ಟು ಹಿಂತಿರುಗಿದರು ಮೂವರೂ.

ರಾತ್ರಿ ಊರಿನ ವಾಡಿಕೆಯಂತೆ, ನಾರಾಯಣರಾಯರು ಪುಟ್ಟಯ್ಯನವರ ಮನೆಯ ಒಳಗಡೆ ಊಟಕ್ಕೆ ಕುಳಿತರು. ಬ್ರಾಹ್ಮಣರ ಊಟವಾದ ಮೇಲೆ ಜಾನ್‌ಸನರಿಗೆ ಊಟವಾಗಬೇಕಾಯಿತು. ಊಟಕ್ಕೆ ಕುಳಿತಾಗ, ಅವರ ಮಗಳು ಆಚೀಚೆ ಓಡಿಕೊಂಡು ಅವರಿಗೆ ಅನ್ನ ಬಡಿಸಿದಳು. ನಾರಾಯಣರಾಯರು "ಮಗಳೋ? ಎಲ್ಲಿಗೆ ಕೊಟ್ಟದ್ದು?" ಎಂದು ಕೇಳಿದರು. ಅಷ್ಟು ತೊಡಗಿದ್ದೇ ತಡ; ಪುಟ್ಟಯ್ಯನವರು, ತಮ್ಮ ಗ್ರಹಚಾರವನ್ನು ತೋಡಿಕೊಂಡರು. "ಶಾಲೆ ಏನಾದರೂ ಆಗಿದೆಯೇ?" ಎಂದು ನಾರಾಯಣ ಮಾಸ್ತರರು ಕೇಳಿದರು. "ಸುಮಾರು ಆರೋ ಏಳನೆಯ ಕ್ಲಾಸು ಆಗಿದೆ" ಎಂದರು ಪುಟ್ಟಯ್ಯನವರು. ಇವರ ಊಟವಾಯಿತು. ಅನಂತರ ಜಾನ್‌ಸನರ ಭೋಜನವೂ ಆಯಿತು. ನಾರಾಯಣರಾಯರು ಮಾತನಾಡುತ್ತ ಮಾತನಾಡುತ್ತ ಅಂಗಳಕ್ಕೆ ಪುಟ್ಟಯ್ಯನವರನ್ನು ಕರೆದುಕೊಂಡು ಬಂದು, ಮಾತು ಮುಂದುವರಿಸಿ, ತಾನು ಬಂದ ಕಾರ್ಯಭಾರ

ವನ್ನು ಅವರಿಗೆ ತಿಳಿಸಿದರು. ಮುಂದೆ ಗಂಟಲಿನ ಗಡಿಯಿಂದ ದಾಟಿ ಅವರಿಬ್ಬರ ಬಾಯಿಗಳಿಂದ ಸ್ವರ ಹೊರಡಲೇ ಇಲ್ಲ. ನಾರಾಯಣ ರಾಯರು ಹುಡುಗಿಯನ್ನು 'ಪಾಸು' ಮಾಡಿದರು ."ನಿಮಗೆ ಏನೂ ಯೋಚನೆ ಬೇಡ. ಹುಡುಗ ಹೇಳಿ ಕಳುಹಿಸಿ ನಾನು ಬಂದವ. ಅವನು ನನ್ನ ಮಾತು ಮೀರುವವನಲ್ಲ. ಒಳ್ಳೆಯ ದಿವಸ ನಿಶ್ಚಯ ಮಾಡಿ ತಿಳಿಸಿ" ಎಂದರು. ಪುಟ್ಟಯ್ಯನವರಿಗೆ ತಾವು ಕನಸಿನಲ್ಲಿರುವಂತೆ ಕಂಡಿತು. ಇತ್ತ ಗಟ್ಟಿ ಗಟ್ಟಿ ಮಾತನಾಡತೊಡಗಿದವರು, ಈಗ ಗುಟ್ಟಿನಲ್ಲಿ ಮಾತನಾಡುತ್ತ ಬಂದುದನ್ನು ಕಂಡು ಜಾನ್‌ಸನ್ ಮಾಸ್ತರರಿಗೆ ಸೋಜಿಗವಾಯಿತು. ಅವರು ಊಟವನ್ನು ಮುಗಿಸಿ ಬಂದು—"ಹೋ, ಮಾಸ್ತರರೇ, ನೀವು ನಿಮಿಷದಲ್ಲಿ ಒಬ್ಬರನ್ನು pocket ಮಾಡುತ್ತೀರಲ್ಲ. ಇನ್ನು ಒಂದ ದಿವಸ ನೀವಿಲ್ಲಿದ್ದರೆ,ಇಲ್ಲಿಂದಲೇ ಧರ್ಮಕ್ಕೊಂದು ಎಮ್ಮೆಯನ್ನು ಹೊಡೆದರೂ ಹೊಡೆಯುವವರೇ" ಎಂದರು.

ಆ ರಾತ್ರೆ,ಜಾನ್‌ಸನರೇ ತುಂಬ ಮಾತನಾಡಿದರು. ಹೇಗೂ ಬೆಳಗಾಯಿತು. "ಹಾಗಾದರೆ ಹೆಡ್ ಮಾಸ್ತರರೇ, ಎಣ್ಣೂರನ್ನು ಸುತ್ತಿಬರುವ" ಎನ್ನಲು, ನಾರಾಯಣರಾಯರು "ಉದ್ಯೋಗವಿಲ್ಲವೇ? ಹತ್ತು ಕುಡುತೆ ಕೊಡುವ ಎಮ್ಮೆಗೆ,ಐವತ್ತು ರೂಪಾಯಿ ಕೊಟ್ಟು ಯಾರು ಉಳಿದಾನು?" ಎಂದರು. ಹಾಗಾಗಿ ಇಬ್ಬರೂ ಬೀಳ್ಕೊಟ್ಟರು. ಮರಳುತ್ತ, ದಾರಿಯಲ್ಲಿ ಜಾನ್‌ಸನರು "ಥೂ, ಯಾರ ಮುಖ ನೋಡಿದ್ದೆವೋ ಬೆಳಿಗ್ಗೆ, ಹೋದ ಕೆಲಸ ಹೆಣ್ಣಾಯಿತಲ್ಲ!" ಎಂದು ತೀರ ವ್ಯಥೆಗೊಂಡರು.ಇಬ್ಬರೂ ಕಡಬವನ್ನು ಸೇರಿದ ಮಧ್ಯಾಹ್ನವೇ ಲಕ್ಷ್ಮಮ್ಮನು ಮಗನ ಅನ್ವೇಶಣೆಗಾಗಿ, ನಾರಾಯಣರಾಯರ ಮನೆಗೆ ಬಂದಳು. ಎಲ್ಲ ಸಂಗತಿಗಳನ್ನು ಅವರಿಂದ ಕೇಳಿ ತಿಳಿದು ತುಂಬಾ ಹರ್ಷ ತಾಳಿದಳು. "ಅಬ್ಬ! ಮಾಣಿಯೋ, ತೀರ ಕದಿಮ!" ಎಂದು ಹಿಗ್ಗಿದಳು. ಅಷ್ಟೊಂದು ಸಮಾಚಾರ ಸಂಗ್ರಹಿಸಿಕೊಂಡು ಕೊಂಬಾರಿಗೆ ಅವಳು ಹಿಂತಿರುಗಿದಳು. ಈ ಸುವಾರ್ತೆಯನ್ನು ಮಗಳಿಗೆ ತಿಳಿಸಲು ಆತುರ. ಕಡಬದಿಂದ ಮರಳುವಾಗ "ನಾರಾಯಣರಾಯರೇ, ನಮ್ಮ ಮನೆಯಲ್ಲಿ ಗಂಡುಸರ ಹುಳವಿಲ್ಲ. ನೀವೇನೆ ಬಂದು, ನಿಂತು, ಒಂದು ಲಗ್ನವನ್ನು ನಡೆಯಿಸಿಕೊಡಬೇಕು" ಎಂದು ಆಗ್ರಹಮಾಡಿ ಹೊರಟಿದ್ದಳು.

"ನಿಮ್ಮ ಅಚ್ಯುತನನ್ನು ನನ್ನ ತಮ್ಮನೆಂದೇ ತಿಳಿದುಕೊಂಡಿದ್ದೇನೆ. ನನ್ನಿಂದಾದ ಕೆಲಸ ಮಾಡುತ್ತೇನೆ ಅಮ್ಮ. ಯೋಚನೆ ಬೇಡ" ಎಂದು ನಾರಾಯಣರಾಯರು ಭರವಸೆಯನ್ನು ಕೊಟ್ಟರು. ಹೀಗಾಗಿ ಲಕ್ಷ್ಮಮ್ಮ ತುಂಬ ಉತ್ಸಾಹದಿಂದ ಮನೆಯನ್ನು ಸೇರುವಂತಾಯಿತು.

ಇತ್ತ ಅಚ್ಯುತ ಹೆದರಿ ಹೆದರಿ, ಇನ್ಸ್‌ಪೆಕ್ಟರರ ಮನೆಗೆ ಹೋದ. ಯಾರೋ ಹಳ್ಳಿಯ ಉಪಾಧ್ಯಾಯರು ಬಂದಿದ್ದಾರೆಂದು ಅವರ ಒಬ್ಬ ಹುಡುಗ, ಒಳಗೆ ಕುಳಿತಿದ್ದ ಸದಾನಂದರಾಯರಿಗೆ ವರದಿಕೊಟ್ಟನು. ಹುಡುಗನ ಕೈಯಲ್ಲಿ ಅಚ್ಯುತ ಕೊಟ್ಟ ಎರಡು ಕಿತ್ತಳೆ ಹಣ್ಣುಗಳನ್ನು ಕಂಡು, ಸದಾನಂದರಾಯರು "ಯಾರೆಂದು ಅವರ ಹೆಸರನ್ನು ಕೇಳಿ ಬಾ" ಎಂದು ಕಳುಹಿಸಲು, "ಬೊಗ್ಗಾಡಿ ಮಾಸ್ತರರು-ಅಚ್ಯುತ" ಎಂದು ತಿಳಿಸಿದ. ಅದನ್ನು ಕೇಳಿ ಅವರೇನೆ ಹೊರಕ್ಕೆ ಬಂದರು. "ಯಾರು — ಅಚ್ಯುತ ಮಾಸ್ತರರೇ! ಯಾಕೆ ಹೀಗೆ ಅಂಜುತ್ತೀರಿ. ಮೇಲೆ ಬಂದು ಕುಳಿತಿರಬಾರದೇ" ಎಂದು ಅವನನ್ನು ಉಪಚರಿಸಿದರು. ಅವನಿಗೆ ಕಾಫಿ ಸನ್ಮಾನವೂ ಆಯಿತು. ಅವನ ಟ್ರೈನಿಂಗ್ ಮುಗಿದ ಸಂಗತಿಯನ್ನು ಕೇಳಿ ತಿಳಿದರು. 'ನೀವು ವಿದ್ವಾನಿಗೂ ಕುಳಿತಿದ್ದಿರಂತೆ' ಎಂದು ಅವರೇ ಹೇಳಲು, "ಕುಳಿತಿದ್ದೇನೆ. ಅದು ಎಷ್ಟೆಂದರೂ ಖಾಸಗಿ ಪಾಠ ಹೇಳಿಸಿಕೊಂಡದ್ದು; ಫಲ ಹೇಗೋ" ಎಂದ. ಅನಂತರ ಇವನು ತಂದಿದ್ದ ಅರ್ಜಿಯನ್ನು ನೋಡಿ, "ನಿಮಗಲ್ಲದೆ ಬೇರೆ ಯಾರಿಗೆ? ಕರಾವಳಿಯ ಶಾಲೆಯಾದರೆ, ತುಂಬ ಉಮೇದುವಾರರು ಇದ್ದಾರು. ಇಲ್ಲಿಗೆ ಅಷ್ಟು ಅರ್ಜಿಗಳು ಬರಲಾರವು; ಆದರೂ ಕೆಲಸದ ನೇಮಕ ಆಗುವುದು ಶಾಲೆಯ ಶುರುವಿಗೇನೆ. ಅದೂ ಮಾರ್ಚಿ ತಿಂಗಳ ವರೆಗಿನ ಕೆಲಸ. ಇರಲಿ ನೋಡುವ" ಎಂದರು.

"ನಾನು ಹೋಗಿ ಜಿಲ್ಲಾ ಬೋರ್ಡು ಅಧ್ಯಕ್ಷರನ್ನು ಕಂಡು ಬಂದು ಬಿಡಲೇ?" ಎಂದು ಕೇಳಿದ ಅಚ್ಯುತ.

"ಕಾಣಬೇಕೆಂತಲೂ ಇಲ್ಲ. ಆದರೆ ಕಂಡರೆ ನಿಮ್ಮ ಗುರುತು ಆದಂತೆಯೂ ಆಯಿತು. ಹೋಗಿ ನೋಡಿ ಬನ್ನಿ. ನಾನೂ ಶಿಫಾರಸಿ ಮಾಡುತ್ತೇನೆ. ನಿಮಗೇನೂ ಹೆದರಿಕೆ ಬೇಡ" ಎಂದರು. ಅಚ್ಯುತರಾಯ ತನ್ನ ಕೆಲಸವಾಯಿತೆಂದು ಅಲ್ಲಿಂದ ಕೆಳಕ್ಕೆ ಇಳಿದನು. "ಆಗದು. ನಿಮ್ಮ ಮನೆಯಲ್ಲಿ ನಾನು ಮೂರು ದಿವಸ ಕಳೆದುದಕ್ಕೆ, ಇಲ್ಲಿ ನೀವು ಒಂದು

ಊಟವನ್ನಾದರೂ ಮಾಡಬೇಕು" ಎಂದರು. ಅವರ ಬಲವಂತವಾಯಿತು. ಅಚ್ಯುತರಾಯಗೆ ದಾಕ್ಷಿಣ್ಯ. ಆದರೂ ಅವರ ಮನ್ನಣೆಯನ್ನು ನೆನೆದು, ಅವರಲ್ಲಿ ಊಟ ಮುಗಿಸಿ, ಮಂಗಳೂರಿಗೆ ತೆರಳಿದನು. ಮಂಗಳೂರಲ್ಲಿ ಹೆಚ್ಚಿನ ಕೆಲಸವೇನೂ ಜರುಗಲಿಲ್ಲ. ಅಧ್ಯಕ್ಷರನ್ನು ನೋಡಿದ; ಅವರು "ನಿಮ್ಮ ಅರ್ಜಿಯನ್ನು ಕೊಟ್ಟು ಹೋಗಿ" ಎಂದರು.

ಎರಡು ದಿವಸ ಹೀಗೆ ಸರಿದುವು; ಮೂರನೆಯ ದಿನ ಆತ ಕಡಬದ ಹಾದಿ ಹಿಡಿದನು. ಅವನು ಮಧ್ಯಾಹ್ನಕ್ಕೆ ಸಮನಾಗಿ, ಬಸ್ಸಿನಿಂದ ಇಳಿದು, ನಾರಾಯಣರಾಯರಲ್ಲಿಗೆ ಹೋದಾಗ ಅವರು-"ಅಚ್ಯುತ, ನಾನು ನಿನ್ನ ಹಾದಿ ಕಾಯುತಿದ್ದೇನೆ. ನೀನು ಸಿಟ್ಟುಮಾಡಬಾರದು, ನನ್ನ ತೀರ್ಮಾನ ಕೇಳು. ಆ ಹುಡುಗಿ ಆಗಬಹುದು. ಒಂದು ಆರೆಂಟು ಕ್ಲಾಸು ಕನ್ನಡವನ್ನು ಓದಿಯೂ ಇದ್ದಾಳಂತೆ. ರೂಪ ಉಂಟು. ಅಲ್ಲದೆ ಪುಟ್ಟಯ್ಯನವರೂ ಒಳ್ಳೆಯ ಜನ. ನಿನ್ನ ಅಮ್ಮ ನಿನ್ನನ್ನು ಹುಡುಕಿಕೊಂಡು ನಿನ್ನೆ ಇಲ್ಲಿಗೆ ಬಂದಿದ್ದರು--ಅವರಿಗೂ ಹೇಳಿದ್ದೇನೆ. ಇನ್ನು ದಿವಸ ಇಡುವುದೊಂದೇ ಬಾಕಿ" ಎಂದರು. ಹತ್ತು ನಿಮಿಷಕಾಲ ಅಚ್ಯುತ ಬಾಯಿಬಾರದಾದ. ಅವನ ಎದೆಯು ತುಂಬಿ ಬಂದಿತು. ಜೀವನದಲ್ಲಿ ಹೊಸದೊಂದು ಗಳಿಗೆ, ಸಂಧಿ, ಕೂಡಿ ಬರುವ ಕಾಲವನ್ನು ನೆನೆದು ಆತ ಮುಗ್ಧನಾದ. ವಿವಾಹದ ವಿಷಯದಲ್ಲಿ ನಾರಾಯಣರಾಯರ ತೀರ್ಮಾನವು ತನಗೆ ಸಾಕೆಂದು ನಿರ್ಣಯಿಸಿದ.

'ಆದರೆ ಮಾಸ್ತರರೇ, ನೀವು ಮಳೆಬೀಳುವುದರೊಳಗೇನೇ ಲಗ್ನವೆನ್ನುತ್ತೀರಿ.ಲಗ್ನ ಸುಮ್ಮನೆ ಆಗುತ್ತದೆಯೇ? ಖರ್ಚಿಗೆ ಹಣ ಬೇಡವೇ? ಈಗ ನಿಶ್ಚಯವಾದದ್ದಿರಲಿ. ಒಂದು ಆರು ತಿಂಗಳು ಕಾಲ ನಾನು ದುಡಿದು,ನಾಲ್ಕು ಕಾಸು ಗಳಿಸುತ್ತೇನೆ,ಆ ಮೇಲೆ ಲಗ್ನವಾಗಬಹುದಲ್ಲ"

"ಹಣಕ್ಕೇನು ಹೆದರಿಕೆ ನಿನಗೆ? ನಾಗರಾಜ ನಿನಗಿನ್ನೂ ಒಂದು ಸಾವಿರ ರೂಪಾಯಿ ಕೊಡಬೇಡವೇ? ಅವನ ಸಾಲವನ್ನು ವಜಾ ಹಾಕಿಕೊಂಡರೂ ಆರುನೂರು ರೂಪಾಯಿ ಬರಬೇಕಾಗುತ್ತದೆ. ಆದರಿಂದಲೇ ನಿಮ್ಮ ತಾಯ ಚಿನ್ನ, ಮನೆಗೆ ಬರುವ ಸೊಸೆಯ ಸಲುವಾಗಿ ಬಿಡಿಸಿದಂತೆ ಆಗುತ್ತದೆ" ಎಂದರು. "ಹಾಗಾದರೆ ನಾಗರಾಜನ ಹತ್ತಿರ ನೀವು ಆ ಪ್ರಸ್ತಾಪವನ್ನು ಮಾಡಿ. ನಾನು ಊರಿಗೆ ಹೋಗಿ ಇನ್ನು ಎರಡು

ದಿವಸಗಳಲ್ಲಿ ಬರುತ್ತೇನೆ" ಎಂದು ಅಚ್ಯುತ ಸಂಜೆ ಕೊಂಬಾರಿಗೆ ಹೊರಟು ಹೋದನು.

ಅಲ್ಲಿ ಲಕ್ಷಮ್ಮ, ಸೀತೆ ಅಚ್ಯುತನನ್ನು ಇದಿರುಕಾದಿದ್ದರು. ಸೀತೆ ಅಚ್ಯುತನನ್ನು ಚೆನ್ನಾಗಿ ಅಣಕಿಸಿದಳು. "ಅಬ್ಬಾ ನೀನೆ! ನಾವೆಲ್ಲ ಹೇಳಿದರೆ ಸಾಕಾಗದೆ, ನಾರಾಯಣ ಮಾಸ್ತರರನ್ನು, ಹುಡುಗಿ ನೋಡಲು ಕಳುಹಿಸಿದೆಯೋ? ನೀನು ಆ ದಿನ ನಮ್ಮಲ್ಲಿ ಅವಳನ್ನು ಕಂಡು ಹೋದ ಮೇಲೆ, ಅವಳ ಮೂಗೇನೂ ಕವಲೊಡೆಯಲಿಲ್ಲ. ಇನ್ನೂ ಹಾಗೆಯೇ ಇದ್ದಾಳೆ. ಹಾಗೆ ಕೇಳಹೋದರೆ, ಮತ್ತಷ್ಟು ಚೆಂದವಾಗಿ ಬೆಳೆದಿದ್ದಾಳೆ" ಎಂದಳು. ಅಚ್ಯುತ ನಕ್ಕು "ನಾನು ಹೋದದ್ದು ಕೆಲಸ ಹುಡುಕಿಕೊಂಡು" ಎಂದ. "ಸಿಕ್ಕಿತೇ?" ಎಂದು ಸೀತೆ ಕೇಳಿದಳು. "ಬೇಗ ಸಿಗುವ ಸಂಭವವುಂಟು" ಎಂದ. ಮುಂದೆ ಅವರಲ್ಲಿ-ಮದುವೆಯ ಖರ್ಚು, ಚಿನ್ನಗಳ ವಿಚಾರಗಳು ಬಂದುವು. ತಾಯಿ ಮಗನೊಡನೆ "ನಾಗರಾಜನನ್ನು ಕಂಡು ಬಾ" ಎಂದಳು. "ನಾರಾಯಣರಾಯರು ಮಾತನಾಡಿ ಬರುತ್ತಾರೆ"ಂದು ಹೇಳಿದ.

ಅವನೆಂದಂತೆ ನಾರಾಯಣರಾಯರು ನೇರಾಗಿ ಆ ಬಿಸಿಲಿಗೇನೆ ನಾಗರಾಜನ ಮನೆಗೆ ಹೋಗಿ ಹಣದ ಪ್ರಸ್ತಾಪವೆತ್ತಿದರು. ನಾಗರಾಜ ಉದಾಸೀನತೆಯಿಂದ ಎಲ್ಲವನ್ನೂ ಕೇಳಿದ. ನಾರಾಯಣರಾಯರು ಒತ್ತಾಯಿಸಿ ಕೇಳುತ್ತಲೇ "ಮಾಸ್ತರರೇ, ಆ ದಿನವೇ ನಾನೆಂದಿರಲಿಲ್ಲವೇ ನಿಮಗೆ? ಅದು ಗೇಣಿಗೀಣಿ ಸಮನಾಗಿ ಬರುವ ಜಾಗವಾಗಿ, ಬೇಸಗೆಯಲ್ಲಿ ನೀರಿದೆ ಎಂದು ತಿಳಿದರೆ, ಸಾವಿರ ರೂಪಾಯಿ ಕೊಡುವ ಎಂದಿದ್ದೆ. ಒಂದು ಅಂದಾಜು ಹೇಳಿದ್ದಷ್ಟೆ ಅದು; ಕೊಟ್ಟೇನು-ಎಂತಲೂ ಅಲ್ಲ; ನೋಡುವ ಎಂದಿದ್ದೆ. ಅದು ಕಂಡಿತದ ಮಾತಲ್ಲ. ಈಗ ನೋಡುತ್ತಿದ್ದೇನಲ್ಲ-ಯಾವುದಕ್ಕೂ ಬೇಡದ ಆ ಬಯಲನ್ನು ನೀವು ನನ್ನ ಕೊರಳಿಗೆ ಕಟ್ಟಿದಹಾಗಾಗಿದೆ. ಕಂಡವರೆಲ್ಲರು 'ನಾಲ್ಕು ಸಾವಿರಕ್ಕಿಂತ ಮೇಲೆ ಯಾವ ಕರ್ಮಕ್ಕೆ ಆ ಭೂಮಿ?' ಎಂದು ನಗುತ್ತಾರೆ. ನಾನು ಆ ಹೊಟ್ಟೆ ಉರಿ ಹೊತ್ತುಕೊಂಡಿರುವಾಗ, ನೀವು ಹೆಚ್ಚಿನ ಸಾವಿರ ರೂಪಾಯಿ ವಿಚಾರ ಹೇಳುತ್ತೀರಿ. ನಾನೇನೆನ್ನಲಿ ನಿಮಗೆ?" ಎಂದುಬಿಟ್ಟ.

ತಮ್ಮ ಶಿಷ್ಯ ಇಷ್ಟು ಸಮಯದೊಳಗೆ ಈ ರೀತಿ ತನಗೆ ತಿರುಮಂತ್ರ

ಹೇಳುತ್ತಾನೆಂದು ಅವರು ತಿಳಿದಿರಲಿಲ್ಲ. ಅವರು ತುಂಬ ನಿರಾಶರಾದರು. ಕೊನೆಗೆ ತಮ್ಮ ವ್ಯಥೆ ತಾಳಲಾರದೆ "ನಾಗರಾಜ, ನೀನು ತಿಳಿದಂತೆ ಮಾಡು. ಅವನು ಬಡವ; ನಿನಗೂ ಬೇಕಾದವ. ನಿನಗೆ ಸರಿತೋರಿದರೆ ಅವನ ಸಾಲಕ್ಕೆ ಮುಜುರೆಹಾಕುವಷ್ಟು ಹಾಕಿ, ಅವನ ಚಿನ್ನವನ್ನಾದರೂ ಹಿಂದಕ್ಕೆ ಕೊಡು. ರಾಜಿಯಿಂದ ಈ ಲೇವಾದೇವಿ ತೀರಲಿ" ಎಂದು ಉಪದೇಶಿಸಿದರು. ನಾಗರಾಜ ಮೆಲ್ಲಗೆ "ಮಾಸ್ತರರೇ,ಯಾರದ್ದಾದರೂ ಕಷ್ಟದ ಹಣಕ್ಕೆ, ಎಷ್ಟೋ ಪರಿಹಾರವನ್ನು ಯಾರೂ ಹೇಳಬಹುದು. ನಾನು ಬಿಡುಗಾಸನ್ನೂ ಹೆಚ್ಚಿಗೆ ಕೊಡಲಾರೆ. ಕೊಡಬೇಕಾದ ಹಣವನ್ನು ಅವನು ಕೊಟ್ಟರೆ, ಅವನ ಚಿನ್ನವನ್ನು ಕೊಡುತ್ತೇನೆ. ನನಗೇತಕ್ಕೆ ಅವನ ಚಿನ್ನ?" ಎಂದು ಖಂಡುತುಂಡಾಗಿ ಹೇಳಿಬಿಟ್ಟ.

ನಾರಾಯಣರಾಯರ ಮುಖಭಂಗವಾಯಿತು. ಅವರು ಮರಳಿ ಬಂದು, ಜಾನ್‌ಸನ್ ಮಾಸ್ತರರನ್ನು ಕಂಡರು. ಅವರನ್ನು ಅತಿಯಾಗಿ ಹೊಗಳಿ "ನಿಮ್ಮಲ್ಲಿ ಒಂದು ರಾಯಭಾರವನ್ನು ಮಾಡುವುದಿದೆ"ಎಂದು ಹಿಂದಣ ದಿವಸ ಪಂಜಕ್ಕೆ ಹೋದ ಕಾರಣವನ್ನೆಲ್ಲ ತಿಳಿಸಿದರು. ಅನಂತರ 'ನಿಮ್ಮ ನಾಗರಾಜ ಹೀಗೆ ಮಾಡುತ್ತಿದ್ದಾನಲ್ಲ! ನನ್ನ ಹತ್ತಿರ ಕಂಠೋಕ್ತವಾಗಿ ಸಾವಿರರೂಪಾಯಿಗಳನ್ನು ಕೊಡುತ್ತೇನೆ ಎಂದು,ಈಗ ಗುರುತೇ ಇಲ್ಲದವರಂತೆ ಮಾತಾಡುತ್ತಿದ್ದಾನಲ್ಲ' ಎಂದು ದೂರಿದರು. ಜಾನ್‌ಸನ್ ಮಾಸ್ತರರಿಗೂ ನಾಗರಾಜನ ಧೋರಣೆಯು ಚಂದವಾಗಿ ಕಾಣಿಸಲಿಲ್ಲ. 'ಇಲ್ಲ,ಅವನು ಹಾಗೆಂದಿರಲಾರ!ಚೇಷ್ಟೆಗೆಂದಿರಬಹುದು' ಎಂದು, ತಾನೊಮ್ಮೆ ರಾಯಭಾರ ಮಾಡುವುದಾಗಿ ತಿಳಿಸಿದರು. ಅವರು ಆ ರಾತ್ರಿ ಅವನಲ್ಲಿಗೆ ಹೋಗಿ ಅವನ ಮುಂದೆ 'ದಮ್ಮಯ್ಯ ದಕ್ಕಯ್ಯ'ಗಳನ್ನು ಸುರಿದರು. ತುಸುಮಟ್ಟಿಗೆ ಅವನ ಮನಸ್ಸನ್ನು ಒಲಸಿದರು. ಅದರಿಂದ ಲಕ್ಷ್ಮಮ್ಮನವರ ಚಿನ್ನವನ್ನಷ್ಟು ನಾಗರಾಜ ತಿರುಗಿಕೊಟ್ಟ. ಅಷ್ಟಕ್ಕೆ ಅವನ ವ್ಯವಹಾರವೇನೋ ಕೊನೆಗಂಡಿತು.

ನಾರಾಯಣರಾಯರು 'ಅಷ್ಟಾದರೂ ಆಯಿತಲ್ಲ--ನೀವು ಹೋದುದಕ್ಕೆ;ನನ್ನಿಂದ ಅದೂ ಆಗಲಿಲ್ಲ. ಆದರೂ ಇನ್ನೂ ನಮ್ಮ ಜುಟ್ಟು ಅವನ ಕೈಯಲ್ಲಿದೆ; ಅಚ್ಚುತ ಕೊಟ್ಟ ಪ್ರಾಮಿಸರಿ ನೋಟಿದೆ. ನಾನು ಸಾಕ್ಷಿಹಾಕಿ ಬರೆಯಿಸಿ, ಅಚ್ಚುತನಿಂದ ಅವನಿಗೆ ಕೊಡಿಸಿದುದು. ಇವನಂಥವರಿಗೆ

ದಿವಸಗಳಲ್ಲಿ ಬರುತ್ತೇನೆ" ಎಂದು ಅಚ್ಯುತ ಸಂಜೆ ಕೊಂಬಾರಿಗೆ ಹೊರಟು ಹೋದನು.

ಅಲ್ಲಿ ಲಕ್ಷ್ಮಮ್ಮ, ಸೀತೆ ಅಚ್ಯುತನನ್ನು ಇದಿರುಕಾದಿದ್ದರು. ಸೀತೆ ಅಚ್ಯುತನನ್ನು ಚೆನ್ನಾಗಿ ಅಣಕಿಸಿದಳು. "ಅಬ್ಬಾ ನೀನೆ! ನಾವೆಲ್ಲ ಹೇಳಿದರೆ ಸಾಕಾಗದೆ, ನಾರಾಯಣ ಮಾಸ್ತರರನ್ನು, ಹುಡುಗಿ ನೋಡಲು ಕಳುಹಿಸಿದೆಯೋ? ನೀನು ಆ ದಿನ ನಮ್ಮಲ್ಲಿ ಅವಳನ್ನು ಕಂಡು ಹೋದ ಮೇಲೆ, ಅವಳ ಮೂಗೇನೂ ಕವಲೊಡೆಯಲಿಲ್ಲ. ಇನ್ನೂ ಹಾಗೆಯೇ ಇದ್ದಾಳೆ. ಹಾಗೆ ಕೇಳಹೋದರೆ, ಮತ್ತಷ್ಟು ಚೆಂದವಾಗಿ ಬೆಳೆದಿದ್ದಾಳೆ" ಎಂದಳು. ಅಚ್ಯುತ ನಕ್ಕು "ನಾನು ಹೋದದ್ದು ಕೆಲಸ ಹುಡುಕಿಕೊಂಡು" ಎಂದ. "ಸಿಕ್ಕಿತೇ?" ಎಂದು ಸೀತೆ ಕೇಳಿದಳು. "ಬೇಗ ಸಿಗುವ ಸಂಭವವುಂಟು" ಎಂದ. ಮುಂದೆ ಅವರಲ್ಲಿ-ಮದುವೆಯ ಖರ್ಚು, ಚಿನ್ನಗಳ ವಿಚಾರಗಳು ಬಂದುವು. ತಾಯಿ ಮಗನೊಡನೆ "ನಾಗರಾಜನನ್ನು ಕಂಡು ಬಾ" ಎಂದಳು. "ನಾರಾಯಣರಾಯರು ಮಾತನಾಡಿ ಬರುತ್ತಾರೆ"ಂದು ಹೇಳಿದ.

ಅವನೆಂದಂತೆ ನಾರಾಯಣರಾಯರು ನೇರಾಗಿ ಆ ಬಿಸಿಲಿಗೇನೆ ನಾಗರಾಜನ ಮನೆಗೆ ಹೋಗಿ ಹಣದ ಪ್ರಸ್ತಾಪವೆತ್ತಿದರು. ನಾಗರಾಜ ಉದಾಸೀನತೆಯಿಂದ ಎಲ್ಲವನ್ನೂ ಕೇಳಿದ. ನಾರಾಯಣರಾಯರು ಒತ್ತಾಯಿಸಿ ಕೇಳುತ್ತಲೇ "ಮಾಸ್ಟರರೇ, ಆ ದಿನವೇ ನಾನೆಂದಿರಲಿಲ್ಲವೇ ನಿಮಗೆ? ಅದು ಗೇಣಿಗೀಣಿ ಸಮನಾಗಿ ಬರುವ ಜಾಗವಾಗಿ, ಬೇಸಗೆಯಲ್ಲಿ ನೀರಿದೆ ಎಂದು ತಿಳಿದರೆ, ಸಾವಿರ ರೂಪಾಯಿ ಕೊಡುವ ಎಂದಿದ್ದೆ. ಒಂದು ಅಂದಾಜು ಹೇಳಿದ್ದಷ್ಟೆ ಅದು; ಕೊಟ್ಟೇನು-ಎಂತಲೂ ಅಲ್ಲ; ನೋಡುವ ಎಂದಿದ್ದೆ. ಅದು ಕಂಡಿತದ ಮಾತಲ್ಲ. ಈಗ ನೋಡುತ್ತಿದ್ದೇನಲ್ಲ-ಯಾವುದಕ್ಕೂ ಬೇಡದ ಆ ಬಯಲನ್ನು ನೀವು ನನ್ನ ಕೊರಳಿಗೆ ಕಟ್ಟಿದಹಾಗಾಗಿದೆ. ಕಂಡವರೆಲ್ಲರು 'ನಾಲ್ಕು ಸಾವಿರಕ್ಕಿಂತ ಮೇಲೆ ಯಾವ ಕರ್ಮಕ್ಕೆ ಆ ಭೂಮಿ?' ಎಂದು ನಗುತ್ತಾರೆ. ನಾನು ಆ ಹೊಟ್ಟೆ ಉರಿ ಹೊತ್ತುಕೊಂಡಿರುವಾಗ, ನೀವು ಹೆಚ್ಚಿನ ಸಾವಿರ ರೂಪಾಯಿ ವಿಚಾರ ಹೇಳುತ್ತೀರಿ. ನಾನೇನೆನ್ನಲಿ ನಿಮಗೆ?" ಎಂದುಬಿಟ್ಟ.

ತಮ್ಮ ಶಿಷ್ಯ ಇಷ್ಟು ಸಮಯದೊಳಗೆ ಈ ರೀತಿ ತನಗೆ ತಿರುಮಂತ್ರ

ಹೇಳುತ್ತಾನೆಂದು ಅವರು ತಿಳಿದಿರಲಿಲ್ಲ. ಅವರು ತುಂಬ ನಿರಾಶರಾದರು. ಕೊನೆಗೆ ತಮ್ಮ ವ್ಯಥೆ ತಾಳಲಾರದೆ "ನಾಗರಾಜ, ನೀನು ತಿಳಿದಂತೆ ಮಾಡು. ಅವನು ಬಡವ; ನಿನಗೂ ಬೇಕಾದವ. ನಿನಗೆ ಸರಿತೋರಿದರೆ ಅವನ ಸಾಲಕ್ಕೆ ಮುಜುರೆಹಾಕುವಷ್ಟು ಹಾಕಿ, ಅವನ ಚಿನ್ನವನ್ನಾದರೂ ಹಿಂದಕ್ಕೆ ಕೊಡು. ರಾಜಿಯಿಂದ ಈ ಲೇವಾದೇವಿ ತೀರಲಿ" ಎಂದು ಉಪದೇಶಿಸಿದರು. ನಾಗರಾಜ ಮೆಲ್ಲಗೆ "ಮಾಸ್ತರರೇ, ಯಾರದ್ದಾದರೂ ಕಷ್ಟದ ಹಣಕ್ಕೆ, ಎಷ್ಟೊ ಪರಿಹಾರವನ್ನು ಯಾರೂ ಹೇಳಬಹುದು. ನಾನು ಬಿಡುಗಾಸನ್ನೂ ಹೆಚ್ಚಿಗೆ ಕೊಡಲಾರೆ. ಕೊಡಬೇಕಾದ ಹಣವನ್ನು ಅವನು ಕೊಟ್ಟರೆ, ಅವನ ಚಿನ್ನವನ್ನು ಕೊಡುತ್ತೇನೆ. ನನಗೇತಕ್ಕೆ ಅವನ ಚಿನ್ನ?" ಎಂದು ಖಂಡುತುಂಡಾಗಿ ಹೇಳಿಬಿಟ್ಟ.

ನಾರಾಯಣರಾಯರ ಮುಖಭಂಗವಾಯಿತು. ಅವರು ಮರಳಿ ಬಂದು, ಜಾನ್‌ಸನ್ ಮಾಸ್ತರರನ್ನು ಕಂಡರು. ಅವರನ್ನು ಅತಿಯಾಗಿ ಹೊಗಳಿ "ನಿಮ್ಮಲ್ಲಿ ಒಂದು ರಾಯಭಾರವನ್ನು ಮಾಡುವುದಿದೆ" ಎಂದು ಹಿಂದಣ ದಿವಸ ಪಂಜಕ್ಕೆ ಹೋದ ಕಾರಣವನ್ನೆಲ್ಲ ತಿಳಿಸಿದರು. ಅನಂತರ 'ನಿಮ್ಮ ನಾಗರಾಜ ಹೀಗೆ ಮಾಡುತ್ತಿದ್ದಾನಲ್ಲ! ನನ್ನ ಹತ್ತಿರ ಕಂಠೋಕ್ತವಾಗಿ ಸಾವಿರರೂಪಾಯಿಗಳನ್ನು ಕೊಡುತ್ತೇನೆ ಎಂದು, ಈಗ ಗುರುತೇ ಇಲ್ಲದವರಂತೆ ಮಾತಾಡುತ್ತಿದ್ದಾನಲ್ಲ' ಎಂದು ದೂರಿದರು. ಜಾನ್‌ಸನ್ ಮಾಸ್ತರರಿಗೂ ನಾಗರಾಜನ ಧೋರಣೆಯು ಚಂದವಾಗಿ ಕಾಣಿಸಲಿಲ್ಲ. 'ಇಲ್ಲ, ಅವನು ಹಾಗೆಂದಿರಲಾರ! ಚೇಷ್ಟೆಗೆಂದಿರಬಹುದು' ಎಂದು, ತಾನೊಮ್ಮೆ ರಾಯಭಾರ ಮಾಡುವುದಾಗಿ ತಿಳಿಸಿದರು. ಅವರು ಆ ರಾತ್ರಿ ಅವನಲ್ಲಿಗೆ ಹೋಗಿ ಅವನ ಮುಂದೆ 'ದಮ್ಮಯ್ಯ ದಕ್ಕಯ್ಯ'ಗಳನ್ನು ಸುರಿದರು. ತುಸುಮಟ್ಟಿಗೆ ಅವನ ಮನಸ್ಸನ್ನು ಒಲಿಸಿದರು. ಅದರಿಂದ ಲಕ್ಷ್ಮಮ್ಮನವರ ಚಿನ್ನವನ್ನಷ್ಟು ನಾಗರಾಜ ತಿರುಗಿಕೊಟ್ಟ. ಅಷ್ಟಕ್ಕೆ ಅವನ ವ್ಯವಹಾರವೇನೋ ಕೊನೆಗಂಡಿತು.

ನಾರಾಯಣರಾಯರು 'ಅಷ್ಟಾದರೂ ಆಯಿತಲ್ಲ--ನೀವು ಹೋದುದಕ್ಕೆ; ನನ್ನಿಂದ ಅದೂ ಆಗಲಿಲ್ಲ. ಆದರೂ ಇನ್ನೂ ನಮ್ಮ ಜುಟ್ಟು ಅವನ ಕೈಯಲ್ಲಿದೆ; ಅಚ್ಯುತ ಕೊಟ್ಟ ಪ್ರಾಮಿಸರಿ ನೋಟಿದೆ. ನಾನು ಸಾಕ್ಷಿಹಾಕಿ ಬರೆಯಿಸಿ, ಅಚ್ಯುತನಿಂದ ಅವನಿಗೆ ಕೊಡಿಸಿದುದು. ಇವನಂಥವರಿಗೆ

ಆ ದಿನವೇ ನಾನು ಬರಿಯ ಚೀಟಿಯಲ್ಲಿ ಸುಧಾರಿಸಬೇಕಿತ್ತು" ಎಂದರು.

ಮರುದಿನ ಅಚ್ಯುತರಾಯ ಕಡಬಕ್ಕೆ ಕಾಲಿಟ್ಟೊಡನೆಯೇ ಜಾನ್ಸನರು ಅವನಿಂದ, ಮದುವೆಗೆ ಮುಂಚಿತವಾಗಿ ಟೀಪಾರ್ಟಿಯನ್ನು ಕಿತ್ತರು. ಅದನ್ನು ಕೇಳಿದ ನಾಗರಾಜ, ಕ್ಲಬ್ಬಿಗೆ ಬರಲೇ ಇಲ್ಲ. ಅಂತು ಹತ್ತೆಂಟು ದಿನಗಳ ತನಕ ಅವನು ಆ ಕಡೆ ಉದಯಿಸಲೇ ಇಲ್ಲ. ಇತ್ತ ಅಚ್ಯುತನೂ ನಾರಾಯಣರಾಯರೂ ಯಾವಾವ ಗೆಳೆಯರನ್ನು ಕಾಡಿ, ಬೇಡಿ ಮುನ್ನೂರು ರೂಪಾಯಿ ಸಾಲವನ್ನು ಕೊಡಿಸಿದರು. 'ನಮ್ಮ ಶಕ್ತಿಗಿಂತ ಮೀರಿದ ಸಾಲ ನಮಗೆ ಬೇಡ'ವೆಂದು ಅಚ್ಯುತ ಅನ್ನುತ್ತಲೇ ಇದ್ದ.

ಚಿತ್ರಾಪೂರ್ಣಿಮೆಯ ದಿನ ಅಚ್ಯುತನ ಲಗ್ನವಾಗುವುದೆಂದು ನಿರ್ಣಯವಾಯಿತು. ಅದೇನೋ ಸುಲಭದ ಕೆಲಸ. ಆದರೆ ಅವನ ಭಾವನನ್ನು ಒಲಿಸಿ, ಲಗ್ನಕ್ಕೆ ಬರುವಂತೆ ಮಾಡುವ ಕೆಲಸ ಮಾತ್ರ ಕಠಿಣದ್ದೆಂದು ಅಚ್ಯುತ ತಿಳಿದಿದ್ದ. ಲಕ್ಷ್ಮಮ್ಮನೇ ಅಳಿಯನ ಮನೆತನಕ ಪಯಣ ಬೆಳೆಸಿದರೂ ನಿರರ್ಥಕವಾಯಿತು. ಸೀತೆಯು ಆ ದಿನ ಗಂಡನ ಮೇಲೆ ರೇಗಿ ಕೆಂಡವಾದಳು. ಅದು ವಿಫಲವಾಗುತ್ತಲೆ ನಾರಾಯಣರಾಯರು ಪುಟ್ಟಯ್ಯನವರನ್ನು ಕರೆದುಕೊಂಡು ನರಸಿಂಹಯ್ಯನವರಲ್ಲಿಗೆ ಸಂಧಾನಕ್ಕೆ ಬರುವಂತಾಯಿತು. ಊರುಮನೆಯವರಾದ ಪುಟ್ಟಯ್ಯನವರ ಮಾತನ್ನು ಮೀರಲಾರದೆ—'ಅವನ ಗುಣ ನೋಡಿಯಲ್ಲ; ನಿಮ್ಮ ಮುಖನೋಡಿ ಬರುತ್ತೇನೆ"ಂದರು ನರಸಿಂಹಯ್ಯ.

ಇತ್ತ ರುಕ್ಮಿಣಿಯಂತು ತನ್ನ ಲಗ್ನ ನಿಶ್ಚಯವಾದ ದಿವಸದಿಂದ, ಸೀತೆಯ ಮನೆಯಕಡೆಗೆ ಸುಳಿಯಲೇ ಇಲ್ಲ. ಲಗ್ನದ ಬೆಳಿಗ್ಗೆ ಮಾತ್ರ ಓಡಿ ಬಂದು, ಹೊತ್ತು ಮೂಡುವ ಮೊದಲೇ ಸೀತೆಯ ಕಾಲಿಗೆರಗಿ, ಮಗುವಿನಂತೆ ಅತ್ತಳು. "ನೀವು ನನ್ನನ್ನು ಉಳಿಸಿದಿರಿ" ಎಂದಳು. ಕನ್ನೆಯಾಗಿಯೇ ಉಳಿಯುವ ಯೋಗ ತಪ್ಪಿತೆಂದು ಅವಳು ಹರ್ಷತಾಳುವ ಗಳಿಗೆ ಬಂದಿತು.



## ೧೧ನೆಯ ಅಧ್ಯಾಯ

ಜಾನ್ ಸನ್ ಮಾಸ್ತರರು ಅಚ್ಯುತನಿಂದ ಕಾಫಿ ತರಿಸಿಕೊಂಡು, ದಕ್ಕಿಸಿಯೂ ಆಯಿತು. ಅವರಿಗೆ ತಾವು ನಾರಾಯಣರಾಯರ ಜತೆಯಲ್ಲಿ ಎಮ್ಮೆಯ ಖರೀದಿಗೆ ಹೋದ ಕತೆಯನ್ನು ನೆನೆದು, ನಕ್ಕು ನಕ್ಕು ಹೊಟ್ಟೆ ಹುಣ್ಣಾಗುತ್ತದಂತೆ. "ಅಪ್ಪ! ಈ ಮಾಸ್ತರರು ನನ್ನನ್ನು ಪೆಂಗುಬಡಿಸಿದರಲ್ಲ" ಎನ್ನುತ್ತಾರೆ. ಇನ್ನು ಸ್ವಂತ ಮೆಹನತ್ತಿನಿಂದ, ಅಚ್ಯುತಗೆ ಒಂದು ಗೌರವ ಕೂಟವನ್ನು ತಮ್ಮ ಕ್ಲಬ್ಬಿನಲ್ಲಿ ಏರ್ಪಡಿಸಿದರು. ಇದು ಅಚ್ಯುತರಾಯ ಮದುವೆಯಾಗಿ ಬಂದ ಬಗ್ಗೆ-ಸಂತೋಷ ಕೂಟ. ಜಾನ್ ಸನ್ ಮಾಸ್ತರರು ಮದುವೆಗೆ ಮುಂಚಿತವಾಗಿ ಅವನಿಂದ ಮುಂಗಡ ಟೀ ಪಾರ್ಟಿ, ಉಪಹಾರ ದೊರಕಿಸಿಕೊಂಡಿದ್ದರಷ್ಟೆ. ಮದುವೆ ಮನೆಯಲ್ಲೂ ಅತಿಥಿಗಳಾಗಿದ್ದರು.ದಿಬ್ಬಣ ಮನೆಗೆ ಮರಳಿದ ಬಳಿಕ ಕೊಂಬಾರಿನಲ್ಲೂ ಬ್ರಾಹ್ಮಣರ ಮನೆಯ ಹುಳಿ, ಸಾರುಗಳನ್ನು ಸವಿದಿದ್ದರು. ಈ ಎಲ್ಲ ಋಣ ಸಲಿಸುವ ಬಗೆ ಹೇಗೆ? ಹಾಗೆಂದು ಅವರ ಮುತುವರ್ಜಿಯಿಂದ ಕ್ಲಬ್ಬಿನಲ್ಲಿ ಒಂದು ಸನ್ಮಾನ ಕೂಟದ ಏರ್ಪಾಟಾಯಿತು. "You husband and wife must come"-ಎಂದು ಆಗ್ರಹದ ಆಮಂತ್ರಣವಿತ್ತು ಅಚ್ಯುತಗೆ! ಆದರೆ ರುಕ್ಮಿಣಿ ಬಂದಾಳೇ? ಹಾಗೆ ಬರಲು ಪ್ರೋತ್ಸಾಹಿಸಿದ ಅಚ್ಯುತನ ಮಾತೂ ವ್ಯರ್ಥವಾಯಿತು. "ನೀವೇ ನನ್ನ ಬದಲು ಎರಡೆರಡು ಕಾಫಿ ಮುಗಿಸಿಬಿಡಿ" ಎಂದಳು ಅವಳು. ಆದರೆ ಕಡಬದ ಊರಿನ ತನಕ ಬಂದು, ಆಕೆ, ನಾರಾಯಣ ಮಾಸ್ತರರ ಮನೆಯ ಔತಣವನ್ನು ಸ್ವೀಕರಿಸದೆ ಹೋಗಲಿಲ್ಲ. ಕ್ಲಬ್ಬಿಗೆ ಬರುವಷ್ಟು ಮುಂದಾಳಲ್ಲವಷ್ಟೆ.

ಸಂತೋಷ ಕೂಟದ ದಿನ ಕ್ಲಬ್ಬಿನಲ್ಲಿ ಜಾನ್ ಸನರೇ ಎಲ್ಲ ಭಾಗ ವಹಿಸಿದರು. "Our hearty congratulations to Mr. Vidwan Achutha Row S. S, L. C. Trained." ಅಂದರು. ಕೊನೆಗೆ "ಹೀಗೊಂದು ಮದುವೆಯಾದರೆ ಇಷ್ಟೆಲ್ಲ coffee, tiffin ಸಿಗುತ್ತದೆ ಎಂದು ತಿಳಿದ ಮೇಲೆ ನಾನೂ ಒಂದು marriage ಮಾಡಿಕೊಳ್ಳುತ್ತೇನೆ. ಆದರೆ ಮಿ। H· M. must help me in buying a buffalo"

ಎಂದರು. ಎಲ್ಲರೂ ನಕ್ಕರು. ಅವರ ಕೊನೆಯ ಮಾತಿನ ಅರ್ಥ ತಿಳಿದವರಿಗೇ ತಿಳಿದಿತ್ತು.

ದಂಪತಿಗಳು ಜೊತೆಯಾಗಿ ಕೊಂಬಾರಿಗೆ ಹೊರಟರು. ಅವರು ಊರಿಗೆ ಹೋದ ಬಳಿಕ ನಾರಾಯಣರಾಯರು, ಜಾನ್‌ಸನರೊಡನೆ "ನೋಡಿದಿರಾ ಮಾಸ್ತರರೇ, ನಮ್ಮ ನಾಗರಾಜ ಮದುವೆಗೂ ಚಕ್ಕರು ಕೊಟ್ಟ; ಟೀಪಾರ್ಟಿಗೂ ಬರಲಿಲ್ಲ-ಅಲ್ಲವೇ" ಎಂದರು.

"ಅವನೋ-ನಮ್ಮ ಸೋಶಿಯಲ್ ಕ್ಲಬ್ಬಿನಲ್ಲಿ ಯಾಕೆ ಕೊಟ್ಟದ್ದು? ಊರಲ್ಲಿ ಮದುವೆಯಾದವರಿಗೆಲ್ಲ ಟೀಪಾರ್ಟಿ ಕೊಡುತ್ತೀರಾ?"-ಎಂದು ನನ್ನನ್ನು ಕೇಳಿದ. ಅಂದರೆ ಅವನಿಗೆ ಈ ಅಚ್ಯುತನ ಹಣದ ವಹಿವಾಟಿನಲ್ಲಿ ಬೇಸರ ಬಂದಿರಬೇಕು. ಆದರೂ ಚಿಂತೆಯಿಲ್ಲ, ನಾಗರಾಜ ತನ್ನ ಮಾವನ ಅಳಿಯ, ಎಂದು ತಿಳಿದ ಹಾಗಾಯಿತಲ್ಲ" ಎಂದರು ಜಾನ್‌ಸನರು.

ಇತ್ತ ಮದುವೆಯಾದ ದಿನದಿಂದ, ಮಳೆ ಬೀಳುವ ಗಳಿಗೆಯ ತನಕ ಅಚ್ಯುತ ರುಕ್ಮಿಣಿಯರಿಗೆ ಓಡಾಟವೇ ಓಡಾಟ--ಕೊಂಬಾರಿಂದ ಪಂಜಕ್ಕೆ, ಪಂಜದಿಂದ ಕೊಂಬಾರಿಗೆ. ಪುಟ್ಟಯ್ಯನವರು ಅಳಿಯನನ್ನು ಉಪಚರಿಸಿ, ಹೊಗಳಿ ದಣಿದರು. ಲಕ್ಷ್ಮಮ್ಮ ಸೊಸೆಯ ಗುಣ, ರೂಪ ಕೊಂಡಾಡಿ ತಣಿದಳು. 'ಮದುವೆಯನ್ನೇನೋ ಮುನ್ನೂರು ರೂಪಾಯಿಯೊಳಗೆ ಮುಗಿಸಬೇಕು, ಹೆಚ್ಚಿನ ಯಾವ ಗದ್ದಲವೂ ಬೇಡ'-ಎಂದು ಗಂಡಿನ ಕಡೆಯವರು ನಿರ್ಣಯಿಸಿದ್ದರೆ, ಹೆಣ್ಣಿನ ಕಡೆಯವರು-"ನಮಗಿರುವುದು ಒಬ್ಬಳು ಹುಡುಗಿ. ಈಗ ದರ್ಬಾರು ಮಾಡದೆ ಇನ್ನೆಂದು ಮಾಡುವುದಂತೆ!"-ಎಂದು ಅಬ್ಬರದಲ್ಲಿ ಮದುವೆ ಸಾಗಿಸಿದರು. ನಾಲ್ಕು ದಿವಸದ ಮದುವೆ ಯಥಾಸಾಂಗವಾಗಿ ನಡೆಯಿತು. ಹೆಂಗುಸರೆಲ್ಲರೂ ಹಾಡಿ ದಣಿದಿದ್ದರು; ಓಡಿ ದಣಿದಿದ್ದರು. "ರುಕ್ಮಿಣಿ ತುಸು ನಾಚಿಕೆ ಇಲ್ಲದ ಹೆಣ್ಣು, ಮಂಟಪದಲ್ಲಿ ಕುಳಿತಾಗ ಗಂಡನನ್ನು ಕದ್ದು ನೋಡುವುದೊಂದೇ ಕೆಲಸ! ನಾಳೆ, ಅತ್ತೆಯ ಮನೆಗೆ ಹೋಗುವ ವರೆಗೆ ಅಷ್ಟು ಜೀವ ಎಳೆಯುವುದೇನು?"-ಎಂದು ಕೆಲವರು ಟೀಕಿಸಿದ್ದರು. ಈ ಮಾತು ಅಚ್ಯುತನ ಕಿವಿಗೂ ಬಿದ್ದಿತ್ತು. ಸಿನೆಮಾರಾಣಿಯರನ್ನು ಚಿತ್ರದಲ್ಲಿ ಕಂಡ ಅಚ್ಯುತರಾಯನಿಗೆ, ತನ್ನ ಹೆಂಡತಿ 'ಮಾಡರ್ನ್' ಎಂಬ ಹಿಗ್ಗೂ

ಆಯಿತು. ಹಾಗೆ ನೋಡಹೋದರೆ, ಮಾವನ ಮನೆಯಲ್ಲಿದ್ದಷ್ಟು ದಿನ ಅವನೇ ಕತ್ತು ಬಿಗಿದು ಆಚೀಚೆ ಒಳುಕದೆ, ರುಕ್ಮಿಣಿಯ ಬಳಿ ಓಡಾಡುತ್ತಿದ್ದವ. ಅದನ್ನು ಕಂಡವರು "ಹೆಣ್ಣು ಮಾಣಿಯನ್ನು ನೋಡಿದರೆ, ಮಾಣಿ ಗೋಡೆಯನ್ನು ನೋಡುತ್ತದೆ. ಪ್ರಾಯಶಃ ಇದು ಒತ್ತಾಯದ ಮದುವೆಯಾಗಿರಬೇಕು. ಗಂಡನ ಮನೆ ಸೇರಿದ ಮೇಲಾದರೂ, ಈ ಮಾತಿನ ಮಲ್ಲಕ್ಕೆಯ ಕೈಯಲ್ಲಿ, ಅವನು ಬಚಾಯಿಸಿ ಉಳಿದರೆ ಸಾಕು" ಎಂದು ಕೆಲವರು ರಾಗ ಎಳೆದುದೂ ಉಂಟು.

ಮಾವನ ಮದುವೆಯೆಂದರೆ, ಮಾಲಕ್ಷ್ಮಿ, ಸರಸ್ವತಿ, ಮೂಕಿಯರಿಗೆ ತುಂಬಾ ಉತ್ಸಾಹವಾಗಿತ್ತು. ನಂಟರ ದಾಕ್ಷಿಣ್ಯಕ್ಕೆ ಕಟ್ಟುಬಿದ್ದ ನರಸಿಂಹಯ್ಯ, ದಿಬ್ಬಣಕ್ಕೆ ಯಜಮಾನರಾಗಲು ಒಪ್ಪಿದ ಮೇಲೆ ಕೇಳಬೇಕೆ? ಕೊಂಬಾರಿಗೂ ಅವರು ಬಂದಿದ್ದರು. ಆ ಮೇಲೆ ದಿಬ್ಬಣದವರು ಇಳಿದುದೇ ನರಸಿಂಹಯ್ಯನವರ ಮನೆಯಲ್ಲಿ. ಆ ಮೇಲೆ ಕೊಂಬಾರಿಂದ ನರಸಿಂಹಯ್ಯನವರು ಆರತಿಅಕ್ಷತೆಗಳಿಗೆ ದಂಪತಿಗಳನ್ನು ಕರೆಯಿಸಿಕೊಂಡರು. ಆ ಕಾಲದಲ್ಲೆಲ್ಲ ಸರಸ, ಮಾಲಕ್ಷ್ಮಿಯರು "ಮಾವ ಬಂದರೆ ಸೇವಿಗೆ ಮಾಡಬೇಕು" ಅನ್ನುತ್ತಿದ್ದರು. "ರುಕ್ಮಿಣಿ ಕಾಯಿಹಾಲು ರುಚಿ ಅಲ್ಲವೇ" ಎಂದು ಪರಿಹಾಸ್ಯ ಮಾಡಿದರು. ಏನಾದರೇನು? ರುಕ್ಮಿಣಿ ಸ್ವರ್ಗದಲ್ಲೇ ನಲಿಯುತಿದ್ದಾಳೆ. ಅವಳ ಕತ್ತನ್ನೊತ್ತಿ ಹಿಡಿದ ವ್ಯಥೆಯು ಮಾಯವಾಗಿದೆ. ಬುದ್ಧಿವಂತನಾದ ಅಚ್ಯುತ ಅವಳ ಬಗಲಿಗೆ ಬಿದ್ದಿದ್ದಾನೆ. ಮಾಲಕ್ಷ್ಮಿ ಅದನ್ನೇ ಹೇಳಿದಳು: "ರುಕ್ಮಿಣಿ, ಯಾರ ಹಕ್ಕಿನ ಗಂಡ ಅಚ್ಯುತಮಾವ ಹೇಳು?" ಎಂದು ಅವಳನ್ನು ಚಿವುಟಿ, ಪೀಡಿಸಿದಳು. ಸೀತೆ, ಲಕ್ಷ್ಮಿಯರು ಮದುಮಕ್ಕಳ ಚೆಲುವನ್ನು ನೆನೆನೆನೆದು ಹಿಗ್ಗಿದರು.

ನರಸಿಂಹಯ್ಯ ಮಾತ್ರ ಅಳತೆಗೆ ಮೀರದ ರೀತಿಯಿಂದ, ಪುಟ್ಟಯ್ಯ ನಾರಾಯಣರಾಯರ ದಾಕ್ಷಿಣ್ಯಕ್ಕೆ ತಪ್ಪಲಾರದೆ, ಕೊಂಬಾರಿಗೆ ಹೋಗಿದ್ದರು. ಅತ್ತೆಯ ದಾಕ್ಷಿಣ್ಯಕ್ಕೆಂದು ಮದುವೆಗೆ ಬಂದಿದ್ದರು; ಸೀತೆಯ ದಾಕ್ಷಿಣ್ಯಕ್ಕೆಂದು ಭಾವನನ್ನು ತಮ್ಮ ಮನೆಗೂ ಕರೆಯಿಸಿಕೊಂಡರು. ಆ ದಿನ ರುಕ್ಮಿಣಿ-ಅಚ್ಯುತರಿಗೆ ಚೆಲುವಿನ ಉಡುಗೊರೆಯನ್ನೂ ಕೊಟ್ಟರು. ರಿಯಾತಿಯಿಂದ ಪುಟ್ಟಯ್ಯನವರ ಮಗಳೊಡನೆ—"ಆಯಿತಲ್ಲ, ನಿನ್ನ

ಮನಸ್ಸಿಗೆ ಬಂದ ಗಂಡನೇ ಸಿಕ್ಕಿದನಲ್ಲ" ಎಂದು ಪರಿಹಾಸ್ಯವನ್ನೂ ಮಾಡಿದರು. ಅವರು ಮಾತನಾಡಿಸದ ಒಬ್ಬನೇ ಒಬ್ಬ ವ್ಯಕ್ತಿಯೆಂದರೆ– 'ಅಚ್ಯುತರಾಯ'. ಅಚ್ಯುತ ಅದನ್ನು ಬಲ್ಲ; ಕಂಡು ಒಳಗೊಳಗೇನೆ ನಗುತಿದ್ದ.

ಎಲ್ಲ ಊಟ ಉಪಚಾರ ಔತಣಗಳ ಗದ್ದಲ ಮುಗಿದು, ಅಚ್ಯುತ ತಾಯ ಮುಂದೆ ಕುಳಿತು, ಮದುವೆಯ ವೆಚ್ಚದ ಲೆಕ್ಕಾಚಾರ ಮಾಡುವ ಕಾಲ ಬಂದಿತು. ಖರ್ಚು ಮುನ್ನೂರರ ಮೇಲೆ ನೂರಾಗಿತ್ತು. ದೇವರ ದಯದಿಂದ ಒಂದು ಕೆಲಸ ದೊರೆತರೆ ಅಂಗಡಿಯವರ ಸಾಲ ಮೊದಲು ಕೊಡಬೇಕು, ಎಂದುಕೊಂಡ. ನೆಂಟರು,ಗೆಳೆಯರು ದೂರವಾದ ಮೇಲೆ ಅಚ್ಯುತ ಹೆಂಡತಿಯನ್ನು ಬಿಟ್ಟ ಗಳಿಗೆಯಿಲ್ಲ. ಅವಳೂ ಇವನಿಂದ ದೂರ ವಾದ ಗಳಿಗೆಯಿಲ್ಲ. ರುಕ್ಮಿಣಿಯ ಮಾತುಗಾರಿಕೆಯಿಂದ ತನ್ನ ಜೀವನದ ಏನೋ ಕೊರತೆಯೊಂದು ನೀಗಿದಂತೆ ಅಚ್ಯುತನಿಗೆ ಅನಿಸುತಿತ್ತು. ಲಕ್ಷ್ಮಮ್ಮ ಅವರ ಈ ವಿಚಿತ್ರ ಮಾತುಕತೆಗಳನ್ನು ಕೇಳಿ, ಸೊಸೆಯನ್ನು ಕರೆದು–"ರುಕ್ಮಿಣಿ, ನೀವು ಏನೂ ಮಾಡಿ. ಆದರೆ ಬೇರೆಯವರ ಮುಂದೆ ಇಷ್ಟು ತುಂಬ ಮಾತಾಡುತ್ತಿರಬೇಡಿ" ಎಂದಳು. "ಮಗು, ನಾವೆಲ್ಲ ಸಣ್ಣದಿರುವಾಗ ಗಂಡನ ಮನೆಗೆ ಬಂದು, ವರ್ಷ ಕಳೆದರೂ ಮಾತಾಡಿ ದವರಲ್ಲ. ಹಳೆಯರಿಗೆ ಅದೆಲ್ಲ ಚಂದಕಾಣಿಸದು" ಎಂದು ಸೊಸೆಗೆ ಉಪದೇಶಮಾಡಿದಳು. ಅದರಿಂದಾಗಿ ಇತರರ ಮುಂದೆ ರುಕ್ಮಿಣಿ ತುಸು ಎಚ್ಚರದಿಂದಲೇ ವರ್ತಿಸುತಿದ್ದಾಳೆ.

ಅಚ್ಯುತನಿಗೆ ರುಕ್ಮಿಣಿಯನ್ನು ಕರೆದುಕೊಂಡು ವಾಕಿಂಗಿಗೆ ಹೊರ ಡುವ ಇಷ್ಟವಿದೆ—ಅಂದರೆ, ಅವರ ಮನೆಯ ಹಿಂದಿನ ನಿರ್ಜನವಾದ ಗುಡ್ಡಕ್ಕೆ. ಆದರೆ ಅವಳು ಬಾರಳು. "ನನಗೆ ಕೆಲಸವಿದೆ. ಅತ್ತೆ ಒಬ್ಬರೇ ಮನೆಯಲ್ಲಿ ದಣಿಯುವುದೇ?" ಎಂದು ನೆಪಹೇಳಿ, ಅವನಿಂದ ತಪ್ಪಿಸಿ ಕೊಂಡು ಓಡುತಿದ್ದಳು. ಅಚ್ಯುತ ತೀರ ಹಗಲುಗನಸಿನಲ್ಲಿ ನಿರತನಾಗಿ ದ್ದಾನೆ. 'ಅವಳಿಗೆ ಇನ್ನೂ ಶಿಕ್ಷಣ ಕೊಡಬೇಕು. ಕಾವ್ಯಗಳನ್ನು ಓದಿ ಹೇಳಿ, ಅವಳನ್ನು ರಸಿಕಳನ್ನಾಗಿ ಮಾಡಬೇಕು. ತಾವು ಮುದ್ದಣ್ಣ — ಮನೋರಮೆಯಂತಾದರೂ ಆಗಬೇಕೆ'ಂದು ಹಂಬಲ. 'ನಿನಗೆ ಸಂಗೀತ ಬರುತ್ತದೆಯೇ?' ಎಂದು ಅವಳನ್ನು ಕೇಳಿದ್ದೂ ಆಯಿತು.

‘ಹಾಗೆಂದರೆ?’ ಎಂದಳು ರುಕ್ಮಿಣಿ. ‘ಹಾಡು ಹೇಳಲು ಬರುತ್ತದೆಯೇ?’ ಎಂದ ಅಚ್ಯುತ. ‘ಶೋಭಾನೆ ಹಾಡೇ?’ ಎಂದಳು. ‘ಅಲ್ಲವೇ! ಪದ ಹಾಡಲು, ಹಾರ್ಮೋನಿಯಂ ಬಾರಿಸಲು ಬರುತ್ತದೆಯೇ-ಎಂದು ಕೇಳಿದೆ’ ಎಂದ. ‘ಇಸ್ಸಿಸ್ಸೀ-ಹೆಂಗಸರು ಹಾರ್ಮೋನಿ ಬಾರಿಸುವುದೇ’ ಎಂದಳು ಆ ಹಳ್ಳಿಯ ಹುಡುಗಿ.

ತುಸು ನಿರಾಶೆಯ ಸಂಗತಿಯೇ ಅದು. ‘ತಾನು ಸಂಗೀತ ಕಲಿತಾದರೂ ಅವಳಿಗೆ ಗಾಯನ ಶಿಕ್ಷಣ ಕೊಡುತ್ತಿದ್ದರಾಗುತಿತ್ತು’ ಎಂಬ ಹುಮ್ಮಸ ಅಚ್ಯುತನಿಗುಂಟಾಯಿತು. ಆದರೆ ರುಕ್ಮಿಣಿ ಸಂಗೀತದ ವಿಷಯದಲ್ಲೇ ನಾಚಿಕೆ ಇರಿಸಿಕೊಳ್ಳಬಾರದಲ್ಲ.

“ತನ್ನ ಮದುವೆಯಾದ ಮೇಲೆ Mr. Achuth ಕಾಣೆ. ನಮ್ಮ ಕ್ಲಬ್ಬಿನ ಆಟಕ್ಕೂ ಇಲ್ಲ; ಯಕ್ಷಗಾನಕ್ಕೂ ಇಲ್ಲ. All under the thumb of wife” ಎಂದು ಜಾನ್‌ಸನರು ಟೀಕಿಸಿದರು. ಕಡಬಕ್ಕೆ ಬಂದರೂ ಅಚ್ಯುತ, ಸಂಜೆಗೆ ಕೊಂಬಾರಿಗೇನೆ ಮರಳುತ್ತಾನೆ. ಒಂದೆರಡು ಬಾರಿ ಬಂದಾಗ, ಅವನಿಗೆ ನಾಗರಾಜನ ದರ್ಶನವಾಗಿತ್ತು. ಅಚ್ಯುತ ತಾನಾಗಿ ಮುಂದುವರಿದು “ನಾಗರಾಜ! ನೀನು ಮದುವೆಗೂ ಬರಲಿಲ್ಲ, ನಮ್ಮ ಮನೆಗೂ ಬರಲಿಲ್ಲ”-ಎಂದನು. ನಾಗರಾಜ ಏನೇನೋ ಸುಳ್ಳು ನೆಪಹೇಳಿ ಕುಳಿತನು. ಜಾನ್‌ಸನರು ಪರಿಹಾಸ್ಯಕ್ಕೆ “ಅಚ್ಯುತ, ನೀನು ಇನ್ನೊಂದು ಮದುವೆಯಾದರೆ, ಖಂಡಿತವಾಗಿಯೂ ಅವನು ಬರುತ್ತಾನೆ” ಎಂದರು. ಆಗ ಎಲ್ಲರೂ ನಕ್ಕರು. ಕಡೆಗೆ ಜಾನ್‌ಸನರು “Mr. Nagaraj, I also one marriage make! Don't do like this” ಎಂದರು.

“ಹೌದೀಗ, ನಮ್ಮ ಜಾನ್‌ಸನ್ ಮಾಸ್ತರರ ಮದುವೆ ಔತಣ ನಮಗೆ ಬರುವುದು ಯಾವಾಗ?” ಎಂದು ಸಂಕಪ್ಪ ಗೌಡರು ಕೇಳಿದರು. “ಹೌದಾ ಗೌಡರೇ, my marriage, no use to these ಕೊದ್ದೆಲ್‌s, ಅಂದರೆ ಔತಣಕ್ಕೆ ಕೋಳಿ, ಬರ್ಕ, ಮೊಲ ಇಲ್ಲದೆ ಆಗಲಿಕ್ಕಿಲ್ಲ” ಎಂದರು ಜಾನ್‌ಸನರು. ನಾರಾಯಣರಾಯರು “ಇದು ನಮ್ಮನ್ನು ದೂರ ವಿಡುವ ಉಪಾಯವೋ? ನಮಗೆ ಕಾಫಿ ತಿಂಡಿ ಕೊಟ್ಟರೆ ಸಾಕು. ನಿಮ್ಮ dinner ಬೇಡ” ಅಂದರು. ಆದರೆ ಯಾವುದೊಂದು ಹಾಸ್ಯದಲ್ಲಿಯೂ

ಸದಾ ಮಾತಿಗೆ ಮುಂದಾಗುತ್ತಿದ್ದ ನಾಗರಾಜ ಇವನ್ನ ... ಇದ್ದ
ಚಿತ್ರ ನಾರಾಯಣರಾಯ ಮಾಸ್ತರರ ... ಮವನ್ನು ಈಚೆಗೆ ನೋಡಿಲ ಕಂಡಿಲ್ಲ. ... ನನ್ನ ನನಗೆ ತುಂಬ ಪ್ರೀತಿ. "ನಾಗರಾಜ is good fellow; only he has brass ears. ಆದರೆ ಅವನನ್ನು round ಆದ ಬಟಾಣಿ. ನನಗೆ ಪ್ರಾಣ ತಿನ್ನುತ್ತಾನೆ; ಎಲ್ಲಿ ಸಿಗಿದಿರುತ್ತಾನೋ"-ಎಂದುಕೊಳ್ಳುತ್ತಿದ್ದ.

ಬೇಸಗೆ ಮುಗಿದು, ಮಳೆಗಾಲ ತೊಡಗುವುದರೊಳಗಾಗಿ ಲಕ್ಷ್ಮಮ್ಮ ಹೊಲಗೆಲಸಕ್ಕೆ ಹೊರಡದೆ ಗತ್ಯಂತರವಿಲ್ಲ. ಈಗ ಮಗಳೂ ಮನೆಯಲ್ಲಿರುವವಳಷ್ಟೆ. ಆದರೆ ಹೊಸ ಮನೆಗೆ ಬಂದ ಹೊಸತರಲ್ಲಿ—ಅಡುಗೆ, ಮುಸುರೆಗಳ ಕೆಲಸಕ್ಕೆ ಹಚ್ಚುವುದು ಚಂದವಲ್ಲ—ಎಂದವನ್ನು ತಾನೇ ಮಾಡುತ್ತಿದ್ದಳು. ಬರಿಯ ತರಕಾರಿ ಹೆಚ್ಚುವ ಕೆಲಸ ರುಕ್ಮಿಣಿಗೆ. ಆದರೆ ಈಗ ಅತ್ತೆ ಹೊರಗೆಲಸಗಳಿಗೆ ಹೋಗಬೇಕೆಂಬುದು ಅವಳಿಗೂ ತಿಳಿದಿದೆ. "ಅತ್ತೆ, ನೀವು ಹೋಗಿ; ನಾನೇನು ಮಗುವಲ್ಲ! ನೀವು ಬರುವುದರೊಳಗೆ ಅಡುಗೆ ಮಾಡಿಟ್ಟಿರುತ್ತೇನಲ್ಲ" ಎನ್ನುತ್ತಾಳೆ. ಆದರೆ ಲಕ್ಷ್ಮಮ್ಮಗೆ ಮನಸ್ಸು ಬರಲಾರದು. ಆಕೆಗೆ ಮಗ ಬೇರೆಯಿಲ್ಲ; ಸೊಸೆ ಬೇರೆಯಿಲ್ಲ ಎಂದು ಕಾಣುತ್ತದೆ. ಅವಳನ್ನು ಈಗಲೇ ದಣಿಸಬಾರದೆಂದು ಎಣಿಸುತ್ತಾಳೆ. ಆದರೆ ಕೊನೆಗೆ ರುಕ್ಮಿಣಿಯೇ ಜಯಶಾಲಿಯಾದಳು. ಗಂಡನ ಮೂಲಕ ಅತ್ತೆಯನ್ನು ಒತ್ತಾಯಿಸಿ, ಅಡುಗೆಯ ಕೆಲಸವನ್ನು ತಾನು ವಹಿಸಿಕೊಂಡಳು. ಅದಕ್ಕೊಂದು ಅವಳು ಹೊಸಬಳೇ! ಅಲ್ಲದೆ ಅವಳ ಕೈಯೂ ರುಚಿಕರ. ನಿತ್ಯ ಅಡುಗೆಮನೆಯಲ್ಲಿ ಗುಜು ಗುಜು ಮಾಡುತ್ತ, ಕೆಲಸ ಸಾಗಿಸಿದಳು. ಈಗ ಅಚ್ಯುತನಿಗೆ ಅಡುಗೆ ಮನೆ ಬಿಡುವ ಮನಸ್ಸಿಲ್ಲ. "ಮಗು, ಬಯಲಿನ ತನಕ ಹೋಗಿ ಬರುವ" ಎಂದು ತಾಯಿ ಕರೆದರೆ, "ರುಕ್ಮಿಣಿ, ಹೋಗಿಬರುತ್ತೇನೆ" ಎಂದು ಹೇಳಿ ಹೊರಡುವ ಮನಸ್ಸು ಅವನಿಗೆ.

ಮಳೆಗಾಲ ತೊಡಗಿಬಿಟ್ಟಿದೆ. ಎರಡು ದಿನಕ್ಕೊಮ್ಮೆ ಟಪ್ಪಾಲು ಇದಿರುಕಾಯಲು ಕಡಬಕ್ಕೆ ಓಡುತ್ತಾನೆ. ಆ ನಿರೀಕ್ಷೆಯೊಡನೆಯೇ ವಿರಹತಾಪ ಬೆರೆಯಬೇಕೆ? ನಾಲ್ಕು ದಿನ ತಡವಾಗಿಯೇ ಬರಲಿ, ಆ ಸುಕುಂ—ಎಂದು ಮನಸ್ಸು ಹೇಳುತ್ತದೆ. ಮದುವೆಯ ಹೊಸತಿಗೇನ

ಬೆಳ್ತಂಗಡಿಗೆ ಹೋಗುವಂತಾದರೆ, ರುಕ್ಮಿಣಿಯ ಸರಳ ಸ್ನೇಹ, ಗೆಲುವಿನ ಮಾತುಗಳು ತಪ್ಪುವುವಲ್ಲಾ-ಎಂದು ತೋರುತ್ತದೆ. 'ಏಕೆ? ಅವಳನ್ನು ಕರೆದುಕೊಂಡು ಬೆಳ್ತಂಗಡಿಯಲ್ಲಿ ಬಿಡಾರಮಾಡಲು ಬರುವುದಿಲ್ಲವೇ' ಎಂದು ಇನ್ನೊಂದು ಯೋಚನೆ. ಕೊನೆಗೆ—"ಛೀ! ಅಮ್ಮನ ಬಳಿಯಿಂದ ತಪ್ಪಿಸಿದರೆ ಹೇಗೆ? ತಿರುಗಿ ತಾಯಿಗೆ ದುಡಿತದ ದಾಸ್ಯ ಬರುತ್ತದೆ. ತಾನು ತಿಳಿದು ಹಾಗೆ ಮಾಡುವುದು ಸರಿಯಲ್ಲ—ಎಂಬ ವಿಚಾರ ಉದಯಿಸುತ್ತದೆ. ಹಾಗೂ ಹೀಗೂ ಒಂದು ದಿನ, ಟಪ್ಪಾಲಿನ ಆಳು ಬಂದೇ ಬಂದನು. ಉದ್ದವಾದ ಒಂದು ಲಕ್ಕೋಟೆಯನ್ನು ತಂದು ಕೊಟ್ಟನು. ಅವನಿಗೆ ಬೆಳ್ತಂಗಡಿ ಮಾಸ್ತರಿಕೆಗೆ ಹುಕುಂ ನಿಜಕ್ಕೂ ಬಂದಿತು. ಒಂದು ವಾರದಲ್ಲಿ ಕೆಲಸಕ್ಕೆ ದಾಖಲಾಗುವ ಅಪ್ಪಣೆ ಆಗಿತ್ತು. ಯಶಸ್ವಿಯಾಗಿ ವಿದ್ವಾನ್ ಪಾಸಾಯಿತು, ಟ್ರೈನಿಂಗ್ ಪಾಸಾಯಿತು; ಲಗ್ನವೂ ಆಯಿತು. ಈಗ ಅದರ ಬೆಂಗಡೆಯಲ್ಲಿ ಉದ್ಯೋಗವೂ ದೊರೆಯಿತು. ತತ್ಕಾಲಕ್ಕೆ ದೊರೆತ ಕೆಲಸ, ಮಾರ್ಚಿ ತಿಂಗಳ ವರೆಗೆ. ಮುಂದೆ ಅದು ಕಾಯಂ ಆದೀತು. ತಮ್ಮ ಮನೆಗೆ ಹಿಡಿದ ಶನಿ ದೂರಾಗುವ ಗಳಿಗೆ ಬಂದಿತು. ಎಂದು ಅವನು ತಿಳಿಯುವಂತಾಯಿತು. ಅವನ ತಾಯಿಯಂತು ತುಂಬ ಹಿಗ್ಗಿದಳು. ಸೊಸೆ ಮನೆಗೆ ಬಂದ ಗಳಿಗೆಯ ಮೇಲೆಯೇ ಇವೆಲ್ಲ ಶುಭಗಳು ಒಂದರಮೇಲೊಂದು ಕಲೆತುದರಿಂದ, "ಯಾರು ಅನ್ನುವವರು, ರುಕ್ಮಿಣಿ ಜಾತಕ ಅಷ್ಟಕ್ಕಷ್ಟೆ ಎಂದು" ಎಂದು ತುಂಬ ಉತ್ಸಾಹತಾಳಿದಳು.

"ಇನ್ನು ಒಂದು ವಾರವಿದೆಯಮ್ಮ ಹೋಗಿ ಸೇರಲು. ಅಂದರೆ "ಇವತ್ತಿನಿಂದ ಐದು ದಿನವಿದೆ" ಎನ್ನುತ್ತಾನೆ. "ಹೊಸ ಊರು, ಎರಡು ದಿನ ಮುಂಚೆಯೇ ಹೋಗಬೇಕು. ಇಲ್ಲಿಂದ ಉಪ್ಪಿನಂಗಡಿಗೆ ಹೇಗೆ ಹೋಗಲಿ, ನಡೆದೇ? ಬೇಡ, ನೋಡುವ. ಹೋಗುವ ಗಾಡಿ ಸಿಕ್ಕೀತು, ಅಲ್ಲಿಂದ ಮುಂದೆ ಮೋಟರಿದೆ" ಎನ್ನುತ್ತಾನೆ. ಮಗನಿಗೆ ಪ್ರತಿ ತಿಂಗಳೂ ಇಪ್ಪತ್ತೈದು ರೂಪಾಯಿ ಸಿಗುತ್ತದೆಂದು ತಾಯಿ ಅರಿತಳು. 'ಅದರಿಂದ ಈ ವರ್ಷ ಒಂದು ನೂರೈವತ್ತು ರೂಪಾಯಿಗಳಷ್ಟಾದರೂ ಋಣ ಪರಿಹಾರವಾಗಬಹುದು?—ಎಂದು ಮನಸ್ಸಿನಲ್ಲೇ ಎಣಿಸಿಕೊಂಡಳು.

ಅಚ್ಯುತನಿಗೆ ನೌಕರಿ ದೊರಕಿದ ಸಂತೋಷವೇ ಎಲ್ಲರಿಗೆ. ರುಕ್ಮಿಣಿಗೆ ಮಾತ್ರ—ಪತಿರಾಯ ದೂರಾಗಲು ಎಷ್ಟು ನಿಮಿಷ ಉಳಿಯಿತು,

ಎಷ್ಟು ತಾಸು, ಎಷ್ಟು ದಿನ—ಎಂದು ಎಣಿಕೆಹಾಕುತ್ತಾಳೆ. ಮೆಲ್ಲಗೆ ಅವನ ಕಿವಿಯಲ್ಲಿ "ಕೆಲಸಕ್ಕೆ ಸೇರುವ ಮುಂಚಿನ ದಿನ ಹೋದರೆ ಸಾಲದೇ? ಎರಡು ದಿನ ಮುಂಚೆ ಹೋಗಿ ಏನು ಮಾಡುವುದು" ಎನ್ನುತ್ತಾಳೆ. ಅದಕ್ಕೆ ಉತ್ತರ ಬರುವ ಮೊದಲೇನೆ, "ನೀವು ಬರುವುದು ಯಾವಾಗ? ಶನಿವಾರ ಆದಿತ್ಯವಾರ ರಜೆಗೆ ಆಗಾಗ ಬರಬಹುದಲ್ಲ?" ಎನ್ನುತ್ತಾಳೆ. 'ಹೌದು, ಬರಲು, ಹೋಗಲು ಎರಡು ದಿನ ಹಿಡಿಯುತ್ತದೆ,-ಇರುವುದು ಯಾವಾಗ?' ಎನ್ನುತ್ತಾನೆ ಈತ. 'ಚೌತಿಗೆ ಪಂಜಕ್ಕೆ ಹೋಗಬೇಡವೇ?' ಎನ್ನುತ್ತಾಳೆ ರುಕ್ಮಿಣಿ. 'ಚೌತಿಗೆ ಇನ್ನೂ ದೂರ ವಿದೆ. ಅದರೊಳಗೇನೆ ಬಂದು ಹೋಗುತ್ತೇನಲ್ಲ' ಎಂದು ಭರವಸೆಯಿತ್ತ. ಹಾಗೆ ಹೀಗೆ, ಎನ್ನುವುದರಲ್ಲಿ ಐದು ದಿನಗಳು ಮುಗಿದುವು. ಆರನೆಯ ರಾತ್ರಿಯಾದರೂ ಹೊರಡಬೇಡವೇ? ರುಕ್ಮಿಣಿ—ಅಚ್ಚುತರ ಮನಸ್ಸಿನಲ್ಲಿ ಭಾವೀ ವಿರಹವನ್ನು ನೆನೆದುಕೊಂಡೇ ಆ ದಿನದ ಸಂತೋಷವೆಲ್ಲ ನಾಶವಾಯಿತು. ಸಂಜೆ ಅವನು ನಡೆದು ಕಡಬಕ್ಕೆ ಹೋಗಿ, ಅಲ್ಲಿಂದ ಉಪ್ಪಿನಂಗಡಿಗೆ ಗಾಡಿ ಹಿಡಿಯಬೇಕಿತ್ತು. ಹೊಳೆಯಲ್ಲಿ ನೀರಿದ್ದರೆ, ಮತ್ತೂ ಎರಡು ಮೈಲು ದೂರ ನಡೆಯಬೇಕು. ಅದರಿಂದ ಆತ ಸಂಜೆ ನಾಲ್ಕು ಗಂಟೆಗೇನೆ ಮನವಿಲ್ಲದ ಮನದಿಂದ ಹೊರಟ. ಆಳೊಬ್ಬ ಅವನ ಕಾಗದದ ಕಂತೆಗಳನ್ನೂ ಹಾಸುಗೆಯನ್ನೂ ಹೊತ್ತು ನಿಂತ. ತಾಯಿ, ಮನೆಯಿಂದ ರಸ್ತೆಯ ತನಕ ಬೀಳ್ಕೊಡಲು ಬಂದಳು. ನಡುಹಾದಿಗೆ ಬಂದ ಅಚ್ಚುತ, ತಿರುಗಿ ಮನೆಗೆ ಹಿಂದಿರುಗಿ, ರುಕ್ಮಿಣಿಯೊಡನೆ 'ಕಾಗದ ಬರೆ'—ಎಂದು ಹೇಳಿ ಮುಂದುವರಿದ. ರುಕ್ಮಿಣಿಗೆ ತಾನೂ ರಸ್ತೆಯ ತನಕ ಹೋಗುವ ಆತುರವಾಗಿತ್ತು.ಆದರೆ ಅತ್ತೆ ಹೊರಟದ್ದನ್ನು ಕಂಡು, ಅವಳು ಹಿಂದೆ ಸರಿಯಬೇಕಾಯಿತು.

ಲಕ್ಷ್ಮಮ್ಮ ಮಗನೊಡನೆ 'ಮನೆಗೇಕೆ ಹಿಂದೆ ಹೋದೆ' ಎಂದಳು. 'ಅವಳಿಗೆ ಹೇಳಿರಲಿಲ್ಲ. ಕಾಗದ ಬರೆದರೆ ಉತ್ತರಹಾಕು-ಎಂದು ಬಂದೆ' ಎಂದನು. 'ಅವಳಿಗೆ ಬರಹ ಬರುತ್ತದೆಯೇ? ನನಗೆ ಗೊತ್ತೇ ಇರಲಿಲ್ಲ. ಹೂಂ, ಹಾಗಾದರೆ ಇನ್ನು ಯಾರ್ಯಾರ ಕಾಲು ಹಿಡಿದು, ನಿನಗೆ ಕಾಗದ ಬರೆಯಿಸುವುದು ಬೇಡವಲ್ಲ' ಎಂದು ಆಕೆಗೆ ಆನಂದವಾಯಿತು.

ಆತ ರಾಜರಸ್ತೆಯನ್ನು ಸೇರಲು, ತಾಯಿ ಹಿಂದಕ್ಕೆ ಉಳಿದಳು.

"ಮಾಣೀ! ಹೋದವನೇ ಕಾಗದ ಹಾಕು. ಚೌತಿಗೆ ಮನೆಗೆ ಬಾ. ಸಾಧ್ಯವಾದರೆ ಅದಕ್ಕೂ ಮೊದಲು ಅಷ್ಟುಮಿ ಸಮಯ ಬಂದುಹೋಗು. ಕೊಕ್ಕಡದ ಮೇಲೆ ಇಲ್ಲಿಗೆ ಬರಲು ಸಲೀಸು ಹಾದಿಯಿದೆಯಂತಲ್ಲ" ಎಂದೆಲ್ಲ ತಿಳಿಸಿದಳು. ಮಗನನ್ನು ಬೀಳ್ಕೊಡುವಾಗ ಅವಳ ಕಂಠ ತುಂಬಿತ್ತು. ಅವಳು ಮರಳಿದಳು. ಮನೆ ಸೇರುವಾಗ ರುಕ್ಮಿಣಿ ಕಣ್ಣೀರನ್ನು ಕರೆಯುತ್ತಿದ್ದಳು. "ಇದೆಂಥದು ರುಕ್ಮಿಣಿ? ಅವನೇನು ರಾಜ್ಯಬಿಟ್ಟು ಹೋದನೇ? ಬರುತ್ತಾನಲ್ಲ, ಒಂದೆರಡು ತಿಂಗಳಲ್ಲಿ. ದೇವರು ನಡೆಯಿಸಿದರೆ ಸಮೀಪದಲ್ಲೇ ಕೆಲಸವಾದೀತು" ಎಂದು ಸೊಸೆಯನ್ನು ಸಾವರಿಸಿದಳು. ಅವರಿಬ್ಬರ ಚಿತ್ತದಲ್ಲಿ ಈ ಅಲ್ಪಾವಧಿಯಲ್ಲಿ ಅಷ್ಟು ಬಲವಾದ ಚಿತ್ತಾರದ ಕೆತ್ತನೆಯಾಗಿತ್ತೆಂದು, ಲಕ್ಷ್ಮಮ್ಮನಿಗೆ ಹೇಗೆ ಗೊತ್ತು!

ಕಡಬ ಸೇರಿದ ಅಚ್ಯುತರಾಯ, ನಾರಾಯಣ ಮಾಸ್ತರರೊಡನೆ ಎರಡು ನಿಮಿಷ ಮಾತನಾಡಿ, ಸುದ್ದಿ ತಿಳಿಸಿ ಓಡಿಬಿಟ್ಟ. "ನೀನು ಕೆಲಸ ಆದದ್ದನ್ನು ತಿಳಿಸಲು ಮೊದಲೇ ಬರಬಾರದಿತ್ತೇ? ಈ ಆರು ದಿನವೂ ಸುಮ್ಮನಿದ್ದೆಯಾ? ಹೂಂ, ಹೊಸ ಮದುವೆ; ಆಗಲಿ, ಹೋಗು ಇಲ್ಲಿ ಸಂಕಪ್ಪಗೌಡರ ಗಡು ಬಂದಾಗ ನಿನಗೆ ಬರೆಯುತ್ತೇನೆ" ಎಂದರು.

ರಾತ್ರಿ ಗಾಡಿಯು ಪಯಣತೊಡಗಿತು. ಅಚ್ಯುತನೊಡನೆ ಬಂದ ಆಳು, ಧನಿ ಗಾಡಿಯಲ್ಲಿ ಕುಳಿತೊಡನೆ ಕಡಬದಿಂದಲೇ ಮನೆಗೆ ಮರಳಿದನು. ಅಚ್ಯುತ ಗಾಡಿಯ ಗಡಬಡಕ್ಕೆ ಕುಳಿತಿರಲಾರದೆ ಮಲಗಿಕೊಂಡ. ಕತ್ತಲಾದರೂ ನಿದ್ರೆ ಹತ್ತಬೇಕೇ! ಮನಸಿನಲ್ಲೂ ಗಡಬಡವೇ. ಮೊದಲು ತಾಯಿಯೊಬ್ಬಳಿಂದ ದೂರವಾಗಿರುವುದು ಅವನಿಗೆಕಷ್ಟವಾಗಿತ್ತು. ಈಗ ಎರಡೆರಡು ಕಟ್ಟುಗಳು.

ಉಪ್ಪಿನಂಗಡಿಗೆ ಹೊತ್ತಾರೆ ಸೇರಿದವನಿಗೆ, ಎರಡು ತಾಸುಗಳ ವಿರಾಮವಿತ್ತು. ಗೆಳೆಯ ಮಾಮುಂಜಿಯನ್ನು ಅರಸಿಕೊಂಡು ಹೋದ. ಅವನು ಇದಿರಾಗಲು—"ನೀನು ನನ್ನ ಮದುವೆಗಂತು ಬರಲಿಲ್ಲ. ಈಗಲಾದರೂ ಮದುವೆ ಲೆಕ್ಕದ ಕಾಫಿ ಕುಡಿಯಲು ಬಾ" ಎಂದು ಅವನನ್ನು ಬಲವಂತ ಪಡಿಸಿ, ಕಾಫಿ ಹೊಟೇಲಿಗೆ ಕರೆದುಕೊಂಡು ಹೋದನು. ದೋಸೆ ಕಾಫಿಗಳ ಸೇವನೆಯಾಯಿತು. ತಾನು ಬೆಳ್ತಂಗಡಿಗೆ ಹೊರಟಿರುವ ಕಥಾನಕವಾಯಿತು. "ಬೇಗನೆ ಉಪ್ಪಿನಂಗಡಿಗೆ ವರ್ಗಮಾಡಿ

ಸಿಕೋ" ಎಂದು ಮಾಮುಂಜಿಯ ಉಪದೇಶವಾಯಿತು. ಉಪಹಾರವನ್ನು ಮುಗಿಸಿ ಏಳುವಾಗ ಮಾಮುಂಜಿಯು ಕಣ್ಣುಸನ್ನೆಯಾಯಿತು. ಹೀಗಾಗಿ ಹೊಟೇಲಿನವನು ಅಚ್ಯುತನಿಂದ ಹಣವನ್ನು ತೆಗೆದುಕೊಳ್ಳಲಿಲ್ಲ.

ಮಾಮುಂಜಿ, ಗೆಳೆಯನೊಡನೆ ನದಿಯ ಆಚಿನ ದಡದ ವರೆಗೂ ಬಂದು, ಬಸ್ಸು ಹೊರಡುವ ತನಕವು ಜತೆಗಿದ್ದು ಹೊರಟುಹೋದನು. ಹೊರಡುವಾಗ "ಇತ್ತೀಚೆ ನಾಗರಾಜನನ್ನು ನೋಡಿದ್ದೀಯಾ? ನಾನು ನೋಡದೆ ಬಲು ದಿನವಾಯಿತು"-ಎಂದನು. "ಅವನು ಮೊದಲಿನಂತಿಲ್ಲ ಮಾಮುಂಜಿ" ಎಂದು ಅಚ್ಯುತನು ಎನ್ನುವಷ್ಟಕ್ಕೆ ಬಸ್ಸು ಹೊರಟಿತು. ಮಾಮುಂಜಿಗೆ ಆ ಮಾತು ಮಾತ್ರ ವಿಸ್ಮಯಕಾರಕವಾಗಿ ಕಾಣಿಸಿತು. ಆದರೆ "ಏನು ಸಂಗತಿ?" ಎಂದು ತಿಳಿಯುವುದರಲ್ಲೇನೆ ಬಸ್ಸು ಹೊರಟಿತಲ್ಲ. ಆತ ಹಿಂದಿರುಗಬೇಕಾಯಿತು.

ಬಸ್ಸು, ಮಳೆಯಲ್ಲಿ ಕೆಸರು ಹಾದಿಯನ್ನು ಹೂಡುತ್ತ, ಬೆಳ್ತಂಗಡಿಯನ್ನು ಸೇರಿತು. ಶಾಲೆ ತೆರೆಯುವ ದಿವಸವೇ ಅವನು ಹೋದುದು. ಆದುದರಿಂದ ಟ್ರಂಕು ಹಾಸಿಗೆ ಸಮೇತ ಅವನ ಸವಾರಿ, ಶಾಲೆಯ ಮುಂದೆ ಇಳಿಯಿತು. ಅಲ್ಲಿ ನಿಂತು, ಹೊರಕ್ಕೆ ಬಂದ ಬಾಲಕರೊಡನೆ "ಇದೇಯೇ,ಬೋರ್ಡು ಶಾಲೆ?" ಎಂದು ವಿಚಾರಿಸಿದನು. ಕೊನೆಗೆ ತಾನೇ ಗಂಟನ್ನು ಎತ್ತಿಕೊಂಡು, ಈಚೆಗೆ ಬಂದ. ಹೊಸ ಮಾಸ್ತರರು ಬಂದರೆಂದು ಊಹಿಸಿದ ಹುಡುಗರು, ಅವರ ಹೊರೆಯನ್ನು ತಾವು ಹಿಡಿದುಕೊಂಡರು. ಅಚ್ಯುತರಾಯ ಮೋರೆಯ ಬೆವರನ್ನು ಉಜ್ಜುತ್ತ, ಹೆಡ್ ಮಾಸ್ತರರ ಕೊಟಡಿಯನ್ನು ಸೇರಿದ. ಊರಲ್ಲಿ ಎಲ್ಲಿ ತಂಗುವುದೆಂದು ಅವರ ಸಲಹೆ ಕೇಳಿಯಾಗಬೇಕು. ಶಾಲೆಯ ಘಂಟೆಯಾಗುವ ತನಕ ಕಾದಿದ್ದು, ಎಲ್ಲ ಉಪಾಧ್ಯಾಯರ ಸ್ವಾಗತವನ್ನೂ ಪಡೆದನು. ಅಲ್ಲಿಗೆ ಅಚ್ಯುತಮಾಸ್ತರರು ಹೊಸಬರಾದುದರಿಂದ, ಮಾಸ್ತರರ ವೃಂದಕ್ಕೇನೆ ಹೊಸಬರಾಗಿದ್ದರು. 'ವಿದ್ವಾನ್, ಟ್ರೆಂಡ್' ಎಂಬುದರಿಂದ ಒಂದು ತೂಕ, ಗೌರವ ಅವರ ವಿಷಯವಾಗಿ ಮುಂಚಿತವಾಗಿ ಉಂಟಾಗಿತ್ತು. ಅವರು ಬಂದರೆ, ಮೇಲಿನ ತರಗತಿಯ ಕನ್ನಡವನ್ನೆಲ್ಲಾ ಅವರ ಕೊರಳಿಗೇನೆ ಕಟ್ಟುವುದೆಂದು ಅವರಲ್ಲಿ ನಿರ್ಣಯವಾಗಿತ್ತು.

ಅಚ್ಯುತ ಬಂದ ದಿವಸ ಮಧ್ಯಾಹ್ನವೇ ಕೆಲಸಕ್ಕೆ ಸೇರಿಕೊಂಡನು. ಹೊಟೇಲಿನಲ್ಲಿ ಭೋಜನ; ಇತರ ಒಬ್ಬಿಬ್ಬರು ಉಪಾಧ್ಯಾಯರಂತೆ ಶಾಲೆಯಲ್ಲಿ ನಿವಾಸವೆಂದು ನಿರ್ಣಯವಾಯಿತು. ಅವರ ಹೆಡ್‌ಮಾಸ್ತರ್ ಆನಂದರಾಯರು "ಹೌದಯ್ಯ, ಯಾರಿಗೂ ಬೇಡದ ಈ ಬೆಳ್ತಂಗಡಿಯು ಖಾಯಿಸು ನಿಮಗೇನಾಯಿತು" ಎಂದು ಹಾಸ್ಯಮಾಡಿದರು.

"ನಮ್ಮ ಊರೂ ಯಾರಿಗೂ ಬೇಡದ್ದು"

"ನಿಮ್ಮ ಊರು ಯಾವುದು?"

"ಕೊಂಬಾರು, ಕಡಬದ ಸಮೀಪ. ಸುಬ್ರಮಣ್ಯಕ್ಕೇನೆ ಸಮೀಪವೆಂದರೂ ಚಿಂತಿಲ್ಲ."

"ಹಾಗಾದರೆ ನೀವು ನಮ್ಮ ತಾಲೂಕಿನವರೇ, ನಾನೆಣಿಸಿದ್ದೆ: ಎಲ್ಲೋ ದೂರದವರು ಎಂದು. ಯಾರೋ ಎಂದರು: ಬಳ್ಳಾರಿಯಿಂದಲೂ ಒಂದೆರಡು ಅರ್ಜಿಗಳಿವೆ--ಎಂದು. ನಮ್ಮವರಾದರೆ ಒಳ್ಳೆಯದೇ ಆಯಿತಲ್ಲ. ನೋಡಿ ಈ ಊರು ಮಲೇರಿಯದ ಊರೆಂದು ಹೆದರುವ ಜನಕ್ಕೆ ಇಲ್ಲಿ ಇದ್ದು ಕೆಲಸಮಾಡಲು ಕಷ್ಟವೇ"

"ಯಾಕೆ? ಈ ಊರು ನಮ್ಮ ಕಡಬಕ್ಕಿಂತಲೂ ದೊಡ್ಡದಾಗಿದೆ. ಇದೇನು ತೀರ ಹಳ್ಳಿಯಲ್ಲ"

"ಆದರೂ ಮಲೇರಿಯಾ ಇದೆ-ಎಂಬ ಕೀರ್ತಿಯಿದೆಯಲ್ಲ. ಅಲ್ಲವಾದರೆ ಈ ಊರಿಗೇನು ದಾಡಿ? ಚಾರ್ಮಾಡಿಯ ಮುಖ್ಯರಸ್ತೆಯಲ್ಲಿದೆ" ಎಂದು ಊರಿನ ಮಾಹಿತಿಯನ್ನು ಕೊಟ್ಟರು.

ಆ ಮಧ್ಯಾಹ್ನ ನದಿಯಲ್ಲಿ ಸ್ನಾನವಾಯಿತು; ಹೊಟೇಲಿನಲ್ಲಿ ಭೋಜನವಾಯಿತು. ಬಂದವರೇ ಐದನೆಯ ತರಗತಿಗೆ "ಅಂಬುಜಾನನೆ ಕೇಳು ತಾಂಡವನೆಂಬ ಮುನಿ ಪಿತೃ" ಹಾಡನ್ನು ಕಲಿಸತೊಡಗಿದ್ದೂ ಆಯಿತು.

ಆರು ತಿಂಗಳಕಾಲ ಅಚ್ಯುತ ಬೆಳ್ತಂಗಡಿಯಲ್ಲಿ ತನ್ನ ಮಾಸ್ತರಿಕೆಯನ್ನು ಮೆರೆಯಿಸಿದನೆಂದರೂ ತಪ್ಪಾಗದು. ಅಲ್ಲಿನ ಚಟುವಟಿಕೆಗಳಲ್ಲಿ ಅವನೇ ಕೇಂದ್ರನಾದನು. ಬಾಲಕರನ್ನು ತನ್ನ ಬಳಿಗೆ ಸೆಳೆದು, ಅವರಿಂದ ಬೇಕಾದ ಕೆಲಸ ಮಾಡಿಸಿಕೊಳ್ಳಲು, ಸುಲಭಸಮರ್ಥನಾದನು. ಅವರ ಶಾಲೆಯಲ್ಲಿ ಹೊಸ ತರ್ಕ ಸಂಘ ತಲೆದೋರಿತು; ಯಕ್ಷ

ಗಾನ ಸಭೆ ನಿರ್ಮಾಣವಾಯಿತು. ವಾರವಾರವೆಂಬಂತೆ ಸಾರ್ವಜನಿಕ ರಿಗೆ ಭಾಷಣದ ಏರ್ಪಾಟೂ ಆಯಿತು. ಹಿರಿಯ ಕಿರಿಯ ಚಟುವಟಿಕೆ ಗಳಲ್ಲಿ ಆತ ಭಾಗವಹಿಸತೊಡಗಿದನು. ಅವನೂ ಯಕ್ಷಗಾನ ಅರ್ಥ ಹೇಳುವುದರಲ್ಲಿ "ಹೂಂ! ಚಿಂತೆಯಿಲ್ಲ ಹೊಸ ಮಾಸ್ಟ್ರು" ಎನಿಸುವ ಹಿರಿಮೆಯನ್ನು ಹಳ್ಳಿಗರ ಬಾಯಿಂದ ಕೇಳುವಂತಾಯಿತು. ಆದರೆ ಆ ವಿಷಯದಲ್ಲಿ ಪಕ್ಷಪ್ರತಿಪಕ್ಷಗಳು ಇಲ್ಲದೆ ಇರಲಿಲ್ಲ. ಬೆಳ್ತಂಗಡಿ ಊರಲ್ಲಿ ಹೆಸರಾದ ಅರ್ಥಗಾರರೇ ಇದ್ದರು. ಅರ್ಥಗಾರ ಜನಾರ್ದನಯ್ಯನವ ರಿಗೆ ಮಂಗಳೂರಿನಿಂದಲೂ ಆಮಂತ್ರಣ ಬರುತಿತ್ತು. ಒಂದು ದಿನ ಅವರು, ಶಾಲೆಯಲ್ಲಾಗುವ ಯಕ್ಷಗಾನಕ್ಕೆ ಬಂದು ಕುಳಿತರು. ಕೊನೆಗೆ ಉಪಾಧ್ಯಾಯರ ಬಲವಂತದಿಂದ, ಎಳೆಯರೊಡನೆ ಅರ್ಥ ಹೇಳುವ ಹಂತಕ್ಕೆ ಇಳಿದರು. 'ಕೃಷ್ಣಸಂಧಾನ'ವನ್ನು ಎತ್ತಿಕೊಂಡು ಅವರೆ ಲ್ಲರು ಆಡತೊಡಗಿದರು. ಕೌರವನಾಗಿ ಜನಾರ್ದನಯ್ಯ ವಿರಾಜಮಾನ ರಾದರು. 'ವಿದ್ವಾನ್' ಮಾಸ್ತರರು ಕೃಷ್ಣರಾದರು. ಆ ರಾತ್ರಿ ಕೌರವ ಕೃಷ್ಣರಲ್ಲಿ ತೊಡಗಿದ ತಿಕ್ಕಾಟ ಬೆಳಗಾದರೂ ಮುಗಿಯಲಿಲ್ಲ. ಸಭಿಕ ರಿಗೆ ಕುತೂಹಲವೇ ಕುತೂಹಲ! ಆದರೆ ಎಂದೂ ಸೋಲಿಲ್ಲದ ಜನಾ ರ್ದನಯ್ಯ "ಎಲೌ ಕೃಷ್ಣ! ನಿನ್ನ ಸಾವಿರದ ಆರುನೂರು ಹೆಂಡಿರ ಹೆಸ ರನ್ನು ಹೇಳುವ ಯೋಗ್ಯತೆ ನಿನಗಿದೆಯೇ?"—ಎಂದು ಕೇಳಬೇಕೆ? ಅಚ್ಚುತ "ನಾನು ಬಂದ ರಾಯಭಾರಕ್ಕೆ ಅದನ್ನೆಲ್ಲ ಹೇಳುವುದು ಅವಶ್ಯ ವಾದರೆ ಹೇಳುತ್ತೇನೆ. ಆಗಲಿ, ನಾಳೆ ಸಮರಕ್ಕೆ ಬರುವ ನಿನ್ನ ನೂರು ಜನ ಮಕ್ಕಳ ಹೆಸರನ್ನು ನೀನು ಹೇಳಬಲ್ಲೆಯೋ!" ಎಂದು ಮರುತ್ತರ ಕೊಟ್ಟ. ಅಂತು ಮಾತು ಬಲು ಬಿಸಿಗೇರಿತು. ಜನಾರ್ದನಯ್ಯನವರು "ನಿನ್ನಂಥಾ ಘಟಿಂಗನೊಡನೆ ನಾನು ಸಂಧಾನಕ್ಕೆ ಬಂದುದೇ ತಪ್ಪು" ಎನ್ನುವ ಬದಲು, "ನಾನು ಅರ್ಥಕ್ಕೆ ಬಂದುದೇ ತಪ್ಪು" ಎಂದು ನುಡಿದು ಮೂಕರಾದರು. ಕೊನೆಗೆ ಬೇರೆಯವರು ಕೌರವನ ಪಾತ್ರವನ್ನು ವಹಿಸ ಬೇಕಾಯಿತು. ಅಂತ್ಯದಲ್ಲಿ ಧನ್ಯವಾದಗಳನ್ನರ್ಪಿಸಲು ಅಚ್ಚುತರಾಯ ಎದ್ದುನಿಂತು, ಉದ್ವೇಗದಿಂದ, "ಮಹನೀಯರೇ, ಈ ವಿರಸದಲ್ಲಿ ನಾನು ಭಾಗವಹಿಸಿದ್ದು ತಪ್ಪೆಂದು ಕಾಣುತ್ತದೆ. ಈ ರೀತಿ ನಾನು ಮೇಲೆ, ತಾನು ಮೇಲೆ—ಎಂದು ಜಗಳ ಕಾಯಬೇಕಾದರೆ, ಯಕ್ಷಗಾನಕ್ಕಿಂತ

ಸಿವಿಲು ಕೋರ್ಟಿನ ವಾಸಿ. ನಾವು ನಮ್ಮ ಮಾತು ಮೇಲಾಗಬೇಕೆಂದು ಅರ್ಥ ಹೇಳುವಲ್ಲಿ, ವ್ಯಾಸನು ಬೇರೆಯೇ ಭಾರತವನ್ನು ಬರೆಯಬೇಕಾಗಬಹುದು" ಎಂದನು.

ಅಲ್ಲಿಂದ ಅಚ್ಯುತ ಊರಲ್ಲಿದ್ದ ಇನ್ನು ಮೂರು ತಿಂಗಳ ಕಾಲದಲ್ಲಿ, ಜನಾರ್ದನಯ್ಯನ ಕಡು ವೈರಿಗಳೆನಿಸಬೇಕಾಯಿತು. 'ಮೂರು ಮೆಣಸಿನ ಗಾತ್ರದ ಆ ಪಂಡಿತ ಹುಡುಗ'—ಎಂದು ಅವರು ಇವನನ್ನು ಟೀಕಿಸುತ್ತಿದ್ದರು. ಅವನ ಮೇಲೆ ಪತ್ರಿಕೆಯಲ್ಲಿ ಲೇಖನಗಳು ಬಂದುವು. ಒಂದು ದಿನ ಅನಾಮಧೇಯರೊಬ್ಬರು "ಈ ಬೆಳ್ತಂಗಡಿ ಶಾಲೆ, ಮಕ್ಕಳಿಗೆ ಪಾಠ ಕಲಿಸುವುದನ್ನು ಬಿಟ್ಟು, ಯಕ್ಷಗಾನ, ಕೋಲ, ನೇಮಗಳಿಗೆ ಕೈಹಾಕುವುದಾದರೆ ಶಾಲೆ ಮುಚ್ಚುವುದು ಲೇಸು"—ಎಂದು ಪತ್ರಿಕೆಗಳಲ್ಲಿ ಬರೆದರು. ಆದರೆ ಆ ಚುಚ್ಚುಮಾತುಗಳು ಉಪಯೋಗಕ್ಕೆ ಬರಲಿಲ್ಲ.

ಅಚ್ಯುತರಾಯನು ಮಕ್ಕಳನ್ನು ಕೂಡಿಸಿ, ಅವರಲ್ಲಿ ತುಂಬ ಬರವಣಿಗೆಯ ಹುಮ್ಮಸ ಹುಟ್ಟಿಸುತ್ತಿದ್ದಂತೆ, ತನ್ನ ಸಹ ಶಿಕ್ಷಕರೊಡನೆ "ಹೌದಯ್ಯ, ವಿದ್ವಾನ್ ಆಗುವುದು ಏನು ಮಹಾ ಕಷ್ಟ; ನೀವೂ ಕಲಿಯಿರಿ. ಕೈಯಲ್ಲಿ ಒಂದು ಬಾಣ ಜಾಸ್ತಿಯಿದ್ದರೆ, ಹೂಡಬಹುದಲ್ಲ ಸಂದರ್ಭವೊದಗಿದಾಗ" ಎಂದು ಗೆಳೆಯರಿಗೆ ಉಪದೇಶಮಾಡಿದ. ಅದರಿಂದ, ರಾತ್ರಿ ವೇಳೆ ಒಂದು ವಿದ್ವಾನ್ ತರಗತಿಯೂ ಈ ಎಡೆಯಲ್ಲಿ ನಡೆಯಿತು.

ಈ ಮಹಾ ಕೋಲಾಹಲಗಳ ಎಡೆಯಲ್ಲಿ, ಮೊದಲು ವಾರಕ್ಕೆರಡು ಕಾಗದ ಬರೆಯುತ್ತಿದ್ದ ಆತ, ಮನೆಗೆ ವಾರಕ್ಕೊಂದು ಕಾಗದ ಬರೆಯುವುದೂ ನಿಂತಿತು. ಚೌತಿಗೆ ಅವನು ಮನೆಗೆ ಹೋದ; ಅಲ್ಲಿಂದ ಮಾವನ ಮನೆಗೆ ರುಕ್ಮಿಣಿಯೊಡನೆ ಹೋಗುತ್ತಿದ್ದಾಗ, ದಾರಿಯಲ್ಲಿ—"ಇದೇ ನಿಮ್ಮ ಮಾತು! ಅತ್ತಲಾಗಿ ಹೋದರೆ ಇತ್ತ ಬಿದ್ದವರ ನೆನಪೇ ನಿಮಗೆ ಇರುವುದಿಲ್ಲ. ಇಲ್ಲಿರುವಾಗ ಚಂದ ಚಂದ ಮಾತನಾಡಿದ್ದನ್ನು ಕೇಳಿ, ಏನೆಂದು ನಾವು ತಿಳಿಯಬೇಕೋ!"—ಎಂದಳು. ಆತ ತನ್ನ ನೂರಾರು ಕಾರ್ಯ ಭಾರಗಳನ್ನು ವಿವರಿಸಿ, 'ವಿರಾಮವಿರಲಿಲ್ಲ—ಹಾಗಾಯಿತು, ಹೀಗಾಯಿತು' ಎಂದು ಅವಳನ್ನು ಸಮಾಧಾನಪಡಿ

ಸಬೇಕಾಯಿತು. ಚೌತಿ ರಜೆ ಮುಗಿಸಿ ಬೆಳ್ತಂಗಡಿಗೆ ಹೋಗುವಾಗ ಅವಳು "ಹಿಂದಿನ ಹಾಗೆ ನಮ್ಮನ್ನೆಲ್ಲಾ ಮರೆತು ಬಿಡಬೇಡಿ" ಎಂದು ಎಚ್ಚರಿಸಿದಳು. ಆದರೆ ಆ ನಾಲ್ಕನೆಯ ತಿಂಗಳಲ್ಲೇ ಜನಾರ್ಧನಯ್ಯ ನೊಡನೆ ಕಾಳಗವಾದುದು; ಅವನ ವಿಷಯ ಆಕ್ಷೇಪ ಊರಿನ ಪತ್ರಿಕೆ ಗಳಲ್ಲಿ ಬಂದುದು. ಆ ಘಟನೆಯಾದ ಬಳಿಕ ಅವನ ಮನಸ್ಸು ತುಂಬ ಅಶಾಂತವಾಗಿತ್ತು. ಪ್ರತಿ ಬಾರಿ ಬರೆಯುವಾಗಲೂ, ಕಾವ್ಯಮಯವಾಗಿ ತನ್ನ ಮನೋರಮೆಗೆ ಬರೆಯುತ್ತೇನೆಂದು ಹೊರಟ ಅಚ್ಯುತರಾಯ, ನಾಲ್ಕು ಪಂಕ್ತಿಯಲ್ಲೇ "ಯಾಕೋ, ಮನಸ್ಸು ಬೇಸರಿಸಿದೆ, ಮುಂದಿನ ವಾರ ಸುದೀರ್ಘವಾಗಿ ಬರೆಯುತ್ತೇನೆ" ಎಂದು ಬರೆಯತೊಡಗಿದ. ಮೂರು ಸುದೀರ್ಘವಾದ ವಾರಗಳು ಕಳೆದರೂ ರುಕ್ಮಿಣಿಗೆ ಬಂದು ದೆಲ್ಲಾ 'ಸು—ಚುಟುಕಿನ' ಕಾಗದಗಳೇ. ಅದಕ್ಕೆ ರುಕ್ಮಿಣಿ ಪ್ರತೀಕಾರ ಸಾಧಿಸಿದಳು. "ಇಂತಿ—ಪ್ರಣಾಮಗಳು-ಹೆಚ್ಚಿನ ವಿಷಯ ಮುಂದಿನ ವಾರ" ಎಂದು ಎರಡು ಬಾರಿ ಪ್ರತ್ಯುತ್ತರವನ್ನು ಹಾಕಿದಳು. ಅಚ್ಯುತಗೆ ಓದಿ ನಗು ಬಂದಿತು; ಬೇಸರ ಇಳಿಯಿತು. ಈಗ ನಾಲ್ಕು ಪುಟದ ನಿಜವಾದ ದೀರ್ಘ ಪತ್ರವನ್ನು ಬರೆದು, ನಡೆದ ಯಾವತ್ತು ಸುದ್ದಿಗಳನ್ನು ತಿಳಿಸಿ, ದೂರದ ಕೊಂಬಾರಿನಲ್ಲಿ, ಕಾಡಿನ ಹೆಂಟೆಗೊದ್ದಗಳ ಸಂಗೀತ ಕೇಳುತ್ತಿದ್ದ ರುಕ್ಮಿಣಿಯನ್ನು ನಗಿಸಿಬಿಟ್ಟನು.

ನವಂಬರ ದಶಂಬರ ತಿಂಗಳುಗಳು ಬಲು ಹಿಗ್ಗಿನಲ್ಲಿ ಸರಿದುವು. ಆತ ಮಕ್ಕಳೊಡನೆ ಧರ್ಮಸ್ಥಳ ದೀಪೋತ್ಸವಕ್ಕೆ ಪ್ರವಾಸಮಾಡಿದ. ಇದರ ಆನಂದವೂ 'ಊರಿಗೆ ಕ್ರಿಸ್‌ಮಸ್ ರಜೆಯಲ್ಲಿ ಹೋಗುತ್ತೇನಲ್ಲ' ಎಂಬ ಹಿಗ್ಗೂ ಅವನಲ್ಲಿ ತುಂಬಿದ್ದುವು.

ಕ್ರಿಸ್‌ಮಸ ರಜೆಗೆ ಎರಡು ದಿನ ಮುಂಚಿತವಾಗಿ, ಮಾಮುಂಜಿಗೆ ಕಾಗದ ಬರೆದೂ ಆಯಿತು. "ಇಂಥ ದಿನ ಬರುತ್ತೇನೆ. ದಾರಿಯಲ್ಲಿ ನಿಲ್ಲಲು ವಿರಾಮವಿಲ್ಲ. ಬಸ್‌ಸ್ಟೇಶನಿನಲ್ಲಿ ಸಿಕ್ಕು; ನಾನು ನೆಟ್ಟಗೆ ಕೊಂಬಾರಿಗೆ" ಎಂದು ತಿಳಿಸಿದ್ದನು. ಹೊರಡುವ ರಾತ್ರಿ ಟ್ರಂಕನ್ನು ತೆರೆದು ಬಲು ಹೊತ್ತಿನವರೆಗೆ, ಆ ಚಳಿಯಲ್ಲಿ, ಒಂದೊಂದೇ ಕಾಗದವನ್ನು ಬಿಡಿಸುತ್ತ ನೋಡುತ್ತಿದ್ದ. ಊರಿಗೆ ಯಾವೆಲ್ಲ ಪುಸ್ತಕಗಳನ್ನು ಒಯ್ಯಬೇಕೆಂದು ನಿರ್ಧರಿಸುತ್ತಿದ್ದ. ಒಂದೊಂದು ಬಾರಿ ಮನಸ್ಸು "ಸಂಕಪ್ಪ ಮಾಸ್ತ

ರದು ರಿಟೈಯರ್ ಆಗುವ ವಿಷಯ ತಿಳಿಯದಲ್ಲ. ಈ ತಿಂಗಳಲ್ಲೋ ಮುಂದಿನ ತಿಂಗಳಲ್ಲೋ ಆಗುತ್ತಿರಬೇಕು. ಹಾಗಿದ್ದರೆ ಆ ಸ್ಥಾನ ನನಗೆ ಸಿಕ್ಕುವುದಾದರೆ, ಟ್ರಂಕು, ಹಾಸಿಗೆಗಳನ್ನು ಸಾಗಿಸಬೇಕಲ್ಲವೇ" ಎಂದು ಯೋಚಿಸಿದನು. ಕೊನೆಗೆ, ಅಷ್ಟು ಧೈರ್ಯಬಾರದೆ, ತನ್ನ ಮನೋರಮೆಗೆ, ಕಾಗದದ ತುಣುಕುಗಳಲ್ಲಿ ಬರೆದಿರಿಸಿದ ಕವನಗಳನ್ನು ಓದಿ ಹೇಳುವುದಕ್ಕೆಂದು ಆರಿಸಿ ಕಟ್ಟಿಟ್ಟನು. ಅನಂತರ ಒಂದೊಂದಾಗಿ ತಾನು 'ಅವ್ಯಕ್ತನಾಮ'ದಿಂದ ಪತ್ರಿಕೆಗಳಿಗೆ ಬರೆದ ನಿಬಂಧ, ಕಥೆಗಳನ್ನು ಎಳೆದು ತೆಗೆದು ಕಟ್ಟು ಮಾಡಿದನು. ಅಷ್ಟೊಂದು ಬರವಣಿಗೆಯನ್ನು ಹೆಂಡತಿಯ ಮುಂದಿರಿಸಿ, "ಭೇಷ್" ಎನ್ನಿಸಿಕೊಳ್ಳುವ ಹಂಬಲದಿಂದ ಅವನ್ನು ಒಟ್ಟುಗೂಡಿಸಿಕೊಂಡನು. ಅವನಿಗೆ ರಾತ್ರಿ ಪೂರ್ಣ ನಿದ್ರೆಯಾಗಿತ್ತೋ ಇಲ್ಲವೋ! ಮುಂಜಾನೆ ಆರು ಘಂಟೆಯ ಬಸ್ಸು ಶಾಲೆಯ ಬಳಿ ಬಂದು ನಿಂತು, ಘರಗುಟ್ಟಿತು. ಅದನ್ನು ಕೇಳಿ "ಬಂದೆ, ಬಂದೆ" ಎಂದು ಓಡಿ ಹೋಗಿ ರಥವೇರಿದನು. ಬೆಳಗಿನ ಮಂಜು ನೇತ್ರಾವತಿ ನದಿಯಿಂದ ಆರುವವೊದಲೇ, ಬಸ್ಸು ಉಪ್ಪಿನಂಗಡಿಗೆ ಬಂದೂ ಆಯಿತು. ಅಲ್ಲಿ ಅಚ್ಯುತಗೆ ಮಾಮುಂಜಿಯ ದರ್ಶನ, ಉಪಹಾರಗಳಾದುವು. "ಮಾಮುಂಜಿ! ಇವತ್ತೇ ಬಾ ನಮ್ಮೂರಿಗೆ; ಇಂದೇ ಬಾ"ಎಂದು ಅವನನ್ನು ಬಲವಂತಗೊಳಿಸಿದನು.

ಮಾಮುಂಜಿ ಅಣಕಿಸುತ್ತ, "ನಿಮ್ಮೂರಿಗೆ ಬರಬಹುದು; ಆದರೆ ಅಲ್ಲಿ ನನಗೆ ಊಟ ಹಾಕುವವರು ಬೇಡವೇ?"

"ಅದಕ್ಕೆ ನಾನು ಸಾಲದೇ".

"ನಾನು ಕುಳ್ಕುಂದದ ಜಾತ್ರೆಯಿಂದ ಜಾನುವಾರು ಹೊಡೆದುಕೊಂಡು, ಹಿಂದಿನ ತಿಂಗಳು ನಿಮ್ಮ ಊರಿಗೆ ಬಂದಿದ್ದೆ. ನಿನ್ನ ಮನೆಗೂ ಹೋಗಿದ್ದೆ. ಆಗ ನಿನ್ನ ತಾಯಿ ಬಯಲಿಗೆ ಹೋಗಿದ್ದರಂತೆ. ನಿನ್ನ ಹೆಂಡತಿ ಬಾಗಿಲಿಕ್ಕಿಕೊಂಡು, ಈ ಬ್ಯಾರಿಯ ತಂಟೆಯೇ ಬೇಡೆಂದು ಮುಖ ತೋರಿಸಲಿಲ್ಲ..... ಇನ್ನೊಮ್ಮೆ ಹಾಗಾದರೆ?"

ಒಮ್ಮೆ ಅಚ್ಯುತನಿಗೆ ಆಶ್ಚರ್ಯವಾಯಿತು. ರುಕ್ಮಿಣಿ ಹಾಗೆ ಮಾಡಲೇಕೆಂದು ತಿಳಿಯಲಿಲ್ಲ. "ಅಮ್ಮನಾದರೂ ಮನೆಯಲ್ಲಿದ್ದರೆ ಹಾಗಾಗುತ್ತಿರಲಿಲ್ಲ. ಅವಳಿಗೆ ನೀನು ನಿನ್ನಹೆಸರು ಹೇಳಿದ್ದರೆ, 'ಹಿಂದಲ ವರ್ಷ

ಕೋಣ ತೆಗೆಯಿಸಿಕೊಟ್ಟವನು, ಎಂದು ತಿಳಿಸಿದ್ದರಾದರೂ ಗುರುತು ಹಿಡಿಯುತ್ತಿದ್ದಳು'-ಎಂದನು. ಅಂತು, ಮಾಮುಂಜಿ ಅದರಿಂದ ಸಮಾಧಾನಪಟ್ಟಂತೆ ಕಾಣಲಿಲ್ಲ. ಅಷ್ಟರಲ್ಲಿ ಅವನ ಊರಿನ ಬಸ್ಸು ಬಂದಿತು; ಹೊರಟೇಬಿಟ್ಟ. ಊರಿಗೆ ಮರಳಿದ ಮೇಲೆ, ತಮ್ಮ ಮನೆಯವರ ಪರವಾಗಿ ಕ್ಷಮೆಯನ್ನು ಬೇಡಿ ಆತಗೆ ಕಾರ್ಡು ಬರೆಯುವೆ ಎಂದು ಯೋಚಿಸಿದ.

ಊರನ್ನು ಸೇರಿದವನೇ, ಹೆಂಡತಿಯನ್ನು ಗದರಿಸಿದ. ಅವನ ತಾಯಿ 'ಇದೇನಪ್ಪ! ಇವನಿಗೆ ರುಕ್ಮಿಣಿಯೊಡನೆ ಬಂದೊಡನೆ ಕೋಪ' ಎಂದು ಕಾತರಗೊಂಡಳು. ಅಚ್ಯುತನು ಇನ್ನೊಬ್ಬರಿಗೆ ಮಾತಿಗೆ ಎಡೆ ಕೊಟ್ಟರಲ್ಲವೆ, ಸಂಗತಿ ತೀರ್ಮಾನವಾಗುವುದು? "ಅಂಥ ಒಳ್ಳೆಯವ ಅವನು! ತಾನು ಯಾರೆಂದು ಹೇಳಲಿಲ್ಲವೇ? ಮನೆಗೆ ಬಂದು ನೀರು ಕೇಳಿದರೆ ಕೊಡಬಾರದೇ" ಎಂದು ಗದರಿಸಿದನು. ತಾಯಿ-

"ಯಾರು? ಉಪ್ಪಿನಂಗಡಿ ಬ್ಯಾರಿ ಹುಡುಗನೇ?" ಎಂದು ಕೇಳಿದಳು.

"ಹೌದು. ಹಿಂದಣ ವರ್ಷ ಕೋಣ ತೆಗೆಯಿಸಿಕೊಟ್ಟದ್ದು; ಸೀಗೆ, ರಾಮ ಪತ್ರೆ ಮಾರಿಸಿ ಕೊಟ್ಟದ್ದು—ಅವನೇ. ಅವನು ಬ್ಯಾರಿಯೆಂದು ಇವಳು ಮನೆ ಬಾಗಿಲು ಹಾಕಿ, ನೀರು ಕೊಡದೆ ಕುಳಿತಿರಬೇಕೆ? ಅಷ್ಟು ಹೆಡ್ಡು ಕೆಲಸ ಮಾಡಿದರೆ ಹೇಗೆ!"

ತಾಯಿ ಗಳಗಳನೆ ನಕ್ಕಳು. "ಅವಳು ಹೆಡ್ಡಲ್ಲ; ಹೆಡ್ಡ ನೀನು. ಆ ಬ್ಯಾರಿ ನಿನ್ನ ಹತ್ತಿರ ಚೇಷ್ಟೆ ಮಾಡಿದನಷ್ಟೆ."

"ಅವನು ಬರಲಿಲ್ಲವೇ ಹಾಗಾದರೆ?"

"ಬಂದಿದ್ದ-ತಾನ್ಯಾರು ಎಂದೂ ಹೇಳಿದ. ಅರ್ಧ ದಿವಸ ಒಂದು ಜತೆ ಎತ್ತನ್ನು ಇಲ್ಲಿಯೇ ಮೇಯಲು ಬಿಟ್ಟಿದ್ದ. ನಿನ್ನದೇ ಸುದ್ದಿ ಮಾತನಾಡಿದ. ಊಟ ಸಹ ಇಲ್ಲಿ ಮಾಡಿದ್ದನು. ರುಕ್ಮಿಣಿಯ ಹತ್ತಿರ ನಿನ್ನ ಪುರಾಣವನ್ನು ತುಂಬ ಹೇಳಿದ. ರುಕ್ಮಿಣಿಯೇ-ಹೆದರಿ ಬಾಗಿಲು ಮುಚ್ಚಿದವಳು! ಅವನು ಒಳ್ಳೆಯ ಹುಡುಗ. ಈ ವರ್ಷ ರಾಮಪತ್ರೆಯಿದ್ದರೆ ತನಗೆ ತಿಳಿಸಿಬಿಡಿ. ತನ್ನ ಗಾಡಿಯುಂಟು. ನಿಮಗೆ ಅಲ್ಲಿಂದೇನಾದರೂ ತರಬೇಕಾದರೂ ತರುತ್ತೇನೆ-ಎಂದು ಹೇಳಿ ಹೋದ" ಎಂದಳು.

ಈಗ, ತಾನೇ ಬೆಪ್ಪುಗಟ್ಟಿ, ನಿಂತ ಅಚ್ಚುತ. ರುಕ್ಮಿಣಿಯೂ ಸುಮ್ಮ ನಿದ್ದು ಅವನನ್ನು ಸೋಲಿಸಬೇಕೆ?

ರಜೆಯಲ್ಲೊಮ್ಮೆ ಗಂಡ ಹೆಂಡಿರು ಪಂಜಕ್ಕೆ ಹೋಗಿಬಂದರು. ಪುಟ್ಟಯ್ಯ ನರಸಿಂಹಯ್ಯನವರ ಮನೆಗಳೆರಡನ್ನೂ ಸಂದರ್ಶಿಸಿದರು. ಈ ಬಾರಿಯಾದರೂ ಭಾವನ ಕೋಪ ಶಾಂತವಾಗಿರಬಹುದು ಎಂದು ತಿಳಿಯಲೆತ್ನಿಸಿದ. ಆ ವರ್ಷ, ಅತಿ ಶೀತ ಹವೆ ಊರಲ್ಲಿ ತುಂಬಿದ್ದರೂ, ನರಸಿಂಹಯ್ಯ ಬಿಸಿಯಾಗಿಯೇ ಇದ್ದರು. ಶುದ್ಧ ವಿಶ್ವಾಮಿತ್ರಗೋತ್ರದವರಂತೆ ಅವರು ಆಚರಿಸಿದರು. ಗೋತ್ರದವರಂತೆ ಏನು? ವಿಶ್ವಾಮಿತ್ರರಂತೆಯೇ ತಮ್ಮ ಪ್ರತಿಜ್ಞೆ ಪಾಲಿಸಿದರು.

ಸಂತೋಷದ ಎಡೆಯಲ್ಲಿ ಕರ್ತವ್ಯ ಮರೆಯಬಾರದಲ್ಲ. ಸಂಕಪ್ಪ ಮಾಸ್ತರರ ನಿವೃತ್ತಿಯ ವಿಚಾರ ತಿಳಿಯಬೇಕಲ್ಲ-ಎಂದು ಅಚ್ಚುತ,ನಾರಾಯಣರಾಯರಲ್ಲಿಗೆ ಧಾವಿಸಿದ. "ಅದು ಜನವರಿಯಲ್ಲೋ ಫೆಬ್ರವರಿಯಲ್ಲೋ ಆಗುತ್ತದೆ. 'ನೀನು, ಅವರನ್ನು ಒಂದು ತಿಂಗಳು ರಜೆ ತೆಗೆದುಕೊಳ್ಳಿ'—ಎಂದು ಕೇಳು. ಅದಕ್ಕಾಗಿ, ಬೇಕಾದರೆ ಹತ್ತು ಹದಿನೈದು ರೂಪಾಯಿ ಅವರ ಕೈಮೇಲೆ ಇರಿಸಿದರೂ ಸರಿಯೇ. ಪುತ್ತೂರಿನ ಡಿಪ್ಯುಟಿ ಇನ್ಸ್‌ಪೆಕ್ಟರನ್ನೂ ಕಾಣು. ನಿನ್ನನ್ನು ಸಂಕಪ್ಪನವರ ಆಸ್ಥಾನಕ್ಕೆ ಶಿಫಾರಸಿಮಾಡಲು ಕೇಳು. ಸಂಕಪ್ಪ ಮಾಸ್ತರರನ್ನು ಜತೆಯಲ್ಲೇ ಕರೆದುಕೊಂಡು ಹೋದರೆ ಚೆನ್ನ"—ಎಂದರು ನಾರಾಯಣರಾಯರು. ಅದರಂತೆ ಅಚ್ಚುತ ಗೌಡರೊಡನೆ ಸಂಧಾನ ನಡೆಯಿಸಿ, ಅವರೊಡನೆ ಪುತ್ತೂರಿಗೆ ತೆರಳಿದ.

ಈ ವಿಚಾರ ಮಾತನಾಡುತ್ತಿರುವಾಗ ಅದು ಜಾನ್‌ಸನ ಮಾಸ್ತರರ ಕಿವಿಗೆ ಬೀಳುವಂತಾಯಿತು. ಜಾನ್‌ಸನ್ ಮಾಸ್ತರರು ಮೌನವಾದರು. ನಾರಾಯಣರಾಯರನ್ನು ಅವರು ಪ್ರತಿಬಾರಿಯೂ ಟೀಕೆ ಮಾಡದ ವಿಷಯವಿಲ್ಲ. ಈಗೇಕೆ ಅವರು ಸುಮ್ಮನಾದರು ಎಂಬುದು ತಿಳಿಯದಾಯಿತು. 'ಅಂತು ವಿಷಯ ರಹಸ್ಯವಾಗಿರಲಿ'-ಎಂದು ಅಚ್ಚುತನಿಗೆ ಅವರು ತಿಳಿಸಿದ್ದರು.

ಸಂಕಪ್ಪಗೌಡರೂ, ಅಚ್ಚುತರಾಯರೂ ಪುತ್ತೂರಿಗೆ ಹೋಗಿ, ಆಫೀಸರರನ್ನು ನೋಡಿದರು. ಮುಂದೆ ಬೋರ್ಡು ಆಫೀಸಿಗೆ ಹೋಗಿ

ಬರುವುದು, ಒಳಿತೆಂದು ಮಂಗಳೂರಿಗೂ ಘೋಷಿಸಿದರು. ಇವರು ಆಫೀಸನ್ನು ಸೇರುವಗಳಿಗೆಗೇನೆ ಜಾನ್ಸನ್ ಮಾಸ್ತರರು, ಇನ್ನಾರೋ ಒಬ್ಬ ತರುಣನನ್ನು ಕರೆದುಕೊಂಡು ಮಂಗಳೂರಿಗೆ ಹೋಗಿ ಅಲ್ಲಿಂದ ಮರಳಿ ಬರುತ್ತಿದ್ದರು. ಇವರನ್ನು ಕಂಡೂ ಕಾಣದಂತೆ ಅವರು ಸರಿದುಹೋದುದನ್ನು ಕಂಡು, ಇವರಿಬ್ಬರಿಗೂ ಆಶ್ಚರ್ಯವಾಯಿತು. "ಸಂಕಪ್ಪ ಗೌಡರೇ, ಈಗಷ್ಟೆ ಬಸ್ಸಿನಲ್ಲಿ ಕಾಣಿಸಿದ್ದು ಜಾನ್ಸನ್ ಮಾಸ್ತರರಲ್ಲವೇ, ಅದು? ಅಥವಾ ಅಲ್ಲವೇ? ಅವರು ಮಂಗಳೂರಿಗೆ ಬರಲು ಕಾರಣ?" ಎಂದು ಅಚ್ಯುತ ವಿಸ್ಮಯದಿಂದ ಕೇಳಿದ.

ಗೌಡರು ಸಪ್ಪಗಾದರು. "ಈ ಕೆಲಸ ಕೆಟ್ಟಿತೋ ಏನೋ! ಜಾನ್ಸನರ ಭಾವನೊಬ್ಬನಿದ್ದಾನಂತೆ. ಅವನನ್ನು ತಮ್ಮ ಊರಿಗೆ ವರ್ಗಾಯಿಸಿಕೊಳ್ಳಬೇಕೆಂದೂ ಮಾಸ್ತರರ ಅಭಿಪ್ರಾಯವಿತ್ತು. ಪ್ರಾಯಶಃ ಆಪಕ್ಕೇನೆ, ಅವರು ಬಂದಿರಬೇಕು" ಎಂದರು ಗೌಡರು.

"ಅವರಿಗೆ ಭಾವನೆಲ್ಲಿ?"

"ಅಂದರೆ ಮುಂದೆ ಆಗುವ ಭಾವ. ಅದು ನಿಮಗೆ ತಿಳಿದಿಲ್ಲವೇ? ಅವರಿಗೆ ಇತ್ತೀಚೆ ಲಗ್ನ ನಿಶ್ಚಯವಾಗಿದೆ. ಮಂಗಳೂರಿನ ಹುಡುಗಿ. ಆ ಹುಡುಗಿಯ ಅಣ್ಣ ಕುಂಬಳೆಯಲ್ಲೋ, ಇನ್ನೆಲ್ಲೋ ಮಾಸ್ತರರಂತೆ. ಅವರನ್ನು ಕಡಬಕ್ಕೆ ಕರೆಯಿಸಿಕೊಳ್ಳಬೇಕೆಂದು ಇವರ ಆಸೆ. ಈ ಮಾರ್ಚಿ ಎಪ್ರಿಲಿಗೇನೆ ಮಾಸ್ತರರ ಲಗ್ನವಾಗುವುದೆಂದು ಕಾಣುತ್ತದೆ.

"ಹೋ! ಈಗ ನಮ್ಮ ಮಾಸ್ತರರಿಗೆ ಲಗ್ನವೋ! ಆಗಲಪ್ಪ."

"ಆಗಲಪ್ಪ-ಎಂದರೆ ಈಗ ಕಡಬಕ್ಕೆ ಅವರ ಭಾವನಿಗೇನೆ ವರ್ಗವಾದರೆ, ಅದು ನನ್ನ ಸ್ಥಾನಕ್ಕಾಯಿತು. ನಿಮಗೆ ಅದು ಸಿಕ್ಕುವುದು ಹೇಗೆ?"

"ಅದು ಅನುಮಾನವೇ! ಆದರೆ ಬಂದಿದ್ದೇನೆ; ತಂದ ಅರ್ಜಿಯನ್ನು ಬೋರ್ಡು ಪ್ರಸಿಡೆಂಟರಿಗೆ ಕೊಟ್ಟುಬಿಡುವ. ಅವರವರ ಅದೃಷ್ಟವಿದ್ದಂತಾಗಲಿ" ಎಂದ ಅಚ್ಯುತ. ಇಬ್ಬರೂ ಅಧ್ಯಕ್ಷರನ್ನು ಭೇಟಿಯಾಗಿ ತಮ್ಮ ಅರಿಕೆಗಳನ್ನು ಹೇಳಿದರು. ಅಧ್ಯಕ್ಷರು 'ಹಾಂ!' ಅನ್ನಲಿಲ್ಲ. 'ಹೂಂ!' ಅನ್ನಲಿಲ್ಲ. 'ಸರಿಯೇ, ಅರ್ಜಿ ಕೊಟ್ಟಿದ್ದೀರಲ್ಲ' ಎಂದು ನುಡಿದು ಸುಮ್ಮನಾದರು.

ಸಂಕಪ್ಪ ಗೌಡರು "ನಾವು ಬಂದ ಕೆಲಸ ಹೆಣ್ಣಾಯಿತು. ಅವರಾದರೆ ನನಗೆ ಹದಿನೈದು ರೂಪಾಯಿ ಕೊಡುವವರಲ್ಲ. ಈಗ ನಾನು ಕೊಟ್ಟ ರಜೆಯ ಅರ್ಜಿ ಅವರಿಗೆ ಅನುಕೂಲವಾದರೆ, ನಮ್ಮಿಬ್ಬರಿಗೂ ಏನಿಲ್ಲದಂತೆ" ಎಂದರು. "ಮಹಾರಾಯರೇ, ಆ ಯೋಚನೆ ಬಿಡಿ. ನನ್ನಿಂದಾಗಿ ನೀವು ರಜೆ ಕೇಳಿದ್ದು, ಎಂದ ಮೇಲೆ ಆ ಹದಿನೈದು ರೂಪಾಯಿಗೆ ನಾನು ಹೊಣೆ" ಎಂದ ಅಚ್ಯುತ.

ಇಬ್ಬರೂ ಮರಳಿ ಕಡಬದ ಊರನ್ನು ಸೇರಿದರು. ಅದರ ಮರುದಿನ ಅಚ್ಯುತರಾಯ ಇಂಟರ್‌ನೇಶನಲ್ ಕ್ಲಬ್ಬನ್ನು ಸಂದರ್ಶಿಸಿದನು. ಈಗೀಗ ಅಲ್ಲಿಗೆ ನಾಗರಾಜನು ಸದಾ ಬರುತ್ತಿರಲಿಲ್ಲವೆಂದು ತಿಳಿಯಿತು. ಈತ ಅಲ್ಲಿ ಬಂದಿರುವ ಇತರರೊಡನೆ ಮಾತು ಮುಗಿಯಿಸಿಕೊಂಡು ಹೊರಕ್ಕೆ ಬರುವಷ್ಟರಲ್ಲಿ ಜಾನ್‌ಸನರು ಉದಯಿಸಿದರು. "ಮಾಸ್ಟರೇ, congratulations. ನಿಮಗೆ ಮದುವೆಯಂತೆ! ನಮಗಿಂತ ಎಷ್ಟೋ ಮೊದಲು ಆಗಬೇಕಿತ್ತು. ಕೊನೆಗೂ ನನ್ನ ಮೇಲ್ಪಂಕ್ತಿ ತೆಗೆದುಕೊಂಡಿರಲ್ಲ!" ಎಂದನು ಅಚ್ಯುತ. ಅವರು ನಕ್ಕರು. ಆದರೆ ಆ ದಿನ ಅವರ ಬಾಯಿಂದ ಹೆಚ್ಚಿನ ಯಾವ ಮಾತುಗಳೂ ಹೊರಡಲಿಲ್ಲ.

ಕ್ರಿಸ್‌ಮಸ್ ರಜೆಯು ಕಳೆದುದಾಯಿತು. ಅಚ್ಯುತ ಬೆಳ್ತಂಗಡಿಗೆ ಹೋಗಬೇಕಾಗಿದೆ. ಮಾಡಲೇನು? ಹೊರಟೇ ಹೊರಟ. ಈಗ ಮಳೆಗಾಲವಲ್ಲವಷ್ಟೆ. ಅಲ್ಲಿಂದಿಲ್ಲಿಗೆ ಬಸ್ಸುಗಳು ಅಲೆದಾಡುತ್ತವೆ. ಹಾಗಾಗಿ ಅರ್ಧ ದಿನದ ಪಯಣ. ಮುಂಚಿನ ರಾತ್ರೆಯೆಲ್ಲ ತನ್ನ ಮನೋರಮೆಗೆ ಕಥೆ, ಕವನಗಳನ್ನು ಹೇಳಿ-ನಿದ್ದೆ ಬಿಟ್ಟಿದ್ದ. ಮರುದಿನವೇ ಪಯಣ. ಜನವರಿಯ ಮೂರಕ್ಕೆ ಆತ ಶಾಲೆಯ ಕೆಲಸಕ್ಕೆ ಸಿದ್ಧನಾದನು. ಬರಿಯ ಒಂದು ವಾರವೂ ಕಳೆಯಲಿಲ್ಲ. ಅವನಿಗೆ ಕಡಬಕ್ಕೆ ವರ್ಗವಾಗಿದೆಯೆಂಬ ಹುಕುಂ ಅಲ್ಲಿಗೆ ಬಂದಿತು. ಅಚ್ಯುತರಾಯನ ಸ್ಥಾನಕ್ಕೆ ಕುಂಬಳೆಯಿಂದ ಯಾರನ್ನೋ ಹಾಕಿದ್ದರಂತೆ. 'ಎಲ್ಲಿಂದೆಲ್ಲಿಗೆ!' ಎಂದು ಉಳಿದ ಉಪಾಧ್ಯಾಯರು ಗಾಬರಿಗೊಂಡರು. ಅಚ್ಯುತನ ಮನಸ್ಸಿಗೆ 'ಇಲ್ಲಿಗೆ ಬರುವುದು ಜಾನ್‌ಸನರ ಭಾವನಂಟನಾದರೆ, ನನ್ನಿಂದ ಅವರಿಗೆ ಉಪದ್ರವೇ ಆಯಿತು' ಎಂದು ತೋರಿತು.

ಹೊಸ ಮಾಸ್ತರರು ಬಂದು ಇಷ್ಟು ತೀವ್ರ, ಊರು ಬಿಡುತ್ತಾರೆಂದು

ಯಾರು ತಿಳಿದಿದ್ದರು! ಮಕ್ಕಳಿಗೂ ಬೇಸರವಾಯಿತು, ಅವರ ವಿದ್ವಾನ್ ಶಿಷ್ಯರಿಗೂ ವ್ಯಥೆಯಾಯಿತು. ಶಾಲೆಯ ಅನೇಕ ಹೊರಗಿನ ಚಟುವಟಿಕೆಗಳಿಗೆ ಮುಂದಾಗಿದ್ದ ಅವರಿದ್ದರೆ, ತಮಗೊಂದು ಕೀರ್ತಿಯಿತ್ತು—ಎಂದು ಮುಖ್ಯೋಪಾಧ್ಯಾಯರೂ ತಿಳಿದಿದ್ದರು. ಆ ಶಾಲೆಯವರು ಅಚ್ಯುತರಾಯಗೆ ಒಂದು ಸತ್ಕಾರಕೂಟವನ್ನು ಏರ್ಪಡಿಸಿದರು. ಆ ದಿನ ಬಾಲಕರು ತಮ್ಮ ಗುರುಗಳನ್ನು ಕೊಂಡಾಡಿದರು. ಗೆಳೆಯರೂ ತುಂಬ ಶ್ಲಾಘಿಸಿದರು. ಅಚ್ಯುತರಾಯ ತುಂಬ ವ್ಯಥಿತನಾದನು. ಅಷ್ಟೆಲ್ಲ ಜನರ ಆದರಕ್ಕೆ ತಾನು ಪಾತ್ರನಾದೆನಲ್ಲ ಎಂಬ ಹರ್ಷದ ಜತೆಗೆ, ಅವರನ್ನೂ ಅವರ ಪ್ರೀತಿಯನ್ನೂ, ಅಗಲಿಕೆಯಿಂದ ಕಳೆದುಕೊಳ್ಳುವ ಸಂಧಿ ಬಂದಿದೆಯಲ್ಲಾ-ಎಂದು ದುಃಖಿತನಾದ.

ಮರುದಿನ ಅವನನ್ನು ಬಸ್ಸಿನಲ್ಲಿ ಕುಳ್ಳಿರಿಸಿ ಕಳುಹಿಸಿಕೊಟ್ಟ ನೋಟ, ಅಚ್ಯುತನಲ್ಲಿ ತುಸು ಹೆಮ್ಮೆಯನ್ನು ಮೂಡಿಸಿದ್ದರೂ ಇರಬಹುದು. 'ತಾನೊಂದು ವ್ಯರ್ಥ ಜೀವಿಯಲ್ಲ; ಕೊನೆಗೂ ಒಬ್ಬ ಗಣ್ಯ ಮನುಷ್ಯನಾದೆ' ಎಂಬ ಅಹಂಕಾರವನ್ನು ಉಂಟುಮಾಡಿತು. ಅಂಥ ಅಪೂರ್ವವಾದ ಮನ್ನಣೆಯಿಂದ ಅವನ ವಿದ್ಯಾರ್ಥಿಗಳೂ, ಗೆಳೆಯರೂ ಅವನನ್ನು ಬೀಳ್ಕೊಟ್ಟರು.

ಒಂದು ಶಾಲೆಯಿಂದ,ಇನ್ನೊಂದಕ್ಕೆ ವರ್ಗವಾಗಿದೆ. ಅವನು ಕಡಬ ಶಾಲೆಯನ್ನು ಸೇರಿಕೊಂಡೂ ಆಯಿತು. ನಿತ್ಯ ತನ್ನ ಊರಿನಿಂದ ಅಲ್ಲಿಗೆ ಬರುವುದು ಹೋಗುವುದೆಂದು ನಿಶ್ಚಯವಾಯಿತು. ಮಧ್ಯಾಹ್ನ ಊಟಕ್ಕೆ ಯಾರ ಹಂಗೂ ಬೇಡವೆಂದು, 'ಯಕ್ಷಗಾನ ಭೈರವ'ರಾದ ಕುಡುಮತ್ತಾಯರ ಹೊಟೇಲಿನಲ್ಲಿ ವ್ಯವಸ್ಥೆ ಮಾಡಿದ. ಇತ್ತ ಅಚ್ಚುತರಾಯ ಬೆಳ್ತಂಗಡಿಯನ್ನು ಬಿಟ್ಟುದು ಒಬ್ಬರಿಗಾದರೂ ಸಂತೋಷಕ್ಕೆ ಕಾರಣವಾಗಿತ್ತು. ಅವನು ಕಡಬಕ್ಕೆ ಬಂದುದರಿಂದ ಒಬ್ಬರಿಗಾದರೂ ವ್ಯಥೆಯಾಯಿತು. ಅಲ್ಲಿ ಯಕ್ಷಗಾನ ಕೀರ್ತಿಯ ಜನಾರ್ಧನಯ್ಯ "ಹೋಯಿತೋ ನಮ್ಮ ಊರಿಂದ ಒಂದು ಅಧಿಕಪ್ರಸಂಗಿ! ಅದಕ್ಕೇನು ಗೊತ್ತಿದೆಯಂತೆ ಯಕ್ಷಗಾನದ ವಿಷಯ? ನಾವೆಲ್ಲ ಗುರುಗಳಿಂದ ನಾಲ್ಕು ಹಾಡನ್ನಾದರೂ ಹೇಳಿಸಿಕೊಂಡವರು. ಇದೇನಿಲ್ಲ-ಒಂದು ಕಬ್ಬಿಗರ ಕಾವನ್ನೋ ಕೊಡಲಿ ಕಾವನ್ನೋ ಓದಿಕೊಂಡ ಮಾತ್ರಕ್ಕೆ, ತಾನು ಸರ್ವಜ್ಞ ಎಂದು ತಿಳಿದಿದೆ.

ಅಂಥವನಿಗೂ ಸತ್ಕಾರ ಕೂಟ ಕೊಡುವ ಮರುಳರಿದ್ದಾರಲ್ಲ ಈ ಊರಲ್ಲಿ" ಎಂದುಕೊಂಡರು.

ಸ್ವತ; ಅಚ್ಚುತನ ರಾಜ್ಯದಲ್ಲಿ ಅವನ ಮುಖವನ್ನು ಶಾಲೆಯಲ್ಲಿ ಕಾಣುವಾಗಲೆಲ್ಲ, ಜಾನ್‌ಸನರ ಮನಸ್ಸಿನಲ್ಲಿ ಬೇಗುದಿ ಉಂಟಾಗುತ್ತಿತ್ತು ಅದನ್ನು ಅಚ್ಚುತ ಅರಿತೂ ಇದ್ದ. ಒಂದು ಸಂಜೆ ಆತನು "ಮಾಸ್ತರರೇ, ಕ್ಷಮಿಸಿ! ಏನೋ ಊರಿಗೆ ಬರುವ ಆಸೆಯಿಂದ, ತಾಯಿಗೂ, ಮನೆಗೂ ಹತ್ತಿರವಾಗಿರುವ ಆಸೆಯಿಂದ, ವರ್ಗಕ್ಕೆ ಪ್ರಯತ್ನಿಸಿದೆ. ಆ ಮೇಲೆ ನನಗೆ ತಿಳಿಯಿತು, ನೀವು ನಿಮ್ಮ ಭಾವನ ಸಲುವಾಗಿ ಪ್ರಯತ್ನಿಸುತ್ತಿದ್ದೀರೆಂದು. ನನ್ನಿಂದಾಗಿ ನಿಮಗೆ ನಿರಾಶೆಯಾಗಿರಬೇಕು. ನಿಮ್ಮ ಭಾವನಿಗೆ ಬೆಳ್ತಂಗಡಿಗೆ ವರ್ಗವಾಗಿ ತೊಂದರೆಯಾಯಿತು, ಕ್ಷಮಿಸಬೇಕು"-ಎಂದು ದೀನವಾಗಿ ನುಡಿದನು. ಜಾನ್‌ಸನರೋ! ಮುಂದಕ್ಕೆ 'ನೀನೇ ದೊಡ್ಡವ' ಎಂದು, ಅವರ ಅಭಿಮಾನಕ್ಕೆ ಗೌರವ ಕೊಟ್ಟರೆ, ತನ್ನ ರುಂಡವನ್ನೇ ಕಡಿದು, ನಿಮ್ಮ ಕೈಗೆ ದಾನವೆರೆಯಲು ಸಿದ್ಧರು. ಹಾಗಿರಲು ತಮ್ಮ ಶಿಷ್ಯ ಅಚ್ಚುತ, ದೀನನಾಗಿ ಕ್ಷಮೆ ಕೇಳಿದರೆ, ಸುಮ್ಮನಿದ್ದಾರೆಯೇ! All right, incident forgotten. On cup coffee-ನನ್ನ ಲೆಕ್ಕಕ್ಕೆ ನಿಮಗೆ-ಎಂದರು. ಆ ಸಂಜೆ ತಲೆಯೊಂದರ ನಾಲ್ಕಾಣೆ ವೆಚ್ಚವಾಗುವಂತೆ, ಹೆಡ್‌ಮಾಸ್ತರರಿಗೂ ಅಚ್ಚುತನಿಗೂ ಅವರ ಲೆಕ್ಕದ ಕಾಫಿಯಾಯಿತು!

ಇದಾದ ಒಂದು ತಿಂಗಳ ಮೇಲೆ, ಜಾನ್‌ಸನರ ಮನಸ್ಸು ತಿರುಗಿ ಕಲ್ಲಾಬಿಲ್ಲಿಯಾಯಿತು. ಅಚ್ಚುತ "ಏನು ಮಾಸ್ತರರೇ, ನಮ್ಮ ಹತ್ತಿರ ಹೇಳದ ಸಂಗತಿ ಏನದು?" ಎಂದು ಅವರನ್ನು ಬಲವಂತ ಪಡಿಸಲು, ಅವರು "Damn it. Achuth. That future brother-in-law disappointed. His sister marry different man."-ಎಂದರು. ಅವರ ಅನುತಾಪದಲ್ಲಿ ಅಚ್ಚುತನೂ ಬೆರೆತನು. "ಈ ಕಲಿಕಾಲದಲ್ಲಿ ಮನುಷ್ಯನಿಗೆ ತನ್ನ ಮಾತಿನ ಬೆಲೆಯೇ ಇಲ್ಲ. ಆ ದಿನ ನಾಗರಾಜನೆನ್ನಲಿಲ್ಲವೇ, ಸಾವಿರ ರೂಪಾಯಿ ಕೊಡುತ್ತೇನೆಂದು. ಕೊನೆಗೆ 'ಲೇದು' ಅಂದುಬಿಟ್ಟ. ಇವತ್ತು, ನಿಮ್ಮ ಭಾವ ನಿಮಗೆ ಮೋಸಹಾಕಿದ" ಎಂದನು.

"Damn that Bhava! ನನಗೇನು ಮೂಸೆಯಿಲ್ಲವೇ! ತಿಂಗಳಿಗೆ

Twenty rupees pay ಇದೆ. ಅವಸಲ್ಲ, ಅವನ ಅಪ್ಪ ಸಂಘವರ ಮನೆ ಯಿಂದ ಬೇರೆ ಹುಡುಗಿ ತಂದೇನು! ಈಗ ಮದುವೆಯಿಲ್ಲದೆ ಕುಳಿತ ಹುಡುಗಿಯರೆಷ್ಟಿಲ್ಲ ನಮ್ಮ ಜಾತಿಯಲ್ಲಿ; every body is putting dammayya, What do yo say?" ಎಂದರು. ಅವರ ಮನಸ್ಸಿನಲ್ಲಿ ಹಟ ಉದಯಿಸಿತು. "ಈ ರಜೆಯಲ್ಲಿ ನಾನು ಮದುವೆಯಾಗದಿದ್ದರೆ ಗಂಡು ಮಗನೇ ಅಲ್ಲ! A gem! a queen! What do you say Mr. Kombar" ಎಂದು ಭೀಷ್ಮಪ್ರತಿಜ್ಞೆ ಮಾಡಿಬಿಟ್ಟರು. ಅಚ್ಯುತನು ಗುರುಗಳ ಹುಮ್ಮಸಕ್ಕೆ ಒಲವಿತ್ತನು.

ಅಂದಿನಿಂದ ಎಪ್ರಿಲು ರಜೆ ಬರುವ ತನಕ ಪ್ರತಿ ಶನಿವಾರ, ಆದಿತ್ಯ ವಾರಗಳಲ್ಲೂ ಜಾನ್‌ಸನ್ ಮಾಸ್ತರರು ಕನ್ಯಾನ್ವೇಷಣೆಗೆ ಹೊರಟರು. ಅವರ ಮನೆಗೆ ಅವರೇ ಯಜಮಾನರು. ಯಾರಿಗೂ ಅವರು ಹೆದರುವ ಭಟರಲ್ಲ. 'ಮಾಡಿಯೇನು' ಅಂದರೆ ಮಾಡಿಯೇ ಬಿಡುತ್ತಾರೆ. ನಡುವೆ ಯಾರಾದರೂ 'ದಮ್ಮಯ್ಯ, ಮಾಡಬೇಡಿ' ಎಂದರೆ ನಿಲ್ಲಿಸಿಬಿಡುತ್ತಾರೆ.

ಅಂಥ ಜಾನ್‌ಸನರು ಹಟಮಾಡಿದರೆ ಅನುರೂಪ ಕನ್ಯೆ ದೊರ ಕಿಸಿಕೊಳ್ಳಲಾರರೇ? ಅಂದರೆ ಅವರಿಗೆ ಒಂದು ಆಸೆ! ತನ್ನ ವರಮಾನ ಕಡಿಮೆ. ತನಗೆ ಅಷ್ಟು ಇಂಗ್ಲೀಷ್ ಬಂದರೂ, 'merit recongnise' ಮಾಡುವ ಕಾಲ ಇದಲ್ಲ. ಹೀಗಾಗಿ ತನ್ನ ಮಡದಿಯೂ ಓರ್ವ ಉಪಾ ಧ್ಯಾಯಿನಿಯಾಗಿದ್ದಲ್ಲಿ, ಇಬ್ಬರ ದುಡಿತ ಸೇರಿ, ಕುಟುಂಬದ ನಿರ್ವಹಣೆ ಸುಲಭವಾದೀತಲ್ಲ-ಎಂಬ ಹಂಬಲ. ಆದರೆ ಸ್ವತಂತ್ರ ಜೀವನದ ಸವಿ ಅರಿತ ಕೆಲವು ಉಪಾಧ್ಯಾಯಿನಿಯರು, ಊರಲ್ಲಿದ್ದರೂ, 'ತಮಗೆ ಯಾಕೆ ಮದುವೆ?' ಎಂದು ತಿಳಿದುದರಿಂದ, ಅವರ ಪಾಲಿಗೆ ಸುಲಭಸಾಧ್ಯ ವಾಗಿರಲಿಲ್ಲ. ಅಂಥ ಮರ್ಯಾದೆ ಇಲ್ಲದವರೊಡನೆ ಲಗ್ನವಾದರೂ 'What use?' ಎಂದು ಇವರು ತೀರ್ಮಾನಿಸಿ, ಕೊನೆಗೆ ಅವಸರ,ಅನ ಸರವಾಗಿ ಬೇರೊಬ್ಬಳು ಕನ್ಯೆಯನ್ನು ನಿಶ್ಚೈಯಿಸಿಕೊಂಡು ಬಂದರು.

'ಜಾನ್‌ಸನ್-ನಿರ್ಮಲಾಹೆಲನ್'ಇವರ ಲಗ್ನಪತ್ರಿಕೆಯು ಇಂಗ್ಲಿ ಷಿನಲ್ಲಿ ಅಚ್ಚಾಗಿ, ಊರವರಿಗೆ ಅವರ ಲಗ್ನದ ಆಮಂತ್ರಣ ಸಂದಿತು. ಮಾತು ಮುರಿದ ಅವರ ಹಳೆಯ ಭಾವನಿಗೆ ಬೇರಿಂಗ್ ಪೋಸ್ಟಿನಿಂದ ಒಂದು ಆಮಂತ್ರಣ ಪತ್ರ ಹೋಯಿತು. ಮದುವೆಯ ದಿನ ಅವರ

ಎಲ್ಲ ಆಪ್ತರೂ ಅವರ ಮನೆಯಲ್ಲಿ ಸೇರಿದ್ದರು. ಬಲು ಸಂಭ್ರಮದಿಂದ ಮದುವೆ ಜರಗಿತು. ಅಚ್ಯುತ ಮಾಸ್ತರರು ಕಾವ್ಯಮಯವಾಗಿ ಎನ್ನುವಂತೆ, ಸಂಜೆಯಾದ ಬಳಿಕ ಕೆಲವೊಮ್ಮೆ ದಿಗಂತದಲ್ಲಿ ಕಾಣಿಸುವ 'ಜುಪಿಟರ್ — ವೀನಸ್'ರಂತೆ ಕಂಗೊಳಿಸಿದರು ಆ ದಂಪತಿಗಳು! ಅಚ್ಚುತರಾಯ ತನ್ನ ಲಗ್ನಕ್ಕೆ ನಾಲ್ಕು ನೂರು ಸಾಲಮಾಡಿದ್ದ. ಇವರು ಅದನ್ನು ವಿೂರಿಸಿ ಸಾಲಮಾಡಿ ಲಗ್ನ ಮುಗಿಸಿದರು. ಅವರ ನಿರ್ಮಲಾ ಹೆಲನ್ ರೂಪವತಿ, ಗುಣವತಿ. ಶಾಲೆಯಲ್ಲಿ ಉಪಾಧ್ಯಾಯಿನಿಯಾಗಲು ಶಕ್ತಳಲ್ಲವಾದರೂ, ಮನೆಯಲ್ಲಿ ಕುಳಿತು ದುಡಿಯಬಲ್ಲಳು. ಚೆನ್ನಾಗಿ ಹೊಲಿಗೆ ಕೆಲಸ ಬಲ್ಲಳು. ಅದರಿಂದಲೇ ಜಾನ್‌ಸನರು "ಅಚ್ಯುತರಾವ್, your first baby, my wife free ಅಂಗಿ make a present" ಎಂದು ಉತ್ಸಾಹದಿಂದ ನುಡಿದರು. ಆ ಸುಗಳಿಗೆ ಎಂದು ಪ್ರಾಪ್ತಿಸಬೇಕೋ?



## ೧೨ನೆಯ ಅಧ್ಯಾಯ

ಕಡಬದಲ್ಲಿ ಉಪಾಧ್ಯಾಯನಾದಂದಿನಿಂದ ಅಚ್ಚುತರಾಯನಿಗೆ ವಿರಾಮವಿಲ್ಲವೆಂದೇ ಹೇಳಬೇಕು. ನಿತ್ಯ ಆರು ಮೈಲಿ ದೂರ ಬಂದು ಹೋಗುವುದರಲ್ಲಿ ಅವನ ಸಮಯ ಸಾಕಷ್ಟು ಹಾಳಾಗುತ್ತಿತ್ತು. ದಣಿವೂ ಆಗುತ್ತಿತ್ತು. ಇನ್ನು ಶಾಲೆಯ ಕೆಲಸಗಳಿವೆ. ಅವನಿಗೆ ಪ್ರಿಯವಾದ ಶಾಲೆಯ ಚಟುವಟಿಕೆಗಳೂ ಸಾಕಷ್ಟು ಕಾಲವನ್ನು ಅಪಹರಿಸುವುವು. ಇವುಗಳೆಡೆಯಲ್ಲಿ ಅವನ ಬರವಣಿಗೆ ವ್ಯವಸಾಯ, ಪತ್ರಿಕಾಲೇಖನ, ಕಾವ್ಯಲೇಖನಗಳೆಲ್ಲವೂ ತಣಿದುಹೋದುವೆಂದರೂ ಸರಿಯೆ. ಎಷ್ಟೆಲ್ಲ ಒಬ್ಬನಿಂದಲೇ ಸಾಧ್ಯವಾದೀತು? ಏನೋ, ಯಕ್ಷಗಾನದ ಮೇಲಿನ ವ್ಯಾಮೋಹವನ್ನು ಇನ್ನೂ ಉಳಿಸಿಕೊಂಡು ಬಂದಿದ್ದಾನೆ. ಅದಕ್ಕೆ ಅವನೇ ಕಾರಣನೆನ್ನುವ ಬದಲು, ಅವನ ಊರಿನ ಆವರಣವೇ ಮುಖ್ಯವೆನ್ನಬಹುದು. ಮೃದಂಗಪ್ರಿಯ ಐತು ಮೂಲ್ಯರು, ಭಾಗವತ ರಿಟಾಯರ್ಡ್ ಸಂಕಪ್ಪಗೌಡರು, ಅರ್ಥಗಾರರಾದ ನಾರಾಯಣ ಮಾಸ್ತರು,

ಕುಡುಮತ್ತಾಯರು-ಇವರೆಲ್ಲರ ಜೊತೆಗೆ ಅಚ್ಯುತರಾಯನೊಬ್ಬ. ಅಚ್ಯುತನಿಗೆ ಒಮ್ಮೊಮ್ಮೆ ಕುಡುಮತ್ತಾಯರ ಅರ್ಥ ಹಿಡಿಸುವುದಿಲ್ಲ. ಒಮ್ಮೊಮ್ಮೆ —ಎಂದರೇನು? ಈಗ ಯಾವಾಗಲೂ. ಅವರಿಗೆ ತುದಿಮೊದಲಿಲ್ಲದ, ಉದ್ದೇಶವಿಲ್ಲದ ಅವರ ಮಾತುಗಾರಿಕೆ, ತಲೆಹರಟೆಯೆನಿಸುವುದು. ಆದರೇನು? ಅದು ಕೇವಲ ಅವನ ವ್ಯಕ್ತಿಶಃ ಅಭಿಪ್ರಾಯ. ಆ ಊರವರಿಗೆ ಕುಡುಮತ್ತಾಯರೇ ಮೆಚ್ಚು. ಛೇ! ಇಂಥವರೊಡನೆ ಅರ್ಥಕ್ಕೆ ಕುಳಿತರೆ ಏನು ಪುರುಷಾರ್ಥವಾದೀತು-ಎಂದು ಇವನು ತನ್ನ ಹಳೆಯ ಗುರುಗಳೊಡನೆ ವಾದಿಸುವುದುಂಟು. "ಏನಾದರೊಂದು ಪಾತ್ರವನ್ನು ವಹಿಸಿ, ಮನಸ್ಸಿಗೆ ಆ ವ್ಯಕ್ತಿಯ ಮಹಾತ್ಮ್ಯವನ್ನು ತಂದುಕೊಂಡು ಸುಖಪಡುವ ಎಂದರೆ, ಇವರ ಅಭ್ಯಾಸವನ್ನು ಕೇಳಿ, ಮೈರೋಮ ನಿಮಿರುತ್ತದೆ! ಕೇವಲ ವ್ಯಥೆಯಾಗುತ್ತದೆ" ಎನ್ನುತ್ತಾನೆ. ನಾರಾಯಣರಾಯರು ಚೆನ್ನಾದ ಅರ್ಥಗಾರರು. ಅವರಿಗೆ ಅಚ್ಯುತನ ಕೆಲವು ಅಭಿಪ್ರಾಯಗಳು ಒಪ್ಪುತ್ತವೆ. ಕುಡುಮತ್ತಾಯರ ಅರ್ಥ ಅವರಿಗೂ ತಲೆಹರಟೆಯೇ. ಆದರೆ 'ಈ ಪಾತ್ರದ ಮಹಾತ್ಮ್ಯ ಮನಸ್ಸಿಗೆ ತಂದುಕೊಂಡು ನಮ್ಮಷ್ಟಕ್ಕೆ ಸುಖಪಡುವ' ಎಂಬ ಮಾತು ಅವರಿಗೂ ಅರ್ಥವಾಗದಾಗಿದೆ. ನಡುವೆ ಅವರಿವರಲ್ಲಿ ಇಂಥ ಚರ್ಚೆಗಳಾಗುವಾಗ ನಮ್ಮ ಜಾನ್ಸನರ ಸವಾರಿ ಬರುವುದುಂಟು. "ಅಚ್ಯುತರಾವ್, ಈಗ ನನ್ನ ಅರ್ಥ ಮೇಲೋ, ಕುಡುಮತ್ತಾಯರದ್ದೋ ಅಥವಾ ಹೊಸಬರಾದ ನಿಮ್ಮದೋ -ಏನೆಂದು ಹೇಳಿ. ನೋಡಿ Truth you must speak" ಎನ್ನುವುದುಂಟು. 'ಈ ಊರಲ್ಲಿ ನಿಮಗೆ ಅರ್ಥಗಾರಿಕೆಯಲ್ಲಿ ಸರಿಗಟ್ಟುವರಾರಯ್ಯ'-ಎನ್ನದಿದ್ದರೆ ಮುಂದಲ ಯಕ್ಷಗಾನ ಕೂಟ ಉತ್ಸಾಹದಿಂದ ನಡೆಯದೆಂದು ಅವರೆಲ್ಲರಿಗೂ ತಿಳಿದಿತ್ತು. ಆದುದರಿಂದ "ನಿಮ್ಮ ಅರ್ಥಕ್ಕೆ ಸರಿಯಾದ ಅರ್ಥ, ಕುಡುಮತ್ತಾಯರದ್ದೂ ಅಲ್ಲ ಯಾರದ್ದೂ ಅಲ್ಲ" ಎನ್ನುತ್ತಾರೆ. ತಮ್ಮ ಅರ್ಥದಿಂದ ಸಭಿಕರು ನಗುತ್ತ ಬಿದ್ದಿರುವುದನ್ನು ಕಂಡು, ಜಾನ್‌ಸನರು ತಮ್ಮ ವಿಷಯದಲ್ಲಿ ಅದೇ ತೀರ್ಮಾನಕ್ಕೆ ಬಂದಿದ್ದಾರೆ. ಹೀಗಾದುದರಿಂದ ಅವರ ರಸಿಕರಾಜ್ಯದಲ್ಲಿಯೂ, ಸರಳವಾಗಿ ಮಾತುಕತೆಯಾಡುವುದು ಕಷ್ಟವೇ.

ಅವರ ಇಂಟರ್ನೇಶನಲ್ ಕ್ಲಬ್ಬಿಗೆ ತುಸು ದುರ್ಗತಿ ಬಂದಿದೆ—

ಎಂದರೂ ಸರಿಯೇ! ಅದಕ್ಕೆ ನಾಗರಾಜನ ಅಪಕೃಪೆಯೇ ಕಾರಣ. ಅವನು ಸಮನಾಗಿ ವಂತಿಗೆ ಕೊಡುತ್ತಲಿಲ್ಲ. ಮಾತ್ರವಲ್ಲ, ಕಂಡವ ರೊಡನೆ "ಆ ಮೂರು ಮುಕ್ಕಾಲಿನ ಮಾಸ್ತರುಗಳು ಕ್ಲಬ್ಬಿನಲ್ಲಿ ತುಂಬಿ ರುವಷ್ಟು ದಿವಸ, ಕ್ಲಬ್ಬು ಬರಕತ್ತಿಗೆ ಬರಲಾರದಯ್ಯ. ಅದರಿಂದ ನಾನು ಅಲ್ಲಿಗೆ ಹೋಗುವುದನ್ನು ನಿಲ್ಲಿಸಿಬಿಟ್ಟಿದ್ದೇನೆ" – ಎನ್ನುತ್ತಾನೆ. ಮುಂದಣ ಮಳೆಗಾಲ ಕಳೆದರೆ ಸಾಕು "Peoples' own club" ಎಂಬ ಹೊಸ ಸಂಸ್ಥೆ ತೆರೆದು ಅನೇಕ ಸಾರ್ವಜನಿಕ ಚಟುವಟಿಕೆಗಳಿಗೆ ತಾನು ಕೇಂದ್ರಸ್ಥನಾಗಬೇಕೆಂದು ಅವನು ನಿಶ್ಚಯಿಸಿಯೂ ಆಗಿದೆ.

ಇತ್ತ ಕ್ಲಬ್ಬಿಗೆ ಆಧಾರಸ್ತಂಭರಾದ ಉಪಾಧ್ಯಾಯರಿಂದಲೇ ವರ್ಗಣಿ ಸಮನಾಗಿ ವಸೂಲಾಗಲೊಲ್ಲದು. ಅವರ ಅನೇಕ ತಾಪತ್ರಯ ಗಳು ಕಳೆದುಳಿದು, ತಿಂಗಳಿಗೆ ಎಂಟಾಣೆಯೋ ರೂಪಾಯಿಯೋ ಕ್ಲಬ್ಬಿಗೆ ದೊರೆಯಬೇಕು. ಮೊದಲು, ಹುಮ್ಮಸದಲ್ಲಿರುವಾಗ, ತನ್ನ ಲೆಕ್ಕಕ್ಕೆಂದೇ ನಾಗರಾಜ ತುಂಬ ಹಣ ವ್ಯಯಿಸಿದನು. ಈಗ ಅವನು ದೂರವಾಗಿರುವ. ಹಣವಿಲ್ಲದೆ ಆ ಪತ್ರಿಕೆ ಈ ಪತ್ರಿಕೆ, ಪೆಟ್ರೊಮ್ಯಾಕ್ಸ ದೀವಿಗೆ, ಬಾಡಿಗೆ, ಬ್ಯಾಡಮಿಂಟನ್ ಕೋರ್ಟುಗಳೆಲ್ಲ ಹೇಗೆ ಜೀವ ಹಿಡಿದಾವು? ಅವರ ಕ್ಲಬ್ಬಿನ ಸಾಕುತಂದೆಯಂತಿದ್ದ ಜಾನ್ ಸನರಿಗೆ, ಕ್ಲಬ್ಬು ಸಾಯುವುದೆಂಬ ಭೀತಿ. ಹೇಗಾದರೂ ಅದನ್ನುಳಿಸಿಕೊಂಡು ಜಮೀನುದಾರ ನಾಗರಾಜ ನನ್ನು ಒಲಿಸಬೇಕೆಂಬ ಹಟ. ಅವನು ಇನ್ನೊಂದು ಕ್ಲಬ್ಬು ತೆರೆದರೆ, ತಮ್ಮದು ಸಾಯುವುದೆಂದು ಅವರು ಎಣಿಸುತ್ತಾರೆ. "ಹುಟ್ಟಿದ ಮಕ್ಕ ಳಿಗೇ ಗತಿ ಇಲ್ಲದಾಗ, ಹೊಸ ಮಕ್ಕಳನ್ನು ಹೆರುವವರಿಗೆ ಏನು ಹೇಳಲಿ" ಎಂದು ಅವರಿಗೂ ತೋಚುತ್ತದೆ. ಅವರ ಮಿತ್ರ ಸಂಕಪ್ಪ ಗೌಡರು ಸಹ ಹಾಗೆ ಹೇಳುತ್ತಾರೆ. "ನಾಗರಾಜನು ಹೊಸ ಕ್ಲಬ್ಬು ತೆರೆಯುವುದಾದರೆ, ನಿಮ್ಮ ಬಲ ಯಾವ ಕಡೆಗೆ ಮಾಸ್ತರರೇ" ಎಂದು ಜಾನ್ ಸನರು ಸಂಕಪ್ಪ ಗೌಡರನ್ನು ಕೇಳುವುದುಂಟು. ಅದಕ್ಕೆ ಅವರು:

"ಈಗ ಎರಡಕ್ಕೂ ವರ್ಗಣಿಕೊಟ್ಟು ಬಚಾಯಿಸಲು ಬಂದೀತೆ?" ಎನ್ನುತ್ತಾರೆ.

"ಅದು ಸಮ. ಬಡವರಿಗೆ ಎರಡೆರಡು ಕ್ಲಬ್ಬು ಹೇಗೆ ಸಾಧ್ಯ?"

"ಅಲ್ಲದೆ ಇನ್ನು ನಮ್ಮ ದಿನ ಪ್ರಾವಿಡೆಂಟ್ ಫಂಡಿನ ಮೇಲೆ

ನಡೆಯಬೇಕು. ಊರವರ ರಿಯಾಯತಿ ಮೇಲೆಯೇ ನಡೆಯಬೇಕು."

"ಅದೂ ಸಮವೇ."

"ಹಾಗಿರುವಾಗ ಮಾಸ್ತರಿಕೆ ಬಿಟ್ಟಿರುವ ನಾನು, ಊರವರನ್ನು ಸೇರಲೇ? ನಿಮ್ಮನ್ನೇ?"

"ಆದರೆ ಊರವರಿಗೆ ನಾವು ಹೊರಗೇನು? ನಾವೂ ಇದೇ ಊರವರು."

"ಅದು ಸಮನೇ. ಆದರೆ ನಾಗರಾಜ ಒಬ್ಬನೇ ಕ್ಲಬ್ಬು ಮಾಡುತ್ತಾನೆಯೇ? ಊರಿನ ವರ್ಗದಾರರು, ಸಾಹುಕಾರರು ಸೇರಿ ಮಾಡುವ ಕೆಲಸ. ನಾನು ನಿತ್ಯ ಅವರ ಹಂಗಿನಲ್ಲಿರುವವನು. ಹೀಗಿರುತ್ತ, ನಿಮ್ಮ ಕಡೆಗೆ ಸೇರಿಕೊಂಡರೆ, ಹಣಕಾಸಿನ ಸಹಾಯಕ್ಕೆ ಯಾರ ಮುಖ ನೋಡಲಿ" ಎಂದು ಭಯಭೀತರಾಗುತ್ತಾರೆ ಸಂಕಪ್ಪಗೌಡರು.

"ಹಾಗಾದರೆ ನಿಮ್ಮ ಸವಾರಿ ಈಗಲೇ ಒಂದು ಕಾಲು ಆಚೆಯಿರಿಸಿಯಾಯಿತು; ದಡ ಕಾಣುವ ಮುಂಚೆಯೇ! ಸಂಕಪ್ಪ ಮಾಸ್ತರರೇ, 'ಆದರೆ ಹೋದರೆ ಹತ್ತಿ ಬೆಳೆದರೆ' ಅಂದ ಹಾಗೆ, ಇನ್ನೊಂದು ಕ್ಲಬ್ಬಿನ ಮೆಂಬರು ನೀವು ಆಗಿಬಿಟ್ಟಾಯಿತಲ್ಲವೆ? ಆಗ ನಮ್ಮ ತಾಳ ಮದ್ದಲೆಗೆ ನೀವು ದೂರವೇ. ನಾವು ಹೊಸಮಠದ ಭಾಗವತರನ್ನು ಕರೆಯಿಸಿಕೊಳ್ಳಬೇಕಲ್ಲವೆ!"

ಛೇ! ಛೇ!—ಹಾಗೇಕೆ ತಿಳಿಯಬೇಕು ನೀವು. ಯಕ್ಷಗಾನಕ್ಕೆ ಪಂಗಡವುಂಟೆ? ಅಂದರೆ ಇಷ್ಟೆ, ನೀವು ಕ್ಲಬ್ಬಿನ ಹೆಸರಲ್ಲಿ ಅದನ್ನು ನಡೆಯಿಸದಿದ್ದರಾಯಿತು. ಬೇಕಾದರೆ 'ಹಿಂದಿ ಪ್ರೇಮಿ ಮಂಡಳ' ಇದ್ದ ಹಾಗೆ 'ಯಕ್ಷಗಾನ ಪ್ರೇಮಿ ಮಂಡಳ' ಎಂದು ಒಂದು ಹೊಸ ಸಂಸ್ಥೆ ಮಾಡುವ.

"ಅದಾದರೂ ಆದೀತು. ಎರಡು ಸಂಘಗಳ ಜತೆಗೆ ಮತ್ತೂ ಒಂದು ಸಂಘ ಹುಟ್ಟಿದ ಹಾಗಾಯಿತು" ಎಂದರು ಜಾನ್ಸನರು.

ಜಾನ್ಸನ ಮಾಸ್ತರರಿಗೂ ತುಂಬ ವ್ಯಥೆಯಾಯಿತು. ತಮ್ಮ ಕ್ಲಬ್ಬು, ಅದರ ಚಟುವಟಿಕೆಗಳು ಸಾಯುವುದು ಖಂಡಿತ; ಅದರ ಜತೆಗೆ ತನ್ನ "oratonial abilıty" ಬೆಳೆಯಿಸುವ ದಾರಿಯೂ ಸಾಯುವುದಲ್ಲ, ಎಂದು ಕಾಣಿಸಿತು. ಅಚ್ಯುತನಿಗೂ ಭವಿಷ್ಯವು ನೀರಸವಾಗಿ

ಕಾಣಿಸಿತು. "ನಾರಕ್ಕೊಮ್ಮೆಯಾದರೂ ಒಂದು ರಸದೂಟ ಅನುಭವಿಸ ಬಹುದಿತ್ತು. ಅದೂ ಊರವರಿಗೆ ಬೇಡವಾಯಿತೇ?" ಎಂದು ಅನಿಸಿತು. ಒಮ್ಮಿಂದೊಮ್ಮೆ ಪರಿಸ್ಥಿತಿ ಕೆಡಲು ಏನು ಕಾರಣ? ನಾಗರಾಜ ಏಕೆ ತಮ್ಮ ಮೇಲೆ ವೈರತಾಳಬೇಕು? ಎಲ್ಲವೂ ತನ್ನ ಆಸ್ತಿ, ಹಣಗಳ ಪ್ರಕ ರಣದಿಂದ ಉಂಟಾಗಿರಬಹುದೇ ಎಂದು ಅವನು ಅನುಮಾನಿಸುವಂತಾ ಯಿತು. ಈ ಸ್ಥಿತಿಯನ್ನು ಸನುಕ್ಕೆ ತರಲು ಅವನಾಗಲೀ, ನಾರಾಯಣ ರಾಯರಾಗಲೀ ಕೈಲಾಗದವರು. ಉಪಾಧ್ಯಾಯರಲ್ಲಿ ನಾಗರಾಜನ ಪ್ರೀತಿಗೆ ಪಾತ್ರರಾದವರಲ್ಲಿ ಜಾನ್‌ಸನರೊಬ್ಬರೇ ಮುಖ್ಯ. ಅವರೇನಾ ದರೂ ಹಟ ಹಿಡಿದು ಊರಿನ ಹವೆಯನ್ನು ಸರಿಪಡಿಸಬೇಕು-ಎಂದು ತಿಳಿದಿದ್ದ. ಅದರಂತೆ ಜಾನ್‌ಸನರನ್ನು ಪ್ರೇರಿಸಿದನು. ನಾರಾಯಣ ರಾಯರೊ ತೀರ ನಿರಾಶೆಯನ್ನು ತಾಳಿ, ಒಂದೂ ಮಾತನ್ನಾಡದೆ ಕುಳಿ ತರು. ತಾವು ಈ ವಿಷಯದಿಂದ ದೂರ ಇರುತ್ತೇನೆಂದುಕೊಂಡರು. ಅಲ್ಲದೆ ಜಾನ್‌ಸನರೊಡನೆ "ನಿಮಗೂ ನಾಗರಾಜನ ತಂಟೆ ಬೇಡ, ಸುಮ್ಮನಿರಿ. ನಾವಾಗಿ ಯಾರಲ್ಲೂ ಸಲಾಮು ಹಾಕಬೇಕಿಲ್ಲ. ಅವನು ದುಡ್ಡಿದ್ದವನಾದರೆ ಅವನಿಗಾಯಿತು. ನಮಗೇನಾದರೂ ಪಾಲು ಕೊಡು ತ್ತಾನೆಯೇ" ಎಂದರು. ಜಾನ್‌ಸನರು "ಹಾಗಲ್ಲ ಮಾಸ್ತರರೇ, ಅವ ನಿಂದಾಗಿ, ಊರವರೆಲ್ಲರೂ ನಮ್ಮ ಮೇಲೆ ವೈರ ಕಟ್ಟುವ ಹಾಗಿದೆ. 'ಈ ಮಾಸ್ತರುಗಳು ಒಂದು gang ಆಗಿದ್ದಾರೆ. ಶಾಲೆಯಲ್ಲಿ ಪಾಠ ಕಲಿಸುವ ಬದಲಿಗೆ, ಕ್ಲಬ್ಬು, ಆಟ, ಯಕ್ಷಗಾನವೆಂದು ಶಾಲೆಯನ್ನು ಯಾಕೂ ಬಾರದ ಸ್ಥಿತಿಗೆ ತಂದು ಮುಟ್ಟಿಸುತ್ತಾರೆ'-ಎಂದೆನ್ನುತ್ತಿದ್ದಾರೆ. ಹಾಗೆಂದು ಅವರು ತಮ್ಮ ಮಕ್ಕಳನ್ನು ಶಾಲೆಯಿಂದ ಹಿಂದೆಗೆದರೆ, ಶಾಲೆ ಉಳಿ ದೀತೆ?" ಎಂದರು ಜಾನ್‌ಸನರು.

"ಮೊದಲು ಶಾಲೆ ಬೇಕಾದುದು ಊರವರಿಗೆ. ಮಾಸ್ತರು ಜಾ ತಿಯ ನಾವು ತುದಿಗಾಲಲ್ಲಿ ನಿಂತೇ ಇದ್ದೇವೆ. ಬೋರ್ಡು ಅಟ್ಟದಲ್ಲಿಗೆ ಹೋಗಬೇಕು ನಾವು. ಇವರ ಕಡಬವೇ ನಮಗೆ ತವರು ಮನೆಯೇ?" ಎಂದರು ನಾರಾಯಣರಾಯರು.

ಜಾನ್‌ಸನರಿಗೆ ಸಮಾಧಾನವಾಗಲಿಲ್ಲ. ಅವರು ಹೊರಟುಹೋ ದರು. ಮೇ ರಜೆಯಲ್ಲಿ ತನಗೆ ತುಂಬ ವಿರಾಮವಿದೆ. ನಾಗರಾಜನಲ್ಲಿಗೆ

ಹಲವು ಬಾರಿ ಓಡಾಡುತ್ತಿದ್ದು, ಅವನನ್ನು ಹೇಗಾದರೂ "domesticate" ಮಾಡುತ್ತೇನೆಂಬ ಭರವಸೆಯಿಂದ ಸಮಯ ಕಳೆದರು. ನಾರಾಯಣರಾಯರು ಊರಿನ ಸ್ಥಿತಿಯನ್ನು ಬಲ್ಲವರು. ಆದರೆ ಯಾವುದನ್ನೂ ಬಹಿರಂಗವಾಗಿ ಚರ್ಚಿಸುವುದರಿಂದ ಇದ್ದ ಪರಿಸ್ಥಿತಿ ಕೆಟ್ಟೀತೇ ವಿನಾ ಒಳಿತಾಗದೆಂದು ತಿಳಿದಿದ್ದರು. ಅಲ್ಲದೆ ತಮಗೆ ಎಲ್ಲಾದರೇನು? ಎಲ್ಲಿಯೂ ದುಡಿಯಬೇಕು. ಅದರಲ್ಲಿ ಮೂಡಿನ ಕಡಬ-ಏನೊಂದು ಹೆಚ್ಚು?—ಇಲ್ಲಿಗೆ ಬಂದು ಈಗಲೇ ಕೆಲವು ವರ್ಷಗಳು ಸಂದುವು. ಇನ್ನು ಬೇರೊಂದು ಊರನ್ನು ನೋಡುವ. ಹತ್ತೂರನ್ನು ಕಂಡರೆ ಮನುಷ್ಯನ ಜ್ಞಾನ, ಅನುಭವ ಬೆಳೆಯುತ್ತವೆ" ಎಂದುಕೊಳ್ಳುವರು.

ಅಚ್ಚುತನಿಗೆ ಕಡಬ ಬಂದು ಸೇರಿದ ಮೂರು ತಿಂಗಳಲ್ಲೇ ಬೇಸರವಾಗಿ, ಬೇಸಗೆ ರಜೆ ಒಮ್ಮೆಗೆ ಬಂದರೆ, ತಣ್ಣಗೆ ಕೊಂಬಾರಿನಲ್ಲಿ ಬಿದ್ದಿರುತ್ತೇನೆ. ಅಲ್ಲಿ ಬೇಸರವಾದರೆ ಮಾವನ ಮನೆಯಲ್ಲಿ ಕಳೆಯುತ್ತೇನೆ—ಎಂದು ನಿರ್ಧರಿಸಿದ. ಅವನ ಮನಸ್ಸು ಶಾಂತಿ ಸುಖಗಳನ್ನು ಕೋರುತಿತ್ತು. ಈ ಶಾಲೆಯ ದಿನಚರಿಗಳಲ್ಲಿ ಅವನಿಗೆ ತನ್ನ ಜತೆಗಾರರೊಡನೆ ಸವಿಯಾದ ಸಲ್ಲಾಪಕ್ಕೆ ನಾಲ್ಕು ಕ್ಷಣವಾದರೂ ಅವಕಾಶವಿರುತ್ತಿರಲಿಲ್ಲ. ಬೆಳಗ್ಗೆ ಎದ್ದೊಡನೆಯೇ ಮುಖಮಾರ್ಜನ, ಸ್ನಾನಗಳಾದುವು. ಮನೆ ದೇವರ ಪೂಜೆಗೆ ಒಂದಿಷ್ಟು ಸಮಯ ಹೋಗುತ್ತದೆ. ಅನಂತರ ಗಂಜಿಯನ್ನು ಅವಸರ ಅವಸರವಾಗಿ ಮುಕ್ಕಿದರೆ, ಅಲ್ಲಿಂದ ಶಾಲೆಗೆ ಓಡುವುದಾಯಿತು. ಆರು ಮೈಲು ಓಟ! ಅದು ನಡಿಗೆಯಲ್ಲ. ಅಲ್ಲಿಗೆ ತಲಪುವಾಗಲೇ ಉಂಡದ್ದೆಲ್ಲ ಕರಗುತ್ತದೆ. ಸಂಜೆಯ ವರೆಗೆ ಶಾಲೆಯ ಕೆಲಸ. ಸಂಜೆ ಮನೆಗೆ ಬರುವಾಗಲೇ ಕತ್ತಲು ಕವಿಯುವುದು, ಅಲ್ಲಿಂದ ಊಟಮಾಡಿ, ಮರುದಿನದ ಶಾಲೆಗೆ ತಯಾರಿ ನಡೆಯಿಸಬೇಕು. ಹೊಸತಿನ ಮಾಸ್ತರಿಕೆ. ಇಲ್ಲಿಗೆ ಬಂದ ಮೇಲೆ ತಾನು ಪಾಠ ಹೇಳುವ ವಿಷಯಗಳೂ ಬದಲಾವಣೆಗೊಂಡಿವೆ; ತರಗತಿಗಳೂ ಹೆಚ್ಚುಕಡಮೆಯಾಗಿವೆ. ಹೀಗಾಗಿ ತೀರ, ತುಂಬ ಓದಿಕೊಂಡರೆ, ನೋಟ್ಸು ಬರೆದರೆ, ಮರುದಿನದ ಕಾರ್ಯ ನಿರ್ವಹಿಸಬಹುದು. ಇನ್ಸ್‌ಪೆಕ್ಟರರಿಂದ ಅವರ ಪ್ರತ್ಯಕ್ಷ ಪರೀಕ್ಷೆಯಾಗುವ ತನಕ, ಈ ಆತುರ ಇದ್ದೇ ಇದೆಯಲ್ಲ. ಅಲ್ಲಿನ ತನಕ ಎಲ್ಲಿನ ವಿರಾಮ? ಅನಂತರ ನಡೆದು, ದುಡಿದು, ದಣಿದ

ಜೀವ ಮಲಗಿತೆಂದರೆ, ಒಂದೇ ನಿದ್ರೆಗೆ ಬೆಳಗು ಆಗುತ್ತದೆ.

ಅವನ ಈ ಅವಿಶ್ರಾಂತ ಶ್ರಮದಿಂದಾಗಿ ಪಾಪ, ರುಕ್ಮಿಣಿಯ ಕನಸುಗಳೆಲ್ಲ ಮಣ್ಣಾದುವು. ಅತ್ತೆಯೊಡನೆ ಬಾಯಿತುಂಬ ಮಾತನಾಡುವುದಕ್ಕೆ ಅವಳಿಗೆ ಅಂಜಿಕೆ. ಗಂಡನೆಂದು ಮನೆಗೆ ಬಂದಾನು, ಎಂದು ಹವಣಿಸಿದರೆ ಆತ ನೊಗಕ್ಕೆ ಕಟ್ಟಿದ ಎತ್ತಿನಂತೆ ದುಡಿಯುತ್ತಾನೆ! ದಣಿದು ಬರುತ್ತಾನೆ! ರಾತ್ರಿ ಮಲಗುವಾಗ ಎರಡು ಮಾತನಾಡುವ – ಎಂದರೆ: 'ಪಾಪ! ಎಷ್ಟು ದುಡಿದಿದ್ದಾರೋ, ಮಲಗಿಕೊಳ್ಳಲಿ' ಎಂದು ತೋರುತ್ತದೆ. ಅಚ್ಯುತನೇ ಹಲವು ಬಾರಿ "ಈಗ ಕೆಲಸ ಮುಗಿಯಿತು ರುಕ್ಮಿಣಿ, ಚಂದವಾಗಿ ನಾಲ್ಕು ನಿಮಿಷ ಹರಟೆ ಹೊಡೆಯುವ" ಎಂದು ಕುಳಿತರೆ, ಒಂದೇ ಮಾತು ಆಡಿ ಮುಗಿಸುವುದರೊಳಗೆ ಅವನಿಗೆ ತೂಕಡಿಕೆಯೂ ಬಂದಿರುತ್ತದೆ. ರುಕ್ಮಿಣಿಯ ಮಾತಿನ ಚಪಲ ಹಾಗೇನೆ ಉಳಿಯುವುದು. ಗಂಡ ಸಮೀಪದಲ್ಲಿರುತ್ತಾನೆ, ಮುಖ ನೋಡಿ ಸಂತೋಷಗೊಳ್ಳಬಹುದೆಂಬ ಒಂದೇ ಸುಖ, ಅವಳ ಪಾಲಿಗೆ ಈಗ ಕಾಣಿಸುತ್ತದೆ.

ಅದರಿಂದ ಅವಳು ಪ್ರತಿ ದಿನವೂ ತನ್ನ ನಾಲಗೆ ಚಪಲವನ್ನು ತೀರಿಸಿಕೊಳ್ಳಲು, ದೂಮನ ಹತ್ತಿರವಾದರೂ ಒಂದೆರಡು ತಾಸು ಕಳೆಯುತ್ತಾಳೆ. ಅವರಲ್ಲಿ ವಿಷಯವೇನು ಬಂದೀತು? 'ಪಂಜದ ಊರಲ್ಲಿ ಹಾಗಿದೆ, ಪಂಜದ ಊರಲ್ಲಿ ಹೀಗಿದೆ' ಎಂಬುದೇ ವಿಷಯ. ಅದರಲ್ಲೂ ಬರಿಯ ತಲೆದೂಗಬಲ್ಲವ ದೂಮ. ಅವನೇನಾದರೂ ಮಾತನಾಡುವುದಾದರೆ, ಅದು ಗಂಟಲವರೆಗೆ ಹೆಂಡ ಬಿದ್ದಾಗ ಮಾತ್ರ. ಅಷ್ಟು ಸಂಪತ್ತು ಅವನಿಗೆಲ್ಲಿದೆ?

ಗಂಡ ಬಂದ ಎರಡು ತಿಂಗಳಲ್ಲೇ ರುಕ್ಮಿಣಿ ಒಮ್ಮೆ "ನಿಮಗೆ ಬೇಸಗೆ ರಜೆ ಯಾವಾಗ ತೊಡಗುವುದು" ಎಂದು ಕೇಳಿದ್ದಳು. "ಯಾಕೆ? ಬೇಸರ ಬಂತೇ–ಈ ಊರು? ಬಂದಿರಬೇಕು. ಹೌದು ಅಮ್ಮನಿಗೆ ಹೊರಗಿನ ಕೆಲಸವಾಯಿತು. ನನಗೆ ಶಾಲೆಯಾಯಿತು. ನಿನಗೆ ಮನೆಯ ಕೆಲಸವಾಯಿತು. ಬೇಸರವಾಗುತ್ತಿರಬೇಕು....ಬರುತ್ತದೆ ರಜೆ ಬೇಗ....ಎಪ್ರಿಲ್ ಇಪ್ಪತ್ತಕ್ಕಿರಬೇಕು. ಆದರೂ ಇನ್ನೂ ಅದಕ್ಕೆ ತಿಂಗಳೂವರೆಯೂ ಉಂಟಲ್ಲ. ಆಗಲಾದರೆ ಗಮ್ಮತ್ತು ಮಾಡುವ!" ಎಂದನು.

"ಅಷ್ಟರೊಳಗೆ ನನಗೆ ಮಾತನಾಡುವುದೇ ಮರೆತು ಹೋದರೆ!"–

ಎಂದಳು ರುಕ್ಮಿಣಿ.

ಅಚ್ಯುತ ನಕ್ಕ. ಕ್ಷಮೆ ಯಾಚಿಸುವವನಂತೆ "ಹೌದು ರುಕ್ಮಿಣಿ. ಪರರ ದಾಸ್ಯ ಎಂದರೆ ಎಲ್ಲ ಹಾಗೇನೆ. ಹಾಗೆಂದು ದಾಸ್ಯ ನನಗೆ ಬೇಡೆಂದರೆ ನಡೆದೀತೆ? ಮನೆಯಲ್ಲಿ ಏನು ಉಳಿದಿದೆಯಂತೆ?" ಎಂದನು.

ಬಲು ಹೊತ್ತು ಅವನು ಬೇಸರಕ್ಕೀಡಾದನು. ಕೊನೆಗೆ, "ನಿನಗೆ ಪಂಜಕ್ಕೆ ಹೋಗಿ ಬರಬೇಕೆಂದು ಕಾಣುತ್ತದೆಯೇ?"-ಎಂದು ಕೇಳಿದ.

"ನಿಮ್ಮನ್ನು ಬಿಟ್ಟೇ? ಇಲ್ಲೇನು ಕಡಮೆಯಾಗಿದೆ ನನಗೆ?"

"ರಜೆ ತೊಡಗಿದೊಡನೆಯೇ ಪಂಜಕ್ಕೆ ಓಡಿಹೋಗುವ. ನನಗೂ ಈ ಕಡಬ, ಕೊಂಬಾರುಗಳೆಂದು ತಿರುಗಿ ತಿರುಗಿ ಸಾಕಾಗಿ ಹೋಗಿದೆ" ಮರುಗಳಿಗೆಗೆ ತನ್ನ ಪ್ರೌಢಿಮೆಯ ನೆನಪಾಯಿತು. "ರುಕ್ಮಿಣಿ, ಆದರೆ ಒಂದು ಮಾಡಬಹುದಲ್ಲ ನೀನು; ಇಷ್ಟೆಲ್ಲ ಪುಸ್ತಕಗಳಿವೆ. ಬೇಕಾದರೆ ಇನ್ನೂ ಕೆಲವನ್ನು ತರುತ್ತೇನೆ. ಓದಲಿಕ್ಕೆ ಪೇಪರೂ ತರುತ್ತೇನೆ. ನೀನು ಓದನ್ನು ರೂಢಿ ಮಾಡಬಹುದಲ್ಲ, ಜ್ಞಾನವನ್ನು ಹೆಚ್ಚಿಸಿಕೊಳ್ಳಬಹುದಲ್ಲ" ಎಂದು ಉಪದೇಶಿಸಿದ.

"ಹೂಂ"- ಎಂದು ಆಕೆ ದೀರ್ಘವಾದ ನಿಟ್ಟುಸಿರು ಬಿಟ್ಟಳು.

"ಯಾಕೆ ಹೂಂ-ಎಂದು ರಾಗ ಮಾಡುತ್ತೀ".

"ನೀವೆನ್ನುವುದು ಸರಿಯೇ. ಆದರೆ ನನಗೆ, ದಣಿದು ಕೂತಾಗ ಯಾವುದಾದರೊಂದು ಜೀವಿಯೊಡನೆ ಮಾತನಾಡಿದರೆ ತೃಪ್ತಿಯೇ ಹೊರತು, ಬರಿ ಸತ್ತ ಕಾಗದ, ಮಸಿ ಕಂಡೇನಾದೀತು" ಎಂದಳು.

"ಅದರ ಸುಖ ಅದರಲ್ಲಿದೆ, ಇದರ ಸುಖ ಇದರಲ್ಲಿದೆ."

"ಆದರೆ ಅದು ಮಾಡಿದ ಕೆಲಸ; ನೀವು ಹೇಳುವುದು—ಇನ್ನೂ ಓದಿ, ಕಲಿತು ಆಗಬೇಕಾದ ಕೆಲಸ."

"ನೀನು ಕೆಲವು ದಿನ ಪ್ರಯತ್ನಪಟ್ಟು ನೋಡು."

ರುಕ್ಮಿಣಿ ನಾಲ್ಕು ದಿನಗಳ ಕಾಲ ಪ್ರಯತ್ನಪಟ್ಟು ಕೆಲವು ಪುಸ್ತಕ ಓದಿದಳು. ಹಲವು ಪತ್ರಿಕೆಗಳನ್ನು ತಿರುವಿ ಹಾಕಿದಳು. ಹಾಕುವಾಗಲೂ ಬೇಸರ; ಹಾಕಿದ ಬಳಿಕವೂ ಅದೇನೆ! "ಆಗುವವರಿಗಾದೀತು ಇದು; ನನಗೇಕೋ ಇದು ಆಗುತ್ತಲಿಲ್ಲ"—ಎಂದುಕೊಂಡು ಮೊದಲಿನಂತೆಯೇ ಇದ್ದಳು.

ಮಾರ್ಚಿ ಕಳೆದು ಎಪ್ರಿಲು ಕಾಲಿರಿಸುವಾಗ, ಮೊದಲ ಬಾರಿಗೆ ಅಚ್ಯುತನಿಗೆ 'ನನ್ನ ಕರ್ಮ ನನ್ನನ್ನು ಕಾಡುತ್ತಿದೆ' ಎಂದೆನಿಸಿತು. ಅವನು ನಾಗರಾಜನಲ್ಲಿ ನೋಟಿನಿಂದ ತೆಗೆದ ಹಳೆಯ ಸಾಲವು ಹಣ್ಣಾಗಿತ್ತು. ಅವನು ಅದನ್ನು ಬಿಟ್ಟಾನು, ಆಸ್ತಿಯ ಪ್ರಕರಣದಲ್ಲಿ ಅದಾದರೂ ವಜಾ ಹೋದೀತು-ಎಂದು ತಿಳಿದಿದ್ದ. ಅದು ಬರಿಯ ಆಸೆ ಮಾತ್ರವಾಯಿತು. ನಾಗರಾಜನು ನಗವನ್ನು ಮರಳಿ ಕೊಟ್ಟದ್ದೇ ದೊಡ್ಡದು. ಈಗ ಅತ, ಹಣವನ್ನು ಬಾಯಿಂದ ಕೇಳಲಾರದೆ, ರಿಜಿಸ್ಟ್ರಿ ನೋಟೀಸಿನ ಮೂಲಕವೇ —'ಮುನ್ನೂರು ರೂಪಾಯಿಗಳಿಗೆ ಸೇಕಡಾ ಎಂಟರ ಬಡ್ಡಿ ಕೂಡಿಸಿ ಈ ತಾರೀಕಿನ ಒಳಗೆ ಸಲ್ಲಿಸದೆ ಹೋದರೆ ದಾವೆ ಹೂಡಲಾಗುವುದು' ಎಂದು ತಿಳಿಸಿದ್ದ. ನಿಜ. ಪ್ರೋನೋಟಿನ ಸಾಲ. ವಾಯಿದೆಯ ತಾರೀಕಿಗೆ ದಾವೆ ದಾಖಲಾಗಬೇಕು; ಇಲ್ಲವಾದರೆ ಬೇರೊಂದು ನೋಟು ಬರೆದು ಕೊಡಬೇಕು. ಇದರಿಂದ ಅಚ್ಯುತ ಎಂಟು ದಿವಸಗಳ ತನಕ ತುಂಬ ತಲೆಕೆಡಿಸಿಕೊಂಡು ಯೋಚಿಸಿದನು. ತಾಯಿಗೆ ಇದನ್ನೊಂದೂ ತಿಳಿಸಲಿಲ್ಲ. ರುಕ್ಮಿಣಿಗೂ ತಿಳಿಸಲಿಲ್ಲ. ನಾರಾಯಣ ಮಾಸ್ತರರು—'ಈ ಒಂದು ವಿಷಯ ನಾನೇನೂ ಮಾಡಲಾರೆ. ನನಗೂ ನಾಗರಾಜನಿಗೂ ತೀರ ಕೆಟ್ಟಿದೆ' ಎಂದು ಮೌನವಾದರು. ಅಚ್ಯುತ ಜಾನ್‌ಸನ್ ಮಾಸ್ತರರ ಮೂಲಕ, ಸಂಧಾನವನ್ನು ಸಾಧಿಸಬೇಕಾಯಿತು. ಕೊನೆಗೆ ಉಪಾಯವಿಲ್ಲದೆ ಕುಳಿತಲ್ಲೇ ಮುನ್ನೂರೈವತ್ತಕ್ಕೆ ಸೇಕಡಾ ಹದಿನೆರಡೂವರೆಯ ಬಡ್ಡಿಯಂತೆ ಕೂಡಿಸಿ, ಬೇರೊಂದು ನೋಟನ್ನು ಬರೆದು ಕೊಟ್ಟ. ನ್ಯಾಯಕ್ಕೆ ಸಲಬೇಕಾದುದು, ಮುನ್ನೂರು ಮತ್ತು ನಲ್ವತ್ತೆಂಟು. 'ಆದರೆ ಈಗ ಕೊಡಬಂದರೆ ಅಷ್ಟು ಕೊಡಲಿ. ಮುಂದೆ ಕೊಡುವುದಾದರೆ ಮುನ್ನೂರೈವತ್ತಕ್ಕೆ ನೋಟು ಬರೆದು ಕೊಡಬೇಕು'-ಎಂದು ನಾಗರಾಜ ಗದರಿಸಿ ಅವನಿಂದ ಬದಲು ಕಾಗದಪತ್ರ ಬರೆಯಿಸಿಕೊಂಡುಬಿಟ್ಟ.

ಅಚ್ಯುತನ ಕೊರಳಲ್ಲಿ ಬೇರೊಂದು ಸಾಲವೂ ತೂಗುತಿತ್ತು. ಅದು ಲಗ್ನದ ಸಾಲ. ಏನೋ ತಿಂಗಳಿಗೆ ಬರಿಯ ಹತ್ತು ರೂಪಾಯಿಗಳಂತೆ ತೀರಿಸುತ್ತ ಬಂದಿದ್ದನು. ಆದರೆ ಈಗ ಕಳೆದುದು ಬರಿಯ ಒಂಬತ್ತು ತಿಂಗಳು; ತೊಂಬತ್ತು ರೂಪಾಯಿಗಳು ಮಾತ್ರ ಸಂದಿವೆ; ಅದರ ಮೇಲೆ ಬೇರೆಲ್ಲಿಂದಲೂ ಸಾಲ ದೊರಕುವಂತಿಲ್ಲ, ಎಂದು ನಾಗರಾಜನ

ಕೈಗೇ ತಿರುಗಿ ಜುಟ್ಟು ಕೊಡಬೇಕಾಯಿತು. ಹೀಗೆ ಅವನ ಮನಸ್ಸು ಬೇಸರ ಗೊಂಡಿದ್ದರೇನು? ಶಾಲೆಯ ಕೆಲಸಗಳಲ್ಲಿ ಉದಾಸೀನ ತಾಳ ಬಂದೀತೇ? ಅಲ್ಲದೆ ವರ್ಷಕ್ಕೊಮ್ಮೆ ಹಬ್ಬವಾದ ಶಾಲಾ ವರ್ಧಂತಿ ಯನ್ನು ಬಿಡಲು ಬಂದೀತೆ? ಆತ ಎಲ್ಲವನ್ನೂ ಅಷ್ಟು ಶ್ರದ್ಧೆಯಿಂದ ನಿರ್ವ ಹಿಸಲು ನಿಶ್ಚಯಿಸಿದನು. ಕೊನೆಗೆ,ಮಕ್ಕಳಾದರೂ ಆನಂದಿಸಬಹುದಲ್ಲ.

ಅಚ್ಯುತರಾಯನು ಪಂಡಿತನಲ್ಲವೇ ಈಗ! ಹೊಸತಾಗಿ ನಾಟಕ ವೊಂದನ್ನು ಆತ ಬರೆದನು. ಬರೆಯುವ ವೇಳೆಗೆ ನಾಗರಾಜ ತನ್ನನ್ನು ನೋಯಿಸಿದ ನೆನವರಿಕೆ ತುಂಬಿತ್ತು. ಅದರ ಛಾಯೆ ಅವನ ಬರಹ ದಲ್ಲೂ ಮೂಡದೆ ಇರಲಿಲ್ಲ. ಅವನು ಬರೆಯುವೆನೆಂದು ಹೊರಟದ್ದು 'ಮುದುಕನ ಮದುವೆ'ಯ ವಿಷಯ. ಕೊನೆಗೆ ನಾಟಕ ರೂಪಗೊಂಡುದು 'ಸಾಲದ ಮದುವೆ' ಎಂದು. ಸಾಲದ ಮದುವೆಯ ಕಥೆ, ಅದು ಸಾಲ ಮಾಡಿ ಮದುವೆಯಾದವನ ಕತೆಯಲ್ಲ. ಒಬ್ಬ ವೃದ್ಧ ತಾನು ಒಬ್ಬ ಬಡ ವನಿಗೆ ಕೊಟ್ಟ ಸಾಲದ ಹಣದ ಹಂಗಿನಿಂದ, ಅವನ ಎಳೆಯ ಮಗ ಳನ್ನು ಮದುವೆಯಾದ ಕತೆ. ಅದನ್ನು ನಾಟಕವಾಗಿ ವರ್ಧಂತಿಯ ದಿನ ಯಶಸ್ವಿಯಾಗಿ ಆಡಿದರು. ಆದರೇನು? ನೋಡಲು ಬಂದವ ರೆಷ್ಟು ಮಂದಿ? ಊರ ಮುಖಂಡರೆಂಬವರು ನಾಗರಾಜನ ಪ್ರಚಾರ ದಿಂದ ಬಂದಿರಲಿಲ್ಲ. ಆದರೂ ಏನು ಮಾಡಿದ್ದಾರೆಂದು ನೋಡಲು ನಾಗರಾಜನ ಗುಪ್ತಚಾರರು ಬಂದಿದ್ದರು. ಅವರು ಹೇಳಿದ ಚಾಡಿ ಗಳಿಂದ 'ಸಾಲದ ಮದುವೆ'ಯೆಂಬ ನಾಟಕ, ನಾರಾಯಣ ಮಾಸ್ತ ರರು ತನ್ನನ್ನು ಚುಚ್ಚುವುದಕ್ಕೆ ಬರೆದ ನಾಟಕವೆಂದು ನಾಗರಾಜನು ತೀರ್ಮಾನಿಸಿದನು. ಆ ನಾಟಕದ ಸುದ್ದಿ, ಪ್ರದರ್ಶನಕ್ಕೂ ಮುಂಚಿತ ವಾಗಿ ಅವನಿಗೆ ತಿಳಿದಿತ್ತು.

ವರ್ಷ ಶಾಲಾವರ್ಧಂತಿಯು ನಾಟಕವು ಯಶಸ್ವಿಯಾಯಿತು. ಮಿಕ್ಕೆಲ್ಲ ಚಟುವಟಿಕೆಗಳೂ ಸಾಂಗವಾಗಿ ನೆರವೇರಿದುವು. ಜಾನ್‌ಸನರು ತಮ್ಮ ವಿದ್ವಾನ್ ಶಿಷ್ಯನು ಅಂಥ ಚೆಲುವಿನ ನಾಟಕ ಬರೆದುದನ್ನು ಕಂಡು ಹಿಗ್ಗಿದರು. "Next year, I write one play, father like this. ಇದರಪ್ಪನಂಥದ್ದು" ಎಂದು ಹಿಗ್ಗಿ ಹಾರಿದರು. ಮೇಲೆ- "ಚಿಂತೆಯಿಲ್ಲ ನಮ್ಮ ಶಿಷ್ಯ" ಎಂದು ಅಚ್ಯುತರಾಯನ ಬೆನ್ನು ಚಪ್ಪರಿಸಿ

ದರು. ಅಚ್ಯುತರಾಯ ಮನೆಯವರನ್ನು ನಾಟಕಕ್ಕೆ ಕರೆದುಕೊಂಡು ಬಂದಿದ್ದ. ರುಕ್ಮಿಣಿಯೂ 'ನಾಟಕ ಚೆನ್ನಾಗಿದೆ'ಯೆಂದಳು. ಅದರ ಬಳಿಕೇನೆ ಅಚ್ಯುತ ಅವಳೊಡನೆ 'ಅದನ್ನು ನಾನು ಬರೆದದ್ದು' ಎಂದು ಬಾಯಿಬಿಟ್ಟುದು. ಅವಳು ಗಂಡನ ಪಾಂಡಿತ್ಯಕ್ಕೆ ಹಿಗ್ಗಿಹೋದಳು.

ಈ ಎಲ್ಲ ಹಿಗ್ಗಿನ ಬುಗ್ಗೆಯು ಒಡೆದು, ಸಂತೋಷ ಸಂಪೂರ್ಣ ಆವಿಯಾಗಲು ಎಂಟು ದಿನಗಳೂ ಹಿಡಿಯಲಿಲ್ಲ. ಎಪ್ರಿಲ್ ಇಪ್ಪತ್ತೆರಡನೆ ದಿನ ರಜೆ ಪ್ರಾರಂಭಿಸಿತು. ಆಗೊಂದು ದಿನ ನಾಗರಾಜ, ಜಾನ್ ಸನ್ ಮಾಸ್ತರರಿಗೆ "ನೀವೊಮ್ಮೆ ನಮ್ಮ ಮನೆಗೆ ಬಂದು ಹೋಗಿ"— ಎಂದು ಹೇಳಿ ಕಳುಹಿಸಿದನು. ಜಾನ್‌ಸನರೂ ಕ್ಲಬ್ಬಿನ ವಿಷಯವನ್ನು ಅವನೊಡನೆ ಪ್ರಸ್ತಾಪಿಸಲು ಅಂಥೊಂದು ಸಂಧಿಯನ್ನು ಇದಿರುಕಾದಿದ್ದರು. ಹೊರಡುವ ಮುಂಚೆಯೇ ನಾರಾಯಣರಾಯರನ್ನು ಸಂಧಿಸಿ "I will arrange peace" ಎಂದು ಭಾಷೆಕೊಟ್ಟು ಹೊರಟುಹೋದರು. ನಾರಾಯಣರಾಯರು "ಹೂಂ— ಹೋಗಿ ಬನ್ನಿ, ತಿಳಿದೀತಲ್ಲ" ಎಂದರು. ಅವರಿಗೆ ಈಗೀಗ ಊರ ರಾಜಕೀಯ ಸಾಕಾಗಿಹೋಗಿತ್ತು. ಈ ರಜೆ ಮುಗಿಯುವುದರೊಳಗೆ ಕಡಬದಿಂದ ಬೇರೊಂದು ಊರನ್ನು ಸೇರುವ ಪ್ರಯತ್ನಮಾಡಬೇಕು ಎಂದುಕೊಂಡಿದ್ದರು. ಈ ವಿಷಯವನ್ನು ಅಚ್ಯುತನಿಗೂ ಹೇಳಿರಲಿಲ್ಲ. ಹೇಳಿದರೆ ಆತ 'ಹೂಂ' ಎಂದಾನೇ? ಆದರೆ ಇವರಿಗೇನು; ಕಡಬ ತವರೂರೇ!

ನಾಗರಾಜನೂ ಜಾನ್‌ಸನ್ ಮಾಸ್ತರರ ಶಿಷ್ಯನಾಗಿದ್ದವನೇ. ಆದರೆ ಆ ಗುರುಶಿಷ್ಯತನಗಳಿಗೆ ಒಂದು ಕಾಲ, ಒಂದು ಮಿತಿಗಳಿಲ್ಲವೇ? ನಾಗರಾಜ ಈಗ ದೊಡ್ಡವನಾಗಿದ್ದಾನೆ; ಜಮೀನುದಾರ. ಊರಲ್ಲಿ ಅವನ ಹಣದ ವರ್ಚಸ್ಸು ಅನೇಕರ ಮೇಲೆ ಬಿದ್ದಿದೆ. ಹೀಗಿರಲು ಮೊದಲು, ತಾನಾಗಿ ಮಾಸ್ತರರಿಗೆ ವಂದನೆ ಅರ್ಪಿಸಿದರೂ, ಕೊನೆಗೆ ಇವರೇ ಅವನಿಗೆ ಶರಣುಹೋಗುವುದು ಸಹಜ. ಅಲ್ಲದೆ ಜಾನ್‌ಸನರು ಶಾಲೆಬಿಟ್ಟ ಯಾರನ್ನೂ, ಆ ಬಳಿಕ ಶಿಷ್ಯನೆಂದು ತಿಳಿಯುವವರಲ್ಲ. ಆದರೂ ಈ ದಿನ, ನಾಗರಾಜನನ್ನು ಭೇಟಿಯಾದ ದಿನ, ಅವರಿಗೇ ತುಂಬ ನೋವಾಯಿತು. ಮಾಸ್ತರರಿಗೆ ಬನ್ನಿರೆಂದು ಹೇಳಿ ಕಳುಹಿಸಿದವನೇ ಆತ. ಅದರಂತೆ ಇವರು ಹೋದರೆ ಕೂಡಲೆ ಹೊರಕ್ಕೆ ಬರಲಿಲ್ಲ. ಸ್ನಾನವೋ

ಮತ್ತೊಂದೋ ಎಂದು ನೆಪಮಾಡಿ ನಿಧಾನಿಸಿ ಬಂದನು. ಬಂದವನು ತಮ್ಮ ಕಡೆಗೆ ಕೈಯೆತ್ತದುದನ್ನು ಕಂಡು, ಮಾಸ್ತರರೂ ಕೈಯೆತ್ತಲಿಲ್ಲ. ಆದರೂ ರೀತಿಯಂತೆ "ನಾಗರಾಜ, ಯಾಕೆ ಬಂದು ಹೋಗಬೇಕೆಂದು ಹೇಳಿದ್ದು" ಎಂದು ಕೇಳಿದರು.

"ಏನೋ ತೋರಿತು; ಹೇಳಿ ಕಳುಹಿಸಿದೆ. ಆದರೆ ಈಗ, ಸುಮ್ಮನೆ ನಿಮಗೆ ತೊಂದರೆ ಕೊಟ್ಟೆನೆಂದು ತೋರುತ್ತದೆ" ಎಂದ.

"ತೊಂದರೆಯೇನು ಮಹಾರಾಯ, ನಿನ್ನ ಮನೆಗೆ ಬಂದು ಹೋಗಲು ನನಗೇನೂ ತೊಂದರೆಯಿಲ್ಲ. ಊರು ಮನೆಯವರ ವಿಷಯ ಬೇಸರವೇ? ನನಗೂ ನಿನ್ನೊಡನೆ ಮಾತನಾಡುವ ಹಂಬಲ ಬಹು ದಿನಗಳಿಂದಿತ್ತು. ನೀನಂತು ಕ್ಲಬ್ಬಿಗೆ ಬರುವುದನ್ನು ಬಿಟ್ಟುಬಿಟ್ಟೆ. ನೀನೇ ಅದನ್ನು ಸ್ಥಾಪಿಸಲು ಉಮೇದು ತೋರಿಸಿದವನು. ಈಗ ತಾನು ಹೆತ್ತ ಕೂಸನ್ನು ತಾಯಿಯೇ ಉಪವಾಸ ಕೆಡೆದ ಹಾಗೆ ಆಗಿದೆ."

"ಹೋಗಲಿ, ಹೆತ್ತ ಮಗುವನ್ನು ಕೊಂದ ಪಾಪ ನನಗಿರಲಿ. ನಾನೇ ಘಟಿಂಗನೆಂದು ತಿಳಿಯುವ."

"ಯಾಕೆ ಆ ರೀತಿಯಲ್ಲಿ ನೀನು ಮಾತನಾಡುತ್ತೀಯ? ಕ್ಲಬ್ಬಿನಲ್ಲಿ ಯಾರು ನಿನಗೆ ಕೀಳು ಮಾತನಾಡಿದರು?"

"ನಿಮ್ಮ ಕ್ಲಬ್ಬು ನನಗೆ ಬೇಡ. ನಿಮ್ಮ ಮಾಸ್ತರರುಗಳ ಯಾವ ತಂಟೆಯೂ ನನಗೆ ಬೇಡ. ನೀವೆಲ್ಲರೂ ಒಂದೇ. ಅಷ್ಟು ತಿಳಿಯದಿರಲು ನಾನು ಹೆಡ್ಡನಲ್ಲ."

"ಏನು! ನಮ್ಮೆಲ್ಲರ ಮೇಲೆಯೂ ಮುನಿದು ಬೀಳುವ ಹಾಗಿದೆಯಲ್ಲ? ಹೋಗಲಿ — ಉಳಿದವರ ವಿಷಯ ನಾನೇನು ವಕಾಲತು ವಹಿಸುವುದಿಲ್ಲ. ನನ್ನ ವಿಷಯವನ್ನೇ ನಾನು ಯೋಚಿಸುತ್ತೇನೆ. ಈಗ ನಾನು ನಿನಗೆ, ನಾಗರಾಜನಿಗೆ, ಯಾವ ತಪ್ಪು ಎಣಿಸಿದ್ದೇನೆ-ಅದಾದರೂ ಒಂದು ಪಂಚಾಯಿತಿ ನಡೆಯಲಿ!"

ಅಷ್ಟಕ್ಕೆ ನಾಗರಾಜ, ತನ್ನೊಬ್ಬ ದೂತನನ್ನು ಅಲ್ಲಿಗೆ ಬರಮಾಡಿಕೊಂಡ. ಸಾಮಾನ್ಯ ನಡುವಯಸ್ಸಿನ ಒಬ್ಬ ಯುವಕ ಅಲ್ಲಿಗೆ ಬಂದು ನಿಂತ. ಅವನಾರೆಂದು ಮಾಸ್ತರರಿಗೂ ಗೊತ್ತು. ನಿತ್ಯ, ಕಡಬದ ಪೇಟೆಗೆ ಬಂದು ಹೋಗುವ ಆತನ ಹೆಸರು ರಂಗಪ್ಪ ಎಂದು. ರಂಗಪ್ಪ ವತನ

ದಾರನೂ ಅಲ್ಲ; ಯಾವೊಬ್ಬ ಉದ್ಯೋಗಿಯೂ ಅಲ್ಲ. ಈತ್ತೀಚೆಗೆ ನಾಗರಾಜನ ನಂಬಿಗಸ್ತ ಮಂತ್ರಿಯಾಗಿದ್ದಾನೆಂಬುದರಿಂದಲೇ ಅವನ ಮಹಿಮೆ. ಅದನ್ನರಿತ ಜಾನ್‌ಸನರು, ಆವನೊಡನೆ ಆಡುವ ಮಾತು ತೀರ ಮೊದಲ ಬಾರಿಗಾದರೂ, "ರಂಗಪ್ಪನವರೇ, ಏನು ಸಂಗತಿ— ನಮ್ಮ ನಾಗರಾಜನೆನ್ನುವುದು? ನನಗೊಂದೂ ತಿಳಿಯುದಲ್ಲ" ಅಂದರು. ರಂಗಪ್ಪ ಅಷ್ಟಕ್ಕೇ ಉರಿದುಬಿದ್ದ. "ಮಾಸ್ತರರೇ, ನಾಗರಾಜಯ್ಯನವರಿಗೆ ನೀನು, ತಾನು ಎಂದು ಏಕವಚನ ಮಾತನಾಡಲು, ನೀವು ಯಾರು, ನಿಮ್ಮ ಸ್ಥಿತಿಯೇನು, ಅವರ ಸ್ಥಿತಿಯೇನು ಗೊತ್ತೇ?" ಎಂದು ತೆರೆದ ಬಾಯಿಗೆ ಆಕ್ಷೇಪಣೆ ಒಡ್ಡಿದ.

ಜಾನ್‌ಸನರಿಗೂ ಅದು ತಾಳದಾಯಿತು. "ರಂಗಪ್ಪ, ನೀನು ಅವನ ಗುರುತಿನಿಂದ, ಬಂದದ್ದು ನಿನ್ನೆ ಮೊನ್ನೆ. ನಾನು, ಅವನನ್ನು ಹುಡುಗನಾಗಿದ್ದಂದಿನಿಂದ ಬಲ್ಲವ. ಇನ್ನೂ ಅವನು ನನಗೆ ತಮ್ಮನಂತೆಯೇ ಇದ್ದಾನೆ. ಅವನು ಬೇಕಾದರೆ ಮಾಸ್ತರರ ಗುಂಪನ್ನು ದೂರಮಾಡಲಿ; ನನಗೇನು ಅವನನ್ನು ದೂರವಿರಿಸಬೇಕೆಂದು ಕಾಣುವುದಿಲ್ಲ" ಎಂದರು.

ನಾಗರಾಜನಿಗೆ, ರಂಗಪ್ಪ ಒಮ್ಮೆಗೇ ಅಷ್ಟು ಮುಂದುವರಿಸಿದ್ದು ಸಮ ಕಾಣಿಸದೆ "ರಂಗ--ನೀನು ಕಂಡ ಸಂಗತಿ ಹೇಳುವುದು ಬಿಟ್ಟು, ನನ್ನ ಅವರ ವಿಷಯ ಯಾಕೆ ಮಾತನಾಡುತ್ತೀ?" ಎಂದನು.

"ಸಂಗತಿಯೇ! ಮಾಸ್ತರರೇ, ನೀವೆಲ್ಲ ಸೇರಿ ಒಂದು ನಾಟಕ ಆಡಿದಿರಲ್ಲ! ಏನೆಂದು ಅದರ ಅರ್ಥ?" ಎಂದು ಕೇಳಿದ.

"ನಾನು ಅದರ ಕತೆ ಹೇಳಬೇಕೆಂದೇ? ನೀನೂ ಬರಲಿಲ್ಲ...."

"ಅದರ ಕತೆಗೆ ಬೆಂಕಿ ಬಿತ್ತು. ನಾನು ನೋಡಿದ್ದೇನೆ ಅದನ್ನು. ನಮ್ಮ ದಣಿಯರು ಕಾಣದೆ ಹೋದರೇನು?" ಎಂದ ರಂಗಯ್ಯ.

"ಇರಲಿ, ಏನಾಯಿತು ಆ ನಾಟಕಕ್ಕೆ? ನೀನೇ ಹೇಳು. ಜನರೆಲ್ಲ ಮೆಚ್ಚಿದರು."

"ಅದು ಯಾರನ್ನು ನಕಲಿಮಾಡಲು ಬರೆದದ್ದಂತೆ? ಬರೆದವರು ಯಾರು? ಯಾರು ಆಡಲು ನಿಮಗೆ ಹೇಳಿದವರು? ಏನು-ನಮ್ಮ ಧನಿಯರ ಮೇಲೆ ಈ ರೀತಿ ಹಟವೇ? ಅವರು, ನಿಮ್ಮ ಶಾಲೆಯ ಹುಡುಗಿಯರ ಮೇಲೆ ರಂಪಮಾಡಿದರೆಂದು, ಗದ್ದಲ ಎಬ್ಬಿಸಿದ್ದೂ ಅಲ್ಲದೆ,

ಕೊಂಬಾರು ಅಣ್ಣಪ್ಪ ಗೌಡ ಸಾಲ ಕೇಳಿದ ವಿಷಯ, ನಾಟಕ ಬರೆದು ಹೀಗೆಲ್ಲ ಚೇಷ್ಟೆಮಾಡುತ್ತಿದ್ದೀರಾ?" ಎಂದ.

ಈ ಮಾತಿನ ತಲೆಬುಡವೊಂದೂ ಜಾನ್ ಸನರಿಗೆ ಆಗಲಿಲ್ಲ. ಅವರು ನಾಟಕ ಬರೆದ ಅಚ್ಯುತರಾಯನನ್ನು ಬಲ್ಲರು. ನಾಟಕದ ಉದ್ದೇಶ 'ಸಾಲದ ಮದುವೆ'ಯೆಂದಿತ್ತು. ಅದರ ಕತೆ ನಾಗರಾಜನ ವಹಿವಾಟಿಗೆ ಅನ್ವಯಿಸುವುದೆಂದು ಅವರು ಹೇಗೆ ಊಹಿಸಬೇಕು? ಅಲ್ಲದೆ, ಶಾಲೆಯ ಹುಡುಗಿಯೊಬ್ಬಳ ವಿಚಾರ ಹೇಳುತ್ತಿದ್ದಾರೆ. ಆ ಯಾವ ಸಂಗತಿಯೂ ಅವರಿಗೆ ತಿಳಿಯದು. ಶಾಲೆಯ ಮುಖ್ಯಸ್ಥರಾದ ನಾರಾಯಣರಾಯರೇ ಈ ಸಂಗತಿಯಲ್ಲಿ ಏನೂ ತಮ್ಮೊಡನೆ ಹೇಳಿದವ ರಲ್ಲ. ಹೀಗಿರಲು, ಇಂಥ ಸಂಗತಿಯಲ್ಲಿ ಯಾರ ಬಗ್ಗೆ, ಅವರು ಏನು ಹೇಳಬಲ್ಲರು?

ಅವರೆಂದರು-"ನಾಗರಾಜ, ಆ ನಾಟಕ ಬರೆದದ್ದು ಅಚ್ಯುತ. ಅವ ನಿಗೆ ನಿನ್ನ ಉಪಕಾರದ ನೆನಪು ಎಂದೂ ಮರೆಯದು. ಅವನು ಕನಸಿ ನಲ್ಲೂ ನಿನ್ನನ್ನುದ್ದೇಶಿಸಿ ಆ ನಾಟಕ ಬರೆದಿರಲಾರ. 'ಒಂದು ನಾಟಕ ಬರೆಯಿರಿ' ಎಂದು ನಾವು ಒತ್ತಾಯಿಸಿದ್ದಕ್ಕೆ ಬರೆದ. ಅದನ್ನು ಆಡಿದೆವು. ಚೆನ್ನಾಯಿತೆಂದು ಕಂಡವರಂದರು. ನಾನು ಇಷ್ಟೆಲ್ಲ ತಿರುಗಾಡುತ್ತಿದ್ದೇನೆ, ಪೇಟೆಯವರಲ್ಲಿ ಯಾರೂ ಇದು ಯಾರನ್ನಾಗಲಿ ಉದ್ದೇಶಿಸಿ ಬರೆದದ್ದು-ಎಂದು ಹೇಳಿಲ್ಲ. ಹೇಳುವಂತೆಯೂ ಇಲ್ಲ. ಇನ್ನು ಯಾವುದೋ ಹುಡು ಗಿಯ ಸಂಗತಿ ಹೇಳುತ್ತೀಯ! ಅದೂ ನನಗೆ ಹೊಸತೇ! ಯಾರ ಚಾಡಿ ಮಾತನ್ನು ಕೇಳಿ ನೀನು ಇದನ್ನೆಲ್ಲ ಕಲ್ಪಿಸಿದೆಯೋ ನನಗೆ ತಿಳಿಯದಲ್ಲ."

"ಮಾಸ್ತರರೇ, ನನಗೇನು ಬುದ್ಧಿಯೇ ಇಲ್ಲವೆಂದು ತಿಳಿದಿರೋ ಹೇಗೆ? ನಿಮ್ಮ ನಾರಾಯಣಮಾಸ್ತರು ಸಂಭಾವಿತರೆಂದು ತಿಳಿಯಬೇಡಿ. ಅವರೊಂದು ಹೊಲಸಿಗೆ ಕೈಹಾಕಿದ್ದರು. ಅದು ಬಯಲಿಗೆ ಬಂದೀ ತೆಂದು ನನ್ನ ಮೇಲೆ ಒಂದು ಕತೆ ಹೊರಡಿಸಿದರು. ಶಾಲೆಯಲ್ಲಿ ನಿತ್ಯ ಬಿದ್ದಿರುವ ನಿಮಗೆ ಅದು ತಿಳಿಯದೆ ಹೋದರೆ, ಇನ್ನಾರಿಗೆ ತಿಳಿಯ ಬೇಕಂತೆ? ಅಂತು ನಾನು ನಿಮ್ಮನ್ನು ಬರಹೇಳಿದ್ದು, ಇಷ್ಟಕ್ಕೇನೆ. ಈ ನಾಗರಾಜನ ತಂಟೆಗೆ ನೀವಾಗಲಿ, ನಿಮ್ಮ ಸ್ನೇಹಿತರಾಗಲೀ ಕೈಯಿಕ್ಕು ವುದು ಒಳ್ಳೆಯದಲ್ಲ. ಆ ನಿಮ್ಮ ನಾರಾಯಣರಾಯರಿಗೆ ನೀರು ಕುಡಿ

ಸಲು ನಾನು ಸಾಕು. ಮತ್ತೆ ನಾಟಕ ಬರೆದ ಜನವುಂಟಲ್ಲ—ಅವನು, ಅಚ್ಯುತ. ಆತನಿಗೆ ನಾನು ಮಾಡಿದ ಉಪಕಾರಗಳು ನೆನಪಿಗೆ ಬಾರದೆ ಇರಬಹುದು. ಆತ ನಾರಾಯಣರಾಯರ ತಾಳಕ್ಕೆ ಕುಣಿಯುವವ. ಆ ಇಬ್ಬರೂ ನನ್ನ ಕ್ಷಮೆ ಕೇಳಿದರೋ ಉಳಿದರು; ಇಲ್ಲವಾದರೆ ನಾನೂ ಒಂದು ಕೈ ನೋಡುತ್ತೇನೆ” ಎಂದು ರೇಗಾಡಿದನು.

ಜಾನ್‌ಸನರು ಅಲ್ಲಿ ಕುಳಿತು ಫಲವಿಲ್ಲೆಂದು ತಿಳಿದರು. ಅವರೆನ್ನುತ್ತಿದ್ದ ಯಾವತ್ತು ಕತೆಗಳ ತಲೆಬುಡ ಅವರಿಗೆ ಆಗಲಿಲ್ಲ. ಯಾರದೋ ಕಿವಿಮಾತಿಗೆ ಅವನು ಮೋಸಹೋಗಿರಬೇಕು; ರಂಗಪ್ಪನ ಚಾಡಿಯೂ ಇರಬಹುದು, ಅಂತು ಉಳಿದವರನ್ನು ಕೇಳದೆ ತನಗೆ ಯಾವುದೂ ತಿಳಿಯುವಂತಿಲ್ಲ ಎಂಬುದರಿಂದ, “ನಾಗರಾಜ, ನಾನೇನೆನ್ನಲಿ; ಸಂಗತಿ ಏನೆಂದು ವಿಚಾರಿಸಿ ತಿಳಿಯುತ್ತೇನೆ. ಮುಂದೆ ತಪ್ಪಿದೆ ಎಂದು ಕಂಡರೆ, ಅವರ ಮುಖಕ್ಕೇನೆ ಹೇಳುತ್ತೇನೆ. ಅಲ್ಲಿಯ ತನಕ ನೀನು ಸುಮ್ಮನಿರು” ಎಂದು ಹೇಳಿ ಅವಸರವಾಗಿ ಹೊರಟುಹೋದರು.

ನಾಗರಾಜನೂ ರಂಗಪ್ಪನೂ ತಮ್ಮ ಕೆಲಸವಾಯಿತೆಂದು ಹಿಗ್ಗಿದರು. ಅಂದೇ ಪೇಟೆಯಲ್ಲಿ ಒಂದು ವಾರ್ತೆ ಹರಡಿತು-‘ನಾರಾಯಣ ಮಾಸ್ತರರು ಏನೋ ಕಿತಾಪತಿ ಮಾಡಿದ್ದಾರಂತೆ; ಅವರಿಗೆ ವರ್ಗವಂತೆ; ಇನ್ನು ಅಚ್ಯುತ ಮಾಸ್ತರರೂ ಇಲ್ಲಿಂದ ಮಾವನ ಮನೆಗಂತೆ” ಎಂದು. ಈ ಸುದ್ದಿಯು ಅವರಿಬ್ಬರ ಕಿವಿಗಳನ್ನೂ ಸೇರಿದುವು. ನಾರಾಯಣ ಮಾಸ್ತರರು ಮಾತುಗಾರರಲ್ಲ. ಆದರೆ ಒಳಗಿನ ಕತೆಗಳನ್ನು ಬಲ್ಲವರಾದರೂ, ಬಲ್ಲವರಂತೆ ತೋರಿಸಿಕೊಂಡಿರಲಿಲ್ಲ. ತಮ್ಮ ಸಲುವಾಗಿ ಬಂದ ವಾರ್ತೆಯನ್ನು ಕೇಳಿ, “ಒಳ್ಳೆಯದೇ ಆಯಿತು. ನಾನೇ ವರ್ಗಾವರ್ಗಿಗೆ ಪ್ರಯತ್ನ ಮಾಡುತ್ತಿದ್ದೇನೆ” ಎಂದು ನಕ್ಕರು. ನಿಜಕ್ಕೂ ಅವರಿಗೆ ಊರಿನ ವಿಷಯದಲ್ಲಿ ಉದಾಸೀನವಾಗಿತ್ತು. ಅಚ್ಯುತ ಮಾತ್ರ, ಸುದ್ದಿ ಕೇಳಿದೊಡನೆಯೇ ಕಕ್ಕಾಬಿಕ್ಕಿಯಾದ. “ಏನು ಮಾಡಲಪ್ಪ; ನಾರಾಯಣ ಮಾಸ್ತರರಲ್ಲಿಗೆ ಹೋಗಿ ಬರುತ್ತೇನೆ” ಎಂದು ಯೋಚಿಸಿದನು. ಆದರೆ ‘ಇಂದು-ನಾಳೆ’ ಎಂದು ಬೇಸರದಿಂದ ಮುಂದುವರಿಸಿದ. ತನಗೆ ವರ್ಗವಾದರೆ ಕಷ್ಟವಲ್ಲವೇ — ಎಂದು ತೋರಿತು. ಆದರೆ ಊರ ವಾರ್ತೆಯನ್ನು ಹೇಗೆ ನಂಬಲಿ?’ ಸುದ್ದಿಗೊಂದು ಆಧಾರವಿರುತ್ತಿದ್ದರೆ

ನಾರಾಯಣರಾಯರು ತನಗೆ ತಿಳಿಸುತ್ತಿರಲಿಲ್ಲವೇ--ಎಂದು ಯೋಚಿಸಿ ಸುಮ್ಮನಾದನು.

ಮುಖ್ಯ, ಅವನಿಗೆ ಸಾಲದ ಯೋಚನೆಗಳು ಹೆಚ್ಚಿ ಎಲ್ಲದರಲ್ಲೂ ವಿರಕ್ತಿ ಬಂದಿತ್ತು. ಅದರಿಂದ ಒಂದೆರಡು ದಿನ ರುಕ್ಮಿಣಿಯೊಡನೆ ಹರಟೆ ಯಾಡಿ, ವ್ಯಥೆ ಮರೆಯುತ್ತೇನೆಂದು ಬಯಸುತ್ತಿದ್ದ. "ನಾಳೆಯೋ, ನಾಡಿದ್ದೋ ಪಂಜಕ್ಕೆ ಹೋಗುವ ರುಕ್ಮಿಣಿ. ಸೀತಕ್ಕನನ್ನೂ ಕಾಣದೆ ವರ್ಷವಾಯಿತು. ನಿಮ್ಮ ಮನೆಗೂ ಇತ್ತಲಾಗಿ ಹೋಗಿಲ್ಲ" ಎಂದು ರುಕ್ಮಿಣಿಯೊಡನೆ ಹೇಳಿದ್ದ.

ಇತ್ತ ಜಾನ್‌ಸನ ಮಾಸ್ತರರು, ನೆಟ್ಟಗೆ ತಮ್ಮ ಮನೆಗೆ ಹಿಂತಿರು ಗಿದರು. ಅವರ ಮನಸ್ಸು ತುಂಬ ಕಸಿವಿಸಿಗೊಳಗಾಗಿತ್ತು. ಯಾರಲ್ಲಿಗೆ ಹೋಗಲಿ ತಾನು? ಆ ಶಾಲಾ ಹುಡುಗಿ ಯಾರು? ಈ ಅಣ್ಣಪ್ಪಗೌಡ ಯಾರು? ಇವುಗಳ ಹಿಂದಿನ ಕತೆಯೇನು? ಇದು ಕಲ್ಪನೆಯೋ-ಎಂದು ಯೋಚಿಸತೊಡಗಿದರು. ಹಾಗೆ ಮನೆಯಲ್ಲಿ ಕುಳಿತು ಯೋಚಿಸಿದರೆ, ಮನಸ್ಸು ಯಾವ ತೀರ್ಮಾನಕ್ಕೂ ಬರಲೊಲ್ಲದು. ಊಟಮಾಡಿ ನೆಟ್ಟಗೆ ಕೊಂಬಾರಿಗೆ ಹೋಗುವೆನೆಂದು, ಸೈಕಲು ಸವಾರಿಯಲ್ಲಿ ನಿಪುಣರಾದ ಅವರು, ತಾಸಿನೊಳಗೆ ಅಚ್ಯುತನ ಮನೆಯನ್ನು ಸೇರಿದರು. "ಹೋ! ಜಾನ್‌ಸನ್ ಮಾಸ್ತರರೋ" ಎಂದು ಅಚ್ಯುತ ಅವರನ್ನು ಸ್ವಾಗತಿಸಿದ. "What! making pattanga with wife?' ಎಂದರು ಮಾಸ್ತರರು. 'ಬಾಯಾರಿಕೆ ಬೇಡವೇ' ಎನ್ನಲು "ಬಾಯಾರಿಕೆ, ಗೀಯಾರಿಕೆ all afterwards; ಈಗ ಒಂದು urgent ಕೆಲಸವಿದೆ; ಅದಕ್ಕಾಗಿ ಬಂದಿ ದ್ದೇನೆ" ಎಂದು ತಮ್ಮ ಆತುರವನ್ನು ವ್ಯಕ್ತಪಡಿಸಿದರು.

"ಏನು?"

ನಿಮ್ಮ ಕೊಂಬಾರಿನಲ್ಲಿ ಅಣ್ಣಪ್ಪಗೌಡ ಎಂಬವನು ಯಾರಾದರೂ ಇದ್ದಾನೋ?"

ಅಚ್ಯುತ ಸ್ಮರಿಸಿಕೊಂಡ. ಅಂಥ ಹೆಸರೊಂದೂ ಅವನ ನೆನಪಿಗೆ ಹೊಳೆಯಲಿಲ್ಲ. ಆದುದರಿಂದ "ಅಮ್ಮಾ" ಎಂದು ತಾಯನ್ನು ಕರೆದ. ಲಕ್ಷ್ಮಮ್ಮ ಬಂದಳು. "ಅಮ್ಮ, ನಮ್ಮೂರಲ್ಲಿ ಅಣ್ಣಪ್ಪಗೌಡನೆಂಬವ ಯಾರು?" ಎಂದು ಕೇಳಲು, ಅವಳೂ ಯೋಚಿಸಿದಳು. "ಛೀ, ಅಣ್ಣಪ್ಪ

ನೆಂಬವನು ಯಾರೂ ಇಲ್ಲವಲ್ಲ. ಅಣ್ಣುಗೌಡ ಎಂಬವ ಒಬ್ಬನಿದ್ದಾನೆ. ಜೊಗ್ಗಾಡಿಗೆ ಹೋಗುವ ದಾರಿಯಲ್ಲಿ ಅವನ ಮನೆ" ಎಂದಳು. "ಹೋ! ಅಣ್ಣುಗೌಡನೋ — ನೋಡುವ. ನೀವೂ ಬನ್ನಿ, ಪಂಡಿತರೇ. ನಾನು ತಿರುಗಾಡಿ ದಾರಿತಪ್ಪಿ, ನಿಮ್ಮ ಊರಿನ ಹುಲಿಗಳ ಬಾಯಿಗೆ ಬೀಳಬಾರದಲ್ಲ" ಎಂದರು ಜಾನ್‌ಸನರು.

"ನಿಮ್ಮಂತಹ ಶಿಕಾರಿಮಾಡುವ ಜನಕ್ಕೆ ಹುಲಿಯ ಹೆದರಿಕೆಯೇ? ಯಾಕೆ ನಿಮಗೆ ಅಣ್ಣುಗೌಡ? ಏನು ಶಿಕಾರಿಯು ನದರಿದೆಯೇ?"

"ಶಿಕಾರಿಯಲ್ಲ ಮಣ್ಣಲ್ಲ! ಅವನಲ್ಲಿ ಒಂದು ಎಮ್ಮೆಯಿದೆಯಂತೆ. ಖರೀದಿ ಮಾಡುವ ಎಂದು ಮನಸ್ಸಾಯಿತು."

"ಅಮ್ಮ ಅಣ್ಣುವಲ್ಲಿ ಕೊಡುವ ಎಮ್ಮೆಯುಂಟಂತೆ, ನಿಜವೇ?" ಎಂದು ಅಚ್ಯುತ ತನ್ನ ತಾಯನ್ನು ಕೇಳಲು, "ನನಗೇನು ಗೊತ್ತು ಮಗು" ಎಂದಳು ಅವಳು.

ಅಷ್ಟು ಮಾತುಕತೆಗಳಾಗಿ, ಅಚ್ಯುತರಾಯನು ಮನೆಯಿಂದ ಹೊರಕ್ಕೆ ಬೀಳಲು ಉಡುಗೆಯನ್ನು ತೊಡುವುದರೊಳಗಾಗಿ, ರುಕ್ಮಿಣಿಯು ಇಬ್ಬರಿಗೂ ಹಪ್ಪಳ, ಕಷಾಯಗಳನ್ನು ತಂದುಕೊಟ್ಟಳು. ಮೊದಲು ಉಪಾಹಾರವಾಯಿತು. "ಇನ್ನು ಹೊರಡುವ" ಎಂದ ಅಚ್ಯುತ. ರುಕ್ಮಿಣಿ "ರಾತ್ರೆಗೆ ಊಟಕ್ಕೆ ಇಲ್ಲಿಗೇ ಬರುತ್ತೀರಲ್ಲ" ಎಂದು ವಿಚಾರಿಸಿದಳು. "ಊಟಕ್ಕೆ ಬಾರದೆ ಇರುತ್ತೇವೆಯೇ? ಜೊಗ್ಗಾಡಿಗೆ ಹೋಗಿ ಬರಲು ಅಷ್ಟೆಲ್ಲ ಹೊತ್ತು ಬೇಡ. ಜಾನ್‌ಸನರೇ, ರಾತ್ರಿಊಟ ನಮ್ಮ ಮನೆಯಲ್ಲಿ ಅಲ್ಲವೇ?" ಎಂದ ಅಚ್ಯುತ.

"ಅದು ಕಂಡಿತದ್ದಲ್ಲ. ಎಮ್ಮೆ ನೋಡಿಕೊಂಡು, ಮನಸ್ಸಾದರೆ ಅಲ್ಲಿಂದಲೇ ಅದನ್ನು ಕಡಬಕ್ಕೆ ಹೊಡೆದರೂ ಹೊಡೆದೆನೆ."

ದಾರಿಯಲ್ಲಿ ಜಾನ್‌ಸನರು ಪತ್ತೇದಾರರ ಕೆಲಸ ತೊಡಗಿದರು. "ಮಾಸ್ತರರೇ, ನಿಮ್ಮ ನಾಟಕ 'ಸಾಲದ ಮದುವೆ' Excellent plot. ಆದರೆ ಸ್ವಂತ ನಿಮ್ಮದೇ ಬುರುಡೆಯಿಂದ ಅದು ಹೊರಬಂದದ್ದೋ— ಹೇಗೆ?" ಎಂದು ಪ್ರಶ್ನಿಸಿದರು. "ಸ್ವಂತವಲ್ಲ, ಮತ್ತೊಂದಲ್ಲ. ಅಶೋಕ ಚಕ್ರವರ್ತಿಯ ಕತೆಯಿಲ್ಲವೇ, ಅವನ ಮಗ ಕುಸಾಲನ ಕತೆ. ಅದನ್ನೇ ಗರುಡರು 'ವಿಷಮ ವಿವಾಹ' ಎಂದು ಬರೆದಿದ್ದಾರೆ. ನಾನು ನಮ್ಮ ಊರಿಗೆ

ರಾಜರು ಗೀಜರು ಬೇಡವೆಂದು--ಒಬ್ಬ ಜಮೀನುದಾರ, ಅವನ ಆಳು, ಆಳಿನ ಹೆಂಡತಿ-ಎಂದು ತಿರುಗಿಸಿ ಬರೆದೆ. ಹೊಸ ನಾಟಕ ಬರೆಯಲು ಕಾಳಿದಾಸ, ಶೇಕ್‌ಸ್ಪಿಯರನೇನು ನಾನು?" ಎಂದ ಅಚ್ಯುತ.

ಇದರಿಂದ ಜಾನ್‌ಸನರಿಗೆ ಯಾವ ಕುರುಹೂ ಸಿಗಲಿಲ್ಲ. ಹೇಗಾದರೂ ತಿಳಿದೀತಲ್ಲ-ಎಂದು ಅಣ್ಣು ಗೌಡನನ್ನು ಅರಸುತ್ತ ಹೋದರು. ಅವನ ಮನೆ, ಬೊಗ್ಗಾಡಿಯ ಒಂದು ಬಯಲಿನ ಮಗ್ಗುಲಲ್ಲಿತ್ತು; ಅದು ತೀರ ಮುರುಕಲು ಗುಡಿಸಲು. ಅಲ್ಲಿ ಹೋಗಿ ಜಾನ್‌ಸನರು 'ಅಣ್ಣುಗೌಡನೆಂದರೆ ನೀನೇನು?' ಎಂದು ಅಲ್ಲಿರುವ ಒಬ್ಬ ಮುದುಕನನ್ನು ವಿಚಾರಿಸಿದರು. "ಅಹುದು" ಎಂದು ಉತ್ತರ ಬಂದಿತು. ಅಣ್ಣುಗೌಡ ಮುದುಕ; ತುಂಬ ಪ್ರಾಯವಾಗಿತ್ತು! "ಒಡೆಯ, ಎಲ್ಲಾಯಿತು ನಿಮಗೆ? ಏನು ಬಂದಿರಿ" ಎಂದು ಆತ ಕೇಳಿದನು.

"ನಮಗೆ ಹೊಸಮಠದಾಚೆಗೆ. ಇಲ್ಲೆಲ್ಲೋ ಕೆಲಸವಿತ್ತೆಂದು ಬಂದೆವು". ಅಣ್ಣು, ಜಾನ್‌ಸನರ ಖಾಕಿ ಉಡುಗೆಯನ್ನು ನೋಡಿದನು. ಅವನಿಗೇಕೋ 'ಇವರು ಪೋಲಿಸರು ಇರಬಹುದೇ' ಎಂದು ಅನುಮಾನವಾಯಿತು. "ನೀವು ಪೋಲಿಸರೇ" ಎಂದೇ ಕೇಳಿದನು.

ಜಾನ್‌ಸನರು "ನಾನು ಪೋಲಿಸು; ಇವರು ಕಡಬ ಶಾಲೆ ಮಾಸ್ತರರು. ನಿಮ್ಮೂರವರೇ".

"ನಮ್ಮೂರವರು?"

"ಕೊಂಬಾರು ಕೃಷ್ಣಯ್ಯನವರ ಮಗನಲ್ಲವೇ ಅವರು'

"ಅಯ್ಯೋ, ನನ್ನ ಕಣ್ಣೇ! ಆ ಅಯ್ಯ ಚಿನ್ನದಂಥ ಒಡೆಯರು. ಇದು ಮೊದಲಿಗೆ ಅವರದ್ದೇನೆ ಭೂಮಿ. ಅವರಿಗೆ ಕೆಡುಗಾಲ ಬಂದು, ಯಾರಿಗೋ ಅದನ್ನು ಕೊಟ್ಟರು. ಆಸ್ತಿ ಅಡವಾಯಿತು, ಆರುವಾರಾಯಿತು; ಈಗ ಅದು ಕಡಬದ ಜೈನರಿಗಾಗಿದೆ!"

"ಯಾವುದು,ಇದು ನಾಗರಾಜನಿಗೆ ನಾವು ಕೊಟ್ಟ ಭೂಮಿಯೇ!" ಎಂದು ಅಚ್ಯುತಗೆ ಆಶ್ಚರ್ಯವಾಯಿತು. ತಾನು ಕಾಣದಿದ್ದ ತನ್ನ ಆಸ್ತಿಯನ್ನು ಕಾಣುವ ಮೋಹವಾಯಿತು. ಆಚೀಚೆ ನೋಡಿದ. ಬಯಲು ಆ ಬೇಸಗೆಯಲ್ಲೂ, ತುಂಬ ನೀರಿನ ಆಸರೆ ಹೊಂದಿತ್ತು! ಕೊಳಕೆ ಗದ್ದೆಗಳು, ಹಸುರುಗೂಡಿ ಮೆರೆಯುವಂತಿತ್ತು!

"ಮಾಸ್ತರರೇ, ನಾವೆಂಥ ಹುಚ್ಚರು ನೋಡಿ-ಇದನ್ನೇನೆ ನಾವು ಪರಾಧೀನ ಮಾಡಿ ನಾಗರಾಜನಿಗೆ ಮಾರಿದ್ದಂತೆ. ಸಾವಿರ ರೂಪಾಯಿ ಹೆಚ್ಚಿಗೆ ಕೊಡುತ್ತೇನೆಂದಿದ್ದ. ಆ ಮೇಲೆ ಆ ಹಣವನ್ನು ನಾವು ಹಾಕಿಬಿಟ್ಟ. ಮೊದಲು ನಾನು ಸಣ್ಣವ. ನಾನು ಶಾಲೆಯನ್ನು ಮುಗಿಸುವಾಗ ಇದು ಭೋಗ್ಯವಾಗಿ ಹೋಗಿತ್ತು. ಕೈತಪ್ಪಿದ ಭೂಮಿಯನ್ನು ಕಂಡರೇನು, ಕಾಣದೆ ಹೋದರೇನು—ಎಂದು ಹಾಗೆಯೇ ನಾಗರಾಜನಿಗೆ ಮಾರಿಬಿಟ್ಟೆ" ಎಂದನು.

"ಆಯಿತಲ್ಲ-ಅಣ್ಣು ಗೌಡ! ನಿನ್ನ ಹಳೆಯ ಧನಿಯರ ಗುರುತು!"

"ಬನ್ನಿ ಒಡೆಯ, ತಂಪಿನಲ್ಲಿ ಕೂತಿರಿ. ಮಣೆಯನ್ನು ಹಾಕುತ್ತೇನೆ"-ಎಂದು ಅಂಗಳದಲ್ಲಿ, ನೆರಳಿಗೆ ಎರಡು ಮಣೆ ಹಾಕಿದನು. "ಎಳೆನೀರು ತರಲೇ" ಎಂದು ಕೇಳಿದನು. "ಬೇಡ"-ಎಂದರು ಇಬ್ಬರೂ.

ಜಾನ್‌ಸನರು ಮೆಲ್ಲಗೆ "ಗೌಡ ಹ್ಯಾಗಿದೆ, ನಿನ್ನ ಈ ಭೂಮಿ!"

ಅಣ್ಣು ಅಲ್ಲಿಗೇನೆ ಮೌನವಾದನು.

"ಯಾಕೆ ಸುಮ್ಮನಾದೆಯಲ್ಲ!"

"ನೀರಿನ ಋಣ ಮತ್ತು ನೆಲದ ಋಣ ಯಾರು ಹೇಳಬಲ್ಲರು ದೇವರೆ? ಕೃಷ್ಣಯ್ಯ ಒಡೆಯರ ಕಾಲದಿಂದಲೂ ನಾನಿಲ್ಲಿದ್ದೆ. ಯಾರೂ ನನ್ನನ್ನು ಹೋಗೆಂದು ಹೇಳಲಿಲ್ಲ. ಇವರು-ಆಸ್ತಿ ತಮ್ಮ ಕೈಗೆ ಬಂದ ಒಂದು ವರ್ಷದಲ್ಲಿಯೇ ಹೋಗೆಂದಿದ್ದಾರೆ. ಹೊರಡದೆ ಮಾರ್ಗವಿಲ್ಲ. ನನಗೂ ಅವರ ತಂಟೆ ಬೇಡಾಗಿದೆ. ಹೇಗೆ ಹೋಗಲಿ? ಎಲ್ಲಿಗೆ ಹೋಗಲಿ ಎಂದು ಈಗ ಯೋಚನೆ ಒಡೆಯ."

"ಅದೇಕೆ? ಗೇಣಿ ಬಾಕಿಯೇ?"

"ಗೇಣಿ ಬಾಕಿ ಇದೆ ಒಡೆಯ. ಸುಳ್ಳೆನ್ನುವುದಿಲ್ಲ. ಕಳೆದ ವರ್ಷ ಸುಗ್ಗಿ ಬೆಳೆ ಹೊತ್ತಿಹೋಯಿತು. ಬೀಜಕ್ಕೂ ನನ್ನಲ್ಲಿ ಬತ್ತವಿರಲಿಲ್ಲ. ಅವರಿಂದಲೇ ಸಾಲ ತಂದೆ; ತರುವಾಗ ಏನೂ ಅಂದಿರಲಿಲ್ಲ. 'ಒಟ್ಟಿಗೆ ಗೇಣಿ, ಬೀಜ ಎಂದು ಹತ್ತು ಮುಡಿಯಾಯಿತು' ಎಂದರು. ಅದಾದರೂ ದೊಡ್ಡದಲ್ಲ. ಗೇಣಿಯನ್ನು ಮತ್ತೂ ಎರಡು ಮುಡಿ ಏರಿಸಿದರು. ಅದಕ್ಕೂ ಆಯಿತೆಂದೆ. ಇಷ್ಟು, ಮರಗಿಡಗಳನ್ನು ಬೆಳೆದು, ಅವನ್ನೆಲ್ಲ ಬಿಟ್ಟುಹೋಗು ಅಂದರೆ ಮನಸ್ಸು ಬಂದೀತೆ? ಹೀಗಾಗಿ ಹೆಚ್ಚಿಸಿದ

ಗೇಣಿಗೂ ಒಪ್ಪಿದೆ.

"ಹಾಗಾದರೆ ಮತ್ತೇಕೆ ಹೊರಡಬೇಕಂತೆ?"

"ಅದು ಎಲ್ಲರ ಮುಂದೆ ಹೇಳುವ ಮಾತಲ್ಲ ಒಡೆಯ."

"ಏನದು? ನಾವೇನು ಯಾರ ಮುಂದೆಯೂ ಅದನ್ನು ಹೇಳುವವರಲ್ಲ. ಅವರು ನಿನ್ನ ಧನಿಯರು. ನಾನು ಬರಿಯ ಅವರ ಗುರುತಿನಿಂದ ಬಂದವ. ಇಲ್ಲಿಗೇ ಎಂದು ಬಂದವರೂ ಅಲ್ಲ."

"ಅಲ್ಲ, ತಾವು ಸರಕಾರದವರು-ನಾನು ತಮ್ಮ ಮುಂದೆ ಸುಳ್ಳೆನ್ನಲಾರೆ."

"ಏನು ಸಂಗತಿ ಹೇಳು. ನೀನು ಇಲ್ಲಿಂದ ಹೋಗಲೇಬೇಕೆಂದಿದ್ದರೆ ಬದಲು ಜಾಗವನ್ನಾದರೂ ಕೊಡಿಸುವ ಪ್ರಯತ್ನ ಮಾಡುವ." ಎಂದು ಅಚ್ಯುತನ ಕಡೆಗೆ ನೋಡುತ್ತ ಹೇಳಿದರು.

"ಆಗಲಿ, ನೋಡುವ" ಎಂದ ಅಚ್ಯುತ.

"ಏನೋ ತಮ್ಮಂಥವರು ಮನಸ್ಸು ಮಾಡಿದರೆ ಆಗುತ್ತಿತ್ತು ಒಂದು ಉಪಕಾರ"

ಅವರು ತಿರುಗಿ ತಿರುಗಿ ಸಂಗತಿ ಹೇಳಲು ಅವನನ್ನು ಒತ್ತಾಯ ಪಡಿಸಿದರು. ಆತ ಮುಖ ಸಣ್ಣಗೆ ಮಾಡಿ "ಸುಬ್ಬಿ, ಇಲ್ಲಿ ಸ್ವಲ್ಪ ಎಲೆ ಅಡಕೆ ತಂದಿರಿಸಿ ಹೋಗು ಮಗು" ಎಂದು ನುಡಿದ. ಆಗ ಮನೆಯೊಳಗಿಂದ ಜವ್ವನೆಯಾದ ಒಬ್ಬ ಕನ್ಯೆ ಬಂದು, ಎಲೆಯಡಕೆ ಇರಿಸಿ ಹೋದಳು. ಕನ್ಯೆಯು ರೂಪವಂತೆ; ಒಳ್ಳೆಯ ಮೈ ಕಟ್ಟು. ಒಕ್ಕಲಿಗರ ಅರೆಯುಡುಪಿನಲ್ಲಿ ಆಕೆ ತನ್ನ ಕಾಯದ ಸೊಬಗನ್ನೆಲ್ಲ ಬೀರುತ್ತಿದ್ದಳು. ಆಕೆ ಹೋದ ಬಳಿಕ, ಅಣ್ಣು ಗೌಡನು ತಡವರಿಸುತ್ತ "ಅಯ್ಯ, ಅವಳನ್ನು ಕಂಡಿರಲ್ಲ. ಅವಳು ನನ್ನ ಮೊಮ್ಮಗಳು. ನನಗೆ ಇರುವವಳು ಅವಳೊಬ್ಬಳು. ಮಗಳು ತೀರಿಹೋದಳು. ಈಗ ನಾವಿಬ್ಬರೇ ದುಡಿದು ಗೈಮೆ ಮಾಡುವವರು. ಯಾರಾದರೂ ಮನೆಯಲ್ಲಿರುವ ಅಳಿಯನನ್ನು ಹುಡುಕಬೇಕು— ಎಂದು ಯೋಚನೆ ಮಾಡುತ್ತ ಇದ್ದೇನೆ. ಯಾವನೋ ಸುಟ್ಟವ, ರಂಗಪ್ಪ ಗೌಡನಂತೆ, ನಿಮ್ಮ ಕಡಬದವ, ಒಂದು ದಿನ ಇಲ್ಲಿಗೆ ಬಂದ. 'ಅವಳನ್ನು ತನಗೆ ಕೊಡು ಎಂದ.' 'ಆಗಲಿ, ನಾನು ನಾಲ್ಕು ಮಂದಿಯನ್ನು ಕೇಳಿ ಹೇಳುತ್ತೇನೆ' ಎಂದೆ. ಹಾಗೆ ಆಚೀಚೆಯವರನ್ನು

ಕೇಳಲು, ಅವರೆಂದರು: 'ಅವನು ಅಪಾಪೋಲಿ. ಅವನಿಗೆ ಮದುವೆ ಯಾಕೆ? ಯಾರಾರಿಗೆ ಮಾರಲಿಕ್ಕೇನು ಹೆಂಡತಿಯನ್ನು? ಮೊದಲಿನ ಹೆಂಡತಿಯನ್ನು ಏನು ಮಾಡಿದನಂತೆ! ಅವ' ಎಂದರು ಎಲ್ಲರೂ. ಆ ಮೇಲೆ ನಾನು ಅವನು ಬಂದರೆ ಮಾತನಾಡಿಸಲಿಲ್ಲ. ಒಬ್ಬರೂ ಅವನ ವಿಷಯದಲ್ಲಿ ಒಂದು ಒಳ್ಳೆಯ ಮಾತನ್ನು ಆಡದೆ ಹೋದರೆ, ನಾನು ಮೊಮ್ಮಗಳನ್ನು ಕೊಟ್ಟೇನೆ? ನನಗೆ ಇರುವವಳು ಅವಳೊಬ್ಬಳು!"

"ಯಾರು ರಂಗಪ್ಪನೇ!-ಅವನು ಅಂಥವನೆಂಬುದು ನಿಜ" ಅಂದರು ಜಾನ್‌ಸನರು.

"ನಿಮಗೂ ಗೊತ್ತು."

"ಅವನು ಹೇಗೂ ಇರಲಿ; ನೀನು ಈ ಜಾಗ ಬಿಡುವುದು ಯಾಕಂತೆ?"

"ಈ ಪಂಚಾಯಿತಿಕೆಗೆ ಅಂತ, ನಾಗರಾಜ ಧನಿಯರೇ ಒಂದು ಸಂಜೆ ಮನೆಗೆ ಬಂದರು. ಆಗ ಕತ್ತಲೆಯ ತನಕ ಇಲ್ಲೇ ಇದ್ದು-'ಕತ್ತಲಾಯಿತು. ನಾನು ಇಲ್ಲೇ ಇರುತ್ತೇನೆ' ಅಂದರು. 'ಅಯ್ಯೋ ನಿಮ್ಮ ಭಾವನ ಮನೆವರೆಗೆ ನಾನು ಮುಟ್ಟಿಸಿಬಿಡುತ್ತೇನೆ' ಎಂದೆ. ಆದರೂ ಅವರು ಇಲ್ಲಿರುವ ಹಟಮಾಡಿದರು. ಅಂಥ ಧನಿಯರೇ, ನಮ್ಮಲ್ಲಿರುತ್ತೇನೆ ಎಂದದ್ದು ನೋಡಿ, ನನಗೆ ಸಂಶಯ ಬಂದಿತು. ಮುಂದೆ ಅವರ ಮಾತನ್ನು ಕೇಳಿ ಸಂಶಯ ಇಲ್ಲದ ಹಾಗೂ ಆಯಿತು. ಅವರು ಬಂದದ್ದು ನನ್ನ ಮೊಮ್ಮಗಳ ಆಸೆಗೆ. ನನಗೆ ಪಿತ್ತ ಅಡರಿತು; ಧನಿಯರು ಎಂದು ಹಿಂದೆ ಮುಂದೆ ನೋಡದೆ ಬೈದೆ. ಅವರು ಹೋದರು. ಪಿಟ್ಟಿನ್ನದೆ ಹೋದರು. ಈಗ ಒಂದು ಹದಿನೈದು ದಿನಗಳ ಹಿಂದೆ ರಂಗಪ್ಪ ತಿರುಗಿ ಬಂದು, 'ಒಂದೂ ಮಗಳನ್ನು ಕೊಡು. ಇಲ್ಲವಾದರೆ ಧನಿಯರು ಈ ಜಾಗ ಬಿಡಬೇಕೆ'ಂದು ತಿಳಿಸಿದ್ದಾರೆ! ಇನ್ನು ಹ್ಯಾಗಿರುವುದು ಒಡೆಯ ಇಲ್ಲಿ" ಎಂದು ಮುದುಕ ಬಿಕ್ಕಿ ಬಿಕ್ಕಿ ಅತ್ತನು. ಅವನ ಕಂಬನಿ ತಡೆಯದಾಯಿತು. "ಒಡೆಯ, ನಾನು ಇಂದೋ ನಾಳೆಯೋ ಎಂದು ಇದ್ದೇನೆ; ವರ್ಷ ಆಯಿತು ಸುಮಾರು. ಅದರೊಳಗೆ ದೇವರು ದಯಮಾಡಿಸಿ, ಇವಳಿಗೊಂದು ಗಂಡನನ್ನು ಕೊಡಿಸಿದ್ದರೆ ಆಗುತ್ತಿತ್ತು" ಎಂದನು.

ಅವನ ದುಃಖದ ಕಥೆಯು, ಕುಳಿತ ಇಬ್ಬರ ಮನಸ್ಸನ್ನೂ ಕರಗಿ

ಸಿತು. ಅಚ್ಚುತನಿಗೂ ವ್ಯಥೆಯಾಯಿತು. ಜಾನ್‌ಸನರು ಒಳಗಿಂದ ಕುದಿಯುತಿದ್ದರು. ಕೊನೆಗೆ "ಹೊತ್ತಾಯಿತು ಅಣ್ಣು, ನಾವು ಹೋಗುತ್ತೇವೆ, ನೀನೇನೂ ಯೋಚನೆಮಾಡಬೇಡ. ಎಲ್ಲಾದರೂ ಒಂದು ತಾವನ್ನು ಬೇಗನೆ ಹುಡುಕುವ ನಿನಗಾಗಿ. ಆದರೆ ನಿನ್ನ ಧನಿಯರ ಸಾಲ ಮುಟ್ಟಿಸುವ ದಾರಿ ಯಾವುದು ಹೇಳು!" ಎಂದ ಅಚ್ಚುತ.

"ಅದಕ್ಕೆ ಅವರು ನಂಬ್ರ ಮಾಡಲಿ. ಕೋರ್ಟಿಗೆ ಸತ್ಯ ಗೊತ್ತಾದೀತು—ನಾನು ಮಾಡಿದ ಕೃತ, ಇವರ ಸಾಲದ ಹಣವನ್ನು ಮಿಕ್ಕೀತೇ ಎಂದು. ಅಲ್ಲವಾದರೂ ನನ್ನನ್ನು, ಈ ಮುದುಕನನ್ನು ಜೈಲಿಗೆ ಕಳುಹಿಸುತ್ತಾರಂತೇನು—ಕಳುಹಿಸಲಿ! ಹಾಗೆ ಮರ್ಯಾದೆ ಮಾರಿಕೊಂಡು ನಾನಾಗಲೀ ನನ್ನಮೊಮ್ಮಗಳಾಗಲೀ,ಇವರ ಒಕ್ಕಲಾಗಿ ಎಂದೂ ಬಿದ್ದಿರಲಾರೆವು" ಎಂದನು ಮುದುಕ. ಅವನಿಗೆ ಕಾಯಿದೆಯ ಹಿಂದುಮುಂದು ತಿಳಿಯದೆ ಹೋದರೂ,ರೇಗಿ ಏನೇನೋ ಹೇಳಿದ.

ಅಣ್ಣು ಬೀಳ್ಕೊಡುತ್ತ "ಸಣ್ಣ ಒಡಯರೇ, ನಿಮ್ಮದೇ ಏನಾದರೊಂದು ಚೂರು ತಾವು ಸಿಕ್ಕಿದರೂ ಸಾಕು" ಎಂದನು.

"ಅಣ್ಣು, ನಮ್ಮಲ್ಲಿ ಜಾಗ ಇಲ್ಲವೆಂದಲ್ಲ. ಕೊಡುವ ಜಾಗ ಇರುವುದು ಕಡೆಬೈಲಲ್ಲಿ. ಅದರ ಸಾಗುವಳಿ ಬಿಟ್ಟು, ಎರಡು ವರ್ಷವಾಯಿತು. ಯಾವ ಸ್ಥಿತಿಯಲ್ಲಿದೆಯೋ ಗೊತ್ತಿಲ್ಲ. ಅಲ್ಲಿ ಇರಲು ಮನೆಯೂ ಇಲ್ಲ, ಬಿದ್ದುಹೋಗಿದೆ."

"ನೋಡಿ ಒಡೆಯ, ಮೊದಲು ನನಗೊಂದು ತಾವು ಕೊಡಿ. ಏನಾದರೂ ಮಾಡಿ ಹೆಸರಿಗೊಂದು ಜಾಗ ಮಾಡಿಕೊಳ್ಳುತ್ತೇನೆ ನಾನು. ಒಂದು ಸಾರಿಗೆ ಇಲ್ಲಿಂದ ಪಾರಾದರೆ ಸಾಕು ಎಂದಿದ್ದೇನೆ."

"ಆಗಲಿ! ಅಮ್ಮನನ್ನು ಕೇಳಿ ಹೇಳುತ್ತೇನೆ. ಇಲ್ಲವಾದರೆ ನೀನು ನಾಳೆಯೋ ನಾಡಿದ್ದೋ ಬಾ ಮನೆಗೆ"-ಎಂದನು ಕನಿಕರದಿಂದ.

ಅವರಿಬ್ಬರೂ ಮಾತನಾಡುತ್ತ ಮನೆಗೆ ಹಿಂತಿರುಗಿದರು. ಮನೆಯನ್ನು ಸೇರುವಾಗ ಸಂಜೆ ಇಳಿಹೊತ್ತಾಗಿತ್ತು. ಜಾನ್‌ಸನರ ಮನಸ್ಸಿಗೆ ಆಗಲೇ ಕಡಬ ಸೇರುವ ವಿಚಾರ ಅಳಿದುಹೋಗಿತ್ತು. ಅವರ ತಲೆಯಲ್ಲಿ ಅಣ್ಣು ಗೌಡನ ಕತೆಯೂ ಅಚ್ಚುತ ಮಾಸ್ತರರ ನಾಟಕವೂ—ಒಂದೊಂದಾಗಿ ಮನಸ್ಸಿನ ತೆರೆಯ ಮೇಲೆ ಕುಣಿಯುತ್ತಿದ್ದುವು. ಗೌಡನ

ಕತೆ ಅಚ್ಚುತನಿಗೆ ಆಗ ತಾನೇ ಗೊತ್ತಾದುದೆಂದು ಜಾನ್‌ಸನರಿಗೂ ತಿಳಿಯಿತು. ರಂಗಪ್ಪ, ನಾಗರಾಜರು ಹೇಗೆ ನಾಟಕವನ್ನು ತಮಗೆ ಅನ್ವಯಿಸಿಕೊಂಡರೆಂಬುದನ್ನು ಬಣ್ಣಿಸಬೇಕಾಗಿರಲಿಲ್ಲ. ಆದರೆ ಅವೆಲ್ಲ ವಿಷಯಗಳನ್ನು ಅಚ್ಚುತನಿಗೆ ತಿಳಿಸಿದರೆ, ಅವನ ತಲೆ ಬಿಸಿಗೊಂಡೀತು. ಅದು ಅವನಿಗೆ ತಿಳಿಯದಿರುವುದೇ ಲೇಸು. ಅಚ್ಚುತನ ಮೇಲೆ ನಾಗರಾಜನು ವೈರತಾಳಿರುವನೆಂದು ತಿಳಿದರೆ ಏನು ಮಾಡುತ್ತಾನೆಯೋ! ಈಗ, 'ಅಣ್ಣನಿಗೆ ಸ್ಥಳ ಇದ್ದರೆ ಕೊಡುತ್ತೇನೆ' ಎಂದವನು ನಾಗರಾಜಗೆ ಹೆದರಿ 'ಇಲ್ಲ' ಎಂದುಬಿಟ್ಟಾನು. ಎಷ್ಟೆಂದರೂ ತಾವು ಬಡ ಶಾಲೆ ಉಪಾಧ್ಯಾಯರು; ಹೊಟ್ಟೆಯ ಪಾಡಿಗೆ ಹೆಣಗಾಡುವ ತಾವು, ಊರವರೊಡನೆ ಹೋರಾಟಕ್ಕೆ ನಿಂತರೆ, ಸಾಗಲಾರದು ಎಂಬ ಅನುಮಾನ.

ಆದರೂ ದಾರಿಯಲ್ಲಿ ಬರಬರುತ್ತ "ಅಚ್ಚುತ, ಆ ಗೌಡನನ್ನು ಹೇಗಾದರೂ ಅಲ್ಲಿಂದ ಪಾರು ಮಾಡಬೇಕು. ನಿಮ್ಮ ಜಾಗದಲ್ಲೇ ಅವನನ್ನು ಇರಿಸಲು ಕಷ್ಟವಾದರೆ, ನಿಮ್ಮ ಮಾವನಿಗೆ ಪಂಜದಲ್ಲಿ ತುಂಬಾ ಆಸ್ತಿಯಿಲ್ಲವೇ? ಅಲ್ಲೇನಾದರೂ ಅವಕಾಶ ಮಾಡಿಕೊಟ್ಟರಾಗುತಿತ್ತು" ಎಂದರು. ಆತ "ಯಾವುದಕ್ಕೂ ತಾಯನ್ನು ಕೇಳಿ ನೋಡುತ್ತೇನೆ. ಕಡೆಬೈಲಿನ ಆಸ್ತಿಯೇ ಆಗಬೇಕೆಂದಿಲ್ಲ. ನಮಗೆ ಒಬ್ಬ ಕದಿಮ ಒಕ್ಕಲು ಇದ್ದಾನೆ; ಶೇಷ ಗೌಡ. ಕಳೆದ ವರ್ಷ ಅವನಿಂದ ಐದು ಮುಡಿ ಗೇಣಿ ಬಾಕಿಯಾಗಿತ್ತು. ಈ ವರ್ಷ ಅವನು ಏನೂ ಕೊಡುವ ಯೋಚನೆಯಲ್ಲಿಲ್ಲ. ಅವನನ್ನು ತಳಕೀಳಿಸಬೇಕೆಂದಿದೆ. ಅದಕ್ಕೇನೆ ಅಮ್ಮನನ್ನು ಕೇಳಬೇಕೆಂದೆ" ಎಂದ.

ಮನೆ ಸೇರುವ ತನಕ, ಸೇರಿದ ಮೇಲೆ, ಅಚ್ಚುತನ ತಲೆಯೊಳಗೆ ನಾಗರಾಜನ ವಿಚಿತ್ರ ವರ್ತನೆಗಳೆಲ್ಲ ಹೊಳೆದುವು. ತನಗೆ ಅಷ್ಟು ಹಿತನಾಗಿದ್ದ; ಆದರೂ ವೈರಿಯಾದ. ಆದರೆ ಒಂದು ಸಂಗತಿ ಅವನಿಗೂ ಗೊತ್ತಿತ್ತು; ಮೊದಲಿಂದ ಪೋಲಿಗಳೆಂದರೆ, ಕೀಟಲೆಗಳೆಂದರೆ ಅವನಿಗೆ ಇಷ್ಟ. ಈಗ ರಂಗಪ್ಪನಂಥವರು ಜತೆಗೆ ಸೇರಿಕೊಂಡಲ್ಲಿ—ಬೇರೇನಾದೀತು? ಆದರೆ ಮಾತನಾಡುವಂತಿದೆಯೇ! ಈಗೀಗ ಊರಲ್ಲಿ ಅವನೊಬ್ಬ ಪ್ರಬಲ ಶಕ್ತಿಯಾಗಿದ್ದಾನೆ. ಹಣ ಇರುವಲ್ಲಿ ವರ್ಚಸ್ಸು ತನ್ನಂತೆಯೇ ಸೇರುತ್ತದೆ. ಅಲ್ಲದೆ ತನ್ನ ಮನಸ್ಸೊಪ್ಪಿದ ಧಿಮಾಕಿಗೆ

ಹಣ ಚೆಲ್ಲುವುದಕ್ಕೆ ಆತ ಹಿಂದುಮುಂದು ನೋಡುವವನಲ್ಲ.

ಇತ್ತ ಜಾನ್‌ಸನರು ಅಚ್ಯುತನ ಮನೆಯನ್ನು ಸೇರಿದ ಬಳಿಕ "ಅಯ್ಯೋ, ನೇರಾಗಿ ನಾರಾಯಣ ಮಾಸ್ತರರಲ್ಲಿಗೆ ಹೋಗಿದ್ದರೆ ಒಳಿತಿತ್ತು! ಅದೊಂದು ಒಡಪನ್ನು ಬಿಡಿಸಿಬಿಟ್ಟರೆ ಕೆಲಸ ಸಂಪೂರ್ಣವಾಗುತ್ತಿತ್ತು; ಅದು ಹೀಗೆಯೇ ಇದ್ದರೆ ನಾಗರಾಜ ಶ್ರೀಮಂತನಾದರೂ ಚಿಂತೆಯಿಲ್ಲ; ಮುಖಕ್ಕೆ ಉಗುಳಿ ಬಿಡುತ್ತೇನೆ. ಸಂಬಂಧಪಟ್ಟವರೆಲ್ಲರನ್ನು ನಿಲ್ಲಿಸಿಕೊಂಡು, ನಾಲ್ವರು ಸಂಭಾವಿತರುಗಳ ಮುಂದಕ್ಕೆ ತನಖಿ ಮಾಡುವ ಬಾ-ಎಂದು ಅವನನ್ನು ಎಳೆಯುತ್ತೇನೆ; ನಿಜವಾದ ಗಂಡಸಾದರೆ ಬರಲಿ!" ಎಂದು ವೀರವಾಕ್ಕಿನಿಂದ ತಮ್ಮ ಆತ್ಮವನ್ನು ತೃಪ್ತಿಪಡಿಸಿಕೊಂಡರು.



## ೧೩ನೆಯ ಅಧ್ಯಾಯ

ಆ ರಾತ್ರಿಯೆಲ್ಲ ಕೊಂಬಾರಿನಲ್ಲೇ ಜಾನ್‌ಸನರ ಸಮಯ ಕಳೆಯಿತು. ಅವರ ಮನಸ್ಸು ಮಾತ್ರ ನಾರಾಯಣರಾಯರನ್ನು ಕಂಡು ಮಾತನಾಡುವುದಕ್ಕೆ ಹಾತೊರೆಯುತ್ತಿತ್ತು; ಆದರೂ 'ಕತ್ತಲಲ್ಲಿ ಏನು ಸರ್ಕೀಟು?'ಎಂದು ಸುಮ್ಮನೆ ಅಲ್ಲಿಯೇ ಉಳಿದರು. ಊಟವಾದ ಬಳಿಕ ಅಚ್ಯುತ, ತಾಯಿಯೊಡನೆ ಶೇಷಗೌಡನ ವಿಚಾರವಾಗಿ ಮಾತನಾಡಿದನು. "ಏನೋ, ಅವನು ಈ ವರ್ಷವೂ ಗೇಣಿಯ ವಿಷಯ ಮಾತನಾಡುವುದಿಲ್ಲ. ನಾನು ಮೂರು ಮೂರು ಸಾರಿಯಾಯಿತು ಅವನನ್ನು ಕೇಳಿದ್ದು—ಕಳೆದ ವರ್ಷದ್ದೂ ಅವನ ಗೇಣಿ ಬಾಕಿ ಇದೆ. ಈ ವರ್ಷ ಹತ್ತು ಮುಡಿಯಲ್ಲಿ ಏನೇನೂ ಬಂದಿಲ್ಲ. ಹೀಗಾದರೆ ಅವನನ್ನು ಜಾಗದಿಂದ ಬಿಡಿಸಲೇಬೇಕಾಗುತ್ತದೆ" ಎಂದು ಲಕ್ಷ್ಮಮ್ಮ ತಿಳಿಸಿದಳು. "ಅಮ್ಮ, ಅವನ ಹಂಗು ನಮಗೇನು? ಅವನನ್ನು ಎಬ್ಬಿಸುವುದೇ ಒಳ್ಳೆಯದು. ಅವನ ಬದಲಿಗೆ ಆ ಪಾಪದ ಅಣ್ಣುಗೌಡನಿಗಾದರೂ ಜಾಗವನ್ನು ಕೊಡಬಹುದು" ಎಂದ ಅಚ್ಯುತ.

"ಯಾರು? ಅಣ್ಣುಗೌಡ ಬರುತ್ತಾನಂತೇನು? ಅವನು ನಮ್ಮ ಹಳೆಯ ಒಕ್ಕಲಲ್ಲವೇ? ಅವನು ಈಗಿರುವ ಜಾಗ ನಮ್ಮದೇ ಆಗಿತ್ತು; ಭೋಗ್ಯಕ್ಕೆ ಕೊಟ್ಟ ಭೂಮಿ."

"ಅಹುದು, ಹೇಳಿದ ಹಾಗೆಂದು; ನನಗೆ ಅದು ತಿಳಿದಿರಲಿಲ್ಲ. ಅಲ್ಲಿ ಅವನಿಗೆ ಸಮಾನಾಗುವುದಿಲ್ಲವಂತೆ. ಅವನ ಹೊಸ ಧನಿಯರ ಮರ್ಜಿ ಅವನಿಗೆ ಹಿಡಿಸುವುದಿಲ್ಲವಂತೆ."

"ಯಾರು, ನಾಗರಾಜಯ್ಯನದ್ದೇ? ಏನಪ್ಪ! ಜಾಗವಹಿಸಿಕೊಂಡ ಇಷ್ಟರಲ್ಲಿಯೇ ತಕರಾರು ಬಂತೇ?" ಎಂದು ಆಕೆ ಕೇಳಿದಳು. ಅಚ್ಚುತ ಸೂಕ್ಷ್ಮವಾಗಿ ಅಲ್ಲಿನ ಎಲ್ಲ ಸಂಗತಿಗಳನ್ನು ತಿಳಿಸಿದನು. ಆಗ ಲಕ್ಷ್ಮಮ್ಮ ಯೋಚಿಸಿ, "ನಮಗೆ ಅಣ್ಣು ಗೌಡನಾಗಬಹುದು; ಒಳ್ಳೆಯವ. ಇವನಿಗಿಂತ ಸಾವಿರಪಾಲಿಗೆ ಆದೀತು. ಆದರೆ ಅವನನ್ನು ನಾವೇ ತಪ್ಪಿಸಿದವರೆಂದು ತಿಳಿದು ನಾಗರಾಜನಿಗೆ ಸಿಟ್ಟುಬಾರದೇನು? ಅದರಿಂದ ನಮ್ಮ ಮೇಲೆಯೂ ಆತ ಕತ್ತಿಕಟ್ಟಲಾರನೇ" ಎಂದು ಮಾತ್ರ ಅಂಜಿಕೆ ತೋರಿದಳು.

"ನಿಮ್ಮ ಮೇಲೆ ಕತ್ತಿಕಟ್ಟುವುದೇ? ಏನು ಊರಿನ ಪಟ್ಟವೆಲ್ಲ ಅವನಿಗೆ ಸಂದುಹೋಗಿದೆಯೇ? ನಾವೆಲ್ಲ ಯಾರೂ ಬದುಕಿಲ್ಲವೇ? ಅವನ ಪಾಡಿಗೆ ಅವನು, ನಮ್ಮ ಪಾಡಿಗೆ ನಾವು" ಎಂದರು ಜಾನ್‌ಸನರು.

"ಅಮ್ಮ; ನಾಗರಾಜ ಕೊಡುವ ಹಣಕ್ಕೆ ಠೋಕರ ಕೊಟ್ಟಾಯಿತು. ಅವನು ಹಳೆ ನೋಟಿನ ಬದಲಿಗೆ,ಹೊಸ ನೋಟನ್ನು ಬರೆಯಿಸಿಕೊಂಡಾಯಿತು. ಈಗ ಅದನ್ನು ಪೇಟೆಯ ಸಾಹುಕಾರರಿಗೆ ಮೇಲುಚೀಟಿಗೆ ಕೊಟ್ಟಿದ್ದಾನೆಂದೂ ಕೇಳಿದೆ. ಅದೆಲ್ಲ ನಮ್ಮ ಮೇಲೆ ವೈರ ಸಾಧಿಸುವುದಕ್ಕೆ. ಇನ್ನು ಹೆಚ್ಚೇನು ಮಾಡಬೇಕು? ನಾನು ಅಣ್ಣುಗೌಡನ ಪಾಡನ್ನು ನೋಡಿ 'ಏನಾದರೂ ಮಾಡುವ; ನಾಳೆ ಬಾ' ಎಂದಿದ್ದೇನೆ. ಕೊನೆಗೆ ಕಡೆಬೈಲನ್ನಾದರೂ ಅವನಿಗೆ ಕೊಡುವ. ಈಗ ಅದೆಲ್ಲ ಹಾಳುಬಿದ್ದಿದೆ. ಅವನು ಗೈಮೆಮಾಡಲಿ; ಒಂದು ವರ್ಷ ಗೇಣಿ ಮಾಫಿಬಿಡುವ. ಅದು ಮೊದಲಿನ ಸ್ಥಿತಿಗೆ ಬಂದ ಮೇಲೆ, ಸರಿಯಾದ ಗೇಣಿ ಹೊರಿಸಿದರಾಯಿತು"

"ಅಲ್ಲಿ ಒಕ್ಕಲುಮನೆ ಇಲ್ಲವಲ್ಲ!"

"ಇನ್ನು ತಿಂಗಳಿಲ್ಲವೇ ಮಳೆ ಸುರುವಿಗೆ! ಅಷ್ಟರೊಳಗೆ ಒಂದು ಚಪ್ಪರ ಕಟ್ಟಿಕೊಳ್ಳುತ್ತಾನೆ. ಆಚೆಯ ಮಂಜಯ್ಯನಿಗೆ ಹೇಳುವ; ಅವನೂ ಸಹಾಯಮಾಡಿಯಾನು. ಬೇರೆ ಒಕ್ಕಲು ಸಮೀಪವಿಲ್ಲದೆ ಅವನಿಗೂ ಬೇಸರವಾಗಿದೆ" ಎಂದ ಅಚ್ಯುತ.

"ಅಂತು ಬೆಳಗ್ಗೆ ನೀನೊಮ್ಮೆ ಶೇಷಗೌಡನ ಮನೆಗೆ ಹೋಗಿ, ಕೊನೆಯ ಸಾರಿ ಕೇಳು; ಮುಂದೆ ಯೋಚನೆಮಾಡುವ" ಎಂದಳು ತಾಯಿ. ರಾತ್ರಿ ಎಲ್ಲರೂ ಮಲಗಿಕೊಂಡರು. ಜಾನ್ಸನರು, ನಾಟಕದ ವಿಚಾರವನ್ನು ಅಚ್ಯುತನಿಂದ ಮರೆಯಾಗಿರಿಸುವುದು ಸಮನಲ್ಲವೆಂದು ತಿಳಿದು, ಎಲ್ಲವನ್ನೂ ಹೇಳಿದರು. ನಾಗರಾಜ ರೇಗಿದುದು, ಅವನು ಉಪಾಧ್ಯಾಯರ ತಂಡದ ಮೇಲೆ ಕೋಪಿಸಿದ್ದು, ಈ ಎಲ್ಲ ಸಂಗತಿಗಳೂ ಬಂದವು. ಅಚ್ಯುತನು ಅಣ್ಣುಗೌಡಗೆ ಸಹಾಯಮಾಡುವುದಾಗಲೀ, ಬಿಡುವುದಾಗಲೀ ಈ ಎಲ್ಲ ಸಂಗತಿ ತಿಳಿದೇನೆ ಮಾಡಲಿ-ಎಂದು ಜಾನ್ಸನರು ಈ ವಿಚಾರಗಳನ್ನು ತಿಳಿಸಿದುದು. ಅಚ್ಯುತನಿಗೆ ತುಂಬ ಬೇಸರವಾಯಿತು. 'ತಾನು ನೆನೆಯದ ಸಂಗತಿಗಳನ್ನು ನಾಗರಾಜ ಎಣಿಸಿಬಿಟ್ಟನಲ್ಲವೆ! ಕಳ್ಳನ ಮನಸ್ಸು ಹುಳ್ಳಹುಳ್ಳಗೆ ಎಂಬ ಹಾಗಾಯಿತು' ಎಂದ. 'ನಾನು ಆ ಅಣ್ಣುಗೌಡನ ಸಂಗತಿ ಏನೆಂದು ತಿಳಿಯುವುದಕ್ಕೆ ಬಂದವ; ಅದನ್ನು ತಿಳಿದಾಯಿತಲ್ಲ. ಅದರ ಜೊತೆಗೆ ಇನ್ನೂ ಒಂದು ಘೋರವಿದೆಯಲ್ಲ. ಇದರಂತೆಯೇ ಬೇರೊಂದು ಕತೆ: ಆ ಮೇಲೆ ಹೇಳುತ್ತೇನೆ" ಎಂದು ಜಾನ್ಸನರು ತಿಳಿಸಿ ಮಲಗಿಕೊಂಡರು.

ಬೆಳಗು ಮುಂಜಾನೆಯೇ ಜಾನ್ಸನರು ಹೊರಟಾಯಿತು. 'ಅಚ್ಯುತರಾವ್, ನಿಮಗೆ ಅಣ್ಣುವನ್ನು ಇರಿಸಿಕೊಳ್ಳುವುದಕ್ಕೆ ತೊಂದರೆಯಾಗಿ ಕಂಡರೆ, ನಿಮ್ಮ ಮಾವನ ಬಳಿಗೆ ಕಳುಹಿಸಿಕೊಡಿ. ಈಗ ನನಗೆ ಸ್ವಂತ ಆಸ್ತಿಯಿದ್ದಿದ್ದರೆ, ನೂರು ಮಂದಿ ನಾಗರಾಜರಿಗೆ ನೀರು ಕುಡಿಸುತ್ತಿದ್ದೆ. ನೋಡುವ: ಅವನು ಯಾವಾಗ ಲುಚ್ಚಗಿರಿಗೆ ಕೈಹಾಕಿದನೋ, ಅವನ ಬಿಸಾತು ನಮಗೇನು? ನನಗೆ ಒಂದು ಯೋಚನೆಯಿದೆ--ಈ ನಾಗರಾಜ ನಮ್ಮಂತಹ ಮಾಸ್ತರರ ಮೇಲೆ ಹಾರಾಡಿದರೆ, ನಮ್ಮ ಕೆಂಪಹಳ್ಳದ ಲಕ್ಕಣ್ಣ ಸೆಟ್ಟರನ್ನು ಪರಿಚಯಿಸುತ್ತೇನೆ. ಇವನನ್ನು ಕಂಡರೆ ಅವರಿಗೆ ಆಗದು. ನಿಜಕ್ಕೂ ಅವರನ್ನು ಕೆದಕಿದರೆ, ನಾಗರಾಜ ಆ ಮೇಲೆ ಕಡ

ಬದ ಪೇಟೆಯಲ್ಲಿ ತಿರುಗಾಡಲಿಕ್ಕಿಲ್ಲ" ಎಂದು ಅರ್ಭಟಿಸಿದರು.

ಅಚ್ಯುತರಾಯ "ಮಾಸ್ತರರೇ, ಮೇ ತಿಂಗಳು ಮುಗಿಯುವುದರೊಳಗೆ ನಿಮ್ಮ ಸವಾರಿ ದಂಪತಿಯುಕ್ತರಾಗಿ ನಮ್ಮ ಮನೆಗೊಮ್ಮೆ ಬರಲಿ! ರುಕ್ಮಿಣಿಗೆ ನಿಮ್ಮ ಹೆಂಡತಿಯನ್ನು ಕಾಣಬೇಕಂತೆ" ಎಂದು ಆಮಂತ್ರಣವಿತ್ತನು. "ಅದಕ್ಕೇನಾಗಬೇಕು? Cycle ನ ಮೇಲೆ ಡಬ್ಬಲ್ ರೈಡ್ ಮಾಡಿಸಿ ತರುವ" ಎಂದರು. "ಬೇಡ ಮಹಾರಾಯರೇ, ಸೈಕಲಿಂದ ನೀವು ಕೆಳಗೆ ಬಿದ್ದರೆ ಚಿಂತೆಯಿಲ್ಲ; ಅವರನ್ನು ಹೊಂಡಕ್ಕೆ ಹಾಕುವುದು ಬೇಡ" ಎಂದನು ಅಚ್ಯುತ. "Then who comes, on the hot road?" ಎಂದು ಅವರು ನಗುತ್ತ ನುಡಿದು, ಹೊರಟುಹೋದರು.

ಬೆಳಗಾಗಲು ಅಚ್ಯುತ,ನೆಟ್ಟಗೆ ಶೇಷಗೌಡನ ಮನೆಗೆ ಹೋದನು. ಗೌಡ ಚಾಪೆಯಿಂದ ಏಳುವ ಮೊದಲೇ ಈತ ಅಲ್ಲಿ ಕಾಲಿರಿಸಿಯಾಗಿತ್ತು. ಮೊದಲು ಅವನಿಗೆ ಪ್ರಿಯವಾಗಿದ್ದ ಮಾವಿನ ಮರದ ದರ್ಶನವಾಯಿತು. "ಚಿಂತೆಯಿಲ್ಲ; ಈ ವರ್ಷ ಮಾವಿನ ಹಣ್ಣಿಗೊಂದು ಬರಗಾಲವಿಲ್ಲ. ಅಲ್ಲದೆ ಇಲ್ಲಿನ ಮರಗಳಲ್ಲಿ ಗುಜ್ಜೆ (ಹಲಸಿನ ಕಾಯಿ)ಯೂ ತುಂಬ ಹಿಡಿದಿದೆ"ಎಂದುಕೊಂಡ. "ಶೇಷಗೌಡ!" ಎಂದು ಕರೆದನು.

"ಯಾರಿಗೆ ಇಷ್ಟು ಬೆಳಗ್ಗೆ ಜೀವಹೋಗುವುದು?" ಎಂದು ಗೊಣಗುತ್ತ,ಆಕಳಿಸುತ್ತ ಶೇಷಗೌಡ ಮನೆಯಿಂದ ಹೊರಕ್ಕೆಬಂದನು. "ಏನು ಕರೆದಿರಿ ಒಡೆಯ?" ಎಂದು ಅಚ್ಯುತನ ಮುಂದಕ್ಕೆ ವಿನಯ ನಟಿಸಿದನು.

"ನಿನ್ನ ಗೇಣಿ ಬಾಕಿ ವಿಷಯ ಕಡೆಯದೊಂದು ಮಾತನ್ನು ಕೇಳಿ ಬಾ-ಎಂದು ಅಮ್ಮ ಹೇಳಿಕಳುಹಿಸಿದಳು" ಎಂದ ಅಚ್ಯುತ.

"ಗೇಣಿ ಬಾಕಿಯೇ! ಅದನ್ನೇ ಮೇಲಿಂದ ಮೇಲೆ ಏನು ಕೇಳುವುದು? ನಾನು ಹೇಳಿದ್ದೇನಲ್ಲ! ಹಿಂದಲ ಬಾಕಿ ನೀವು ಬಿಡಬೇಕು. ಈ ವರ್ಷದ ಹತ್ತು ಮುಡಿಯನ್ನು ಮುಂದಲ ವರ್ಷದಲ್ಲಿ ಸೇರಿಸಿ ಕೊಡುತ್ತೇನೆ."

"ಏನು,ನಮಗೆ ಗ್ರಹಚಾರ ಹಿಡಿದಿದೆಯೆಂದು ತಿಳಿದೆಯೋ-ನೀನು ಕೊಟ್ಟಾಗ, ಕೊಟ್ಟಷ್ಟು ಗೇಣಿಯನ್ನು ತೆಕ್ಕೊಳ್ಳಲು! ನಿನಗೆ ಜಾಗದಲ್ಲಿ ಇರಲು ಮನಸ್ಸಿದ್ದರೆ, ಇನ್ನು ಎರಡು ದಿನಗಳಲ್ಲಿ ಗೇಣಿ ಚುಕ್ತಮಾಡಿ, ಹೊಸ ಗೇಣಿಚೀಟು ಬರೆದುಕೊಡಬೇಕು. ಇಲ್ಲವಾದರೆ ನೀನು ಜಾಗ

ಬಿಡಬೇಕು."

"ಹಾಗೆ ಜಬರದಸ್ತಿ ಮಾಡಿದರೆ ಹೇಗೆ? ನಾನು ಈ ವರ್ಷದ ಗೇಣಿ ಅಕ್ಕಿ ಉಂಡಾಯಿತು. ನಿಮಗೆ ಖುಶಿ ಬಂದ ಹಾಗೆ ನೀವು ಮಾಡಿ!"

"ಹಾಗಾದರೆ ನೀನು ಇಲ್ಲಿಂದ ಕಂಡಿತ ಒಕ್ಕಲು ಹೋಗು, ಮಹಾರಾಯ. ಹೋದದ್ದು ಹೋಯಿತು; ತಿಂದದ್ದು ದಕ್ಕಿತು. ನಮ್ಮಿಂದಾದರೆ ವಸೂಲು ಮಾಡುತ್ತೇವೆ. ಆದರೆ ಇನ್ನು ನಮ್ಮ ಗದ್ದೆ ನಿನಗೆ ಸಾಗುವಳಿಗೆ ಸಿಗುತ್ತದೆಂದು ತಿಳಿಯುವುದು ಬೇಡ!"

"ಅದೆಲ್ಲ ರಾಪು ಯಾಕೆ ಒಡೆಯ? ಏನು-ನಿಮ್ಮ ಗದ್ದೆ ಸಾಗುವಳಿಯಿಂದಲೇ ನಾನು ಜೀವನ ಮಾಡುತ್ತಿದ್ದೇನೆಂದು ತಿಳಿದಿದ್ದೀರೋ? ಯಾಕೋ,ಹಿರಿಯರ ದಾಕ್ಷಿಣ್ಯಕ್ಕೆ ಇಲ್ಲಿ ಇದ್ದೇನಷ್ಟೆ. ಯಾಕೂ ಬಾರದ ಈ ಭೂಮಿ ಸಾಗುವಳಿಮಾಡಿ, ದಂಡದ ಗೇಣಿಯನ್ನು ಎಷ್ಟೆಂದು ನಾನು ತುಂಬಿಸಿಯೇನು?" ಎಂದನು ಗೌಡ.

"ಸರಿ; ಮುಂದಿನ ದಾರಿ ಇತ್ಯರ್ಥವಾಯಿತಲ್ಲ" ಎಂದು ನಿಶ್ಚೈಸಿಕೊಂಡು ಅಚ್ಯುತ ತನ್ನ ಮನೆಗೆ ಹೊರಟ. ಅರ್ಧ ದಾರಿ ಬರುವಾಗಲೇ, 'ಯಾಕೋ, ಇನ್ನೂ ಒಂದು ಮಾತು ಕೇಳಬಹುದಿತ್ತು; ಅವನು ಒಕ್ಕಲು ಬಿಡುವ ದಿನವಾವುದೆಂದು. ಅಣ್ಣಗೆ ಆ ದಿನಕ್ಕೆ ಸಮನಾಗಿ ಬರಹೇಳಬಹುದಲ್ಲ' ಎಂದು ಯೋಚಿಸಿ, ತಿರುಗಿ ಶೇಷಗೌಡನ ಮನೆಗೆ ಬಂದನು. ಒಳಗೆ ಗೌಡ ತನ್ನವಳೊಡನೆ ಮಾತನಾಡುತ್ತಲಿದ್ದ. 'ನಾನು ನಾಗರಾಜ ಒಡೆಯರಲ್ಲಿ ಮಾತನಾಡಿದ್ದೇನೆ. ಏನಿಲ್ಲ-ನಾಳೆ ರಾತ್ರಿಯೇ ಇಲ್ಲಿಂದ ಎದ್ದು ಬಿಡುವ' ಎನ್ನುತ್ತಿದ್ದ. ಅಚ್ಯುತನ ಕಿವಿಗೆ ಈ ಮಾತುಗಳು ಬಿದ್ದುವು. ಅವನು ತುಸು ಹೊತ್ತು ಅಲ್ಲೇ ನಿಂತು, ಅನಂತರ 'ಗೌಡ' ಎಂದು ಕರೆದನು. ಗೌಡ ಹೊರಕ್ಕೆ ಬಂದನು, "ನೀನು ಹೊರಡುವುದು ಯಾವಾಗ? ನಾನು ಬೇರೆ ಒಕ್ಕಲನ್ನು ಕೇಳಬೇಕಲ್ಲ?" ಎಂದು ಅಚ್ಯುತ ಅವನನ್ನು ಕೇಳಲು, ಗೌಡ "ಹೊರಡೆಂದಕೊಡಲೇ ಹೊರಡಲಿಕ್ಕಾಗುತ್ತದೆಯೇ? ಇನ್ನೊಂದು ಹದಿನೈದು ದಿನದಲ್ಲಿ ನಿಮಗೆ, ಮನೆಬಿಟ್ಟು ಕೊಟ್ಟರಾಯಿತಲ್ಲ" ಎಂದ. ಅಚ್ಯುತ "ಆಗಲಿ" ಎಂದು ಮರಳಿದ.

ಅವನಿಗೆ ಗೌಡನ ಹೊಂತಗಾರಿಕೆ ತಿಳಿಯಿತು. 'ನಮಗೆ ತಿಳಿಸದೆ, ಮುಂಚಿತವಾಗಿ. ಸಾಮಾನುಗಳನ್ನು, ಜಾನುವಾರುಗಳನ್ನು ಸಾಗಿಸುವ

ಏರ್ಪಾಡಿನಲ್ಲಿದ್ದಾನೆ. ಹಾಗಿದ್ದರೆ, ಬಾಕಿಯಾದ ಗೇಣಿ ಮುಳುಗಿದಂತೆಯೇ ಸರಿ. ಅವನು ಹಾಗೆ ಎಲ್ಲವನ್ನೂ ಸಾಗಿಸುವಾಗ ಅದನ್ನು ತಡೆದು, ಬಾಕಿ ವಸೂಲುಮಾಡಿಕೊಳ್ಳಬೇಕು' ಎಂದು ಯೋಚಿಸಿದನು. ಲಕ್ಷ್ಮಮ್ಮನಿಗೂ ಗೌಡನ ದಿಟ್ಟತನ ಕೇಳಿ ಆಶ್ಚರ್ಯವಾಯಿತು. "ಹೋಗಲಿ; ಅಣ್ಣುಗೌಡ ಬಂದರೆ ಆಗುತಿತ್ತು; ತುಂಬ ಕಷ್ಟಗಾರ. ಆದರೆ ಈಗ ಅವನಲ್ಲಿ ಆಳು-ಕಾಳು ಹೇಗಿದೆಯೋ ತಿಳಿಯುದಲ್ಲ" ಎಂದಳು.

ಆ ದಿನ ಮಧ್ಯಾಹ್ನವೇ ಅಣ್ಣುಗೌಡ ಮಾತಿನಂತೆ ಅಲ್ಲಿಗೆ ಬಂದಿದ್ದನು. ಅವನೊಡನೆ ಜಾಗದ ವಿಷಯವಾಗಿ ಮಾತುಗಳು ನಡೆದುವು. ಆನಂತರ "ನೀನೊಮ್ಮೆ ನಾಳೆ ರಾತ್ರಿ ಇಲ್ಲಿಗೆ ಬಂದುಬಿಡು" ಎಂದು ಅಚ್ಯುತ ಹೇಳಿಯೂ ಆಯಿತು. ತಾನು ಅದೇ ಸಂಜೆ ಜಾನ್‌ಸನರನ್ನು ಕಂಡುಬರುತ್ತೇನೆಂದು ಆತಗೆ ಕಡಬಕ್ಕೆ ಹೋಗುವ ಮನಸ್ಸಾಯಿತು; ಹೋಗಿಯೇ ಬಿಟ್ಟ.

ಅಚ್ಯುತ ಮನೆಯಿಂದ ಹೋದ ಎರಡೇ ಎರಡು ತಾಸಿನಲ್ಲಿ ಸೀತೆ, ಸರಸ್ವತಿಯೊಡನೆ ಅವರಲ್ಲಿಗೆ ನಡೆದುಬಂದಳು. ಲಕ್ಷ್ಮಮ್ಮನಿಗೆ ಅವಳ ದರ್ಶನವಾಗಿ ಒಂದು ವರ್ಷ ಸಂದುಹೋಗಿತ್ತು. ಹಿಂದೆ ಬಂದುದು, ಅಚ್ಯುತನ ಮದುವೆಯ ಸಂಧಾನಕ್ಕೆ. ಈಗ ಸೀತೆಯನ್ನು ಕಂಡೊಡನೆ ರುಕ್ಮಿಣಿಗೆ ಸ್ವರ್ಗವೇ ಸಿಕ್ಕಿದಂತಾಯಿತು. "ಅಯ್ಯೋ ಅತ್ತಿಗೆ, ನಿಮ್ಮನ್ನು ಕಾಣದೆ ಎಷ್ಟು ಬೇಸರ-ಎಂದು ಹೇಳಿತೀರದು. ನಾನೂ ಅವರೂ ಇನ್ನೊಂದು ವಾರದಲ್ಲಿ ಪಂಜಕ್ಕೆ ಬರುತ್ತಿದ್ದೆವು. ನೀವೇ ಬಂದಿರಲ್ಲ; ಒಳ್ಳೆಯುದಾಯಿತು ಈಗ. ಮಗುವನ್ನೀಗ ಬಿಟ್ಟುಬಂದದ್ದೇನು? ಹೋ, ಸರಸಿಯೂ ಈ ವರ್ಷ ಮದುವೆಗೆ ನೆರೆದಿದ್ದಾಳೆ. ಅತ್ತಿಗೆ, ಏನು ನಮಗೆ ಪಾಯಸ ಉಂಟೇ ಹೇಗೆ?" ಎಂದು ಬಿಡುವಿಲ್ಲದ ವಾಗ್ಬಾಣಗಳನ್ನೆಸೆದಳು. ಲಕ್ಷ್ಮಮ್ಮ ಬಯಲಿಗೆ ಹೋದವರು ಬರುವ ತನಕ, ಅತ್ತಿಗೆ ನಾದಿನಿಯರ ಮಾತೇ ಮಾತುಗಳು! ಇಬ್ಬರೂ ಬಾಯಾರಿಕೆ ಮುಗಿಸಿ, ಚಾವಡಿಯಲ್ಲಿ ಕಾಲುನೀಡಿ ಕುಳಿತವರು ಮೈಮರೆತು ಮಾತಾಡುತ್ತಲೇ ಇದ್ದರು.

ಸೀತೆ, ತಾನು ಬಂದ ಕಾರ್ಯವನ್ನು ವಿವರಿಸಿದಳು. "ಹಾಗೂ ಹೀಗೂ ಅವರನ್ನು ಗದರಿಸಿ, ಗದರಿಸಿ ಮಾಲಕ್ಷ್ಮಿಗೆ ಒಬ್ಬ ಅಳಿಯನನ್ನು

ಹುಡುಕಿದೆವಪ್ಪ. ಮುಂದಿನ ಸೋಮವಾರಕ್ಕೆ ಲಗ್ನ. ಅದಕ್ಕೇನೆ ನಿಮ್ಮನ್ನೆಲ್ಲ ಹೊರಡಿಸಿಕೊಂಡು ಹೋಗುವ ಎಂದು ಬಂದಿದ್ದೇನೆ. ಅವರೇ ಬರುತ್ತಿದ್ದರು; ಆದರೆ ಚಪ್ಪರದ ತಯಾರಿಯೊಂದು ಆಗಬೇಕಲ್ಲವೆ? ಮದುವೆ–ನಿನ್ನಪ್ಪನ ಹಾಗೆ ಮಾಡುವುದಲ್ಲ. ಸಣ್ಣ ತರದಲ್ಲಿ ಮಾಡುತ್ತೇವೆ. ಗಂಡಿನ ಮನೆಯವರು, ಹೆಣ್ಣಿನ ಮನೆಯವರು, ನಾಲ್ಕುಮಂದಿ ಬ್ರಾಹ್ಮಣರು, ಮುತ್ತೈದೆಯರು–ಆಯಿತು! ನಮಗಿರುವುದು ಒಂದೇ ಹೆಣ್ಣಾದರೆ ಸಮ. ಈಗಲೇ ಇನ್ನೊಂದು ಉಂಟಲ್ಲ–ದಾಟಿಸಲು" ಎಂದಳು. "ಎಲ್ಲಿನ ಗಂಡು, ಏನು ಸಂಗತಿ" ಎಂದೆಲ್ಲ ಮಾತುಕತೆಗಳಾದುವು. "ಬೆಳ್ಳಾರೆಯ ಗಂಡು; ಉಣಲಿಕ್ಕೆ ಕಡಿಮೆಯಿಲ್ಲವಂತೆ, ಸಾಕು. ಅಷ್ಟೊಂದು ಶ್ರೀಮಂತರಲ್ಲ. ಆದರೆ ಮಾಣಿ ಪಸಂದ ಇದ್ದಾನೆ ಎನ್ನುತ್ತಾರಪ್ಪ. ಅಲ್ಲಿಯವರು ನಮ್ಮ ಮನೆಗೆ ಬಂದು ಮಾಲಕ್ಷ್ಮಿಯನ್ನು ಕಂಡು, ನೋಡಿ, ಸಂತೋಷಪಟ್ಟುಕೊಂಡು ಹೋದರು. ಹಾಗೆ ನಮ್ಮ ಮಾಲಕ್ಷ್ಮಿ, ಹತ್ತಾರು ಮಂದಿಯಿರುವ ಮನೆಯನ್ನು ಒಬ್ಬಳೇ ನೋಡಿಕೊಂಡಾಳು" ಎಂದು ಅಭಿಮಾನದಿಂದ ಸೀತೆ ಹೇಳಿದಳು.

ರುಕ್ಮಿಣಿ ನಕ್ಕಳು. "ಮಾಲಕ್ಷ್ಮಿ ಹಾಗಿದ್ದರೆ, ಅವಳ ತಂಗಿ ಸರಸಿ, ಕಡಿಮೆಯೇ? ಚೂರು ಮೆಣಸಿನ ಕಾಯಿ ಅವಳು. ಅವಳು ಐವತ್ತು ಮಂದಿಯಿರುವ ಮನೆಯನ್ನೇ ಸುಧಾರಿಸಿಯಾಳು" ಎಂದು ಚೇಷ್ಟೆ ಮಾಡಿದಳು.

"ಹಾಗೆ ಬೇಡಪ್ಪ–ದೊಡ್ಡ ಕುಟುಂಬದ ಮನೆ. ಅಲ್ಲಿ ನಿತ್ಯ ಕಾದಾಡಿ ಬದುಕುವವರು ಯಾರು? ನಮ್ಮ ಬಂಟ್ವಾಳದ ಮನೆಯ ಹಾಗಿದ್ದರೆ ನರಕವಾದರೂ ಬೇಕು; ಆ ಮನೆ ಬೇಡ. ಸರಸಿಯನ್ನು ಒಂದು ಸಣ್ಣ ಕುಟುಂಬಕ್ಕೆ ಕೊಡಬೇಕೆಂದು ನನ್ನ ಆಸೆ!"

ಸರಸಿ ನಾಚಿಕೆಯಿಂದ "ನಂಗೆ ಮದುವೆ ಬೇಡ" ಎಂದಳು.

"ನಿಂಗೆ ಬೇಡವಾದರೆ ಮೂಕಾಂಬಿಕೆಗೆ ಮದುವೆ ಮಾಡುವ! ನೀನು ಮಾಣಿ; ನಿನಗೆ ಉಪನಯನ ಮಾಡಿ, ಜನಿವಾರ ಹಾಕುವ, ಏನು!" ಎಂದು ರುಕ್ಮಿಣಿ ಸರಸಿಯನ್ನು ಅಣಕಿಸಿದಳು. ಅಲ್ಲಿಂದ "ಅತ್ತೆಯನ್ನು ನೋಡಿಬರುವ–ಕೆಳಬೈಲಲ್ಲಿದ್ದರೂ ಇರಬಹುದು. ನಟ್ಟಿಕಾಯಿ (ಕಾಯಿಪಲ್ಲೆ) ಹಿತ್ತಿಲು ನೋಡಿಕೊಂಡು ಬರುತ್ತೇನೆ–ಎಂದು ಹೇಳಿ

ಹೋದರು. ನಾವೂ ಅಲ್ಲಿಗೇ ಹೋಗುವ" ಎಂದಳು.

ಅಚ್ಯುತ ಕಡಬಕ್ಕೆ ಹೋಗಿದ್ದಾನೆಂದೂ, ಬೆಳಿಗ್ಗೆ ಬರುವನೆಂದೂ ಸೀತೆಗೆ ತಿಳಿಯಿತು. "ಇಲ್ಲಿ ಕೂತೇನು ಮಾಡುವುದು? ಹೋಗುವ ಕೆಳ ಬೈಲಿಗೆ" ಎಂದು ರುಕ್ಮಿಣಿ, ಸೀತೆ, ಸರಸ್ವತಿಯರು ಸಾಲಾಗಿ ಹೊರಟರು. ಬೈಲಿಗೆ ಹೋಗುವಾಗ ಲಕ್ಷ್ಮಮ್ಮ ತಮ್ಮ ತರಕಾರಿ ಹಿತ್ತಿಲಿನ ಮುರಿದು ಹೋದ ಬೇಲಿಯನ್ನು ಕುತ್ತಿ, ಸರಿಮಾಡುತ್ತಿದ್ದಳು. ಇವರನ್ನು ಕಂಡ ವಳೇ ಕೆಲಸ ನಿಲ್ಲಿಸಿ ಈಚೆಗೆ ಬಂದಳು. ಸೀತೆ ಮಾತನಾಡುವ ಮೊದಲೇ "ಅತ್ತೆ, ನಿಮ್ಮ ಮೊಮ್ಮಗಳಿಗೆ ಲಗ್ನವಂತೆ!" ಎಂದು ಆತುರವಾಗಿ ರುಕ್ಮಿಣಿ ನುಡಿದಳು. "ಅವರ ಮೊಮ್ಮಗಳಿಗಲ್ಲ, ನಿನ್ನ ಸೊಸೆಗೆ" ಎಂದಳು ಸೀತೆ.

"ಏನು, ವರ ನಿಶ್ಚಯವಾಯಿತೇ ಮಾಲಕ್ಷ್ಮಿಗೆ! ಆಗಲಪ್ಪ"— ಎಂದಳು ಲಕ್ಷ್ಮಮ್ಮ. "ಎಲ್ಲಿ? ಏನು?" ಎಂದು ಆತುರವಾಗಿ ಕೇಳಲು ಮುಂದೆ ಬಂದಳು. ಎಲ್ಲರು ಮನೆಯ ದಾರಿಯನ್ನು ತುಳಿಯುತ್ತ, ಹರ ಟುತ್ತ ಬಂದರು.

ಇನ್ನೊಂದು ವಾರದಲ್ಲೇ ಮದುವೆಯಾದರೆ ತಾವೇನು ಮಾಡ ಬೇಕು? ಮನೆಬಿಟ್ಟು ಹೋಗುವುದೇ? ಎಷ್ಟು ದಿನಕ್ಕೆ ಮುಂಚಿತವಾಗಿ ಹೋಗಬೇಕು? ಯಾರೆಲ್ಲ-ಎಂಬ ಯೋಚನಾತರಂಗಗಳನ್ನು ಲಕ್ಷ್ಮಮ್ಮ ಬಾಯಿಂದ ಹೊರಡಿಸುವಾಗ, "ಅಮ್ಮ, ನೀವು ಯಾರೂ ಇಲ್ಲಿ ಉಳಿ ಯುವ ಹಾಗಿಲ್ಲ. ಇರುವ ನೀವು ಮೂವರಲ್ಲಿ, ಉಳಿಯಬೇಕು ಯಾರು? ನೀನೇ, ರುಕ್ಮಿಣಿಯೇ, ಅಚ್ಯುತನೇ? ಅದೆಲ್ಲ ಆಗುವ ಬಾಬಲ್ಲ. ನಾಳೆಯೇ ಒಟ್ಟಿಗೆ ಹೊರಡುವ. ನಾನು ಬಂದುದೇ ನಿಮ್ಮನ್ನು ಕರಕೊಂಡು ಹೋಗ ಲಿಕ್ಕೆ. ಮದುವೆ ಮುಗಿದ ಮೇಲೆಯೇ ಹಿಂತಿರುಗಿ ಬರುವುದು. ಅವರೂ ಹಾಗೆ 'ಅತ್ತೆಗೆ ಹೇಳು' ಅಂದಿದ್ದಾರೆ. ಭಾರಿ ಮನಸ್ಸು ಮಾಡಿ 'ಅಚ್ಯು ತನೂ ಬರಲಿ ಎಂದಿದ್ದಾರೆ' ಎಂದು ನಕ್ಕು ಹೇಳಿದಳು.

ರಾತ್ರಿ ಊಟವಾಗುತ್ತಲೇ, ತಿರುಗಿ ಮನೆಬಿಡುವ ವಿಚಾರ, ಮೊಮ್ಮ ಗಳಿಗೆ ಹಾಕುವ ಚಿನ್ನಗಳ ವಿಚಾರ, ಹುಡುಗನ ವಿಚಾರ, ನಾಲ್ಕು ದಿನದ ಮದುವೆಯ ಕಜ್ಜಾಯಗಳ ವಿಚಾರ, ತುಂಬಾ ತರ್ಕವಿತರ್ಕಗಳು ನಡೆ ದುವು. "ಮಗು, ನಾನೂ ನಾಳೆ ಹೊರಡಬಹುದಿತ್ತು. ನಮ್ಮ ಕೆಳಬೈಲನ್ನು ಒಕ್ಕಲಿಂದ ತಪ್ಪಿಸಿ ಇನ್ನೊಬ್ಬ ಒಕ್ಕಲಿಗೆ ಗೇಣಿಗೆ ಕೊಡಬೇಕಾಗಿದೆ.

ಹುಡುಕಿದೆವಪ್ಪ. ಮುಂದಿನ ಸೋಮವಾರಕ್ಕೆ ಲಗ್ನ. ಅದಕ್ಕೇನೆ ನಿಮ್ಮನ್ನೆಲ್ಲ ಹೊರಡಿಸಿಕೊಂಡು ಹೋಗುವ ಎಂದು ಬಂದಿದ್ದೇನೆ. ಅವರೇ ಬರುತ್ತಿದ್ದರು; ಆದರೆ ಚಪ್ಪರದ ತಯಾರಿಯೊಂದು ಆಗಬೇಕಲ್ಲವೆ? ಮದುವೆ—ನಿನ್ನಪ್ಪನ ಹಾಗೆ ಮಾಡುವುದಲ್ಲ. ಸಣ್ಣ ತರದಲ್ಲಿ ಮಾಡುತ್ತೇವೆ. ಗಂಡಿನ ಮನೆಯವರು, ಹೆಣ್ಣಿನ ಮನೆಯವರು, ನಾಲ್ಕು ಮಂದಿ ಬ್ರಾಹ್ಮಣರು, ಮುತ್ತೈದೆಯರು—ಆಯಿತು! ನಮಗಿರುವುದು ಒಂದೇ ಹೆಣ್ಣಾದರೆ ಸಮ. ಈಗಲೇ ಇನ್ನೊಂದು ಉಂಟಲ್ಲ--ದಾಟಿಸಲು" ಎಂದಳು. "ಎಲ್ಲಿನ ಗಂಡು, ಏನು ಸಂಗತಿ" ಎಂದೆಲ್ಲ ಮಾತುಕತೆಗಳಾದುವು. "ಬೆಳ್ಳಾರೆಯ ಗಂಡು; ಉಣಲಿಕ್ಕೆ ಕಡಿಮೆಯಿಲ್ಲವಂತೆ, ಸಾಕು. ಅಷ್ಟೊಂದು ಶ್ರೀಮಂತರಲ್ಲ. ಆದರೆ ಮಾಣಿ ಪಸಂದ ಇದ್ದಾನೆ ಎನ್ನುತ್ತಾರಪ್ಪ. ಅಲ್ಲಿಯವರು ನಮ್ಮ ಮನೆಗೆ ಬಂದು ಮಾಲಕ್ಷ್ಮಿಯನ್ನು ಕಂಡು, ನೋಡಿ, ಸಂತೋಷಪಟ್ಟುಕೊಂಡು ಹೋದರು. ಹಾಗೆ ನಮ್ಮ ಮಾಲಕ್ಷ್ಮಿ, ಹತ್ತಾರು ಮಂದಿಯಿರುವ ಮನೆಯನ್ನು ಒಬ್ಬಳೇ ನೋಡಿಕೊಂಡಾಳು" ಎಂದು ಅಭಿಮಾನದಿಂದ ಸೀತೆ ಹೇಳಿದಳು.

ರುಕ್ಮಿಣಿ ನಕ್ಕಳು. "ಮಾಲಕ್ಷ್ಮಿ ಹಾಗಿದ್ದರೆ, ಅವಳ ತಂಗಿ ಸರಸಿ, ಕಡಿಮೆಯೇ? ಚೂರು ಮೆಣಸಿನ ಕಾಯಿ ಅವಳು. ಅವಳು ಐವತ್ತು ಮಂದಿಯಿರುವ ಮನೆಯನ್ನೇ ಸುಧಾರಿಸಿಯಾಳು" ಎಂದು ಚೇಷ್ಟೆ ಮಾಡಿದಳು.

"ಹಾಗೆ ಬೇಡಪ್ಪ-ದೊಡ್ಡ ಕುಟುಂಬದ ಮನೆ. ಅಲ್ಲಿ ನಿತ್ಯ ಕಾದಾಡಿ ಬದುಕುವವರು ಯಾರು? ನಮ್ಮ ಬಂಟ್ವಾಳದ ಮನೆಯ ಹಾಗಿದ್ದರೆ ನರಕವಾದರೂ ಬೇಕು; ಆ ಮನೆ ಬೇಡ. ಸರಸಿಯನ್ನು ಒಂದು ಸಣ್ಣ ಕುಟುಂಬಕ್ಕೆ ಕೊಡಬೇಕೆಂದು ನನ್ನ ಆಸೆ!"

ಸರಸಿ ನಾಚಿಕೆಯಿಂದ "ನಂಗೆ ಮದುವೆ ಬೇಡ" ಎಂದಳು.

"ನಿಂಗೆ ಬೇಡವಾದರೆ ಮೂಕಾಂಬಿಕೆಗೆ ಮದುವೆ ಮಾಡುವ! ನೀನು ಮಾಣಿ; ನಿನಗೆ ಉಪನಯನ ಮಾಡಿ, ಜನಿವಾರ ಹಾಕುವ, ಏನು!" ಎಂದು ರುಕ್ಮಿಣಿ ಸರಸಿಯನ್ನು ಅಣಕಿಸಿದಳು. ಅಲ್ಲಿಂದ "ಅತ್ತೆಯನ್ನು ನೋಡಿಬರುವ-ಕೆಳಜೈಲಲ್ಲಿದ್ದರೂ ಇರಬಹುದು. ನಟ್ಟಿಕಾಯಿ (ಕಾಯಿಪಲ್ಲೆ) ಹಿತ್ತಿಲು ನೋಡಿಕೊಂಡು ಬರುತ್ತೇನೆ-ಎಂದು ಹೇಳಿ

ಹೋದರು. ನಾವೂ ಅಲ್ಲಿಗೇ ಹೋಗುವ" ಎಂದಳು.

ಅಚ್ಯುತ ಕಡಬಕ್ಕೆ ಹೋಗಿದ್ದಾನೆಂದೂ, ಬೆಳಿಗ್ಗೆ ಬರುವನೆಂದೂ ಸೀತೆಗೆ ತಿಳಿಯಿತು. "ಇಲ್ಲಿ ಕೂತೇನು ಮಾಡುವುದು? ಹೋಗುವ ಕೆಳ ಬೈಲಿಗೆ" ಎಂದು ರುಕ್ಮಿಣಿ, ಸೀತೆ, ಸರಸ್ವತಿಯರು ಸಾಲಾಗಿ ಹೊರಟರು. ಬೈಲಿಗೆ ಹೋಗುವಾಗ ಲಕ್ಷ್ಮಮ್ಮ ತಮ್ಮ ತರಕಾರಿ ಹಿತ್ತಿಲಿನ ಮುರಿದು ಹೋದ ಬೇಲಿಯನ್ನು ಕುತ್ತಿ, ಸರಿಮಾಡುತ್ತಿದ್ದಳು. ಇವರನ್ನು ಕಂಡ ವಳೇ ಕೆಲಸ ನಿಲ್ಲಿಸಿ ಈಚೆಗೆ ಬಂದಳು. ಸೀತೆ ಮಾತನಾಡುವ ಮೊದಲೇ "ಅತ್ತೆ, ನಿಮ್ಮ ಮೊಮ್ಮಗಳಿಗೆ ಲಗ್ನವಂತೆ!" ಎಂದು ಆತುರವಾಗಿ ರುಕ್ಮಿಣಿ ನುಡಿದಳು. "ಅವರ ಮೊಮ್ಮಗಳಿಗಲ್ಲ, ನಿನ್ನ ಸೊಸೆಗೆ" ಎಂದಳು ಸೀತೆ.

"ಏನು, ವರ ನಿಶ್ಚಯವಾಯಿತೇ ಮಾಲಕ್ಷ್ಮಿಗೆ! ಆಗಲಪ್ಪ"— ಎಂದಳು ಲಕ್ಷ್ಮಮ್ಮ. "ಎಲ್ಲಿ? ಏನು?" ಎಂದು ಆತುರವಾಗಿ ಕೇಳಲು ಮುಂದೆ ಬಂದಳು. ಎಲ್ಲರು ಮನೆಯ ದಾರಿಯನ್ನು ತುಳಿಯುತ್ತ, ಹರಟುತ್ತ ಬಂದರು.

ಇನ್ನೊಂದು ವಾರದಲ್ಲೇ ಮದುವೆಯಾದರೆ ತಾವೇನು ಮಾಡಬೇಕು? ಮನೆಬಿಟ್ಟು ಹೋಗುವುದೇ? ಎಷ್ಟು ದಿನಕ್ಕೆ ಮುಂಚಿತವಾಗಿ ಹೋಗಬೇಕು? ಯಾರೆಲ್ಲ-ಎಂಬ ಯೋಚನಾತರಂಗಗಳನ್ನು ಲಕ್ಷ್ಮಮ್ಮ ಬಾಯಿಂದ ಹೊರಡಿಸುವಾಗ, "ಅಮ್ಮ, ನೀವು ಯಾರೂ ಇಲ್ಲಿ ಉಳಿಯುವ ಹಾಗಿಲ್ಲ. ಇರುವ ನೀವು ಮೂವರಲ್ಲಿ, ಉಳಿಯಬೇಕು ಯಾರು? ನೀನೇ, ರುಕ್ಮಿಣಿಯೇ, ಅಚ್ಯುತನೇ? ಅವೆಲ್ಲ ಆಗುವ ಬಾಬಲ್ಲ. ನಾಳೆಯೇ ಒಟ್ಟಿಗೆ ಹೊರಡುವ. ನಾನು ಬಂದುದೇ ನಿಮ್ಮನ್ನು ಕರಕೊಂಡು ಹೋಗಲಿಕ್ಕೆ. ಮದುವೆ ಮುಗಿದ ಮೇಲೆಯೇ ಹಿಂತಿರುಗಿ ಬರುವುದು. ಅವರೂ ಹಾಗೆ 'ಅತ್ತೆಗೆ ಹೇಳು' ಅಂದಿದ್ದಾರೆ. ಭಾರಿ ಮನಸ್ಸು ಮಾಡಿ 'ಅಚ್ಯುತನೂ ಬರಲಿ ಎಂದಿದ್ದಾರೆ' ಎಂದು ನಕ್ಕು ಹೇಳಿದಳು.

ರಾತ್ರಿ ಊಟವಾಗುತ್ತಲೇ, ತಿರುಗಿ ಮನೆಬಿಡುವ ವಿಚಾರ, ಮೊಮ್ಮಗಳಿಗೆ ಹಾಕುವ ಚಿನ್ನಗಳ ವಿಚಾರ, ಹುಡುಗನ ವಿಚಾರ, ನಾಲ್ಕು ದಿನದ ಮದುವೆಯ ಕಜ್ಜಾಯಗಳ ವಿಚಾರ, ತುಂಬಾ ತರ್ಕವಿತರ್ಕಗಳು ನಡೆದುವು. "ಮಗು, ನಾನೂ ನಾಳೆ ಹೊರಡಬಹುದಿತ್ತು. ನಮ್ಮ ಕೆಳಬೈಲನ್ನು ಒಕ್ಕಲಿಂದ ತಪ್ಪಿಸಿ ಇನ್ನೊಬ್ಬ ಒಕ್ಕಲಿಗೆ ಗೇಣಿಗೆ ಕೊಡಬೇಕಾಗಿದೆ.

ಎಂಬರೆ ಈಗಿರುವ ಶೇಷಗೌಡ, ಒಂದೂವರೆ ವರ್ಷದ ಗೇಣಿಗೆ ನಾಮ ಹಾಕಿದ. ಅದರಿಂದ ಇಲ್ಲಿ ನಾನಾಗಲೀ ಅಚ್ಯುತನಾಗಲಿ ಎಲ್ಲ ಇತ್ಯರ್ಥ ವಾಗುವ ತನಕ ನಿಲ್ಲಬೇಕಾಗುತ್ತದೆ. ಮದುವೆಯ ದಿನದ ಮಟ್ಟಿಗೆ ಹೇಗಾದರೂ ಬಂದುಹೋಗಬಹುದು. ಆದರೆ ಎಂಟು ಹತ್ತು ದಿನ ನಾವು ಅಲ್ಲೇ ಇದ್ದರೆ, ಅಷ್ಟರಲ್ಲಿ ಗೌಡ ಮನೆ ಬರಿದುಮಾಡಿ, ಜಾನುವಾರು ಹೊಡೆದುಕೊಂಡು ಹೋದರೆ, ಅವನಿಂದ ಮುಂದೆ ಬಾಕಿ ವಸೂಲು ಮಾಡುವುದು ಕಷ್ಟವೇ" ಎಂದು ತುಂಬ ಯೋಚನೆಗೀಡಾದಳು. "ಯಾವು ದಕ್ಕೂ ಮಾಣಿ ಬರಲಿ. ಬೆಳಗ್ಗೆ ಬಂದಾನಲ್ಲ" ಎಂದು ವಿಷಯವನ್ನು ಮುಂದುವರಿಸಿ ಮಲಗಿಕೊಂಡರು. ನಡುವೆ ನಿದ್ದೆಯಿಂದ ಎಚ್ಚರವಾ ದಾಗಲೆಲ್ಲ, ಮದುವೆಯನ್ನು ಕುರಿತಾದ ಏನೇನೊ ಮಾತುಗಳನ್ನು ಆಡು ತ್ತಿದ್ದರು. ರುಕ್ಮಿಣಿ ಅತ್ತಿಗೆಯೊಡನೆ "ಅತ್ತಿಗೆ, ಅಳಿಯ ಮನೆಗೆ ಬಂದರೆ ಆ ದಿನ ಇವರಿಗೆ ಮಾಡಿದ ಹಾಗೆ ಸೇವಿಗೆಯೋ?" ಎಂದು ಪರಿಹಾಸ್ಯ ಮಾಡಿದಳು. ಅದಕ್ಕೆ ಸೀತೆ "ಸೇವಿಗೆ ಮಾಡಿದರೇನು? ಮಾಲಕ್ಷ್ಮಿಯೇ ಅದಕ್ಕೆ ಕಾಯಿಹಾಲು ಬಡಿಸುತ್ತಾಳಲ್ಲ!" ಎಂದಳು.

ರುಕ್ಮಿಣಿಯ ಉಲ್ಲಾಸದ ಮಾತುಗಾರಿಕೆಗೆ ಸಮನಾದ ಉತ್ಸವ ಎಂದರೆ ಮದುವೆ. ಅದರಲ್ಲೂ ಸೀತೆಯ ಮನೆಯಲ್ಲಿ, ಗೆಳತಿ ಮಾಲಕ್ಷ್ಮಿಗೆ ಮದುವೆಯೆಂದರೆ ಕೇಳಬೇಕೆ? ಎಷ್ಟುಹೊತ್ತಿಗೆ ಕೊಂಬಾರು ಬಿಟ್ಟೇನು, ಎಷ್ಟು ಹೊತ್ತಿಗೆ ಮದುವೆ ಮನೆ ಸೇರಿಯೇನು ಎಂದು ಅವಳಿಗೆ ಆತುರ. "ಥೂತ್, ಇವರು ಕಡಬಕ್ಕೆ ಇವತ್ತೇ ಹೋಗದಿದ್ದರೇನಾಗುತ್ತಿತ್ತು? ರಜೆಯಲ್ಲಿ ಮನೆಯಲ್ಲೇ ಇರುತ್ತೇನೆ ಎಂದಿದ್ದರು. ಈ ಹಾಳುಶಾಲೆಯೂ ಆಯಿತು, ಅವರೂ ಆಯಿತು" ಎಂದು ತನ್ನ ಗಂಡನ ಶಾಲಾ ನೌಕರಿ ಯನ್ನು ಹಳಿದಳು.

ಆ ರಾತ್ರಿ ಅವರೆಲ್ಲರ ನಿದ್ರೆಯೆಂದರೆ, ಬರಿಯ ಹೆಸರಿನ ನಿದ್ರೆಯಾ ಗಿತ್ತು; ಅದು ವಿಚಿತ್ರ ಸುಖಸ್ವಪ್ನಗಳ ಸಂತೆಯಾಗಿತ್ತು. ಇವರೆಲ್ಲರ ಮಾತನ್ನು ಕದ್ದು, ಕಿವಿ ನೀಡಿ ಕೇಳುತ್ತಿದ್ದ ಸರಸ್ವತಿಯೂ ಸಹ, ಕನಸಿನ ರಾಜ್ಯದಲ್ಲಿ ತನಗೊಂದು ಲಗ್ನದ ತಯಾರಿ ನಡೆದಿದೆ ಎಂದು ತಿಳಿದಳು. ಆದ್ದರಿಂದ ತನ್ನ ಕನಸಿನಲ್ಲೇ "ಅಮ್ಮ, ನನಗೆ ಬೇಡ" ಎಂದು ಕನವರಿ ಸಿದಳು. ಆಗ ರುಕ್ಮಿಣಿಗೆ ಎಚ್ಚರವಿತ್ತು. "ಏನು ಬೇಡ ಸರಸಿ ನಿನಗೆ?"

ಎಂದು ವಿಚಾರಿಸಿದಳು.

"ನನಗೆ ಕಪ್ಪು ಗಂಡ ಬೇಡ!" ಎಂದು ವಟಗುಟ್ಟುತ್ತ, ಸರಸಿ ಸರ್‍ರನೆ ಮಗ್ಗಲು ಮಗುಚಿ, ದೀರ್ಘ ಉಸಿರಾಡಿದಳು. ಸರಸಿ ನಿದ್ದೆಯಲ್ಲಿ ರುವಳೆಂದು ತಿಳಿದ ರುಕ್ಮಿಣಿಗೆ, ಕರೇ ಗಂಡನ ಕನವರಿಕೆಯನ್ನು ಕೇಳಿ ನಗು ಬಂದಿತು. ಬೆಳಗಾದರೆ ಸರಸಿಯನ್ನು ಕಾಡುತ್ತೇನೆ ಎಂದು ತಿಳಿದಳು. ಸರಸಿ ಮುಖ ತೊಳೆಯಲು ಹೋದಾಗ, ಇವಳೂ ಹೋಗಿ "ಸರಸಿ, ಅದು ಯಾರೇ, ಕರಿ ಗಂಡ ನಿನ್ನನ್ನು ಕಾಣಲು ಬಂದದ್ದು" ಎಂದಳು. ಆಕೆ ಚಕಿತಳಾದಳು; ನಕ್ಕಳು. "ನಿನ್ನೆ ನಿನಗೆ ಕರಿಗಂಡನ ಕನಸಾಗಲಿಲ್ಲವೇ! ಸತ್ಯ ಹೇಳು" ಎಂದಳು ರುಕ್ಮಿಣಿ. ಆಕೆಯನ್ನು ಬಲ್ಲವಳಾದ ಸರಸಿ "ಆಯಿತೇ! ಎಂಥ ಕನಸು ಅನ್ನುತ್ತೀ ರಾತ್ರಿಯೆಲ್ಲ; ಆದರೆ ನಿನಗೆ ಹೇಗೆ ಗೊತ್ತು?"

"ಮರುಳಿ, ನೀನು ಕನವರಿಕೆಯಲ್ಲಿ 'ನನಗೆ ಕರಿ ಗಂಡ ಬೇಡ' ಎಂದು ಕೂಗಿದಿಯಲ್ಲ."

"ನಿಜವೇ?" ಅವಳಿಗೆ ನಾಚಿಕೆಯಾಯಿತು. ಕೊನೆಗೆ ವಿಶ್ವಾಸದಿಂದ ರುಕ್ಮಿಣಿಯೊಡನೆ ತನ್ನ ಕನಸಿನ ವೃತ್ತಾಂತವನ್ನು ಹೇಳಿದಳು. "ಅಮ್ಮ, ಯಾರೋ ಒಬ್ಬ ಕರಿಯನನ್ನು ಕರೆದುಕೊಂಡು ಬಂದಳು. ಅವನಿಗೆ ಜನಿವಾರವೂ ಇದ್ದಿರಲಿಲ್ಲ. 'ಈ ಗಂಡ ನಿನಗೆ ಸರಸಿ, ಒಂದೇ ಖರ್ಚಿನಲ್ಲಿ ಎರಡು ಮದುವೆಯಾಯಿತಲ್ಲ' ಎಂದಳು. ಅದೇ ಹಾಳು ಸ್ವಪ್ನ ಇಡೀ ರಾತ್ರಿ. ನಾನು ಮನೆಬಿಟ್ಟು ಓಡಿಹೋದೆನಂತೆ! ರುಕ್ಮತ್ತೆ, ಇದನ್ನು ಯಾರಿಗೂ ಹೇಳಬೇಡವೇ! ಹೇಸಿಕೆ."

"ಹಾಗಾದರೆ, ಕರಿ ಗಂಡನಲ್ಲ, ಬಿಳಿಗಂಡನೆಂದು ಕತೆ ಸರಿಮಾಡಿ ಹೇಳಲೇ"

"ಹೋಹೋ, ನೀನೊಬ್ಬಳಿಗೆ ಚೇಷ್ಟೆಗೆ ನೆಪ ಸಿಕ್ಕಿದರೆ ಸಾಕು."

"ಅದಿರಲಿ, ಸರಸಿ. ನಿನ್ನ ಮಾಲಕ್ಷ್ಮಿಯ ಗಂಡ ಬಿಳಿದಾಗಿದ್ದಾನೋ, ಕರಿಯನೊ?"

"ನನಗೇನು ಗೊತ್ತೇ. ಎಣ್ಣೆಗಪ್ಪು ಎನ್ನುತಾರೆ—ಅಪ್ಪ. ಅಂದರೆ ಮದುಮಗನ ಅಪ್ಪ ನಮ್ಮಲ್ಲಿಗೆ ಬಂದಿದ್ದರಲ್ಲ. ಅವರು ಮಾತ್ರ ಕರಿ ಮರದ ಸೋಟೆ!"

ರುಕ್ಮಿಣಿ ಕೇಳಿ ನಕ್ಕಳು. "ಹೋ, ಹೋ, ಬೀಗರನ್ನು ನೀನು ಈಗಲೇ ಚೇಷ್ಟೆಮಾಡುತ್ತಿದ್ದೀಯಾ? ಹೇಳುತ್ತೇನೆ ಅವರ ಹತ್ತಿರ! ಅಲ್ಲವೇ ಸರಸಿ, ಈಗ ಮದುವೆಯಲ್ಲಿ ಬೀಗರನ್ನು ದೂರುವ ಹಾಡುಂಟಲ್ಲ. ನಿಮ್ಮ ಕರಿಮರದ ಸೋಟಿ ಮೇಲೆ, ಒಂದು ಹಾಡುಕಟ್ಟಿ ಹೇಳಬೇಕು. ಯಾಕೆ ಆಗಬಾರದು?"

"ಏ ಮಹಾರಾಯಿತಿ! ನಿನ್ನ ಹತ್ತಿರ ಮಾತಾಡಿದರೆ, ಗಾಳಿಗೆ ಕೊಟ್ಟ ಕಸ್ತೂರಿ ವ್ಯಾಪಾರ! ಅಮ್ಮನ ಮುಂದೆಲ್ಲ ಇದನ್ನು ಹೇಳಬೇಡ! ಕಡೆಗೆ ಕಪ್ಪು ಗಂಡನೆಂದು ಹೇಳಿದರೆ, ಅಕ್ಕನಿಗೆ ದುಃಖವೂ ಆದೀತು!"

ಅಲ್ಲಿಗೆ ಅವರ ಮಾತು ಮುಗಿಯಿತು. ಅವರಲ್ಲಿ ತಾತ್ಕಾಲಿಕ ಸಂಧಾನವೂ ಆಯಿತು. ಆದರೆ ರುಕ್ಮಿಣಿಗೆ ಆತುರ. ಮದುವಣಿಗನು ನಿಜಕ್ಕೂ ಕರಿಯನೋ ಎಂದು ತಿಳಿಯಲು ಅವಳು ಅತ್ತಿಗೆಯೊಡನೆ ಮಾತನಾಡುವಾಗ-ಅತ್ತಿಗೆ, ಅಳಿಯ ಹೇಗಿದ್ದಾನೆ, ನೋಡಲು-ಕಪ್ಪೋ ಬಿಳಿಯೋ?" ಎಂದು ಕೇಳಿದಳು.

"ಮಾಣಿಯನ್ನು ನಾನು ನೋಡಿದ್ದೇನೆಯೇ? ಅವರೇ ಅಂದರು 'ಎಣ್ಣೆಗಪ್ಪು! ನೋಡಲಿಕ್ಕೆ ಒಳ್ಳೆ ಲಕ್ಷಣವಾಗಿದ್ದಾನೆ' ಎಂದು. ಅವರು ಮುನ್ನೂರು ರೂಪಾಯಿ ಚಿನ್ನ ಹಾಕುತ್ತಾರಂತೆ. ಉಣ್ಣಲಿಕ್ಕೆ ಉಡಲಿಕ್ಕೆ ಇದ್ದರೆ ಆಯಿತಲ್ಲ. ಕರಿ ಗಂಡನಾದರೇನು? ಬಿಳಿ ಗಂಡನಾದರೇನು? ನಿನ್ನ ಅದೃಷ್ಟಕ್ಕೆ ಒಂದು ಬಿಳಿ ಮಾಣಿ ಸಿಕ್ಕಿದಂತೆ, ಎಲ್ಲರಿಗೂ ಸಿಕ್ಕೀತೇ? ಹಾಗೆ ಸಿಕ್ಕಿದರೆ, ಊರಲ್ಲಿರುವ ಕರಿ ಗಂಡುಗಳಿಗೆ ಲಗ್ನವೇ ಆಗಬೇಡವೇ?"

"ಅವಕ್ಕೆ ಕರಿಯ ಹೆಣ್ಣು ಕೊಡಬೇಕು."

ಸೀತೆ ನಕ್ಕಳು. "ರುಕ್ಮಿಣಿ, ಬಿಳಿಗಂಡನ ಹೆಂಡತಿಗೆ, ಕೊರಳಲ್ಲಿ ಕರಿಮಣಿ ಯಾಕೆ ಹೇಳು? ಅದೂ ಬಿಳಿಮಣಿ ಇರಬೇಡವೆ?" ಎಂದು ಅವಳ ಕವುಳನ್ನು ಚಿವುಟಿ, ಒಳಕ್ಕೆ ಹೋದಳು.

ಅಚ್ಯುತ ಕಡಬದಿಂದ ಬರುವ ತನಕ, ಅವರ ಯಾವತ್ತು ಪ್ರಮಾಣದ ನಿರ್ಧಾರವೂ ಮುಂದುವರಿಯದೇ ನಿಂತಿತ್ತು. ಅವನು ಕಡಬಕ್ಕೆ ಹೋದುದು ಎರಡು ಕಾರಣಗಳಿಂದ: ತಾನು ಕೇಳಿದ ವಾರ್ತೆಯನ್ನು ಕುರಿತು ನಾರಾಯಣರಾಯರೊಡನೆ ಚರ್ಚಿಸುವುದಕ್ಕೆಂದು.

ಇನ್ನೊಂದು ಕಾರಣವೆಂದರೆ, ಶೇಷಗೌಡ ತಮಗೆ ತಿಳಿಯದಂತೆ ಒಕ್ಕಲು ಹೊರಡುವುದಾದರೆ, ಅವನನ್ನು ತಡೆಯಲು ದಾರಿ ಹುಡುಕುವುದಕ್ಕೆ. ಆದರೆ ಅವನು ಹೋದ ಒಂದು ಕೆಲಸ ವ್ಯರ್ಥವಾಯಿತು. ಅವನಿಗೆ ನಾರಾಯಣರಾಯರನ್ನು ಸಂಧಿಸುವುದಾಗಲಿಲ್ಲ. ಅವರು ಆ ದಿನ ಪುತ್ತೂರಿಗೆ ಕಾರಣಾಂತರದಿಂದ ಹೋಗಿದ್ದರು. ಅವನು ಹೊರಟ ಬೇರೊಂದು ಕೆಲಸಕ್ಕೆ ಜಾನ್‌ಸನರ ಸಹಾಯವು ಬೇಕಿತ್ತು. "ನಾನು ಯಾವನಾದರೊಬ್ಬ ಗುರುತಿನ ಪೋಲಿಸನನ್ನು ಕರೆದುಕೊಂಡು ಬರುತ್ತೇನೆ"ಂದು ಅವರು ಅಭಯವಿತ್ತರು. ಇದರಿಂದ ಮರುದಿವಸ, ಆತ ಸ್ವಸ್ಥ ತನ್ನ ಊರಿಗೆ ಹಿಂತಿರುಗಿದನು. ಹಿಂತಿರುಗುವಾಗ ಬೆಳಗಿನ ಜಾವ ಹೊತ್ತುವಿೂರಿತ್ತು. ಅವನದು ನಿತ್ಯವೂ ಕಾಲು ನಡಿಗೆಯೇ! 'ಸೈಕಲು ಸವಾರಿ ಕಲಿಯಿರಿ' ಎಂದು ಜಾನ್‌ಸನರು ಅವನಿಗೆಷ್ಟು ಉಪದೇಶ ಮಾಡಿದ್ದರೂ, ಅದರಿಂದ ಎದೆಗೆ ಹಾಳು ಎಂಬ ಹಳೆಯ ನಂಬಿಕೆಯಿಂದ, ಅಚ್ಚುತ ಸೈಕಲಿನ ತಂಟೆಗೆ ಹೋಗಲಿಲ್ಲ.

ಮನೆ ಸವಿೂಪದ ದಾರಿಯಲ್ಲಿ ಅಚ್ಚುತ ಬರುತ್ತಿರಲು, ಎದುರಿಗೆ ಶೇಷಗೌಡನ ಹುಡುಗ ತಮ್ಮ ಮನೆಯ ಜಾನುವಾರುಗಳನ್ನು ಅಟ್ಟಿಕೊಂಡು ಹೋಗುವುದು ಕಂಡಿತು!

"ಎಲ್ಲಿಗೆ ಇದು ಮಗು?" ಎಂದು ಆತ ಕೇಳಿದ.

"ಇಲ್ಲಿಯೇ ಮೇಯಿಸಲು" ಎಂದು ಹುಡುಗನು ಉತ್ತರವಿತ್ತು, ಅವನ್ನು ಅಲ್ಲಿಯೇ ಮೇವಿಗಾಗಿ ಅಟ್ಟಿ, ಅಲೆದಾಡುವವನಂತೆ ನಟಿಸಿದನು. ಅವನ ಮನೆಯ ಜಾನುವಾರುಗಳಿಗೆ ಅಷ್ಟು ದೂರ ಮೇವಿಗೆ ಬರುವ ಅವಶ್ಯಕತೆ ಇರಲಿಲ್ಲ. ಹೀಗಾಗಿ, ಅಚ್ಚುತನಿಗೆ ಅನುಮಾನವಾಗಿ, ಆತ ಮನೆಯ ಕಡೆಗೆ ಹೋದನು. ಅಲ್ಲಿಂದ ದೂಮನಿಗೂ ಬೇರೊಂದು ಆಳಿಗೂ ಹೇಳಿಕಳುಹಿಸಿದನು. ಅವರನ್ನು, ಗೌಡನ ಜಾನುವಾರುಗಳನ್ನು ತಡೆಯಲು ಕಳುಹಿಸಿದನು. ದೂಮ, 'ಜಾನುವಾರು ಎಲ್ಲಿ?' ಎಂದು ಹುಡುಕುತ್ತಿರುವಾಗ, ಅವು ಬೊಗ್ಗಾಡಿಗೆ ಹೋಗುತ್ತಿರುವುದು ಕಂಡಿತು. "ಎಲ್ಲಿಗೆ?" ಎಂದು ಕೇಳಿದರೆ, ಶೇಷ ಗೌಡನ ಹುಡುಗನು "ಮೇಯಿಸಲಿಕ್ಕೆ" ಎಂದು ಸುಳ್ಳೇನೆ ಉತ್ತರವಿತ್ತ. ಆದರೆ ದೂಮಗೆ ಎಲ್ಲ ಸಂಗತಿ ತಿಳಿದೇ ಇತ್ತು. ಆತ ಬಲವಂತದಿಂದ ಆ ಹುಡುಗನ ಕೈ

ಯನ್ನು ಹಿಡಿದುಕೊಂಡ. ಅವನು ಹುಡುಗನನ್ನು ತಡೆದಾಗ, ಜತೆಯ ಆಳು ಮೆಲ್ಲನೆ ಜಾನುವಾರುಗಳನ್ನು ಹಿಂದಕ್ಕೆ ಅಟ್ಟಿಕೊಂಡು ಬಂದನು. ಮಧ್ಯಾಹ್ನ ಹೊತ್ತು ನೆತ್ತಿಗೇರುವಾಗ, ಜಾನುವಾರುಗಳನ್ನು ತಮ್ಮ ಧನಿಗಳ ಮನೆಯ ಹಟ್ಟಿಯೊಳಗೆ ಹೊಗಿಸಿದ್ದಾಯಿತು. ಇನ್ನು ಆ ಗೌಡನ ಹುಡುಗನ ಯೋಚನೆ ಬಲವಾಯಿತು—ಧನಿಯರಿಗೆ. ಹುಡುಗನನ್ನು ಅವನ ಮನೆಗೆ ಹೋಗಬಿಟ್ಟರೆ ಎಲ್ಲ ಕೆಲಸ ಕೆಟ್ಟೀತೆಂದು ತಿಳಿದು, ಬಲವಂತದಿಂದ ತಮ್ಮ ಮನೆಯ ಕೊಟ್ಟಿಗೆಯಲ್ಲೇ ಅವನನ್ನು ನಿಲ್ಲಿಸಿ, ಊಟ ಹಾಕಿ, ಕಾವಲಿರಿಸಿದರು. ಆ ಹುಡುಗ ಚಿಕ್ಕವ. ಹನ್ನೆರಡು ಹದಿನಾಲ್ಕು ವಯಸ್ಸು ಕೂಡ ಆಗಿರಲಿಕ್ಕಿಲ್ಲ. ಇವರ ಬೆದರಿಕೆಗೆ ಅಂಜಿ, ಆತ ಅಳುತ್ತ ಕುಳಿತ. ಅವನು ಮನೆಗೆ ಹೋಗುವೆನೆಂದು ಎಷ್ಟು ಹಟ ಮಾಡಿದರೂ ಅವನನ್ನು ಬಿಡಲಿಲ್ಲ. ಆತನನ್ನು ಬೆದರಿಸಿ, ಸುಮ್ಮನೆ ಕುಳ್ಳಿರಿಸಬೇಕಾಯಿತು.

ಅಚ್ಯುತನ ಕಣ್ಣಿಗೆ ಅಕ್ಕ ಬಂದದ್ದೂ, ಕಾಣಿಸಿತು; ಬಂದ ಕಾರಣವೂ ಗೊತ್ತಾಯಿತು.. ಆದರೆ ಈಗ ಅವನ ಮನಸ್ಸೆಲ್ಲ ತನ್ನ ಸಾಹಸ ಕಾರ್ಯದಲ್ಲೇ ಲೀನವಾಗಿತ್ತು. ಅವನು ನಾಲ್ಕಾರು ಮಂದಿಯ ಬೆಂಬಲಗಳಿಸಲು, ಪರಿಚಿತ ಗೆಳೆಯರಲ್ಲಿಗೂ ಆಳು ಮನೆಗಳಿಗೂ ಓಡಾಡಬೇಕಾಯಿತು. ಸಂಜೆಯೊಳಗೆ, ಗೌಡನಿಗೆ ಉರುಳೊಡ್ಡುವ ಅವನ ಏರ್ಪಾಟುಗಳೆಲ್ಲ ಮುಗಿದವು. ಕಡಬದಿಂದ ಜಾನ್ಸನರು ತಮ್ಮ ಗುರುತಿನ ಪೋಲಿಸಿನವನೊಬ್ಬನನ್ನು ಕರೆದುತಂದರು. ಅವರಿಗೆ, ಗೌಡ ಜಾನುವಾರುಗಳನ್ನು ತನಗೆ ತಿಳಿಸದೆ ಅಟ್ಟಿಕೊಂಡು ಹೋಗುತಿದ್ದ ಸಂಗತಿಯನ್ನು ತಿಳಿಸಿಯಾಯಿತು. ಹುಡುಗನನ್ನು ತಡೆದು ನಿಲ್ಲಿಸಿಕೊಂಡ ವಿಚಾರವನ್ನೂ ತಿಳಿಸಿದ್ದಾಯಿತು, "ಒಳ್ಳೆಯ ಕೆಲಸಮಾಡಿದಿರಿ. ನೀವು ಹುಡುಗನನ್ನು ಬಿಟ್ಟಿದ್ದರೆ, ಸಂಗತಿ ಹೈಲಾಗುತಿತ್ತು. ಆದರೆ ಜಾನುವಾರನ್ನು ಹಿಂದೆ ಅಟ್ಟಿತಂದ ಸಂಗತಿ ಶೇಷಗೌಡನಿಗೆ ಇನ್ನೂ ತಿಳಿಯದಲ್ಲ" ಎಂದು ಖಾತ್ರಿ ಪಡಿಸಿಕೊಂಡರು. ಗೌಡನ ಮಗನಿಗೆ ಅಲ್ಲೇನೆ ಸೆರೆಮನೆಯಾಗಿತ್ತು! ಇಷ್ಟೆಲ್ಲ ಮಾಡುವಾಗ ಅಚ್ಯುತನ ಮನಸ್ಸಿನಲ್ಲಿ ಭೀತಿಯೂ ಕುಣಿಯುತಿತ್ತು! ಶೇಷಗೌಡ ರೇಗಿ, ದೊಂಬಿ, ರಂಬಾಟ ಮಾಡಿದರೆ-ಎಂಬ ಹೆದರಿಕೆ. ಈ ಎಲ್ಲ ಸಹಾಯಕರನ್ನು ಕಂಡು ಅವ

ನಿಗೆ ಧೈರ್ಯ.

ಕತ್ತಲಾಯಿತು. ಅವರೆಲ್ಲರೂ ಊಟಮಾಡಿ ಮನೆಯಲ್ಲೇ ಕುಳಿತರು. ಜಾನ್‌ಸನರ ಎದುರಿಗೆ ಅಚ್ಯುತ, ಉಲ್ಲಾಸದಿಂದ ತನ್ನ ಸೊಸೆಯ ಲಗ್ನದ ವಿಚಾರ ಹೇಳುತ್ತಿದ್ದ, "ಏನಂಚ, ನನಗೆ ಈ ಸ್ಥಳಕ್ಕೆ ಬೇರೆ ಒಕ್ಕಲು ತಾರದೆ, ಮನೆ ಬಿಡದ ಹಾಗಾಯಿತಲ್ಲ"-ಎಂದೂ ಹೇಳಿಯಾಯಿತು. ರಾತ್ರಿ ಜಾವ ಹೊತ್ತಿಗೆ ಶೇಷಗೌಡನ ಮನೆಗೆ ಹೊಂಚು ಹಾಕಲು ಹೋದ ದೂಮ, ಅಲ್ಲಿಗೆ ಓಡಿ ಓಡಿ ಬಂದು, "ಅಯ್ಯ, ಮೈದುಕುಟ್ಟಿಯ ಗಾಡಿಯನ್ನು ತರಿಸಿಕೊಂಡಿದ್ದಾನೆ. ಅದರಲ್ಲಿ ಈಗಷ್ಟೆ ಮನೆ ಸಾಮಾನು ತುಂಬಿಸಿಯಾಯಿತು. ಏನೆಲ್ಲ ಇದೆ ಎಂದು ಕಾಣಿಸಲಿಲ್ಲ. ಆದರೆ ಗಾಡಿ, ಇನ್ನು ಬೇಗನೆ ಹೊರಟೀತೆಂದು ಕಾಣುತ್ತದೆ" ಎಂದು ಕಳ್ಳ ಗೌಡನ ಸುಳಿವನ್ನು ತಿಳಿಸಿದ.

ದೂಮ, ಇನ್ನಿಬ್ಬರು ಆಳುಗಳು, ಜಾನ್‌ಸನರು, ಅಚ್ಯುತ, ಪೋಲಿಸರು ಎಲ್ಲರೂ ಸಿದ್ಧರಾದರು. "ಧೈರ್ಯಕ್ಕೆ" ಎಂದು ಕೈಯಲ್ಲೊಂದೊಂದು ದೊಣ್ಣೆಯನ್ನು ಹಿಡಿದುಕೊಂಡು ಹೊರಟರು. ಲಕ್ಷ್ಮಮ್ಮನಿಗೆ ಇವರ ಈ ಬಂಟತನ ಕಂಡು, ಒಳಗಿನ ಜೀವ ಹಾರಿತು. "ಓ ಕಡಬದ ಮಾಸ್ತರರೇ, ಹಾಗೇನಾದರೂ ಹೊಡೆತ ಬಡಿತ, ಆಗುವಂತಿದ್ದರೆ ಹಿಂದಕ್ಕೆ ಬಂದುಬಿಡಿ. ಹತ್ತು ಮುಡಿ ಅಕ್ಕಿಯ ಆಸೆಗೆ ಯಾರ ಪ್ರಾಣವೂ ಹೋಗದೆ!" ಎಂದು ಎಚ್ಚರಿಸಿ ಕಳುಹಿದಳು. ಅಚ್ಯುತನೊಡನೆ "ಮಾಣಿ, ತೀರ ಮುಂದೆ ಬೀಳಬೇಡ ಮಗ" ಎಂದಳು.

ಅಚ್ಯುತನಿಗೆ-"ಹಾಗಾದೀತೆ? ಶೇಷ ತಮ್ಮನ್ನು ಇರಿಸಿಯಾನೇ?" ಎಂಬ ಶಂಕೆ. ಜಾನ್‌ಸನರು, ಬಳಿಯಲ್ಲಿ ಪೋಲಿಸಿನವನು ಬೆಂಬಲಕ್ಕಿರುವಾಗ ಅಂಜುವವರೇ! "ಅಮ್ಮ, ನೀವು ಇಲ್ಲೇ ಕೂತಿರಿ!-ಗೌಡನ ದಮ್ಮು ನಿಲ್ಲಿಸಿ, ಕೆಲಸ ಮಾಡಿದರಾಯಿತಲ್ಲ; ಇಷ್ಟು ಜನರನ್ನು ಕಂಡೇ ಅವನು ಓಡಬೇಕು" ಎಂದರು. ಎಲ್ಲರೂ ಮಾತಿಲ್ಲದೆ ಅಲ್ಲಿಂದ ಹೊರಟರು. ಬೊಗ್ಗಾಡಿಯ ಗಾಡಿ 'ರೋಟಿ'ಗೆ ಹೋಗಿ, ಅಲ್ಲಿ ಮರಗಳ ಮರೆಯಲ್ಲಿ ಅಡಗಿಕೊಂಡರು. ಆ ದಿನ ಚಂದ್ರೋದಯಕ್ಕೆ ಇನ್ನೂ ನಾಲ್ಕು ಗಳಿಗೆ ಹೊತ್ತಿತ್ತು. "ಹೂಂ, ದರಿದ್ರ ಕೆಲಸ ಇದು! ಎಷ್ಟು ಹೊತ್ತಿಗೆ ಬರುತ್ತದೋ ಅವನ ಗಾಡಿ" ಎಂದು ಯೋಚಿಸುವಾಗಲೇ — ಬಿಜು

ಬಿಗಿತದ ಕೂಗು, ಕಡಾಣಿಗಳ ಗಣಗಣ, ಎತ್ತಿನ ಘಂಟೆಗಳ ಧನಿಗಳು ಮೇಳವಿಸಿ ಬಂದುವು. "ಆ ಕಡೆಯಿಂದ ಬರುವ ಸದ್ದು-ಅವನ ಗಾಡಿ ಯದೇ ನಿಜ!" ಎಂದು ತೀರ್ಮಾನವಾಯಿತು. ಗಾಡಿಯು ತೀರ ಸಮಿ ಯಕ್ಕೆ ಬಂದಿತು. ಜತೆಗೆ ಇತರ ಜನರೂ ಇದ್ದರು. ಅಂದರೆ ಗೌಡನ ಮನೆಯವರು ಗಾಡಿಯ ಹಿಂದೆ ನಡೆದು ಬರುತ್ತಿದ್ದರು. ಗಾಡಿಯು ನೊಗವೇರಿದವ ಮೈದುಕುಟ್ಟಿ.

ಜಾನ್ಸನರು ತಮ್ಮ ಶಿಕಾರಿ ದೀವಿಗೆಯ ಬೆಳಕನ್ನು ಗಾಡಿಯು ವನ ಮುಖಕ್ಕೆ ಹಾಯಿಸಲು, ಮೂಕಿಯ ಮೇಲೆ ಕುಳಿತವನು ಮೈದು ಕುಟ್ಟಿ ಎಂಬುದು ಖಾತ್ರಿಯಾಯಿತು! ಗಾಡಿಯ ವೇಗ ಹೆಚ್ಚಿತು, ಬೆಳ ಕನ್ನು ಗಾಡಿಯ ಹಿಂದಕ್ಕೂ ಮುಂದಕ್ಕೂ ಹಿಡಿಯಲು, ಮನೆಯ ಮೂವರು ಹೆಂಗಸರೂ, ಶೇಷಗೌಡನೂ ಇದ್ದುದು ಕಾಣಿಸಿತು. 'ಇವ ರಿಗೆ ಹೆದರಬೇಕೇ!' ಎಂದುಕೊಂಡು ಎಲ್ಲರೂ ಗಾಡಿಯ ಸಮೀಪಕ್ಕೆ ಹೋದರು. ದೂಮ ಎದುರಿಂದ ಗಾಡಿಯನ್ನು ತರುಬಿ ಹಿಡಿದನು. ಹೆಂಗ ಸರು 'ಅಯ್ಯೋ' ಎಂದು ಗಾಬರಿಯಿಂದ ಕಿರುಚಿಕೊಂಡರು. ಶೇಷ ಗೌಡ,ಕುಪಿತನಾಗಿ ಕೈಯ್ಯ ದೊಣ್ಣೆ ಬೀಸಿದನು. ತುಂಬ ಗದ್ದಲವೇನೋ ಆಯಿತು. ಗಾಡಿ ಲಾಂದ್ರದ ಬೆಳಕು, ಪೋಲಿಸಿನವನ ಮೋರೆಯ ಮೇಲೆ ಬೀಳಲು, 'ಪೋಲೀಸರು' ಎಂದು ಅಂಜಿಯೇ ಗೌಡನ ಎದೆ ಜುಮ್ ಆಯಿತು! ಎಲ್ಲ ಎರಡು ಕ್ಷಣಗಳ ಘಟನೆ! ಗೌಡನೂ ಅವನ ಪರಿವಾರವೂ ಕಂಗಾಲಾಗಿ, ಇವರ ಕೈಗೆ ಸಿಕ್ಕಿದರು. ಮನೆಯೊಡವೆ ಗಳನ್ನು ಬಿಟ್ಟೋಡುವುದಕ್ಕೆ ಮನಸ್ಸು ಬರುವಂತಿಲ್ಲ. ಅನಂತರದ ಕೆಲಸ ವೆಂದರೆ ಗಾಡಿಯ ತನಿಖೆ! ಬೆಟರಿ ದೀಪ ಹಿಡಿದು, ಅದರ ಒಳಗೇನಿದೆ ಯೆಂದು ಹುಡುಕಿದರು. ಒಳಕ್ಕೆ ನಾಲ್ಕೆಂಟು ಮುಡಿ ಅಕ್ಕಿಗಳು ಇವೆ ಯೆಂಬುದು ಸ್ಪಷ್ಟವಾಯಿತು. ಮೈದುಕುಟ್ಟಿಯನ್ನು ಗದರಿಸಿ, ಅವನ ಗಾಡಿಯನ್ನು ಪರಿವಾರ ಸಹಿತವಾಗಿ ತಮ್ಮ ಮನೆಗೆ ಹೊಡೆಯಿಸಿದರು. ಅವರ ಮನೆಯಂಗಳದಲ್ಲಿ ಗಾಡಿಯಿಂದ ಸಾಮಾನುಗಳನ್ನು ಇಳಿಸಿ ದ್ದಾಯಿತು. ಹತ್ತು ಮುಡಿ ಅಕ್ಕಿಯಷ್ಟು ಇತ್ತು! ಮೇಲೆ ಒಂದೆರಡು ಚೀಲ ಬೇಸಾಯಕ್ಕಿರಿಸಿದ ಬತ್ತವಿತ್ತು. ಅದೆಲ್ಲವನ್ನು ಅವರಿಂದಲೇ ಹೊರಿಸಿ, ತಮ್ಮ ಮನೆಗೆ ಹಾಕಿಸಿಕೊಂಡರು. ಆ ರಾತ್ರಿಯೇ ಶೇಷ

ಗೌಡನಿಂದ ಗೇಣಿ ವಸೂಲಿ ಬಂದ ಬಗ್ಗೆ, ರಶೀದಿಯನ್ನು ಬರೆದರು. ಜಾನ್‌ಸನರ ಸಾಕ್ಷಿ ಬೇರೆ ಅದಕ್ಕೆ! ಅನಂತರ ನಿದ್ದೆಹೋಗಿದ್ದ ಗೌಡನ ಮಗನನ್ನು ಎಚ್ಚರಿಸಿ ತಂದು, ಅವನ ವಶಕ್ಕೆ ಕೊಟ್ಟು "ಇಗೋ, ಸುದ್ದಿಯಿಲ್ಲದೆ ಮನೆಯ ಗಂಟಿಯನ್ನು ಸಾಗಿಸುತ್ತಿದ್ದ ನಿನ್ನ ಮಗ. ನಿನ್ನ ಜಾನುವಾರು ಹಿಂದೆ ಹಟ್ಟಿಯಲ್ಲಿವೆ. ಬೆಳಗ್ಗೆ ಅವನ್ನು ಬಿಡಿಸಿಕೊಂಡು ಹೋಗಬಹುದು. ನಿನ್ನದು ಇನ್ನೂ ಮೂರು ಮುಡಿ ಗೇಣಿ ಬಾಕಿಯಾಗುತ್ತದೆ. ಅದನ್ನು ಸಲಿಸಿ, ಜಾನುವಾರು ಬಿಡಿಸಿಕೊಂಡು ಹೋಗು" ಎಂದರು.

ಶೇಷಗೌಡನಿಗೆ ಉಸಿರೇ ಹೊರಡಲಿಲ್ಲ. ಉಳಿದ ವೇಳೆಯಾಗಿದ್ದರೆ ಎಷ್ಟೆಲ್ಲ ಅಬ್ಬರ ಮಾಡುತ್ತಿದ್ದನೋ! ಆದರೆ ಪೋಲಿಸರು ಕಣ್ಮುಂದಿರುವಾಗ ಸಂಭಾವಿತನಾಗಿರುವುದೇ ಒಳಿತೆಂದುಕೊಂಡ. ಆತನಿಗೆ ಯೋಚನೆ ಹರಿಯದೆ, "ನಿಮ್ಮದು ಇನ್ನೂ ಮೂರು ಮುಡಿ ಬಾಕಿಯೇ! ಆಗಲಿ, ಅಷ್ಟಕ್ಕೆ ನನ್ನ ಒಂದು ಕಾಲುನಡೆ(ಜಾನುವಾರು)ಯನ್ನು ಇರಿಸಿಕೊಂಡು, ನನ್ನ ಉಳಿದ ಜಾನುವಾರುಗಳನ್ನು ಬಿಟ್ಟುಕೊಡಿ" ಎಂದನು. ಉಳಿದ ಜಾನುವಾರುಗಳನ್ನು ಹೊಡೆದುಕೊಂಡು, ಆತ ಕತ್ತಲೆಯಲ್ಲೇ ಇನ್ನಷ್ಟು ಕರಿದಾದ ಮುಖ ಮಾಡಿಕೊಂಡು, ಸೋಲಿನ ದಿಬ್ಬಣ ಸಹಿತವಾಗಿ ಅಲ್ಲಿಂದ ಹೊರಟುಬಿಟ್ಟ; ಬೆಳಗಿನ ತನಕ ಅವನು ಅಲ್ಲಿ ಕಾದಾನೆಯೇ? ಅಚ್ಯುತ ಮಾಸ್ತರರು ಈ ತನಕ ಮೈದುಕುಟ್ಟಿಗೆ ಏನೂ ಅಂದಿರಲಿಲ್ಲ. ಈಗ ಮಾತ್ರ, "ಮೈದು; ಬೇಕು ನಿನ್ನಂಥವರು ಊರಲ್ಲಿ!" ಎಂದನು.

ಮೈದು-ಅದಕ್ಕೆ "ಶೇಷಗೌಡನಂತೆ ನಾನು ಕುರಿಯಲ್ಲ! ಯಾಕೆ? ನೀವಿರುವ ಊರಲ್ಲಿ, ಯಾರಾದರೂ ಬಾಡಿಗೆಗೆ ನನ್ನಗಾಡಿಯನ್ನು ಕೇಳಿದರೆ ನಾನು ಕೊಡಬಾರದೇನು?" ಎಂದ. ಮತ್ತೂ ಮಾತಾಡುತ್ತಿದ್ದರೆ, ಅವನೊಡನೆ ಜಗಳ ಕಾಯಬೇಕಿತ್ತು. ಅವರಿಗೂ ವೇಳೆಯಾಯಿತು.

ಅವರು ಹೊರಟುಹೋದರು. ತಮ್ಮ ಒಂದು ಕೆಲಸ ಸುಗಮವಾಯಿತೆಂದು ಅಚ್ಯುತನೂ ಲಕ್ಷ್ಮಮ್ಮನೂ ತಿಳಿದರು. ಆದರೆ ತಿರುಗಿ ಬೇರೆಂದು ಯೋಚನೆ ಅವರಿಗೆ ಉಂಟಾಯಿತು. "ಅವನು ಹೋಗುವುದು ನಾಗರಾಜನ ಭೂಮಿಗೇ" ಎಂದಿದ್ದಾನೆ. ನಾವು ಈ ಅವನ ಒಕ್ಕ

ಲಾದ ಅಣ್ಣುಗೌಡನನ್ನು ಕರೆದುತಂದು ಬದಲಿಸಿದ ಹಾಗಾಯಿತಲ್ಲ” ಎಂದು ಅವರಿಗಾಗ ತೋರಿತು. ಅದರಿಂದ ನಾಗರಾಜನಿಂದ ಯಾವಾವ ತೊಡಕು, ತೊಂದರೆಗಳು ತಮಗೆ ಬಂದಾವೋ—ಎಂದು ಅವರಿಗೆ ಯೋಚನೆ. ಹಾಗೂ ಬಲು ಹೊತ್ತು ಮಾತನಾಡುತ್ತಿದ್ದು, ಅವರು ನಿದ್ದೆ ಹೋದರು. ಆ ದಿನದ ಮಟ್ಟಿಗೆ, ಹೆಂಗೆಳೆಯರ ಯೋಚನಾ ಸಭೆ ಬೇರೆ ಯಾಗಿಯೂ, ಗಂಡಸರದ್ದು ಬೇರೆಯಾಗಿಯೂ ನಡೆಯಿತಾದುದರಿಂದ, ಸೀತೆಯು ಮನೆಗೆ ಬಂದ ಕಾರ್ಯದ ತೀರ್ಮಾನ ಆಗಲೇ ಇಲ್ಲ.

ಬೆಳಕು ಹರಿಯುತ್ತಲೇ, ರಾತ್ರಿ ಸಹಾಯಕ್ಕೆ ಬಂದ ಪೋಲೀಸು ಹೊರಟುಹೋದನು. ಜಾನ್‌ಸನರೊಡನೆ ಅಚ್ಯುತನು, “ಇನ್ನೊಂದು ಕೆಲಸವನ್ನೂ ಮುಗಿಸುವ. ಅಣ್ಣುಗೌಡನ ಮೇಲೆ ನಾಗರಾಜನು ಸೇಡು ತೀರಿಸುವುದರೊಳಗೆ ಅವನನ್ನು ಅಲ್ಲಿಂದ ತರಬೇಕು” ಎಂದ. ಅವರಿಬ್ಬರೂ ಅವಸರ ಅವಸರವಾಗಿ ಬೊಗ್ಗಾಡಿಯನ್ನು ಸೇರಿ, ಅಣ್ಣು ವಿಗೆ ಯಾವತ್ತು ವಾರ್ತೆಗಳನ್ನು ತಿಳಿಸಿದರು. ಅಣ್ಣು ಎಲ್ಲ ಆಸೆಗಳನ್ನೂ ಆ ನೆಲದ ವಿಷಯದಲ್ಲಿ ಬಿಟ್ಟಿದ್ದ. ಜಾನುವಾರು, ನೇಗಿಲು, ನೊಗ ಬಿಟ್ಟರೆ -ಅವನಲ್ಲಿ ಬಹಳೊಂದು ಸಾಮುಗ್ರಿಗಳೂ ಇರಲಿಲ್ಲ. ಅವನ್ನೆಲ್ಲ ಹೇಗಾ ದರೂ ಸಾಗಿಸಿಕೊಂಡು ಆ ಸಂಜೆಗೇನೆ ಅವರ ಭೂಮಿಗೆ ಬರುತ್ತೇನೆಂದು ತಿಳಿಸಿದ. ಕೊನೆಗೆ ತಿಥಿ ವಾರಗಳನ್ನು ನೆನೆದು–“ಇವತ್ತು ಬೇಡ; ಭರಣಿ, ಕೃತ್ತಿಕೆ. ನಾಳೆ ಬೆಳಗ್ಗೆ, ಕಂಡಿತ ಬರುತ್ತೇನೆ. ನನಗೇನು ಹೆದರಿಕೆ! ಶೇಷನಂತೆ ನನಗೆ ಕಳ್ಳತನವಿಲ್ಲ! ನನ್ನ ಕೃತ, ಅವರ ಬಾಕಿಗಿಂತ ಹೆಚ್ಚಾ ದೀತು. ಈ ಗುಡಿಸಲು, ಇಷ್ಟೆಲ್ಲ ತೆಂಗು, ಹಲಸಿನ ಮರಗಳನ್ನು ಬೆಳೆ ಯಿಸಿದವನೇ ನಾನು. ನನಗೇನಿದೆ ಈಗ? ನಿಮ್ಮ ಹಿರಿಯರು ಇದ್ದಾಗ ‘ನೀನೆಲ್ಲ ಮಾಡು, ಒಂದು ದಿನ ಮೂಲಗೇಣಿಗೆ ಈ ಭೂಮಿ ಕೊಡುವು ದಾದರೂ ಕೊಡುವ’ ಎಂದಿದ್ದರು. ಅವರೇ ಹೋಗಿಬಿಟ್ಟರು. ಆಗಲೇ ಭೂಮಿಯನ್ನು ಯಾರ್ಯಾರಿಗೋ ಭೋಗ್ಯಮಾಡಿಬಿಟ್ಟರು. ಆಯಿತು, ಮುಗಿಯಿತು ಇಲ್ಲಿನ ನೀರಿನ ಋಣ” ಎಂದು ಅಚ್ಯುತನೊಡನೆ ವಿಲಾಪಿ ಸಿದನು.

ಅಚ್ಯುತನಿಗೆ ಅವನು ಬರುವ ವಿಷಯದಲ್ಲಿ ಅಷ್ಟು ಧೈರ್ಯವಾಗ ಲಿಲ್ಲ. .ಅವನೇನೋ ಹೊರಟಾನು; ಆದರೆ ಅಣ್ಣುಗೌಡ ಹೀಗೇನೆ

ಹೊರಟರೆ ನಾಗರಾಜ ಬಿಟ್ಟಾನೆಯೇ? ತಾವು ಶೇಷಗೌಡನಿಗೆ ಮಾಡಿದ ಗತಿಯೇ ಅವನಿಗೂ ಪ್ರಾಪ್ತಿಸಿದರೆ' ಎಂಬ ಅಂಜಿಕೆ! ಆದರೆ ಮರುದಿನ ಜಾವ ಹೊತ್ತಿಗೆ ತನ್ನ ವಚನದಂತೆ ಅಣ್ಣು ಪರಿವಾರ ಸಮೇತವಾಗಿ ಬಂದ. ಜೊಗ್ಗಾಡಿ ಬಯಲಿನ ಕೆಲವರು ಅವನನ್ನು ಬೀಳ್ಕೊಡಲು ಬಂದಿದ್ದರು. "ಅಣ್ಣು-ಈವತ್ತು ನೀನು; ನಾಳೆ ನಾವು. ಅವರು ಹೀಗೆಯೇ ವರ್ಷವರ್ಷವೂ ಗೇಣಿ ಏರಿಸಿದರೆ ನಮಗೂ ಇಲ್ಲಿದ್ದು ಪೂರೈಸದು" ಎಂದು ಹೇಳಿ, ವ್ಯಥೆಗೆ ಪುಷ್ಟಿಕೊಟ್ಟು ಹೊರಟರು. ಅಣ್ಣು ಶೇಷನ ಸ್ಥಾನದಲ್ಲಿ ಅಚ್ಯುತನ ಒಕ್ಕಲಾಗಿ ಸ್ಥಾಪಿತನಾದ. ಅವನು, ಸುಬ್ಬಿ, ಮನೆಯ ಸಲುವಾಗಿಯಾಗಲೀ, ಕಟ್ಟಿಗೆ ಮತ್ತೊಂದುಗಳ ಸಲುವಾಗಿಯಾಗಲೀ ಚಿಂತಿಸಲೇ ಬೇಕಾಗಿರಲಿಲ್ಲ. ಅಚ್ಯುತ ಅವನಿಗೆ ಗೇಣಿಗೆ ಕೊಡುವ ಜಾಗವನ್ನು ತೋರಿಸಿ, ಅವನಿಂದ ಗೇಣಿಚೀಟನ್ನು ಮಾಡಿಸಿಕೊಂಡ. ಅಲ್ಲಿನ ಗದ್ದೆಗಳನ್ನು ನೋಡಿ, ಅಣ್ಣುವಿಗೂ ತೃಪ್ತಿಯಾಯಿತು, --"ಇಲ್ಲಿ ಗೇಣಿ ಹುಟ್ಟದೆ ಮತ್ತೆಲ್ಲಿ ಹುಟ್ಟಬೇಕು" ಎಂದು ಆತ ಧೈರ್ಯ ತಾಳಿದ. ಆತನ ಉಳಿದೊಂದು, ಕಳವಳವೆಂದರೆ ಮೊಮ್ಮಗಳಿಗೆ ಗಂಡನನ್ನು ಹುಡುಕುವ ಕೆಲಸ! 'ಅದನ್ನು ಮಾತ್ರ ದೇವರೇ ನಡೆಯಿಸಬೇಕು' ಎಂದುಕೊಂಡ.

ಇನ್ನೀಗ ಅಚ್ಯುತನಿಗೆ ಬಿಡುವಾಯಿತು. ಸೀತೆಯು ಅವನೊಡನೆ ಮಾತನಾಡಿಕೊಂಡು, ಅಂದೇ ಹೊರಡಲು ನಿಂತಳು. "ಹೂಂ, ಹಾಗಾದರೆ ಅಕ್ಕ, ನೀನು ರುಕ್ಮಿಣಿಯನ್ನು ಈಗಲೇ ಕರದುಕೊಂಡು ಹೋಗು. ಅಮ್ಮನೂ ಹೋಗಲಿ, ನಾನು ಒಂದೆರಡು ದಿನ ನಿಂತು ಬರುತ್ತೇನೆ, ನಾರಾಯಣ ಮಾಸ್ತರರಲ್ಲಿ ಸ್ವಲ್ಪ ಕೆಲಸವಿದೆ; ಅದನ್ನು ಮುಗಿಸಿಕೊಂಡು ಬರುತ್ತೇನೆ" ಎಂದ. ಹಾಗಂದರೆ ರುಕ್ಮಿಣಿಗೆ ಸಮಾಧಾನವಾಗಬೇಕೇ! "ನೀವೂ ಬನ್ನಿ, ಹೇಗೂ ರಜೆಯಿದೆ. ನಾರಾಯಣ ಮಾಸ್ತರರು ಮದುವೆಗೆ ಬರಬೇಡವೆ? ನೀವು ಅವರಿಗೂ ಹೇಳಿಕೆ ಮಾಡಿ ಇವತ್ತೇ ಬನ್ನಿ" -ಎಂದು ಬಲವಂತಪಡಿಸಿದಳು. ಅಕ್ಕನ ಒತ್ತಾಯಕ್ಕಿಂತ, ರುಕ್ಮಿಣಿಯ ಬಲವಂತಕ್ಕೆ ಅಚ್ಯುತ ಕಡಬಕ್ಕೆ ಹೊರಡುವೆನೆಂದ. ಮೊಮ್ಮಗಳ ಮದುವೆಯೆಂದು ಲಕ್ಷ್ಮಮ್ಮನೂ ಹೊರಟಳು. ಸೀತೆ ಬಂದ ಕೆಲಸವಾಯಿತು.

ಮನೆಯ ಕಾವಲಿಗೆಂದು ದೂಮನ ನೇಮಕವಾಯಿತು. ಜತೆಗೆ

ಇನ್ನೊಬ್ಬ ಆಳಿಗೂ ಹೇಳಿಹೋದರು. "ಏನಾದರೂ ಹೆಚ್ಚು ಕಡಮೆಯಾದರೆ, ಯಾರಾದರೂ ಬಂದು ಹೆದರಿಸಿದರೆ, ಪಂಜಕ್ಕೆ ಓಡಿಬಂದು ತಿಳಿಸಬೇಕು"-ಎಂದು ತಾಕೀತು ಮಾಡಿ ಇವರು ಹೊರಟರು. ತಾವೆಲ್ಲ ಒಟ್ಟಿಗೇನೆ ಪಂಜಕ್ಕೆ ಹೋಗಿಬಿಡುವುದು; ಅನಂತರ ಅಚ್ಯುತ ಒಂದು ದಿವಸದ ಮಟ್ಟಿಗೆ, ನಾರಾಯಣ ಮಾಸ್ತರರನ್ನು ಕಾಣಲು, ಕಡಬಕ್ಕೆ ಬರುವುದೆ"ಂಬ ತೀರ್ಮಾನವಾಯಿತು. ಈಗಾಗಲೇ ಸೀತೆ ಬಂದು ಮೂರು ದಿನವಾಗಿತ್ತು. ಅವಳ ಮನಸ್ಸು ಏನೇನೋ ಹಲುಬುತ್ತಿತ್ತು. ಆದುದರಿಂದ ಅವರು ಸಂಜೆಗೇನೇ ಹೊರಟು, 'ದೂರ, ದೂರ' ಎಂದು ಕಾಡಿನ ಹಾದಿಯನ್ನು ಶಪಿಸಿಕೊಂಡು,ಒಳದಾರಿ ಹಿಡಿದು ಪಂಜಕ್ಕೆ ಸಾಗಿದರು. ಅವರು ಮನೆಯನ್ನು ಸೇರುವಾಗ--ಅಂಗಳವನ್ನು ಸಾರಿಸಿ ಮಾಡಿದ ನೆಲ, ಹೊದೆಯಿಸಿದ ಚಪ್ಪರಗಳೆರಡೂ ವಿರಾಜಮಾನವಾಗಿದ್ದುವು. ನರಸಿಂಹಯ್ಯನವರು ಪ್ರಸನ್ನವದನರಾಗಿ "ಬಂದಿರಾ ಅತ್ತೆ,ಬಂದೆಯಾ ಭಾವ, ಬಂದೆಯಾ ರುಕ್ಮಿಣಿ" ಎಂದು ಉಪಚರಿಸಿದರು. "ಬಂದೆಯಾ ಭಾವ"ಎಂಬ ಮಾತು,ಅಚ್ಯುತನಿಗೆ ಭಾರಿ ಒಂದು ಕೊಪ್ಪರಿಗೆ ಕೈಮೇಲೆ ಬಿದ್ದಂತೆ ಆಯಿತು.

ಆ ಸುಖದ ದಿನಗಳು ಹಕ್ಕಿಗಿಂತ ವೇಗವಾಗಿ, ಗಾಳಿಗಿಂತಲೂ ಹಗುರವಾಗಿ ಹಾರಿಹೋದುವು. ರುಕ್ಮಿಣಿಯೂ ಲಕ್ಷ್ಮಮ್ಮನೂ ಹೋಗಗಳಿಗೆಯಿಂದ ಮನೆಗೆಲಸಗಳಲ್ಲಿ ಬೆರೆತರು. ಹಪ್ಪಳ, ಸಂಡಿಗೆ, ಆರತಿ, ಅಕ್ಷತೆಗಳೆಂದು ಒಂದೊಂದಾಗಿ ಬೇಕಾದ ಸಲಕರಣೆಗಳನ್ನು, ಸ್ಮರಿಸಿ ಮಾಡಿದರು. ಆ ಮನೆಯಲ್ಲಿ ರುಕ್ಮಿಣಿ ನಗುನಗುತ್ತ ಓಡಾಡುತ್ತಿದ್ದ ರೀತಿಯನ್ನು ಕಂಡು,ಲಕ್ಷ್ಮಮ್ಮನಿಗೆ ಬಹಳ ಆಶ್ಚರ್ಯವೆನಿಸಿತು. ಅವಳು ಸೀತೆಯನ್ನು ಕಂಡು "ಮಗು, ರುಕ್ಮಿಣಿಗೆ ಕೆಲಸವೆಂದರೆ ಇಷ್ಟು ಖುಶಿಯೇ? ಅವಳು ನಮ್ಮ ಮನೆಯಲ್ಲಿರುವಾಗ ಇಷ್ಟು ಮಾತೂ ಇಲ್ಲ, ಉಲ್ಲಾಸವೂ ಇಲ್ಲ" ಎಂದಳು.

"ಅಮ್ಮ, ಅವಳಿಗೆ ಯಾರ ಹತ್ತಿರವಾದರೂ ಸರಿಯೆ, ಬಾಯಿ ತುಂಬಾ ಮಾತನಾಡಬೇಕು. ಅವಳಿಗೆ ಕೆಲಸದ ಲಕ್ಷ್ಯವೇ ಇಲ್ಲ; ಎಷ್ಟಿದ್ದರೂ ಮಾಡುತ್ತಾಳೆ. ಅಲ್ಲಿ ನಿನ್ನ ಹತ್ತಿರ ಮಾತನಾಡಲು ಹೆದರಿಕೆಯಾಗುತ್ತಿರಬೇಕು. ಅಚ್ಯುತ ಶಾಲೆ ದೆಸೆಯಿಂದ ಹಗಲೆಲ್ಲ ಊರಹೊರಗಾ

ಯಿತು; ಇವಳೊಬ್ಬಳಿಗೆ ಬೇಸರವಾಗುತ್ತಿತ್ತೋ ಏನೋ."

"ಅದೂ ಅಲ್ಲದೆ ಮಗು, ನಾನೂ ಒಂದು ಹೆಡ್ಡು ಕೆಲಸವನ್ನು ಮಾಡಿದ್ದೆ. ಮನೆಗೆ ಬಂದ ಹೊಸತರಲ್ಲಿ, ಅವಳು ಮಾಣಿಯ ಹತ್ತಿರ ದಿನವೆಲ್ಲ ಮಾತನಾಡುತ್ತಿದ್ದುದನ್ನು ಕಂಡು, 'ಮಗು, ಬಂದವರ ಮುಂದೆ ಹಾಗೆ ಮಾತನಾಡಬೇಡ. ನಮ್ಮ ಕಾಲದಲ್ಲಿ ಇದೆಲ್ಲ ಇದ್ದಿರಲಿಲ್ಲ' ಎಂದೆ. ಪಾಪ, ಅದನ್ನು ಮನಸ್ಸಿಗೆ ತೆಗೆದುಕೊಂಡಳೋ, ಏನೋ" ಎಂದು ಲಕ್ಷ್ಮಮ್ಮ ಮರುಕಗೊಂಡಳು.

ಈಗ ಮಾತ್ರ ರುಕ್ಮಿಣಿ-ನೀರಲ್ಲಿ ಮೀನಿದ್ದಂತೆ, ಬಾನಿನಲ್ಲಿ ಹಕ್ಕಿಯಿದ್ದಂತೆ, ಗಿಡದಲ್ಲಿ ಹೂವಿದ್ದಂತೆ ಇದ್ದಾಳೆ! ಏನು ಒನಪು, ಏನು ವೈಯ್ಯಾರ, ಏನು ನಡಿಗೆ, ಏನು ಕೆಲಸ! ದಿನಕ್ಕೆ ಹತ್ತು ಬಾರಿ ಸೀತೆಯ ಮನೆಯಿಂದ ತಂದೆಯ ಮನೆಗೆ ಓಡುತ್ತಾಳೆ. ಇಲ್ಲಿ ಒಂದು ಒಡವೆಯಿಲ್ಲವೆಂದರೆ, ಮರುಗಳಿಗೆ ಅಪ್ಪನ ಮನೆಗೆ ಓಡಿ, ಅದನ್ನು ತೆಗೆದುಕೊಂಡು ಅವಳೇ ಬರುತ್ತಾಳೆ. ಅಚ್ಯುತ ಮಾತ್ರ ಭಾವನ ಮುಂದೆ ಅನವಶ್ಯವಾಗಿ ಅಡ್ಡಾಡುವುದಿಲ್ಲ. ಗಂಭೀರವಾಗಿ ಚಾವಡಿಯಲ್ಲಿ ಕುಳಿತಿರುತ್ತಾನೆ, ಇರುವುದಷ್ಟೆ ಅವನ ಕೆಲಸ. ನಡುವೆ ರುಕ್ಮಿಣಿಯೊಡನೆ ಹರಟೆಹೊಡೆಯಲು ಮಾವನ ಮನೆಗೆ ಹೋದರಾದೀತು-ಎಂಬ ಯೋಚನೆ! ಆದರೂ ಅವಳು ಇಲ್ಲಿರುತ್ತಾಳೆ! ಇಲ್ಲಿ ಬಂದರೆ ಅಲ್ಲಿ ಹೋಗಿರುತ್ತಾಳೆ. ಚಿಟ್ಟೆಯಂತೆ ನಲಿಯುವ ರುಕ್ಮಿಣಿಗೆ, ನೂರಾರು ಹೂವುಗಳ ಮೇಲೆ ಕುಳಿತಿರುವುದಲ್ಲಿ, ಅಚ್ಯುತನ ಮರವೆಯಾಯಿತೋ ಏನೋ!

ಭಾವನ ಮನೆಯಲ್ಲಿರುವಾಗ ಮದುವೆಗೆ ಮುಂಚೆಯೇ ಅಚ್ಯುತ ಒಂದು ದಿವಸ ಕಡಬಕ್ಕೆ ಹೋದ. ತನ್ನ ಗೆಳೆಯರೂ, ಗುರುಗಳೂ ಆದ ನಾರಾಯಣರಾಯರಿಗೂ, ಜಾನ್ ಸನ್ ಸಾಹೇಬರಿಗೂ-ತನ್ನ ಸೊಸೆಯ ಲಗ್ನಕ್ಕೆ ಬನ್ನಿರೆಂದು ಆಮಂತ್ರಣವಿತ್ತ. ಅದಕ್ಕೂ ಮುಖ್ಯವಾಗಿ, ತನ್ನ ಗುರುಗಳಿಗೆ ವರ್ಗವಾಗುತ್ತದೆ ಎಂದು ಕೇಳಿದ ಸುದ್ದಿ ನಿಜವೇ, ಎಂದು ಪರಿಶೀಲಿಸಲು ಹೋದುದು. ಅವರು ಶಾಂತ ಮನಸ್ಸಿನಿಂದ "ಹುಕುಂ ಬಂದರೆ ಹೊರಟರಾಯಿತಲ್ಲ" ಎಂದರು. "ನಿಮಗೊಬ್ಬರಿಗೇನೆ ಅಲ್ಲ, ನನಗೂ ವರ್ಗವಾಗುತ್ತದೆ-ಎಂದು ಸುದ್ದಿ ಇದೆ" ಎಂದ ಅಚ್ಯುತ.

"ಎಲ್ಲ ನಾಗರಾಜನ ಗಜೆಟಿನಲ್ಲಿ ಪ್ರಕಟವಾದ ಸುದ್ದಿಯಿರಬೇಕು;

ವರ್ಗ ಆದರೂ ಆದೀತು.ಅವನಿಗೆ ಕೆಲವು ಬೋರ್ಡು ಮೆಂಬರರ ಸ್ನೇಹ ವಿರಬೇಕು. ಅದರಿಂದ ಏನಾದರೂ ಮಾಡಿಸಲಿಕ್ಕೂ ಸಾಕು. ಅವನ ವೈರ ನಿನ್ನ ಮೇಲಲ್ಲ; ಅದಕ್ಕೆ ಮುಖ್ಯ ಆಹುತಿ ನಾನು. ನಿನ್ನಿಂದ ಆ ದಿನದ ನಾಟಕವನ್ನು ನಾನು ಹೇಳಿಸಿ ಬರೆಸಿದ್ದಂತೆ; ಆ ನಾಟಕ ಅವನದೇ ಟೀಕೆಯಂತೆ. ಈಗ ಆ ಯಾವ ಸುದ್ದಿಯೂ ಬೇಡ. ಸಂದರ್ಭವೊದಗಿದಾಗ ನಿನಗೆ ಎಲ್ಲ ಕತೆಗಳನ್ನೂ ಹೇಳುತ್ತೇನೆ" ಎಂದರು.

ಇತ್ತ ಹೇಳಿಕೆಯಿತ್ತು, ಅಚ್ಯುತ ಭಾವನ ಮನೆಗೆ ಮರಳಿದ. ನರಸಿಂಹಯ್ಯನವರ ಮನೆ ಈಗ ಗದ್ದಲದಿಂದ ತುಂಬಿದೆ. ಆಗಾಗ ಅಚ್ಯುತನ ಮಾವ ಪುಟ್ಟಯ್ಯನ ಸವಾರಿಯೂ ಬರುತ್ತಿದೆ. ಹಿರಿಯರ ಓಡಾಟವು ಮನೆಯಲ್ಲಿ ಹೆಚ್ಚಿದಂತೆ, ರುಕ್ಮಿಣಿಯ ಬಾಯಿಗೆ ಬೀಗವಾಗುತ್ತ ಬಂದಿತು. ಆದರೆ ಕೆಲಸಕ್ಕೆ ವಿರಾಮ ಇರಲಿಲ್ಲ. ಮಾಲಕ್ಷ್ಮಿಯನ್ನು ಕಂಡಾಗಲೆಲ್ಲ "ಗಂಡನಿಗೆ ಸೇವಿಗೆ, ಕಾಯಿಹಾಲು ಹಾಕಬೇಕು" ಎನ್ನುತ್ತಾಳೆ; ಸರಸ್ವತಿಯ ಕಿವಿಯಲ್ಲಿ "ಕರಿ ಗಂಡ ಬೇಡವಪ್ಪಾ" ಎಂದು ಪರಿಹಾಸ್ಯಮಾಡುತ್ತಲೇ ಇರುತ್ತಾಳೆ.

ಈಗ ಲಗ್ನದ ದಿನ ಕಾಲಿರಿಸಿತು; ರಾತ್ರಿಯೇ ಲಗ್ನ. ದಿಬ್ಬಣಿಗರ ಊರಿಗೆ ಎಂಟು ಮೈಲು ದೂರ. ಅಲ್ಲಿಂದ ಸಂಜೆ ಹೊರಟ ದಿಬ್ಬಣ ಕತ್ತಲಲ್ಲಿ ಬಾಣ ಬಿರುಸುಗಳನ್ನು ಹಾರಿಸುತ್ತ, ಮೆರೆದು, ಕನ್ಯೆಯ ಮನೆಗೆ ಕಾಲಿರಿಸಿತು. ರುಕ್ಮಿಣಿಗೆ, ಕಂಬದ ಮರೆಯಲ್ಲಿ ನಿಂತು, ಮದುವಣಿಗ-ಕರಿಯನೋ, ಎಣ್ಣೆಗಪ್ಪೋ, ಬಿಳಿಯೋ — ಎಂದು ನೋಡುವ ತವಕ. ತಾನು ನೋಡಿಕೊಂಡು, ಮಹಾಲಕ್ಷ್ಮಿ ಕುಳಿತಲ್ಲಿಗೆ ಬಂದು, ಅವಳ ಕಿವಿಯಲ್ಲಿ "ಕಪ್ಪೂ ಅಲ್ಲ, ಎಣ್ಣೆಗಪ್ಪೂ ಅಲ್ಲ; ಸಾಕಷ್ಟು ಬೆಳ್ಳಗೇ ಇದ್ದಾನೆ" ಎಂದು ತಿಳಿಸಿಯೂ ಆಯಿತು.

ಇತ್ತ ಮದುವೆಯ ನಾಲ್ಕು ದಿನ ಸೀತೆಗೆ, ಮುಳ್ಳಿನ ಹಾಸುಗೆಯಲ್ಲಿ ಕುಳಿತಷ್ಟು ಚಪಲ; ಗಂಡನ ವಿಷಯವಾದ ಬೆದರಿಕೆ. ಅವರೆಲ್ಲಾದರೂ ಬೀಗರೊಡನೆ ತಮ್ಮ ಉಗ್ರಾವತಾರ ತೋರಿಸುತ್ತಾರೋ ಎಂದು. ಅದರಿಂದಲೇ ಅವಳು, ಪುಟ್ಟಯ್ಯನವರು ಮನೆಗೆ ಬಂದಾಗ, ಗಂಡನೆದುರಿಗೇ — "ನಮಗೆ ಹಿರಿಯರೆಂಬವರು ನೀವೇ. ನಾವ್ಯಾರೂ ಅನುಭವ ಸಾಲದವರು. ಬಂದ ನಂಟರನ್ನು ಸಮಜಾಯಿಸಿ ಮದುವೆಯನ್ನು

ಚೆಂದಗಾಣಿಸುವ ಭಾರ ನಿಮ್ಮದು" ಎಂದಿದ್ದಳು. ಪುಟ್ಟಯ್ಯನವರ ನೆರೆಗೂದಲ ಮುಂದೆ ನರಸಿಂಹಯ್ಯನವರು ತಲೆ ಬಾಗುವವರೇನೆ. ಅದರಿಂದ, ಯಾವ ತಕರಾರೂ ಉಂಟಾಗಲಿಲ್ಲ. ನಾಲ್ಕು ದಿನದ ಲಗ್ನ ಚೆನ್ನಾಗಿ ಸಾಗಿತು. ಚತುರ್ಥಿ ದಿನ ಮಗಳನ್ನು ಕಳುಹಿಸಿಕೊಡುತ್ತ, ನರಸಿಂಹಯ್ಯ ಕಣ್ಣೀರು ಕರೆದರು. ಸೀತೆ, ರುಕ್ಮಿಣಿ, ಸರಸ್ವತಿಯರು ಮಹಾಲಕ್ಷ್ಮಿಯನ್ನು 'ಹೋಗಿ ಬಾ, ಹೋಗಿ ಬಾ' ಎಂದು ಕಂಬನಿ ತೊಯ್ದ ನುಡಿಗಳಿಂದ ಬೀಳ್ಕೊಟ್ಟರು. ನಂಟರು ಹೋದ ಬಳಿಕ 'ಅಬ್ಬಾ ಪಾರಾದೆ'ನೆಂದು ಸ್ವತಃ ನರಸಿಂಹಯ್ಯನವರೇ ಉಸಿರುಗರೆದರು.

"ಆದರೂ ಇನ್ನೂ ಮೂರುಂಟಲ್ಲ" ಎಂದರು ಪುಟ್ಟಯ್ಯನವರು, ಪರಿಹಾಸ್ಯದಿಂದ.



## ೧೪ನೆಯ ಅಧ್ಯಾಯ

ನಾಗರಾಜನಿಗೆ ಈಗಾಗಲೇ, ಈ ಮಾಸ್ತರ ವರ್ಗದ ಮೇಲೆ ಉಕ್ಕಿಹರಿಯುತ್ತಿದ್ದ ಕೋಪವು, ಅಣ್ಣುಗೌಡ ಸ್ಥಳವನ್ನು ಬಿಟ್ಟ ಬಳಿಕ ಮತ್ತಷ್ಟು ಮಿಕ್ಕಿತು. ಅಣ್ಣು, ಅಚ್ಯುತರಾಯನ ಭೂಮಿಯನ್ನು ಸೇರಿಕೊಂಡುದನ್ನು ಕೇಳಿ, ತನಗೆ ಆಗದವರನ್ನು ಅವನು ಸೇರಿಸಿಕೊಂಡುದಕ್ಕಾಗಿಯೂ ರೇಗಿದನು. ಜನರೆದುರಿಗೆ "ಈ ಅಚ್ಯುತಮಾಣಿ, ನನ್ನ ಒಕ್ಕಲನ್ನು ತಪ್ಪಿಸುವ ಸಾಹಸಮಾಡಿದರೆ, ನಾನು ಬಿಟ್ಟೇನೆ? ಅವನ ಒಕ್ಕಲನ್ನು ನಾನು ತಪ್ಪಿಸಿ ತಂದಿದ್ದೇನೆ. ಅವನು ಮುಂದಕ್ಕೂ ನನ್ನ ತಂಟೆಗೆ ಬಂದರೆ, ಅವನನ್ನೂ ನಾರಾಯಣ ಮಾಸ್ತರರ ಜತೆಯಲ್ಲಿ ಗಡೀಪಾರು ಮಾಡಿಸುತ್ತೇನೆ. ಪ್ರೆಸಿಡೆಂಟರಿಗೂ ನನಗೂ ಪರಿಚಯವಿದೆ"-ಎಂದು ದಬಾಯಿಸಿ ಮಾತನಾಡುತ್ತಿದ್ದ. ಈ ಮಾತುಗಳೆಲ್ಲವೂ, ಆ ಸಣ್ಣ ಊರಲ್ಲಿ, ಬಹು ದೊಡ್ಡ ವಿಷಯಗಳಾಗಿ ಹಬ್ಬುತ್ತಿದ್ದುವು. ಮುಖ್ಯ, ನಾಗರಾಜನ ಮನಸ್ಸಿನಲ್ಲಿ, ನಾಟಕಕ್ಕೆ ಮೂಲವಸ್ತು ತಾನೇ ಎಂಬುದು ಮತ್ತಷ್ಟು ಖಚಿತವಾಯಿತು. ಅದರಿಂದಾಗಿ, ಅಚ್ಯುತ, ನಾರಾಯಣ ರಾಯರಿಬ್ಬರನ್ನೂ ಕಡಬದಿಂದ ಓಡಿಸಿದರೆ, ಮುಂದೆ

ಗೌಡನ ಮೇಲೆಯೂ ಸೇಡು ತೀರಿಸಿಕೊಳ್ಳಬಹುದು--ಎಂಬ ಪರ್ವ ಹುಟ್ಟಿತು. ಸ್ವಾಭಾವಿಕವಾಗಿ ಅವನ ಕೈಗಿಂತ, ಬಾಯಿ ಮುಂದೆ. ಮೇಲೆ, ರಂಗಪ್ಪನಂಥ ಭಟರು ಅವನ ಬೆಂಗಡೆಯಲ್ಲಿರುವಾಗ, ಆತ ಮಾಡು ತ್ತೇನೆಂದ ಸಂಗತಿಗಳನ್ನು, ರಂಗಪ್ಪ ಒಂದಕ್ಕೆ ನಾಲ್ಕಾಗಿ ಬಣ್ಣಿಸಿ, ಪೇಟೆ ಯಲ್ಲಿ ಮೆರೆದಾಡುವವ. ಇದರಿಂದ ಊರವರ ಪಾಲಿಗೆ,ಏನೋ ಒಂದು ಮಹಾ ಸಂಗ್ರಾಮವೇ ನಡೆಯುವಂತಿದೆಯೆಂಬ ಅಭಿಪ್ರಾಯವಾಗು ತ್ತಿತ್ತು. ಅಣ್ಣುವಿನ ಪ್ರಕರಣದಲ್ಲಿ, ಜಾನ್ ಸನ್ ಮಾಸ್ತರರೂ ಇದರೊ ಳಗೆ ಭಾಗವಹಿಸಿದ್ದಾರೆಂಬುದು ನಾಗರಾಜನಿಗೆ ತಿಳಿಯಿತು. ಅವರು ಅಣ್ಣುವಿನ ಮನೆಯ ತನಕ ಹೋದದ್ದು, ಸಹ ಉಪಾಧ್ಯಾಯರನ್ನು ಎತ್ತಿ ಕಟ್ಟಿದ್ದು, ಅನಂತರ ಶೇಷಗೌಡನ ಗಾಡಿಯನ್ನು ತಡೆದುದು — ಎಲ್ಲವೂ ಅವನಿಗೆ ತಿಳಿಯಬಂದಿತು.

"ನನ್ನ ಬತ್ತಳಿಕೆಯಲ್ಲಿ ಎಷ್ಟು ಅಸ್ತ್ರಗಳಿವೆಯೆಂದು ಇವರಿಗೆ ತೋರಿಸುತ್ತೇನೆ" ಎಂದ ನಾಗರಾಜ. "ಕೋರ್ಟು ಪ್ರಾರಂಭವಾದರೆ ಸಾಕು; ಮಳೆ ನಿಂತರೆ ಸಾಕು; ಬತ್ತಳಿಕೆಯಿಂದ ಹೆದೆಗೆ ಒಂದೊಂದೇ ಅಂಬನ್ನೇರಿಸಿ ಬಿಡುವೆ"-ಎಂದುಕೊಂಡ. ಅಚ್ಯುತನ ಸಾಲಗಾರರನ್ನು ಕೆರಳಿಸಿ "ಅಹುದು, ನೀವು ಆ ಮಾಣಿ ಮಾಸ್ತರನಿಗೆ ನೋಟಿನ ಮೇಲೆ ಸಾಲಕೊಟ್ಟಿದ್ದೀರಿ. ಅವನು ಗುಟ್ಟಿನಲ್ಲಿ ಆಸ್ತಿಮಾರುವ ಏರ್ಪಾಡಿನಲ್ಲಿ ದ್ದಾನೆ" ಎಂಬ ಸುದ್ದಿ ಹುಟ್ಟಿಸಿ, ಸಾಲ ತೆತ್ತವರನ್ನು ಕೆದಕಿದ. ತನ್ನ ಹೆಸರಿನಲ್ಲಿ ಬರೆಯಿಸಿಕೊಂಡಿದ್ದ ಪ್ರೋನೋಟನ್ನು, ಕಡಬದ ಸಾಹು ಕಾರ ನಾಗೇಶ ಕಮ್ತಿಯರಿಗೆ ಅವನು ಈಗಾಗಲೇ ಬದಲಿಸಿಯಾಗಿತ್ತು. ಅವರಿಂದ ಅಚ್ಯುತನಿಗೆ ಒಂದು ನೋಟೀಸನ್ನು ಕೊಡಿಸಿದ. ಹೀಗೆ, ಅಚ್ಯುತನ ಸಾಲಗಾರರನ್ನೆಲ್ಲ ಒಂದೊಂದಾಗಿ ಕೆದಕಿ ಕುಳಿತ. ನಾರಾ ಯಣರಾಯರನ್ನು ಊರಿಂದ ಓಡಿಸಲು ಎಷ್ಟು ಬಿನಾಮಿ ಅರ್ಜಿಗಳು ಬೇಕೋ, ಅವುಗಳ ನಿರ್ಮಾಣ ಮಾಡಿ, ನಿತ್ಯ ನಿತ್ಯದ ಟಪ್ಪಾಲಿನಲ್ಲಿ ಕಳುಹಿಸತೊಡಗಿದ. "ಇನ್ನು ಉಳಿದದ್ದೆಂದರೆ ಯಾರು? ಆ ಜಾನ್ ಸನ ಮಾಸ್ತರ! ಅವನು ಹಿಂದೆ ಮುಂದೆ ನೋಡುವವನಲ್ಲ. ನಾಲ್ಕು ದಿವಸ ಹೋದರೆ, ರಂಗಪ್ಪನಿಂದ ಅವನಿಗೂ ಎರಡು ದಬಾಯಿಸಿಬಿಡುತ್ತೇನೆ" ಎಂದು ನಾಗರಾಜ ಹೇಳತೊಡಗಿದ. ಆದರೆ ಗುಟ್ಟಿನಲ್ಲಿ ಯಾವ ಕೆಲಸ

ವನ್ನೂ ಮಾಡುವ ಯೋಗ್ಯತೆಯಿಲ್ಲದ ಆತ, ಕೆಲಸಕ್ಕೆ ಮುಂಚಿತವಾಗಿ, ತನ್ನ ಬಾಣಗಳಾವುದೆಂದು, ಊರವರಿಗೂ, ಆದರ ಮುಖಾಂತರ ವೈರಿಗಳಿಗೂ ಕಾಣಿಸಿಕೊಟ್ಟನು. ಇಲ್ಲಿಯ ತನಕ ಆತ, ಉಪಾಧ್ಯಾಯರ ವಿಷಯದಲ್ಲಿ 'ನೀವು' ಎಂದೆನ್ನುತ್ತಿದ್ದ. ಈಗ ಅದನ್ನು ಮರೆತು 'ನೀನು, ತಾನು'ಗಳ ಮಟ್ಟಕ್ಕೆ ಇಳಿದನು.

ಪಂಜದಲ್ಲಿ ಮದುವೆಯನ್ನು ಮುಗಿಸಿಕೊಂಡು, ನಾಲ್ಕು ದಿವಸ ಮಾವನ ಮನೆಯಲ್ಲಿ ಅಲೆದಾಡಿಕೊಂಡು,ಅಚ್ಯುತ ಊರಿಗೆ ಮರಳುವ ಹೊತ್ತಿಗೆ,ಊರೆಲ್ಲ ಗುಡುಗು ಮಿಂಚುಗಳಿಂದ ಜಳಪಿಸುತಿತ್ತು. ಎಲ್ಲವೂ, ನಾಗರಾಜ ಮತ್ತವನ ಗೆಳೆಯರ ಗುಡುಗು, ಕಣ್ಮಿಂಚುಗಳ ಆರ್ಭಟೆಯಲ್ಲಿ ನಡುಗುತಿದ್ದಂತೆ ಕಂಡಿತು. ಸಾಲಗಾರರೆಲ್ಲರು ಒಡನೆಯೇ ಬಂದು ಅವನನ್ನು ಪೀಡಿಸತೊಡಗಿದರು. "ಕೋರ್ಟು ಶುರುವಿಗೆ ನಂಬ್ರ ಮಾಡದೆ ನಮಗೆ ಗತಿಯಿಲ್ಲ. ನೀನು ಗುಟ್ಟಿನಲ್ಲಿ,ಆಸ್ತಿಯನ್ನು ಮಾರಾಟ ಮಾಡಿ, ನಮಗೆ ನಾಮಹಾಕಬಹುದೆಂದು ತಿಳಿದಿದ್ದೀಯೊ? ಹಾಗೆಲ್ಲಾದರೂ ಮಾಡಿದರೆ, ಸಿವಿಲ್ ಜೈಲ್ ಕಾಣಿಸಿಯೇವು!" ಎಂದು ಬೆದರಿಸಿದರು. ಅವನ ಅಂಗಡಿಕಾರರಾದ ನಾಗೇಶ ಕಮ್ತಿಯವರು, "ಮಾಸ್ತರರೇ, ಒಂದು ಸಾರಿ ನಮ್ಮ ಕಡಕಟ್ಟು ಮುಗಿಸಿಬಿಡಿ. ಅಂಗಡಿ ಬಾಕಿ ನೂರು ರೂಪಾಯಿಗೆ ಮಿಕ್ಕಿದೆ! ಆ ಮೇಲೆ ನಾಗರಾಜನಿಂದ ನಾನು ಆ ನೋಟನ್ನು ಟ್ರಾನ್ಸ್ಫರ್ ಪಡೆದ ಸಾಲವಿದೆ. ನೀವು ಬೋರ್ಡಿಗೆ ವರ್ಗ ಮಾಡಿಸಿಕೊಳ್ಳಲು, ಅರ್ಜಿ ಬರೆದು ಹಾಕಿದ್ದೀರಿ-ಎಂದು ಸುದ್ದಿ. ಹಾಗೆ ವರ್ಗಾಯಿಸಿಕೊಂಡರೆ, ನಾವೇನು ನೀವು ಹೋದಲ್ಲಿಗೆ ಬಂದು ಕುಣಿದಾಡಬೇಕೆ?" ಎಂದು ಕೇಳಿದರು.

ಆಸ್ತಿ ಮಾರುವ ವಿಚಾರ, ವರ್ಗಮಾಡಿಸಿಕೊಳ್ಳುವ ಅಪೇಕ್ಷೆ-ಇವೆಲ್ಲ ಅಚ್ಯುತನು ಕನಸಿನಲ್ಲಿಯೂ ಎಣಿಸಿರದ ಸಂಗತಿಗಳು. ಅವನ್ನು ಯಾರು ಹುಟ್ಟಿಸಿರಬಹುದೆಂದು ಅವನುಬಲ್ಲ. ಆದರೆ, ಅದನ್ನು ನಾನು ನಿರಾಕರಿಸಿದರೂ ಕೇಳುವವರು ಬೇಕಲ್ಲ! ಸುದ್ದಿ ಹಬ್ಬುವ ಮೊದಲೇ ತಡೆಯಬೇಕಲ್ಲದೆ, ಹಬ್ಬಿ ಹೋದ ಮೇಲೆ, ಅದನ್ನು ರದ್ದುಗೊಳಿಸಲು ಬ್ರಹ್ಮದೇವರಿಗೂ ಆಗದು! ಹೀಗಾಗಿ ಸಾಲಿಗರ ಕೈಯಲ್ಲಿ, ಊರವರ ಸಮ್ಮುಖದಲ್ಲಿ, ಅಚ್ಯುತ ಮಾಸ್ತರರು ಮುಖ ಸಣ್ಣಗೆ ಮಾಡಿಕೊಳ್ಳುವ

ದಾಯಿತು. ಒಮ್ಮೊಮ್ಮೆ "ನಾನೇಕೆ ಅಣ್ಣನನ್ನು ಕರತಂದೆನಪ್ಪ" ಎಂದು ಯೋಚಿಸತೊಡಗುವ. ಆದರೆ ನಾಗರಾಜನ ದುಷ್ಟತನವನ್ನು ನೆನೆದು, ಅಪಪ್ರಚಾರಗಳನ್ನು ನೆನೆದು, "ಹೂಂ! ದೇವರಿದ್ದಾನೆ! ಏನು ಈ ಊರೇ ಅವನಿಗಾಯಿತೇ! ಅಂಥ ಸ್ಥಿತಿ ಬಂದರೆ ನಾವೂ ಒಂದು ಕೈ ನೋಡ ಬಹುದು. ನಾವು ಕೆಡುವ ಕಾಲಕ್ಕೆ, ಇವನ ಮರ್ಯಾದೆಯನ್ನು ಉಳಿಸಿ ಯೇವೇ!" ಎಂದು ಎಣಿಸಿಕೊಳ್ಳುತ್ತಿದ್ದ.

ಮಳೆಗಾಲ ಉದಯಿಸಿತು. ಅಚ್ಯುತನಿಗೆ ಕೊಂಬಾರು ಕಡಬಗಳ ನಿತ್ಯ ಯಾತ್ರೆ ಪ್ರಾಪ್ತಿಸಿತು. ಮಳೆಯೊಂದಿಗೆ, ಒಂದೊಂದೇ ಬಾಣಗಳೂ ಮಳೆಗರೆಯಲಾರಂಭವಾಯಿತು. ಸಾಲವನ್ನು ಕೊಟ್ಟವರು ಕೋರ್ಟಿಗೆ ಹೋಗಲು ತಯಾರಾದರು. ಅನಾವಶ್ಯಕವಾದ ಕೋರ್ಟು ಖರ್ಚು ಅವನ ತಲೆಯ ಮೇಲೆ ಸುರಿಯಿತು. ಹೀಗೆ ಅಸಲು ಸಾವಿರದೈನೂರು, ಬಡ್ಡಿ ಇನ್ನೂರು ಮುನ್ನೂರು, ಮೇಲೆ ದಾವೆಯ ಖರ್ಚು--ಇನ್ನೂರು; ಇಷ್ಟು ನಷ್ಟಕ್ಕೆ ಅವನು ಅಣಿಯಾಗಬೇಕಾಯಿತು. "ನಾನು ವಾದಿಸಿ ಫಲವಿಲ್ಲ; ಕೊಡಲಿರುವುದು ನಿಜ. ಸಾಲಗಾರರಿಗೆ ತಿಂಗಳೊಂದರ ಹದಿ ನೈದರಂತೆ ಸಾಲ ಮುಟ್ಟಿಸುತ್ತೇನೆ" ಎಂದು ವಕಾಲತು ಮೂಲಕ ತಿಳಿಸಿ, ಸುಮ್ಮನೆ ಕುಳಿತುಕೊಂಡ. ಎದುರಿಯವರು "ಅವನಿಗೆ ಆಸ್ತಿಯಿದೆ, ಮನೆಯಿದೆ. ಸುಮ್ಮನೆ ವಂಚಿಸಲು ಮಾಡುವ ಪ್ರಯತ್ನವಿದು. ಆದು ದರಿಂದ ಅವನಿಗೆ ಹಣಪಾವತಿಮಾಡಲು ದೀರ್ಘ ಅವಧಿ ಕೊಡಬಾ ರದು. ಒಮ್ಮೆಗೇ ಫೈಸಲಾಗಬೇಕು" ಎಂದು ಮನವಿಮಾಡಿಕೊಂಡರು. ದಾವೆಯು ಇಂದು ನಾಳೆ ತೀರ್ಮಾನವಾದೀತೆಂಬ ನಿರೀಕ್ಷಣೆಯಲ್ಲಿತ್ತು. ಅಚ್ಯುತನ ಮನಸ್ಸಿಗೆ ದಶಂಬರ ತಿಂಗಳೊಳಗೇನೆ, ತಾನು ಎರಡು ಸಾವಿ ರದ ಗಂಟನ್ನು ತಯಾರಿಸಿಡಬೇಕು" ಎಂಬ ಭೀತಿ ಉದಯಿಸಿತು.

ತಾಯೊಡನೆ ಯೋಚಿಸಿದನು; ರುಕ್ಮಿಣಿಯೊಡನೆ ತರ್ಕಿಸಿದನು; ನಾರಾಯಣರಾಯರ ಸಲಹೆಗಳನ್ನು ಕೇಳಿದನು, ಜಾನ್‌ಸನ್ ಮಾಸ್ತ ರರ ಬಳಿಗೂ ಓಡಿದನು. ಆದರೆ ಹಣಕಾಸಿನ ವಿಚಾರದಲ್ಲಿ, ಇವನಂತೆ ಬಡವರಾದ ಆ ಗೆಳೆಯರು ಯೋಚನೆ ಏನು ಹೇಳಬಹುದು? ಅಲ್ಲದೆ ಅವಕ್ಕೂ ಹೆಚ್ಚಿಗೆ ಏನು ಮಾಡಬಹುದು? "ಭಾವನನ್ನು ಕೇಳಿ" ಎಂದರು ಜಾನ್‌ಸನರು. "ಅವರು ಊರೂರಿಗೆ ಸಾಲಕೊಡುತ್ತಾರಂತೆ; ನಿಮಗಿಷ್ಟು

ಸಹಾಯಮಾಡರೇ." "ಮಾವನನ್ನು ಮಾತನಾಡಿಸಿ" ಎಂದರು ನಾರಾಯಣರಾಯರು. ಆದರೆ ಎರಡಗಲ್ಲೂ ಅಂಜಿಕೆ ಅಚ್ಯುತನಿಗೆ. ನರಸಿಂಹಯ್ಯನವರಲ್ಲಿ ಬಾಯಿ ಬಿಡುವ ಸಾಹಸವಿಲ್ಲ. ಮಾವನ ಮುಂದೆ ಈ ತೆರನ ಭಿಕ್ಷೆಯು ಎಷ್ಟೆಂದರೂ ಗೌರವಕ್ಕೆ ಕುಂದು ಎಂದು ತಿಳಿದಿದ್ದ. "ನೋಡುವ, ಕಾಲ ಬಂದೀತು; ಕೋರ್ಟು ಏನು ತೀರ್ಮಾನಮಾಡುತ್ತದೆಯೋ ಆ ಮೇಲೆ ನೋಡಿದರಾಯಿತು" ಎಂದು ಕುಳಿತ.

ನಾಗರಾಜನಿಗೆ ತುಂಬ ನಿರಾಶೆಯಾಯಿತು. ಮಳೆಗಾಲವೆಲ್ಲವೂ ಅವನು ಹಲ್ಲು ಕಡಿಯುತ್ತಲೇ ಇದ್ದನು. "ಇಷ್ಟರೊಳಗೆ ನಾನು ಮಾಡಿದ ಮೆಹನತ್ತಿನಿಂದ, ಈ ನಾರಾಯಣಮಾಸ್ತರರು, ಅಚ್ಯುತ ಇವರಿಬ್ಬರು ಯಾವಾವ ದಿಗ್ದೇಶಕ್ಕೆ ವರ್ಗವಾಗಿ ಹೋಗಬೇಕಿತ್ತು. ಯಾಕೆ ಆಗಲಿಲ್ಲ ಇನ್ನೂ?" ಎಂದು ಯೋಚಿಸತೊಡಗಿದನು. "ಪ್ರಾಯಶಃ ಈಗಿನ ಡಿಪ್ಯುಟಿ ಇನ್ಸ್‌ಪೆಕ್ಟರರಿಗೂ ಅಚ್ಯುತನಿಗೂ ಒಳ್ಳೆಯದಿದೆಯೆಂದು ಕೇಳಿದ್ದೇನೆ. ಆಗಲಿ, ನಾನು ಅವರನ್ನು ಬಗಲಿಗೆ ಹಾಕಿಕೊಳ್ಳುವ ಉಪಾಯ ಮಾಡುತ್ತೇನೆ" ಎಂದು ಎಣಿಸಿ, ಈ ಬಾರಿಯ ದಸರೆಗೆ ಹೊಸ ಕ್ಲಬ್ಬನ್ನು ತೆರೆದು, ಅದರ ಆರಂಭೋತ್ಸವ ಅವರಿಂದ ಮಾಡಿಸುವ ಎಂದು ನಿರ್ಣಯಿಸಿದ. ದಸರೆಯಲ್ಲಿ ಹುಟ್ಟಲಿರುವ "ಪೀಪಲ್ಸ್ ಕ್ಲಬ್"ನ ವಿಚಾರವಾಗಿ ಊರಲ್ಲಿಯೇ ಉತ್ಸಾಹ ಹುಟ್ಟಿಸಿದ. 'ನಮ್ಮ ನಾಗರಾಜ ಏನೋ ಮಾಡುತ್ತಾನಂತೆ,' ಎಂದು ನಾಭಿರಾಜಯ್ಯ, ತಿಮ್ಮಯ್ಯ ಸೆಟ್ಟಿ ಮೊದಲಾದ ವರ್ಗದಾರರ ಹುಮ್ಮಸ! "ಒಂದು ಜೀವವಿದ್ದ ಕ್ಲಬ್ಬು ಬೇಕಯ್ಯ" ಎಂದು ನಾಗೇಶ ಕಮ್ತಿಯರೂ, "ಕ್ಲಬ್ಬು ಮಾಡಿದರೆ ಸಮನಾದ್ದನ್ನು ಮಾಡಬೇಕೇ ವಿನಾ, ಈ ಇಂಟರ್‌ನೇಶನಲ್ ಕ್ಲಬ್ಬಿನ ಹಾಗೆ ಈಗಲೋ ಇನ್ನೊಂದು ಗಳಿಗೆಗೋ ಸಾಯುವುದನ್ನು ಮಾಡಬಾರದು" ಎಂದು ಸಂಕಪ್ಪ ಮಾಸ್ತರರೂ ಅನ್ನತೊಡಗಿದರು. ಪ್ರಚಾರ ಕಾರ್ಯ ಯಾವುದಕ್ಕೂ ಕಡಮೆಯಿಲ್ಲದೆ ಭರದಿಂದ ಸಾಗಿತು. ಆ ವಾರ್ತೆಯನ್ನು ಕೇಳಿದಂದಿನಿಂದ ನಮ್ಮ ಜಾನ್‌ಸನರು, ತಮ್ಮ ಬಿಡಾರ ಕ್ಲಬ್ಬಿನಲ್ಲಿ ಮಾಡಿದರೆಂದರೂ ಸರಿಯೇ. "ಏ ಮಕ್ಕಳೇ, ಮಳೆಯಲ್ಲಿ ಹೊರಗೆ ಆಡುವುದು ಯಾಕೆ? ಧರ್ಮಕ್ಕೆ ನಾಲ್ಕು ಪೇಪರು, ಕತೆ ಬೂಕುಗಳನ್ನು ಇಲ್ಲಿ ಬಂದು ಓದಬಾರದೇ" ಎಂದು ಜನರನ್ನೂ, ವಿದ್ಯಾರ್ಥಿಗಳನ್ನೂ ಒಲಿಸಿ,

ಕ್ಲಬ್ಬಿಗೆ ಬರವಮಾಡಿಕೊಳ್ಳತೊಡಗಿದರು. ಅವರಿಗೆ ಗೊತ್ತು; ತಮಗೆ ಶಾಲಾ ಮಾಸ್ತರಿಕೆ ಇರುವಷ್ಟು ದಿನ, ಕಿಸೆಯಲ್ಲಿ ಹಣಕ್ಕೆ ಕೊರತೆಯಾದರೂ ಜನ ಸಹಾಯಕ್ಕೆ ಬರಗಾಲ ಬರಲಾರದೆಂದು.

ಜುಲಾಯಿ ತಿಂಗಳು ಸರಿಯಿತು. ಆಗಸ್ಟೂ ಕಾಲಿರಿಸಿತು. ಇನ್ನೇನು ಸಪ್ಟಂಬರ ಬಂದೂ ಆಯಿತು-ಎನ್ನುವಾಗ, ಒಂದು ದಿನ ಯಾವ ಸುದ್ದಿಯನ್ನೂ ತಿಳಿಸದೆ, ಶಾಲಾ ಇನ್ಸ್ಪೆಕ್ಟರ್ ಸದಾನಂದರಾಯರು, ಕಡಬವನ್ನು ಸಂದರ್ಶಿಸಿದರು. ಅವರು ಬಂದ ಸುದ್ದಿ ನಾಗರಾಜನಿಗೆ ತಿಳಿಯಿತು. ಅವರು ಬಂದವರು ಶಾಲೆಗೂ ಬರಲಿಲ್ಲ. ನೇರಾಗಿ ಊರಿನ ಬಂಗ್ಲೆಯಲ್ಲಿ ತಮ್ಮ ಬಿಡಾರ ಹೂಡಿದರು. ಅವರ ಮೊದಲನೆ ಸಂದರ್ಶನವೇ ನಾಗರಾಜನೊಡನಾಯಿತು. ನಾಗರಾಜ ಅವರೊಡನೆ "ನಾನೇ ನಿಮ್ಮಲ್ಲಿಯ ತನಕ ಬರಬೇಕೆಂದಿದ್ದೆ; ನೀವೇ ಬಂದಿರಿ. ನಾನು ಒಂದು ಕ್ಲಬ್ಬು ತೆರೆಯುವ ಯೋಚನೆಯಲ್ಲಿದ್ದೇನೆ; ವಿಜಯ ದಶಮಿಗೇನೇ ಅದರ ಪ್ರಾರಂಭ! ನಿಮ್ಮ ಕೈಯಿಂದಲೇ ಅದನ್ನು ತೆರೆಯಿಸಬೇಕೆಂದು ನಮ್ಮ ಇಚ್ಛೆ"—ಎಂದು ಬಹುವಾಗಿ ಅವರನ್ನು ಬೇಡಿದ. "ಆಗಲಿ, ವಿಜಯದಶಮಿ ಅಕ್ಟೋಬರಿನಲ್ಲಿ. ಅಷ್ಟರೊಳಗೆ ನನಗೆ ವರ್ಗವಾಗದಿದ್ದರೆ, ನೋಡುವ" ಎಂದರು ಅವರು.

"ನೋಡುವ ಎಂದರೆ ಸಾಲದು. ನೀವು ಬಂದೇ ತೀರಬೇಕು" ಎಂದು ಒತ್ತಾಯಪಡಿಸಿದನು.

"ಆಗಲಿ, ನೀವೀಗ ಹೋಗಿ. ನಾನು ದಣಿದು ಬಂದಿದ್ದೇನೆ; ವಿಶ್ರಾಂತಿ ಪಡೆಯುತ್ತೇನೆ" ಎಂದು ನಾಗರಾಜನನ್ನು ಕಳುಹಿಸಿದರು. ಇನ್ನಷ್ಟು ಅವಕಾಶ ದೊರೆತಿದ್ದರೆ ಒಂದೊಂದಾಗಿ ಉಪಾಧ್ಯಾಯರ ಮೇಲಿನ ದೂರನ್ನು ಹೇಳುವ, ಎಂದು ನಾಗರಾಜನ ಇಚ್ಛೆಯಿತ್ತು. ಅದಕ್ಕೆ ಅವಕಾಶವಾಗಲಿಲ್ಲವಲ್ಲ-ಎಂದು ವ್ಯಥೆಗೊಂಡ.

ಸದಾನಂದರಾಯರು ಮೊದಲಿಗೆ ಮಾಡಿದ ಕೆಲಸವೆಂದರೆ— "ಏನೋ ಕೆಲಸವಿದೆ" ಎಂದು ಊರಿನ ಶ್ಯಾನುಭಾಗರಿಗೆ ತಮ್ಮನ್ನು ಕಾಣಲು ಬರಹೇಳಿ ಕಳುಹಿಸಿದುದು. ಅದು ಅವರಿಗೂ ಆಶ್ಚರ್ಯವೇ! ಆದರೂ ತಕ್ಷಣವೇ ಬಂದು ಭೇಟಿಯಾದರು. ಅನಂತರ ಸದಾನಂದರಾಯರು ತಮ್ಮ ರಿಕಾರ್ಡನ್ನು ಬಿಡಿಸಿ-"ಈ ಪಟ್ಟಿಯಲ್ಲಿರುವ ಜನರು

ಯಾರ್‍ಯಾರು?" ಎಂದು ಕೇಳಿದರು. ಶ್ಯಾನುಭಾಗರು ತಲೆಕೆಳಗೆ ಮಾಡಿದರೂ ಅವರಿಗೆ ಪಟ್ಟಿಯಲ್ಲಿದ್ದ ಜನರ ಹೆಸರು ತಿಳಿಯಲಿಲ್ಲ. "ತಿಳಿಯದು ಸ್ವಾಮಿ, ಈ ಹೆಸರಿನವರು ನಮ್ಮ ಗ್ರಾಮದಲ್ಲಿಯೇ ಇಲ್ಲವಲ್ಲ" ಎಂದರು.

"ಅರೇ! ನಿಮ್ಮವರು ಅವರು. ಅವರೆಲ್ಲರಿಂದ ಹಲವಾರು ಅರ್ಜಿಗಳು ನನಗೆ ಬಂದಿವೆ. ಅವುಗಳ ತನಖಿಗೆಂದು ನಾನು ಬಂದವನು" ಎಂದರು.

ಶ್ಯಾನುಭಾಗರು ತಿರುಗಿ ತಲೆ ತುರಿಸಿಕೊಂಡು ಆ ಪಟ್ಟಿ ಓದಿದರು. ಏನೂ ತಿಳಿಯಲಿಲ್ಲ. ಸದಾನಂದರಾಯರು—"ಇಷ್ಟು ಅರ್ಜಿಗಳಿವೆ" ಎಂದು ಅವರ ಮುಂದೆ ಅರ್ಜಿಗಳ ಒಂದು ಗಂಟನ್ನಿರಿಸಿದರು!

"ಅಂಥವರಾರೂ ನಮ್ಮೂರಲ್ಲಿಲ್ಲ. ಅವೆಲ್ಲ ಸುಳ್ಳು ಹೆಸರುಗಳೇ. ನಾನು ನೋಡಲೇ ಅರ್ಜಿಯನ್ನು?" ಎಂದು ಶ್ಯಾನುಭಾಗರು ಕೇಳಿದರು.

"ಬೇಡ" ಎಂದು ಉತ್ತರ ಬಂದಿತು.

ಅರ್ಜಿಯೊಂದರ ಹಿಂಬದಿಯ ಬರಹ ಶ್ಯಾನುಭಾಗರ ಕಣ್ಣಿಗೆ ಕಾಣಿಸಿತು. ಅದನ್ನು ಅವರು ಕುತೂಹಲದಿಂದ ನೋಡಿದರು. "ಆ ಬರಹವಾದರೆ ನಾಗರಾಜಯ್ಯನವರದ್ದು. ಆದರೆ ಅವರ ಹೆಸರನ್ನು ನೀವು ಹೇಳಲಿಲ್ಲವಲ್ಲ" ಎಂದರು.

ಅಷ್ಟು ಹೇಳಿದ ಬಳಿಕ "ಯಾವುದು? ಈ ಬರಹವೇ!" ಎಂದು ಸದಾನಂದರಾಯರು ಕೇಳಿದರು. ಆ ಕಾಗದವನ್ನು ಶ್ಯಾನುಭಾಗರ ಕೈಗೂ ಕೊಟ್ಟರು. ಶ್ಯಾನುಭಾಗರು ಚೆನ್ನಾಗಿ ಪರೀಕ್ಷಿಸಿ "ಇದಾದರೆ ಖಂಡಿತ ಅವರದ್ದೇನೆ. ಆದರೆ ಕೆಳಗೆ ಸುಳ್ಳೇನೆ ಸಹಿ ಮಾಡಿದ್ದಾರೆ. 'ನಾರಾಯಣ ಪೈ ರುಜು' ಎಂದಿದೆ. ನಮ್ಮ ಪೇಟೆಯಲ್ಲಿ ಯಾರೂ ಆ ಹೆಸರಿನವರಿಲ್ಲ! "ಏನೋ ಕಿತಾಪತಿಯಿರಬೇಕು" ಎಂದರು. ಸದಾನಂದರಾಯರು"ಇದೆಲ್ಲ ನಿಮ್ಮ ಊರವರ ಕಿತಾಪತಿ. ಇಲ್ಲಿನ ಶಾಲಾ ಮಾಸ್ತರುಗಳ ಮೇಲೆ ಈ ಅರ್ಜಿಗಳು ಬಂದಿವೆ. ಕೆಲವು ಸಹಿ ಇಲ್ಲದ್ದು; ಆದರೂ ತನಖಿ ಮಾಡವೆ ಉಪಾಯವಿದೆಯೇ?" ಎಂದರು. ಶ್ಯಾನುಭಾಗರಿಗೂ ಹೊಸ ಸುದ್ದಿಯ ಸೆರಗು ಸಿಕ್ಕಿದಂತಾಯಿತು. ತಮ್ಮ ಕೆಲಸವಾದ ಬಳಿಕ, ಅವರು ಹೊರಟುಹೋದರು.

ಈ ತನಖಿ ಮುಗಿಯಿಸಿ, ಮರುದಿನ ಇನ್ಸ್‌ಪೆಕ್ಟರರು ಶಾಲೆಯ ಕಡೆಗೆ ತೆರಳಿದರು. ಆಗ ಮಧ್ಯಾಹ್ನದ ಶಾಲೆ ಮುಚ್ಚುವುದರಲ್ಲಿತ್ತು. ಹೋದವರೇ ನಾರಾಯಣರಾಯರೊಡನೆ "ಮಾಸ್ತರರೆಲ್ಲರು ಸಿಲ್ಲಿ" ಎಂದರು. ಒಂದು ಕಾಗದ ತೆಗೆದು "ನೋಡಿ, ಈ ಹೆಸರಿನ ಹುಡುಗಿ ಯಾರದು? ಅವಳನ್ನು ಬರಹೇಳಿ" ಎಂದರು. ಸುಮಾರು ಹದಿನಾಲ್ಕು ವರ್ಷವೂ ಪೂರ್ತಿಯಾಗದ ಒಬ್ಬ ಎಳೆಯ ವಿದ್ಯಾರ್ಥಿನಿಯನ್ನು ನಾರಾಯಣರಾಯರು ಕರೆದು ತಂದರು. ಆಕೆಗೆ ಇನ್ಸ್‌ಪೆಕ್ಟರರನ್ನು ನೋಡಿಯೇ ಭೀತಿಯಾಯಿತು. "ಮಗು, ನಿಮ್ಮ ಮನೆಯೆಷ್ಟು ದೂರವಿದೆ-ಇಲ್ಲಿಂದ?" ಎಂದು ಕೇಳಿದರು. "ಮನೆಗೆ ಎರಡು ಮೈಲು ಇಲ್ಲಿಂದ" ಎಂದಳು ಆಕೆ. "ಮನೆಯಲ್ಲಿ ಇಷ್ಟು ಹೊತ್ತಿಗೆ ನಿನ್ನ ತಂದೆ ಇರುತ್ತಾರೆಯೇ?" ಎಂದು ಕೇಳಿದರು. "ಇರುತ್ತಾರೆ" ಎಂದಳು.

"ಹಾಗಾದರೆ ನೀನು ಬೇಗನೆ ಹೋಗಿ ಊಟಮಾಡಿ, ಅವರನ್ನು ಕರೆದುಕೊಂಡು ಬಾ" ಎಂದು ಕಳುಹಿಸಿಕೊಟ್ಟರು. ಅನಂತರ ಉಳಿದ ಬಾಲಕರಿಗೆ "ಮಧ್ಯಾಹ್ನ ಹಾಜರಿಗೆ ನೀವು ಬಂದುಹೋದರೆ ಸಾಕೆಂ" ದರು. ಮಕ್ಕಳಿಗೆ ರಜೆ ಸಿಕ್ಕಿತೆಂದು ಬಲು ಹಿಗ್ಗು ಉಂಟಾಯಿತು. ಬಾಲಕರು ಹೋದ ಮೇಲೆ, ಸದಾನಂದರಾಯರು, ಅಚ್ಯುತನೊಬ್ಬನನ್ನು ಬಳಿಗೆ ಕರೆಯಿಸಿಕೊಂಡು, "ಏನು, ಅಚ್ಯುತರಾಯರೇ, ನಿಮ್ಮ ಮೇಲೆ ತುಂಬ ತಗಾದೆಗಳು ಬಂದಿವೆಯಲ್ಲ. ನಿಮಗಿನ್ನೂ ಕೆಲಸ ಕಾಯಂ ಆಗಿಲ್ಲ. ಈಗಾಗಲೇ, ಬೋರ್ಡಿಗೆ ನಿಮ್ಮ ವಿರುದ್ಧ ಬರೆದಿದ್ದಾರೆ ಒಬ್ಬಿಬ್ಬರು. 'ಅವರಿಗೆ ತಲೆತುಂಬ ಸಾಲ; ಅದರ ಗೊಂದಲದಲ್ಲಿ ಅವರು ಪಾಠ ಕಲಿಸುವುದಿಲ್ಲ, ಅಂಥವರನ್ನು ಶಾಲೆಯಲ್ಲಿರಿಸಿದರೆ, ಶಾಲೆ ಕೆಟ್ಟು ಹೋಗುತ್ತದೆ' ಎಂದು ಬರೆದಿದ್ದಾರೆ," ಎಂದು ಅವನ ಮೇಲಿನ ದೂರುಗಳುಳ್ಳ ಪತ್ರಗಳನ್ನು ಅಚ್ಯುತನ ಮುಂದಕ್ಕಿರಿಸಿದರು.

ಅಚ್ಯುತನಿಗೆ ಆ ವಾರ್ತೆ ಕೇಳಿಯೇ ಮುಖ ಕಪ್ಪಾಯಿತು; ತುಟಿ ಕಂಪಿಸ ಹತ್ತಿತು. ಸದಾನಂದರಾಯರು ನಯವಾಗಿಯೇ-"ಏನು ಸಂಗತಿ? ಇದ್ದುದನ್ನು ಹೇಳಿಬಿಡಿ. ನಿಮಗೆ ಸಾಲವಿದೆಯೆಂದು, ಕುತ್ತಿಗೆ ಹಿಸುಕಲು ನಾನು ಬಂದಿಲ್ಲ" ಎಂದರು. ಅಚ್ಯುತ "ಸ್ವಾಮಿ, ನನ್ನ ಅವಸ್ಥೆ ಹೀಗೆ: ಟ್ರೈನಿಂಗಿಗೆಂದೂ, ಮದುವೆಗೆಂದೂ ಸಾಲಮಾಡಿದೆ. ಅದನ್ನು

ಮಾಡದೆ ಕಲಿಯುವುದೂ ಸಾಧ್ಯವಿರಲಿಲ್ಲ. ಅದರಲ್ಲಿ ಒಬ್ಬ ಸಾಲಗಾರ ಉಳಿದವರನ್ನು ಕೆರಳಿಸಿ, ನನ್ನ ಮೇಲೆ ದಾವೆ ಹೂಡಿದ್ದೂ ನಿಜ. ಆ ಸಂಗತಿಯಲ್ಲಿ ಗುಟ್ಟೇನೂ ಇಲ್ಲ. ಇನ್ನು ತಮಗೆ ತಿಳಿದಂತೆ ಮಾಡ ಬಹುದು" ಎಂದನು. ಸದಾನಂದರಾಯರು ನಗುತ್ತ "ಈ ಬರಹ ಯಾರದ್ದು?" ಎಂದು ಕೇಳಿದರು.

"ಅದೇ! ನಮ್ಮ ಸಂಕಪ್ಪ ಮಾಸ್ತರರದ್ದಲ್ಲವೇ?"

"ಯಾರು? ರಿಟೈಯರ್ಡ್ ಆದವರು."

" ಅಹುದು."

"ಓದಿ ನೋಡಿ" ಎಂದು ಆ ಬಿನಾಮಿ ಅರ್ಜಿಯನ್ನು ಅವನ ಕೈಗೆ ಕೊಟ್ಟರು.

"ಅಯ್ಯೋ ಸ್ವಾಮಿ, ಬರಹ ಅವರದ್ದೇನೆ. ಆದರೆ ಅವರಿಗೆ ನನ್ನ ಮೇಲೆ ಯಾವ ವೈರವೂ ಇರಲಿಕ್ಕಿಲ್ಲ. ಪ್ರಾಯಶಃ, ಅವರು ನಾಗರಾಜ ಯ್ಯನವರ ಹೇಳಿಕೆಯಿಂದ ಹೀಗೆ ಬರೆದಿರಲೂ ಬಹುದು. ಇದು ತಳ್ಳಿ ಕಾಗದ" ಎಂದು ಅಚ್ಚುತ ಅವರಿಗೆ ಹೇಳಿದನು.

ಸದಾನಂದರಾಯರು ಕನಿಕರದಿಂದ—"ನಿಮ್ಮ ಮೇಲೆ ಆಗಾಗ ಸಾಲದ ತಗಾದೆ ಬರುತ್ತಿದ್ದರೆ, ಒಂದಲ್ಲ ಒಂದು ದಿವಸ ನಿಮ್ಮ ಕೆಲಸಕ್ಕೆ ತೊಂದರೆಯನ್ನು ತಂದೀತಲ್ಲ. ಅಲ್ಲದೆ ನಿಮ್ಮ ಮನಸ್ಸಿಗೂ ಅದರಿಂದ ಸುಖ ಸಿಕ್ಕಲಾರದು. ಏನಾದರೂ ಮಾಡಿ, ಈ ದಶಂಬರ ತಿಂಗಳೊಳಗೆ ಅದನ್ನೆಲ್ಲ ಮುಗಿಸಿಬಿಡಿ. ಆಸ್ತಿ ಮಾರಿಯಾದರೂ ಮುಗಿಸಿಬಿಡುವುದು ಸರಿಯೆಂದು ನನಗೆ ಕಾಣುತ್ತದೆ. ಇನ್ನು ನಿಮ್ಮ ಇಷ್ಟ" ಎಂದರು. ಮುಂದೆ ಅವರಲ್ಲಿ ಮಾತುಗಳು ಆಪ್ತವಾಗಿಯೇ ನಡೆದುವು. ಅಚ್ಚುತನ ಮನೆಯ ಸುಖದುಃಖಗಳಿಗೂ ಅವರು ಕಿವಿಗೊಟ್ಟರು. ಬಲುಹೊತ್ತು ಮಾತುಕತೆಯಾಯಿತು. ಅನಂತರ "ಮಾಸ್ತರರೇ, ಇನ್ನೊಂದು ಸಂಗತಿ ಕೇಳುತ್ತೇನೆ-ಹೇಳುತ್ತೀರಾ?" ಎಂದರು.

"ಯಾವ ವಿಚಾರ? ತಿಳಿದಿದ್ದರೆ ಹೇಳುತ್ತೇನೆ" ಎಂದ ಅಚ್ಚುತ.

"ನಿಮಗೆ ತಿಳಿಯದೆ ಇರಲಿಕ್ಕೂ ಇಲ್ಲ. ಈಗ ನಾನು ಕರೆಯಿಸಿದ ಹುಡುಗಿ, 'ಕಮಲೆ'ಯೇ ಅವಳ ಹೆಸರು? ಅವಳ ವಿಷಯದಲ್ಲೂ ಹೆಡ್ ಮಾಸ್ತರರ ವಿಷಯದಲ್ಲೂ ದೂರು ನನ್ನಲ್ಲಿಗೆ ಬಂದಿದೆ" ಎಂದರು.

"ಛೇ! ಇರಲಾರದಪ್ಪ! ನಾರಾಯಣರಾಯರು ನನಗೂ ಗುರುಗಳು. ಅವರನ್ನು ನಾನು ಬಹುಕಾಲದಿಂದಲೂ ಬಲ್ಲೆ."

"ಆದರೆ ಇಂಥ ವಿಷಯದಲ್ಲಿ, ಯಾರೂ ಭರವಸೆ ಹೇಳುವುದು ಕಷ್ಟವಲ್ಲವೇ?"

ಆ ಮಾತು ತಿರುಗಿ ಮುಂದುವರಿಯುವಂತಿರಲಿಲ್ಲ. ಉಪಾಧ್ಯಾಯರುಗಳು,ಇನ್ಸ್‌ಪೆಕ್ಟರರಿಗೆ ಕಾಫಿ ಉಪಹಾರ ತರಿಸಿಕೊಟ್ಟರು. ಅವರು ಅವುಗಳ ಸೇವನೆಯನ್ನು ಮಾಡಿ ಮುಗಿಸಿದರು. ಅಷ್ಟರಲ್ಲಿ, ಕಮಲೆ ತನ್ನ ತಂದೆ ನಂಜಪ್ಪನೊಡನೆ ಬಂದಳು. ನಂಜಪ್ಪ ಇನ್ಸ್‌ಪೆಕ್ಟರರ ಮುಂದೆ ನಿಂತು "ಏನು ಕರೆಯಿಸಿದಿರಿ, ಧನಿಯರೇ?" ಎಂದು ಕೇಳಿದ.

"ನೀವು ಇಲ್ಲಿನ ಶಾಲೆಯ ಹೆಡ್‌ಮಾಸ್ತರರ ವಿಷಯ ದೂರು ಕೊಟ್ಟಿದ್ದೀರಲ್ಲ. ಅದರ ತನಖೆಗೆ ನಾನು ಬಂದದ್ದು" ಎಂದರು. ನಂಜಪ್ಪನಿಗೆ ದಿಗಿಲು ಹಾರಿತು. "ಯಾರು? ನಾನೇ! ನಾನು ಯಾರಿಗೂ ದೂರು ಕೊಡಲಿಲ್ಲವಲ್ಲ!"

"ಇದಲ್ಲವೇ ನಿಮ್ಮ ಅರ್ಜಿ ಸ್ವಹಸ್ತದ್ದು" ಎಂದು ಅವನ ಕೈಗೊಂದು ಕಾಗದ ಕೊಟ್ಟರು. ನಂಜಪ್ಪ ಓದಿ ನೋಡಿದ. "ಸ್ವಾಮೀ, ದೇವರಾಣೆ. ನಾನು ಇದನ್ನು ಬರೆದವನಲ್ಲವಲ್ಲ. ನನ್ನ ಮಗಳಿಗೆ ಯಾರೂ ಈ ವರೆಗೆ ಯಾವ ತಂಟೆ ಮಾಡಿದ್ದೂ ಇಲ್ಲವಲ್ಲ. ಹಾಗಿದ್ದರೆ ನಾನು ಅವಳನ್ನು ಇದೇ ಶಾಲೆಗೆ ತಿರುಗಿ ಕಳುಹಿಸುತ್ತಿದ್ದೆನೇ" ಎಂದನು.

ಅಲ್ಲಿಂದ ನಾರಾಯಣ ಮಾಸ್ತರರನ್ನು ಕರೆಯಿಸಿಕೊಂಡರು. "ಮಾಸ್ತರರೇ, ಇಷ್ಟೆಲ್ಲ ತಗಾದೆಗಳು ಸುಳ್ಳೇ ಇರಲಿ; ಸತ್ಯವೇ ಇರಲಿ, ಅವು ಹೊರಡಬೇಕಾದರೆ ಕಾರಣವೇನು? ಅದರಲ್ಲೂ ಈ ಹುಡುಗಿಯ ಹೆಸರನ್ನು ಸೂಚಿಸಿ ಬರೆದಿರಲು" ಎಂದರು. ಅಲ್ಲಿ ನಿಂತಿದ್ದ ಕಮಲೆ ಮುಖ ತಗ್ಗಿಸಿದಳು.

"ಹೇಳು ಕಮಲಾ"–ಎಂದರು ನಾರಾಯಣ ಮಾಸ್ತರರು. ಉಳಿದವರನ್ನು ಅಲ್ಲಿಂದ ಕಳುಹಿಸಿದರು. ನಂಜಪ್ಪ ಅಲ್ಲೇನೆ ನಿಂತಿದ್ದ. ತನ್ನ ಮಗಳು ತನಗೂ ತಿಳಿಸದ ಸಂಗತಿಯೇನಿತ್ತೆಂದು ಅವನಿಗೂ ಕುತೂಹಲವಾಯಿತು. ಕಮಲೆ ಬಲು ಸಾಹಸಮಾಡಿ: "ನಾನು ಶಾಲೆಗೆ ಬರುವಾಗ ಆ ದೊಡ್ಡ ಮನೆಯವರು ನನ್ನ ಹಿಂದೆ ನಿತ್ಯವೂ ಬರಲು ಶುರು

ಮಾಡಿದರು. ಒಂದು ದಿನ ನಮ್ಮ ಮಾಸ್ತರರು ಕಂಡರು. ನಾನು ಅವರಲ್ಲಿ --'ಹೀಗೆ ನನಗೆ ಬಹಳ ಕಷ್ಟಕೊಡುತ್ತಾರೆ' ಎಂದು ದೂರುಕೊಟ್ಟೆ. ಆಗ ಮಾಸ್ತರರು ಅವರನ್ನು ನನ್ನೆದುರಿಗೆ ನಿಲ್ಲಿಸಿ, ಚೆನ್ನಾಗಿ ಬೈದು ಕಳುಹಿಸಿದರು. 'ನಿಮ್ಮನ್ನು ಪೋಲಿಸಿಗೆ ಕೊಡುತ್ತೇನೆ, ಕಾಲು ಮುರಿಸಿಯೇನು!' ಎಂದು ಅವರನ್ನು ಬೆದರಿಸಿಬಿಟ್ಟರು. ಅಂದಿನಿಂದ ಅವರು ತಿರುಗಿ ನನ್ನ ತಂಟೆಗೆ ಬರಲಿಲ್ಲ" ಎಂದಳು.

ಇನ್ಸ್‌ಪೆಕ್ಟರರು "ನೀನೇಕೆ ಅದನ್ನು ಮಾಸ್ತರರಿಗೆ ಮೊದಲು ಹೇಳಿದೆ; ನಿನ್ನ ತಂದೆಗೆ ಯಾಕೆ ಹೇಳಲಿಲ್ಲ?"

"ನಾನಿಲ್ಲವೆ ಬದುಕಿ? ಕಮಲು; ಯಾರವ, ದೊಡ್ಡಮನೆ ನಾಗರಾಜನೇ? ಅವನದು ದೊಡ್ಡ ಮನೆಯಾದರೆ ನನಗೇನು? ಅವನ ಕಾಲು ಮುರಿದುಹಾಕತ್ತಿದ್ದೆನಲ್ಲ ನಾನು" ಎಂದ ನಂಜಪ್ಪ. ಸುದ್ದಿ ಕೇಳಿಯೇ ಅವನು ರೇಗಿಹೋದ.

ಅದಕ್ಕೆ ಕಮಲು, "ಮಾಸ್ತರರು ಅಂದರು: ಈ ಸಂಗತಿಯನ್ನು ಯಾರಲ್ಲೂ ಹೇಳಬೇಡ! ಇನ್ನು ಅವನು ನಿನ್ನ ತಂಟೆಗೆ ಬಾರದಿದ್ದರಾಯಿತಲ್ಲ. ಅವನ ಮರ್ಯಾದೆ ಈ ಸಾರಿಗೆ ಉಳಿಸುವ' ಎಂದರು. ಅದರಿಂದ ನಾನು ಬಾಯಿಮುಚ್ಚಿ ಕುಳಿತೆ" ಎಂದಳು.

"ಸ್ವಾಮಿ, ಆಗಲೇ ಅವನನ್ನು ಬಹಿರಂಗಕ್ಕೆ ಎಳೆಯಬಹುದಿತ್ತು. ಅವನ ಹೆಸರಿನ ಜತೆಗೆ, ಇವಳು ಇಷ್ಟು ಸಣ್ಣವಳು, ಇವಳ ಹೆಸರನ್ನೂ ಹೇಳಬೇಕಾಗುತ್ತಿತ್ತು. ಊರವರು ಅವಳ ವಿಷಯದಲ್ಲಿ ತಪ್ಪು ತಿಳಿಯಬಾರದೆಂದು ನಾನು ಸುಮ್ಮನಾದೆ. ಆದರೆ ಅವನು, ನನ್ನ ಹೆಸರನ್ನು ಕೆಡಿಸಲು ತುಂಬ ಪ್ರಯತ್ನ ಮಾಡಿದ. ಈಗಲೂ ಪ್ರಯತ್ನ ಮಾಡುತ್ತಿದ್ದಾನೆ. ನಾನು ಈ ಕರೆಕರೆ ಕಂಡೇನೆ 'ಈ ಊರು ಸಾಕು, ಒಮ್ಮೆ ಬೇರೆ ಊರಿಗೆ ವರ್ಗಮಾಡಿಸಿ ಕೊಡಿ' ಎಂದು ನಿಮ್ಮಲ್ಲಿಗೆ ಮೇ ರಜೆಯಲ್ಲಿ ಬಂದಾಗ ದಮ್ಮಯ್ಯ ಹಾಕಿದ್ದು" ಎಂದರು.

ಮುಂದೆ ಎಲ್ಲವೂ ಬೆಳುದಿಂಗಳಂತೆ ಸ್ಪಷ್ಟವಾಯಿತು. ನಾಗರಾಜ ಎಷ್ಟೆಲ್ಲ ಕಾರುಭಾರಿಯೆಂದು ಸದಾನಂದರಾಯರೂ ಮನಗಂಡರು. "ಹೋ, ಅದಕ್ಕೇನು? ನನ್ನನ್ನು ಬಗಲಿಗೆ ಹಾಕಿಕೊಳ್ಳುವ ಎಂದು ನಿನ್ನೆ ನಾನು ಬಂದಿಳಿದೊಡನೆಯೇ ಅವನು ಭೇಟಿಕೊಟ್ಟದ್ದು" ಎಂದರು.

ಈಗ ಸದಾನಂದರಾಯರು ಬಂದ ಕೆಲಸವಾಯಿತು. ಆ ಸಂಜೆಯೇ ಅವರು ಸೈಕಲು ಸವಾರಿಯಿಂದ ಉಪ್ಪಿನಂಗಡಿಗೆ ಹೊರಟರು. ಹೊರಡುತ್ತ ನಾರಾಯಣರಾಯರನ್ನು ಕರೆದು "ಹೌದಯ್ಯ, ನೀವು ಸದ್ಯ ವರ್ಗ, ಗಿರ್ಗ ಕೇಳಬೇಡಿ. ಮುಂದಿನ ವರ್ಷ ಮಾಡಿಸುವ. ಅಂದರೆ ಈ ಎಲ್ಲ ಗುಲ್ಲು ಹೊರಟಾಗಲೇ ನೀವು ಊರುಬಿಟ್ಟದ್ದಾದರೆ, ನಾಗರಾಜ, ತನ್ನಿಂದಲೇ ನಿಮ್ಮ ವರ್ಗಾವರ್ಗಿ ಆಯಿತೆಂದು ಹೇಳಿಕೊಂಡು ಬಂದಾನು. ಅಲ್ಲದೆ ಪ್ರಸಿಡೆಂಟರು ನನ್ನೊಡನೆ, 'ನಿಮ್ಮನ್ನು ಬೇರೆ ಶಾಲೆಗೆ ವರ್ಗಾಯಿಸಬಹುದಲ್ಲ. ಕುಂಬಳೆಯ ಹತ್ತಿರ ಒಂದು ಶಾಲೆ, ಎಲಿಮೆಂಟರಿ ಶಾಲೆ ಕ್ಷೀಣಾವಸ್ಥೆಯಲ್ಲಿದೆ. ಅಲ್ಲಿಗೆ ನಿಮ್ಮನ್ನು ಕಳುಹಿಸಿದರೇನು-ಸುಧಾರಿಸಲು?' ಎಂದಿದ್ದಾರೆ. ಆದುದರಿಂದ ಅವರಿಗೆ ತೋರಿದರೆ ಅವರೇನೆ ನಿಮ್ಮನ್ನು ವರ್ಗಾಯಿಸಬಹುದು. ಆದರೆ ನನ್ನನ್ನು ಕೇಳಿ ಮಾಡಬಹುದು. ನಾಗರಾಜನ ಮೆಹನತ್ತಿನಿಂದ ಹಾಗೆ, ಅವರು ಪ್ರಸ್ತಾಪ ಮಾಡಿರಲೂ ಸಾಕು. ಒಂದೆರಡು ಅರ್ಜಿಗಳು ಪ್ರೆಸಿಡೆಂಟರಿಂದಲೇ ನನಗೆ ಬಂದುವು. ಆದುದರಿಂದ, ಅವನನ್ನೊಮ್ಮೆ ಮುಗಿಸಿಬಿಡುವ. ಸ್ವಲ್ಪ ಸಮಯ ಹೋದ ಮೇಲೆ, ನಿಮಗೆ ಸರಿ ಕಂಡಲ್ಲಿಗೆ ಕಳುಹಿಸುವ" ಎಂದು ಅವರನ್ನು ಸಮಾಧಾನಪಡಿಸಿ ತೆರಳಿದರು.

"ಅಂತು ಈ ಊರು ಬೇಡ; ಈ ತಂಟೆ ತಗಾದೆಯಿಂದ ಯಾರಿಗೆ ಸುಖವಿದೆ ಸ್ವಾಮಿ? ಮನಸ್ಸಿಗಾದರೂ ಒಂದು ಸುಖಬೇಕಲ್ಲ" ಎಂದರು ನಾರಾಯಣರಾಯರು-ಅವರನ್ನು ಬೀಳ್ಕೊಡುತ್ತ.

ಆ ಮಳೆಗಾಲದಲ್ಲಿ ಕವಿದ ಒಂದು ಭೀಕರ ಮುಗಿಲು, ಅಂದು ಸುಲಭದಲ್ಲಿ ಚೆದರಿತು.

ಜಾನ್‌ಸನ್ ಮಾಸ್ತರರು, ಆ ದಿವಸ ಹಿಗ್ಗಿನಿಂದ ಕ್ಲಬ್ಬಿನಲ್ಲಿ ಒಂದು ಔತಣವನ್ನು ಗೆಳೆಯರಿಗೆ ಏರ್ಪಡಿಸಿದರು. ಶಾಲೆಯ ವಿರುದ್ಧವಾಗಿ ಬಂಡಾಯವೆಬ್ಬಿಸಿದ ನಾಗರಾಜನ ಮೇಲೆ ವಿಜಯ ದೊರಕಿದ ಬಗ್ಗೆ,ಅವರು ತುಂಬ ಹಿಗ್ಗಿ ಕುಣಿದಾಡಿದರು. ನಾಗರಾಜನಿಗಿಂತ ದೊಡ್ಡ ಬಾಯಿಮಾಡಿ, ಅವನು ಮಾಡಿದ ಕಿತಾಪತಿಗಾಗಿ, ಚೇಷ್ಟೆಮಾಡಿದರು. ಸಂಕಪ್ಪಮಾಸ್ತರರನ್ನು ಬರಮಾಡಿಕೊಂಡು,"ಹೋಯ್ ಮಾಸ್ತರರೇ, ಜಾತಿ ಜಾತಿಗೆ ವೈರ, ನಾಯಿ ನಾಯಿಗೆ ವೈರ! ಅಲ್ಲವೇ?" ಎಂದರು.

ಸಂಕಪ್ಪಗೌಡರು ಅಳುಕಿನಿಂದ "ನಾನೇನು ಮಾಡಿದೆನಪ್ಪ, ನಿಮ್ಮ ತಲೆಗೆ ಕಲ್ಲುಹಾಕಿದೆನೇ?" ಎಂದು ಕೇಳಿದರು.

"ನನ್ನ ತಲೆ ಹೊಡೆದಿದ್ದರೆ ಥಟ್ಟನೆ, ನಿಮ್ಮನ್ನೇ ಮುಗಿಸಿಬಿಡುವುದಿಲ್ಲವೇ? ನೀವು ಏನೂ ತಿಳಿಯದ ಅಚ್ಯುತರಾಯರ ಮೇಲೆ ಚುಚ್ಚಿಕೊಟ್ಟದ್ದೇ ನನಗೆ ಆಶ್ಚರ್ಯವಾಗುತ್ತದೆ. ಮಾಸ್ತರ ಜಾತಿ ನಮಗೇ ವೈರವಾಯಿತಲ್ಲ!"

"ನಾನೇ? ಅಚ್ಯುತರಾಯರ ಮೇಲೆ ವೈರ ಸಾಧಿಸಿದವನು?"

"ಯಾಕಯ್ಯ ನಿಮ್ಮ ಠಕ್ಕು! ನಿಮ್ಮ ಬರಹದ ಗುರುತು ಸಿಗದೇನು? ಇನ್ಸ್‌ಪೆಕ್ಟರರು ನಿಮ್ಮ ಅರ್ಜಿಯನ್ನು ತಂದು ತನಖಿಮಾಡಿ ಹೋದರಲ್ಲ. ಅಚ್ಯುತನಿಗೆ ತಲೆತುಂಬ ಸಾಲವಿದ್ದರೆ ನಿಮಗೇನು ಬಂತು? ನಿಮ್ಮಪ್ಪನ ಗಂಟು ಹೋಯಿತೇ?" ಎಂದರು. ಜಾನ್‌ಸನರಿಗೆ ಕೋಪ ಬಂದರೆ, ಇಂಗ್ಲಿಷಿನಲ್ಲಿ ಬಯ್ಯುವಂತಿರಲಿಲ್ಲ. ಅಯ್ದು ಸ್ವದೇಶೀ ಪದಗಳನ್ನು ಉಪಯೋಗಿಸಿ, ಮಂಗಳಾರತಿ ಮಾಡುವವರು. ಅದನ್ನೇ ಮಾಡಿ ಮುಗಿಸಿದರು. ಆಗ ಸಂಕಪ್ಪ ಮಾಸ್ತರರು-"ನಿಮ್ಮ ಕ್ಲಬ್ಬಿಗೆ ಬಂದಿದ್ದೇನೆಂದು ಹೀಗೆ ಮಾಡುತ್ತೀರೋ" ಎಂದು ನೊಂದುಕೊಂಡು ಅಲ್ಲಿಂದ ಹೊರಟವರು ಇನ್ನೆಂದೂ ಆ ಕ್ಲಬ್ಬಿಗೆ ಕಾಲಿರಿಸಲಿಲ್ಲ. ಆ ದಿನದ ಅವರ ಮನಸ್ಸಿನ ಸ್ಥಿತಿ ಹೇಳುವಂತಿರಲಿಲ್ಲ.

ನಾರಾಯಣ ಮಾಸ್ತರರು ಜಾನ್‌ಸನರನ್ನು ಸುಮ್ಮನಿರಿಸಿ "ಅವರನ್ನು ಗದರಿಸಿ ಫಲವೇನು? ಅವೆಲ್ಲಾ ನಾಗರಾಜನ ಚಾಲಗಳು. ಅವನ ಮರ್ಯಾದೆ ಹೋಗಬಾರದೆಂದು ನಾನು ಸುಮ್ಮನೆ ಕುಳಿತದ್ದಕ್ಕೆ, ಅವನೇ ನನಗೆ ಪ್ರತೀಕಾರ ಬಗೆದನಲ್ಲ. ನನಗೆ ಧೈರ್ಯವಿತ್ತು-ಇದರ ಪರಿಣಾಮ ಹೀಗೇ ಆದೀತೆಂದು. ಆಗಲೆಂದೇ ನಾನು ಕುಳಿತೆ."

"ಅಯ್ಯೋ ಮಾಸ್ತರರೇ! ನಾನು ನಾಲ್ಕು ಸಾರಿ ಕೇಳಿದರೂ 'ಆ ವಿಷಯ ಬೇಡ' ಎಂದಿರಿ ನೀವು. ನೋಡಿ, ನಾಳೆಗೆ ತಮಾಷೆ ಎಬ್ಬಿಸುತ್ತೇನೆ. ನಾಗರಾಜ ಆ ದಿನ ನನ್ನನ್ನು ಕರೆಯಿಸಿ, ಮಾಸ್ತರರನ್ನೆಲ್ಲ ದೂರಿದನಲ್ಲವೇ? ಅದಕ್ಕೊಂದು ದಿನ ಸಮಾಧಾನ ಹೇಳುತ್ತೇನೆ ಎಂದಿದ್ದೆ. ಹೇಳುತ್ತೇನೆ ನಾಳೆಗೆ. ನಂಜಪ್ಪನನ್ನು ಅವನಲ್ಲಿಗೆ ಕರೆದುಕೊಂಡು ಹೋಗಿ ಹೇಳಿಬರುತ್ತೇನೆ. ಅಣ್ಣಗೌಡ ಜತೆಗೆ ಬಂದಿದ್ದರೂ ಚೆನ್ನಾಗುತ್ತಿತು."

"ಬೇಡ, ಜಾನ್ಸನರೇ! ನಾಯಿ ಬೊಗಳಿತೆಂದು........"

''ಹೋ! ನಿಮ್ಮ ವೇದಾಂತಕ್ಕೆ ಬೆಂಕಿಬಿತ್ತು! ತನ್ನ ತಳ್ಳಿಗೆ ಬಾರದೆ, ದಾರಿ ಮೇಲೆ ಹೋಗುವವರನ್ನು ಕಂಡು ಬೊಗಳುವ ನಾಯಿಗೆ ಬುದ್ಧಿ ಕಲಿಸಬೇಕು. ನಾಳೆ ಕೊಬ್ಬಿದ ಮೇಲೆ ಅವನಿಗೆ ಪಾಠ ಕಲಿಸಿ ಫಲ ವಿಲ್ಲ. ನೀವು ನಾಳೆಗೆ ವರ್ಗಮಾಡಿಸಿಕೊಳ್ಳುವವರು. ನಾರಾಯಣ ರಾಯರೇ! ನಾವು ಊರಮನೆಯಲ್ಲಿರುವವರಲ್ಲವೇ? ಇವನನ್ನು ಹೀಗೇನೆ ಬೆಳೆಯಗೊಟ್ಟರೆ, ಇಲ್ಲಿ ನಾವು ಬದುಕಲಿಕ್ಕೆ ಬಂದೀತೆ? ನಮ್ಮ ಕೈಯಲ್ಲಿ ಕಲಿತ ಹುಡುಗ ಇವನು. ನಮಗೆ ಬುದ್ಧಿಹೇಳುವ ಕಾಲ ಬಂತೇ? truly this is Kaliyuga'' ಎಂದು ಅಂದಿನ ಪ್ರಕರಣವನ್ನು ಆರ್ಭಟೆಯಿಂದಲೇ ಮುಗಿಸಿದರು.

ಉಳಿದವರ ಚಿಂತೆಗಳು ಕಳೆಯುತ್ತ ಬಂದ ಹಾಗೆ, ಅಚ್ಯುತನ ಚಿಂತೆಯು ಸಾಲದ ನಿಮಿತ್ತ, ಮೇಲಾಫೀಸರರು ಕೊಟ್ಟ ಎಚ್ಚರಿಕೆಯ ನಿಮಿತ್ತ, ಇನ್ನಷ್ಟು ತೀವ್ರವಾಗುತ್ತ ಬಂದಿತು. ಆತ ಸಾಲನಿವಾರಣೆ ಮಾಡುವುದೆಂದರೆ ಹೇಗೆ? ಅದು ಅವನ ವರಮಾನದಿಂದ ಒಮ್ಮೆಗೇ ಮುಗಿಸಲು ಬರುವ ಬದುಕಲ್ಲ. ಯಾವುದಾದರೊಂದು ಸಾಲ ತೀರಿಸುವುದೂ ಕಷ್ಟವೇ! ತೀರಿಸಲು ತನ್ನ ಹೊಲ ಮನೆಗಳನ್ನು ಒತ್ತೆಯಿರಿಸಿ, ಯಾರಿಂದಾದರೂ ಸಾಲಪಡೆಯಬೇಕು. ಅದರಿಂದ ಏನು ಲಾಭವಾಯಿತು? ಅದರಿಂದ ನಾಲ್ಕು ವರ್ಷ ಕಾಲ ಸಮಯವನ್ನು ಮುಂದೆ ನೂಕಬಹುದೇ ವಿನಾ, ಹೊರೆ ಕಡಿಮೆಯಾಗಲಾರದು. ಇತ್ತ, ಒಮ್ಮೆ ಅದರ ತೊಡಕನ್ನು ನಿವಾರಿಸಲೆಂದು, ಇದ್ದ ತುಣುಕು ಭೂಮಿಯನ್ನು ಮಾರುವುದೇ ಕಟ್ಟಕಡೆಯ ಉಪಾಯವೆಂದು ಕಂಡಿತು. ಆದರೆ ಹೇಗೆ ಮನಸ್ಸು ಒಪ್ಪೀತು! ನಾಗರಾಜನು ಯಾವ ಅಪ್ರಿಯವಾದ ಸುದ್ದಿಯನ್ನು ಹುಟ್ಟಿಸಿದನೋ, ಅದರಂತೆಯೇ ತಾನು ವರ್ತಿಸಿದರೆ, ತನ್ನ ಮರ್ಯಾದೆ ಎಲ್ಲಿ ಉಳಿದೀತು? ಅಲ್ಲದೆ ತಾನು ದುಡಿದು ಗಳಿಸಿದ ಆಸ್ತಿಯಲ್ಲ. ಹಿರಿಯರಿಂದ ಬಂದೊಂದು ತುಣುಕು ಭೂಮಿ; ಅದನ್ನು ವಿಕ್ರಯಿಸಲು ತನಗೆ ಯಾವ ಅಧಿಕಾರವಿದೆ? ತಾನು ಮಾಡಿದ ಸಾಲಕ್ಕಾಗಿ ಅದನ್ನು ಮಾರುವುದೇ? ತಾನು ವಿದ್ಯಾರ್ಜನೆಗೆ ಮಾಡಿದ ಸಾಲ, ಅಂಗಡಿ ಸಾಮಾನುಗಳ ಸಾಲ, ಮದುವೆಯ ಸಾಲ, ಅವುಗಳ ಮೇಲಣ ಬಡ್ಡಿ,

ದಾವೆಯ ವೆಚ್ಚ-ಇವೆಲ್ಲ-ಯಾವ ತೆರನಲ್ಲಿ ಲೆಕ್ಕ ಹಾಕಿದರೂ ಸಾವಿರದ ಐನೂರು ರೂಪಾಯಿಗಳ ತನಕ ಮುಟ್ಟುತ್ತವೆ. ಇಷ್ಟೊಂದು ದೊಡ್ಡ ಹೊರೆ ಅವನನ್ನು ಮಣಿಗಿಸುವಂತೆಯೇ ಕಂಡಿತು. ಆ ವ್ಯಥೆಯಿಂದ ಅವನ ಪಾಲಿಗೆ, ಹಗಲು ರಾತ್ರಿ ಒಂದಾಗಿ ಕಾಣಿಸಿತು.

ನಿತ್ಯ ಲಕ್ಷ್ಮಮ್ಮ ತನ್ನ ಮಗನಂತೆ ತಾನೂ ಚಿಂತೆಯಿಂದ "ಏನು ಮಾಡಲಿ ದೇವರೇ" ಎಂದೆನ್ನತೊಡಗಿದಳು. ಆಸ್ತಿಯನ್ನು ಅಡವು ಮಾಡಿ ಯಾದರೂ ಸಾಲ ತೀರಿಸದಿರಲು ಬಂದೀತೆ-ಎಂದು ಯೋಚಿಸುವಳು. ಹಾಗೆ ಮಾಡುವಂತೆ ಮಗನಿಗೆ ಉಪದೇಶಿಸುವುದಕ್ಕೆ ಧೈರ್ಯವುಂಟಾಗ-ತ್ತಲಿಲ್ಲ. ಹಾಗೇಂದು ಭೂಮಿಗೂ, ಭೂಮಿಯ ಉತ್ಪನ್ನಗಳಿಗೂ ಒಮ್ಮೆ ಇಳಿದ ಬೆಲೆ ಇನ್ನೂ ಏರಲಿಲ್ಲ. ಒಂದೂವರೆ ಸಾವಿರಕ್ಕೆ, ಅಷ್ಟೆಲ್ಲ ಆಸ್ತಿಯನ್ನು ಬರೆದು ಕೊಡಬೇಕಾದೀತು. ಹಾಗೆ ಬರೆದು ಕೊಟ್ಟರೆ, ಅದನ್ನು ಮಾರಿದಂತೆಯೇ ಸರಿ-ಎಂದು ಅವಳ ಹಿಂದಣ ಅನುಭವ ಹೇಳುತ್ತಿತ್ತು.

ಅಚ್ಯುತರಾಯ ಮೇ ತಿಂಗಳಲ್ಲಿ, ಸೊಸೆಯ ಮದುವೆಯ ಕಾಲದಲ್ಲಿ ಎಷ್ಟು ಉಲ್ಲಾಸವಾಗಿದ್ದ! ಮಳೆಗಾಲ ಬಂದೊಡನೆಯೇ ಹೇಗೆ ಆದ? ದಿನ ಸವೆಯುತ್ತ, ಅವನ ಮುಖ ಕಳೆಗುಂದುತ್ತಿದೆಯೆಂದು ರುಕ್ಮಿಣಿಯೂ ಮನಗಂಡಳು. ತೀರ ಸ್ಪಷ್ಟವಾಗಿ, ತನ್ನ ತಾಪತ್ರಯಗಳನ್ನು ಅವಳೊಡನೆ ಚರ್ಚಿಸಿಲ್ಲವಾದರೂ, ತಾಯೊಡನೆ ಈ ವಿಷಯ ಮಾತನಾಡುತ್ತಿರುವಾಗ, ಅವಳು ಸಮೀಪದಲ್ಲಿ ನಿಂತು ಕೇಳುತ್ತಿದ್ದಳು. ಇನ್ಸ್ಪೆಕ್ಟರರು ಕಡಬಕ್ಕೆ ತನಖಿಗೆ ಬಂದು ಹೋದ ಎರಡು ತಿಂಗಳಲ್ಲೇ ಅವರ ಮೇಲಿನ ದಾವೆಗಳೆಲ್ಲ ತಮಗೆ ಅವಗುಣವಾಗಿ ತೀರ್ಪುಗೊಂಡವು ಎಂಬ ವಾರ್ತೆ ಅವರಿಗೆ ದೊರೆಯಿತು. ದಾವೆಯ ವೆಚ್ಚಗಳೂ ಅವರ ತಲೆಯ ಮೇಲೆ ಬಂದವು. ಅಚ್ಯುತನ ಓಡಾಟಗಳು ವ್ಯರ್ಥವಾದುವು. ಸಾಲ ಸಲಿಸಲು ಯಾವುದೊಂದು ತೆರಪೂ ಸಿಗದೇ ಹೋಯಿತು. ಕೈಯಲ್ಲಿ ಕೋರ್ಟಿನ ಡಿಕ್ರಿ ಸಿಕ್ಕಿತೆಂದರೆ, ಅದರ ಬೆಂಗಡೆಯಲ್ಲಿ ಸಾಲಗಾರರ ಕಾಟ ತೊಡಗುತ್ತದೆ— ಎಂಬುದು ಕಂಡಿತ. ಅಚ್ಯುತ ಕಾದಿರುವುದು ಕ್ರಿಸ್ಮಸ್ ರಜೆಯ ಸಲುವಾಗಿ. ಹತ್ತೆಂಟು ದಿನಗಳಲ್ಲಿ, ಒಬ್ಬರಲ್ಲ ಒಬ್ಬರನ್ನು ಹಿಡಿದು, ಒಂದೊಂದನ್ನು ನಿವೃತ್ತಿಪಡಿಸದಿದ್ದರಾಗದು ಎಂದುಕೊಂಡ. ರುಕ್ಮಿಣಿ ಗಂಡನನ್ನು ಸಂತೈಸಲು ಪ್ರಯತ್ನಿಸಿದಳು-"ನಾನು

ಮನೆಗೆ ಹೋಗಿ ಬರಲೇ? ಅಪ್ಪನೊಡನೆ ಕೇಳಲೇ" ಎಂದಳು. ಅಚ್ಯುತ 'ಬೇಡ'ವೆಂದ. "ನಮ್ಮ ಮಾನ ಮರ್ಯಾದೆಗಳ ಕಷ್ಟ ಅವರಿಗೆ ಬೇಡ" ಎಂದನು. "ಅಪ್ಪಯ್ಯ ಏನಾದರೂ ಮಾಡಿಯಾರು" ಎಂದಳು ರುಕ್ಮಿಣಿ.

"ಮಾಡಲಿ, ಬಿಡಲಿ. ಅವರಿಗೆ ಅದು ಉಭಯ ಸಂಕಟದ ಸಂಗತಿ. ನಾಳೆಗೆ ಅಳಿಯನಿಗೆ ಸಾಲ ಕೊಟ್ಟು, ಜೋರು ಮಾಡುವಂತೆಯೂ ಇಲ್ಲ, ಬಡ್ಡಿ ಕೇಳುವಂತೆಯೂ ಇಲ್ಲ; ಆಸ್ತಿ ಅಡವು ಬರೆಯಿಸಿಕೊಳ್ಳುವಂತೆಯೂ ಇಲ್ಲ-ಹೀಗೆಲ್ಲ ತೊಂದರೆಗಳುಂಟು. ಅವರಾಗಿ ಸಹಾಯ ಮಾಡಿದರೆ ಬೇರೆ ನೋಡುವ. ನಾವಾಗಿ ಅವರನ್ನು ಕಂಡಿತ ಕೇಳಬಾರದು" ಎಂದನು. ರುಕ್ಮಿಣಿಗೆ ಅದೇಕೋ ಸಮಧಾನವನ್ನು ತರಲಿಲ್ಲ. ಸಾಲದ್ದಕ್ಕೆ ಅವನ ತಾಯಿ "ನರಸಿಂಹನನ್ನು ಮಾತನಾಡಿಸಿ ಬರಲೇ" ಎಂದಾಗ, ಆತ ಇನ್ನಷ್ಟು ಸಿಡಿದುಬಿದ್ದು, "ಅಮ್ಮ, ಅಪ್ಪಯ್ಯ ತೀರಿಕೊಂಡಾಗ ಇನ್ನೂರು ರೂಪಾಯಿಗಳ ಸಲುವಾಗಿ ಅವರಿಗೆ ಎಷ್ಟೆಲ್ಲ ಸಿಟ್ಟಾಯಿತು. ಎಷ್ಟು ಹಂಗಿಸಲಿಲ್ಲ ಅವರು? ಅದನ್ನು ತಿಳಿದೂ ಅವರಲ್ಲಿ ಸಾಲಕ್ಕೆ ಹೋಗುವುದೇ? ಬೇಡ...ಎಷ್ಟಕ್ಕೂ ಬೇಡ. ಅಂಥಾದ್ದಾದರೆ ರುಕ್ಮಿಣಿಯ ಚಿನ್ನ ತೆಗೆದುಕೊಂಡು ನೂರಿನ್ನೂರು ಮಾಡುವ. ಅವಳು ಒಲ್ಲೆನ್ನಲಾರಳು" ಎಂದನು. ರುಕ್ಮಿಣಿಗೆ ಈ ಮಾತು ಕೇಳಿಸದೆ ಇರಲಿಲ್ಲ. ಅವಳಿಗೆ ಚಿನ್ನವೆಂದರೆ ಜೀವ. ಆದರೆ ಗಂಡನ ಮೇಲಿನ ಪ್ರೀತಿ-ಚಿನ್ನಕ್ಕಿಂತ ಹೆಚ್ಚಿನದಿತ್ತು. ಅದೇ ರಾತ್ರಿ ಅವಳು "ನನ್ನ ಆ, ಈ ಚಿನ್ನಗಳನ್ನು ಒಟ್ಟಿಗೆ ಸೇರಿಸಿ ಒಂದು ಐನೂರು ರೂಪಾಯಿಗಳಾದರೂ ಸಿಗುವುದಾದರೆ ಮಾರಿಬಿಡಬಹುದಲ್ಲ" ಎಂದಳು.

"ಆ ಈ ಚಿನ್ನ ಎಂದರೆ" ಎಂದು ಅಚ್ಯುತ ಕೇಳಿದ.

"ಅಂದರೆ ಅಪ್ಪಯ್ಯ ಹಾಕಿದ್ದು ಇದೆಯಲ್ಲವೇ. ನೀವೂ ಹಾಕಿದ್ದು ಇದೆ. ಎರಡೂ ಸೇರಿ" ಎಂದಳು.

ಅಚ್ಯುತನಿಗೆ ಮೈ ರೋಮಾಂಚಗೊಂಡಿತು; ತಾನು ಕೊಟ್ಟುದರ ಜತೆಗೆ, ಅವಳ ತವರು ಮನೆಯವರು ಕೊಟ್ಟುದನ್ನೂ ಮಾರುವುದೇ? ನಾಳೆ ರುಕ್ಮಿಣಿ ತವರಿಗೆ ಹೋಗಬೇಕಿಲ್ಲವೆ! ಹೋದಾಗ ಚಿನ್ನವೇನಾಯಿತು-ಎಂದು ಕೇಳಿದರೆ ತನ್ನ ಮಾನಕ್ಕೆಷ್ಟು ಕುಂದು" ಎಂದು ಆತ ಗಾಬರಿಯಾದ. ಅವನ ಮನಸ್ಸು ಯಾವುದಕ್ಕೂ ಒಡಂಬಡದಾಯಿತು.

ಅಂತು ಶಾಲೆಗೆ ರಜೆ ಸಿಗುವ ತನಕ ಯಾವುದೋ ಒಂದು ಶುಭ ದಿನಕ್ಕೆ ಕಾದು ಕುಳಿತ. ಆ ರಜೆ ಬರುವುದರೊಳಗಾಗಿ— ಅವನಿಗೆ ಸಾಲದ ಮೊತ್ತ, ಡಿಕ್ರಿಯಾದ ಐವಜು-ಎಲ್ಲವು ಸಮನಾಗಿ ತಿಳಿದುವು. ಸಾವಿರದ ನಾನ್ನೂರಕ್ಕೆ ಸಮೀಪವಾಗಿತ್ತು. ರುಕ್ಮಿಣಿಯ ಚಿನ್ನಗಳನ್ನು ಮಾರಿದಲ್ಲಿ, ನಾನ್ನೂರು ತೀರಿಸಬಹುದೋ, ಏನೋ. ಆದರೆ ಸಾವಿರ ರೂಪಾಯಿ ಗಂಟು ಇನ್ನೂ ಉಳಿದೇ ಉಳಿಯುತ್ತಲ್ಲ. ಅದರ ಮೇಲೆ ಸೇಕಡಾ ಹತ್ತು, ಹನ್ನೆರಡರ ಬಡ್ಡಿಯನ್ನು ತೆರಬೇಕು! ತನ್ನ ನೌಕರಿ ತಾತ್ಕಾಲಿಕವಾದುದು. ಅದು ನಿಲುಗಡೆಗೆ ಬಂದರೆ? ಇನ್ನೊಮ್ಮೆ ಕೆಲಸ ಸಿಗುವ ತನಕ, ಮನೆಯ ವೆಚ್ಚದ ಜತೆಗೆ, ಬಡ್ಡಿ ಹಣದ ಉರುಳೂ ಗಟ್ಟಿಯಾಗಿ ತೂಗಿಕೊಂಡಂತೆ- ಎಂಬುದು ಸ್ಪಷ್ಟವಾಯಿತು.

ಇದು ಅಚ್ಯುತನ ಪಾಲಿಗೆ ಬೀಸುಬಲೆಯಾದರೆ, ಅವನ ವಿರೋಧಿ, ನಾಗರಾಜನಿಗೆ ಅದೇ ವಾರ್ತೆ ಹಬ್ಬದ ಊಟವಾಗಿದೆ. "ಹೇಯ್, ನಮ್ಮ ಮಾಣಿ ಮಾಸ್ತರರ ನಂಬರ ಬುರುಸ್! ಏನಿಲ್ಲ-- ಸಾವಿರದ ಐನೂರು ಅಸಲು, ಬಡ್ಡಿಯೊಂದು ಐನೂರು ಸೇರಿ ಎರಡು ಸಾವಿರ ರೂಪಾಯಿಗೆ ಡಿಕ್ರಿಯಾಗಿ ಬಿಟ್ಟಿದೆ. ಇನ್ನು ಮುಚ್ಚುಮರೆಯಲ್ಲಿ ಎಷ್ಟೆಲ್ಲ ಸಾಲವಿದೆಯೋ? ಅವರು ಹರಕು ಮುರಕು ಕೊಂಬಾರಿನ ಆಸ್ತಿ ಮಾರಿದರೂ ಅಷ್ಟು ಬೆಲೆ ಬರುವುದು ಕಷ್ಟ! ಇದೆಲ್ಲಕ್ಕಿಂತ ಹನ್ನೆರಡಾಣೆ ಖರ್ಚಿಂದ ಒಂದು ದಿವಾಳಿ ಅರ್ಜಿ ಅವನು ಹಾಕುವುದು ಒಳ್ಳೆಯದು" ಎಂದು ಸುದ್ದಿ ಹರಡಿ, ನಾಗರಾಜ ಅವನ ಮೇಲಿನ ಸೇಡನ್ನು ತೀರಿಸಿಕೊಳ್ಳುತ್ತಿದ್ದ. ನಾರಾಯಣರಾಯರ ಮೇಲೂ ಅವನಿಗೆ ತುಂಬ ಉರಿ. ಇನ್ಸ್‌ಪೆಕ್ಟರರು ಬಂದು, ತನ್ನ ಹಣೆಯ ಬರಹವನ್ನು ತಿಳಿದುಹೋದರೆಂದು, ಅವನಿಗೆ ಗೊತ್ತಾಗಿತ್ತು. ಶ್ಯಾನುಭೋಗರು ಅವನಲ್ಲಿ ಹೋದಾಗ "ಹೀಗೀಗೆ ಸಂಗತಿ. ಕೆಲವು ತಳ್ಳಿ ಅರ್ಜಿಗಳು ನಿಮ್ಮ ಕೈಬರಹದುವು, ಎಂದು ಯಾರೋ ಅವರಿಗೆ ಹೇಳಿದ್ದಾರೆ. ಅದಲ್ಲದೆ ಮತ್ತೆ ಇದೇನೋ ಒಂದು ಹೊಸ ಕತೆಯನ್ನೂ ಕೇಳಿದೆ" ಎಂದು ಅವನ ಅಭಿಮಾನವನ್ನು ಚುಚ್ಚಿದರು.

ಇವರೆಲ್ಲರಿಗಿಂತ ಉಗ್ರವಾದ ಸೇಡಿನ ಕ್ರಮ, ಜಾನ್‌ಸನ ಮಾಸ್ತರರದ್ದು, ಅವರ ಮನದ ಬೇಗುದಿ ಸಾಮಾನ್ಯವಾಗಿರಲಿಲ್ಲ. ಸದಾನಂದ

ರಾಯರು ಊರಿಗೆ ಹೋದ ಮರುದಿನ ಮುಂಜಾನೆಯೇ, ಅವರು ನಂಜಪ್ಪನ ಮನೆಗೆ ಹೋದರು.

"ಏನು ನಂಜಪ್ಪ. ನಾಗರಾಜನ ಕೆಲಸ ಹೇಗೆ?" ಎಂದು ನಗುತ್ತ ಕೇಳಿದರು.

ನಂಜಪ್ಪ "ಅಯ್ಯೋ! ನನಗೆ ಈ ಕತೆ ಮೊದಲೇನೆ ತಿಳಿದಿದ್ದರೆ, ಅವನ ಸೊಕ್ಕು ಇಳಿಸುತ್ತಿದ್ದೆ!" ಎಂದನು ನಂಜಪ್ಪ.

ಸೊಕ್ಕು ಇಳಿಸಲು ಇನ್ನಾದರೂ ಸಮಯ ಸಾಕು. ಅಲ್ಲವಾದರೆ ನಿನ್ನ ಹೆಸರಲ್ಲಿ ಹೆಡ್‌ಮಾಸ್ತರರ ಮೇಲೆ ಅವನು ಅರ್ಜಿ ಹಾಕಲು ಧೈರ್ಯವೇ? ಅದೇ ಕಾಗದವನ್ನು ಹಿಡಿದುಕೊಂಡು, ಫೋರ್ಜರಿ ಕೇಸು ಮಾಡಿದರೆ ಅವನನ್ನು ಜೈಲಿಗೆ ಕಳುಹಿಸಬಹುದು. ನೀನು ಬರುತ್ತೀಯ ಜತೆಗೆ-ನನಗೆ ನಾಗರಾಜಯ್ಯನ ಮುಖಕ್ಕೆ, ಈ ಎಲ್ಲ ಮಾತನ್ನೂ ಆಡ ಬೇಕೆಂದಿದೆ. ಅವನೊಂದು ದಿನ ನನ್ನನ್ನು ಕರೆಯಿಸಿಕೊಂಡು ನಿಮ್ಮ ಮಾಸ್ತರರು ತಮ್ಮ ಕೇಡಿತನ ಮುಚ್ಚಿಡಲು ನನ್ನ ಮೇಲೆ ದೂರು ಹಾಕಿದ್ದಾರೆ" ಎಂದಿದ್ದ. ಈಗ ಯಾರು ಕೇಡಿಗಳೆಂದು ಅವನಿಗೆ ತೋರಿಸಿ ಕೊಡಬೇಡವೇ ನಾವು?"

ಅಂತು ಕೆಲವು ಕ್ಷಣಗಳಲ್ಲಿ, ನಂಜಪ್ಪನ ಅಭಿಮಾನವನ್ನು ಕೆರಳಿಸಿದರು. ರೋಷವನ್ನು ಅರಳಿಸಿದರು. "ಈ ಫಟಿಂಗರು ಇರುವ ಊರಲ್ಲಿ ಮಾನವಂತರು ಜೀವನ ಮಾಡಲಿಕ್ಕಿಲ್ಲಪ್ಪ" ಎಂದು ಹೇಳಿಸಿದರು. ನಂಜಪ್ಪ ಸುಲಭದಲ್ಲಿ ಅವರ ಮಾತಿಗೆ ಬೆಂಬಲವಾದ. ಇಬ್ಬರೂ ಉಬ್ಬರದಿಂದ, ಹೆಜ್ಜೆ ಹಾಕುತ್ತ, ನಾಗರಾಜನ ಮನೆಯ ಹಾದಿ ಹಿಡಿದರು. ಜಾನ್‌ಸನರಿಗೆ, ಆ ದಿನ ಶಾಲೆಯಿತ್ತೆಂಬ ವಿಚಾರವೂ ಮರೆತು ಹೋಗಿತ್ತು. ಹಾದಿಯಲ್ಲಿ ಇವರಿಗಿದಿರಾದ ಒಬ್ಬಿಬ್ಬರು ಹುಡುಗರನ್ನು ಕಂಡು "ಹೋ, ಇವತ್ತು ಶಾಲೆಯಿದೆ ಅಲ್ಲವೇ" ಎಂದುಕೊಂಡರು. ಆದರೆ ಹೆಜ್ಜೆ ಹಿಂದಕ್ಕಿರಿಸದೆ-"ಏನೂ ಇರಲಿ; ಅರ್ಧ ದಿನದ ರಜೆಯಾದೀತು. ಕಬ್ಬಿಣ ಬಿಸಿಯಾಗಿರುವಾಗಲೇ ಬಡಿದು ಬಗ್ಗಿಸಬೇಕು" ಎಂದು ಮುಂದುವರಿದರು. ನಾಗರಾಜ ತಮ್ಮ ಮನೆಯ ಮುಂಗಡೆ ಗದ್ದೆಯ ಅಂಚಿನಲ್ಲಿ ನಿಂತಿದ್ದ. ಹಿಂದೆ ರಂಗಪ್ಪನೂ ಇದ್ದ. ಆಳುಗಳಿಂದ ಏನೋ ಕೆಲಸ ಮಾಡಿಸುತ್ತಿದ್ದ. ನಾಗರಾಜ ಅದರ ಮೇಲ್ವಿಚಾರ ನಡೆಯಿಸುತ್ತಿದ್ದ.

ಎದುರಿಗೆ ನಂಜಪ್ಪ ಜಾನ್‌ಸನರೂ ಕೂಡಿ ಬರುವುದು ಕಂಡಿತು. ಜಾನ್‌ಸನರ ಕಡೆಗೆ ಉಪೇಕ್ಷೆ ತೋರಿದರೂ, ನಂಜಪ್ಪನ ಕಡೆಗೆ ಆತ ಉಪೇಕ್ಷೆ ತೋರುವಂತಿಲ್ಲ. ಸಾಮಾನ್ಯವಾಗಿ ನಂಜಪ್ಪ ಸರಳ; ಸ್ವತಂತ್ರ. ಆದರಿಂದ ಅವನನ್ನು ಕಂಡು ಮನಸ್ಸು ತುಸು ಕುಗ್ಗಿತು. ಇನ್ಸ್‌ಪೆಕ್ಟರರು ಬಂದು ಹೋದುದರ ಫಲವೇ ಇದು--ಎಂಬ ಅನುಮಾನವಾಯಿತು. ಬೇರೆ ಉಪಾಯಕಾಣದೆ "ಏನು ನಂಜಪ್ಪ, ಎಲ್ಲಿಗೆ ಹೊರಟೆ, ಬೊಗ್ಗಾಡಿಗೇನು?" ಎಂದು ಅವನನ್ನು ಮಾತಾಡಿಸಿದ. "ಬೊಗ್ಗಾಡಿಗೇಕೆ? ಇಲ್ಲಿಗೇ — ನಿಮ್ಮನ್ನು ಕಾಣುವ ಎಂತಲೇ ಬಂದೆ" ಎಂದ ನಂಜಪ್ಪ.

"ಅದೇನು ಜಂಬರ ನಂಜಪ್ಪ?" ಎಂದನು ನಾಗರಾಜ.

"ಮತ್ತೇನಿಲ್ಲ! ನಿನ್ನೆ ನನಗೊಂದು ಕಾಗದ ಕಾಣಲಿಕ್ಕೆ ಸಿಕ್ಕಿತು. ನೀವು ನನ್ನ ಹೆಸರಲ್ಲಿ ಒಂದು ಅರ್ಜಿ ಹಾಕಿದ್ದೀರಾ? ಬರಹ ನಿಮ್ಮದೆಂದು ಪ್ರಮಾಣ ಮಾಡಿ ಹೇಳಬಹುದು. ಯಾಕೆ ಅಷ್ಟೆಲ್ಲ ದೂರ? ನನ್ನ ಮಗಳ ಮೇಲೆ ದೂರು ಹಾಕಿ ನೀವು ಶಾಲಾ ಇನ್ಸ್‌ಪೆಕ್ಟರರಿಗೆ ಒಂದು ಕಾಗದವನ್ನು ಬರೆದಿದ್ದಿರಾ".

"ಅರೇ! ನಾನೇ? ನನಗೇನು ಬುದ್ಧಿಯಿಲ್ಲವೇ? ದೇವರಾಣೆ ನನಗೆ ಈ ಸಂಗತಿ ಯಾವುದೂ ತಿಳಿಯದು. ಈ ಊರಲ್ಲಿ ಎಂಥ ಕಣ್ಣುಕಟ್ಟಿನ ಜನಗಳಿದ್ದಾರಪ್ಪ. ನಾನು ಬರೆದದ್ದು ಅದು, ನನ್ನ ಬರಹ ಎಂದು ಹೇಳಿದವರಾರು ನಿನಗೆ?"

"ಅದನ್ನೇ ರುಜು ಮಾಡಲು ಬಂದವ ನಾನು. ಆ ಇನ್ಸ್‌ಪೆಕ್ಟರರ ಎದುರಿಗೇನೆ ನನ್ನ ಮಗಳ ತನಿಖೆಯಾಯಿತು. ಅವಳೆಲ್ಲ ಹೇಳಿದಳು.-ಮೂರು ತಿಂಗಳ ಹಿಂದೆ, ನೀವು ಅವಳನ್ನು ಅಟಕಾಯಿಸಿ ತೊಂದರೆ ಮಾಡಿದ್ದಿರಂತೆ! ಎಲ್ಲ ಕತೆಯನ್ನೂ ಹೇಳಿದಳು. ಏನು ಎಂದು ತಿಳಿದಿರಿ?"

ನಾಗರಾಜ ಒಂದು ಕ್ಷಣಕ್ಕೆ ಮಾತನಾಡಲಿಲ್ಲ; ಮರುಕ್ಷಣ ಆ ಮಾತಿಗೆ ಮಾತು ಹೊಂದಿಸಿ "ಹೂಂ, ನಿನ್ನ ನಾರಾಯಣ ಮಾಸ್ತರರ ಮಾತು ಕೇಳಿ ನೀನು ಹೀಗೆನ್ನುತ್ತಿರಬೇಕು. ಅವರು ತಮ್ಮ ಮರ್ಯಾದೆ ಕಾಯಲು, ನಿನ್ನ ಮಗಳನ್ನು ಬಗಲಿಗೆ ಹಾಕಿಕೊಂಡಿದ್ದಾರೆಂದು ಕಾಣುತ್ತದೆ".

ನಂಜಪ್ಪನಿಗೆ ರೇಗಿತು. "ಏನು ನೀವೆನ್ನುವ ಮಾತು? ನನ್ನ ಮಗ

ಳನ್ನು ಪಟಿಂಗಳನ್ನಾಗಿ ಮಾಡುತ್ತೀರೋ? ಅವಳೂ ಅವರೂ ಸೇರಿದ್ದಾರೆಂದು ನೀವೆನ್ನುವುದೇ! ಹೌದು, ಹಾಗೇನೆ ನೀವು ತಳ್ಳಿ ಅರ್ಜಿ ಹಾಕಿದ್ದೀರಿ. ನನ್ನ ಕಿವಿಗೆ ಇದು ನಿನ್ನೆ ಬಿದ್ದಂತಾಯಿತು. ಊರೂರಿಗೇ ಈ ಸುದ್ದಿ ಹಬ್ಬಿಸಿದ್ದೀರಂತೆ ನೀವು! ನಿಮ್ಮ ನಾಲಗೆಗೆ ಹುಳು ಹಿಡಿದು, ಬಿದ್ದು ಹೋದೀತು-ಇದೇ ರೀತಿ ಅನ್ಯಾಯ ಮಾಡಿದರೆ" ಎಂದ ನಂಜಪ್ಪ.

ನಾಗರಾಜನ ಹಿಂದೆ ನಿಂತಿದ್ದ ರಂಗಪ್ಪನು, ಈಗಾಗಲೇ ಅಂಕಕ್ಕೆ ನಿಂತ ಹುಂಜದಂತೆ ಕತ್ತುಬ್ಬಿಸಿ, ಕಣ್ಣು ಹೊರಳಿಸಿ ಕೆಲೆಯುತ್ತಿದ್ದ! ಅದನ್ನು ಕಂಡು ಜಾನ್‌ಸನರು ಮುಂದಾದರು. "ನಾನಿದ್ದೆ ನಾಗರಾಜ-ಅದು ತನಿಖೆಯಾಗುವಾಗ! ನೀನು ಆ ದಿನ ನನ್ನ ಹತ್ತಿರವೇ ಈ ಮಾತು ಅಂದಿದ್ದೀ. ನಾನು ಸತ್ಯವನ್ನು ತಿಳಿದು ಬರುತ್ತೇನೆ ಎಂದಿದ್ದೆ. ಈಗ ಬಂತು ನೋಡು ಆ ಗಳಿಗೆ. ಆ ಹುಡುಗಿಯನ್ನು ನೀನು ದಾರಿಯಲ್ಲಿ ಅಟಕಾಯಿಸಲಿಲ್ಲವೇ? ಒಂದಲ್ಲ, ಮೂರು ಮೂರು ಸಲ" ಎಂದರು.

"ನೀವು ಹೋಗಿಯಯ್ಯ. ನಿಮ್ಮನ್ನು ಯಾರು ಪಂಚಾತಿಕೆಗೆ ಕರೆಯಿಸಿದರು? ನಾನೂ ನಂಜಪ್ಪನೂ ನೋಡಿಕೊಳ್ಳುತ್ತೇವೆ. ನೀವೊಂದು ಕೋಣೆಯನಂತೆ ನಡುವೆ ತಲೆಹಾಕಬೇಕಿಲ್ಲ" ಎಂದ. "ನಾನೇ ಅವರನ್ನು ಕರೆದು ತಂದವ. ನಿನಗೆ ಊರೂರಿನ ಕಾರುಭಾರು ಬೇಕಂತೆ; ಅವರ ಪರವಾಗಿ ನಾನು ಬಂದು ಮಾತಾಡಬಾರದೋ" ಎಂದರು ಜಾನ್‌ಸನರು.

ತಿರುಗಿ "ನಾಗರಾಜ, ನಿನ್ನ ಸಂಭಾವಿತನ ಬೇರೊಂದರಲ್ಲೂ ತಿಳಿದಾಯಿತು--ಅಣ್ಣು ಗೌಡನ ಮೊಮ್ಮಗಳ ವಿಚಾರದಲ್ಲಿ. ಅಣ್ಣು ಗೌಡನ ಮನೆಗೆ ಹೋಗಿ. ನೀನು ಮಾಡಿದ ಕತೆ, ನಿನ್ನ ರಂಗಪ್ಪ ಹಿಡಿದ ವರಾತ -ಎಲ್ಲಾ ಗೊತ್ತಿದೆ. ಅದು ಊರಿಗೇನೆ ತಿಳಿದಿದೆ! ಹೀಗೆಯೇ ನೀನು ಮಾಡಿದಲ್ಲಿ ಯಾರಾದರೂ ಒಂದು ದಿನ ನಿನ್ನ ಕಾಲನ್ನು ಮುರಿದಾರು. ಯಾರೇಕೆ? ನಮ್ಮ ಶಾಲೆಯ ಹುಡುಗಿಯರು ಬರುವಾಗ ತಂಟೆಮಾಡಿದರೆ, ನಾನೇ ಮುರಿದೇನು" ಎಂದರು.

ಮಾತು ಪೂರಾ ಮುಗಿಯಲಿಲ್ಲ. ರಂಗಪ್ಪ ಧನಿಯ ಪರವಾಗಿ ಮಾಸ್ತರರ ಮೇಲೆ ಎಗರಿಬಿದ್ದನು. ಮಾಸ್ತರರು ಗದ್ದೆಯಂಚಿನಿಂದ ಕೆಳಕ್ಕೆ ಉರುಳಿದರು. ಅದನ್ನು ಕಂಡು ನಾಗರಾಜನಿಗೆ ಹಿಗ್ಗು ಉಂಟಾ

ಯಿತು. ತನ್ನ ಮುಖ ಭಂಗವಾದ ಸಿಟ್ಟಿನಿಂದ ಅವನು: "ನಾಲ್ಕು ವರಿಸು ಅವರಿಗೆ! ಅಬ್ಬ ನನ್ನ ಮನೆಗೆ ಬಂದು, ಇಷ್ಟು ಮಾತಾಡುವ ಧೈರ್ಯ ವೇ" ಎಂದುಬಿಟ್ಟ. ಅದರಿಂದ ನಂಜಪ್ಪನೂ ಮೈಮರೆತ. ಪ್ರತಿಯಾಗಿ ರಂಗಪ್ಪನನ್ನು ಒದ್ದು ಜಾಡಿಸಿ,ಕೆಡವಿ, ನಡುವಿನಿಂದ ಒಂದು ಬಿಚ್ಚುಕತ್ತಿ ಯನ್ನು ತೆಗೆದು, ನಾಗರಾಜನ ಕತ್ತು ಹಿಡಿದು ನಿಂತ. ಅವನದು ತೀರ ರೌದ್ರಾವೇಷವಾಗಿತ್ತು. ಪುಣ್ಯಕ್ಕೆ ಜಾನ್‌ಸನ ಮಾಸ್ತರರು ಎದ್ದು ನಿಂತು ಏನಾಯಿತೆಂದು ನೋಡುವಾಗ, ಎಲ್ಲ ಕೈ ಮಿಂಚುವಂತೆ ಕಂಡಿತು! ನಾಗ ರಾಜನ ಬಾಯಿಯಿಂದ "ದಮ್ಮಯ್ಯ" ಎಂಬ ಕೂಗು ಹೊರಡುತ್ತಿತ್ತು! ಜಾನ್‌ಸನರು ಧಾವಿಸಿ ನಂಜಪ್ಪನ ಕೈಯನ್ನು ತಡೆದರು. ಕೈಯೊಳಗಣ ಕತ್ತಿಯನ್ನು ಕಂಡೇ, ರಂಗಪ್ಪ ಪರಾರಿಯಾಗಿದ್ದ. ಸುತ್ತು ಮುತ್ತಲೂ ಮಣ್ಣು ಹೊರುತ್ತಿದ್ದ, ಹೆಂಗೂಲಿಗಳು "ಅಯ್ಯೋ, ಯಾರಾದರೂ ಬನ್ನಿ" ಎಂದು ಕಿರುಚಿಕೊಂಡರು.

ಅಂತು ಜಾನ್‌ಸನರು ತಡೆದುದರಿಂಧ, ನಂಜಪ್ಪನ ಕೋಪ, ಕೊಲೆಯಲ್ಲಿ ಪರಿಣಾಮಗೊಳ್ಳಲಿಲ್ಲ. ನಂಜಪ್ಪ ಮತ್ತೂ ಉಗ್ರವಾಗಿ "ಅವನನ್ನು ಕೊಂದೇ ಹಾಕುತ್ತೇನೆ, ನನ್ನ ಮಗಳ ಮಾನ ತೆಗೆಯಲು ಬಂದವನನ್ನು" ಎಂದು ಆರ್ಭಟಿಸುತ್ತಲೇ ಇದ್ದ. ಆದರೆನಾಗರಾಜನೆಲ್ಲಿ? ಒಮ್ಮೆ ನಂಜಪ್ಪನ ಹಿಡಿತದಿಂದ ಆತ ಪಾರಾದದ್ದೇ ತಡ! ಅಲ್ಲಿಂದ ಒಂದೇ ಸವನೆ ಕಾಲುಕಿತ್ತು, ಗೂಡನ್ನು ಸೇರಿ ಬಿಟ್ಟ.

ನಂಜಪ್ಪ ಜಾನ್‌ಸನರು ವಿಜಯದಿಂದ ಹಿಗ್ಗಿ ಮರಳಿದರು. "ಅವ ನಿಗೆ ಇಂದಿಗಾದ ಮರ್ಯಾದೆ ಸಾಕು. ಯಾರಾದರೂ ಅವನಿಗೆ ಹೀಗೆ ಪಾಠ ಕಲಿಸದೆ ಹೋದರೆ; ಪ್ರಯೋಜನವಿಲ್ಲ" ಎಂದರು ಮಾಸ್ತರರು. ಆ ಸಂಜೆ ಊರಲ್ಲೆಲ್ಲ ಕೋಲಾಹಲ. ನಾಗರಾಜನನ್ನು ಜಾನ್‌ಸನರು ಕೊಲೆ ಮಾಡಲು ಹೋದರೆಂದೂ, ಅವರ ಮೇಲೆ ನಾಗರಾಜನ ಫಿರ್ಯಾದಿ ಉಂಟೆಂದು! ನಂಜಪ್ಪನು ನಿಜಕ್ಕೂ ತನ್ನನ್ನು ಕೊಲೆಮಾಡು ತ್ತಿದ್ದನೆಂದು ನಾಗರಾಜ ತಿಳಿದಿದ್ದ. ಆದುದರಿಂದ-ಅವನ ಮೇಲೆ ಸೇಡು ಹೊರಲು ಧೈರ್ಯವಾಗದೆ, ಜಾನ್‌ಸನರನ್ನು ದೂರಿಗೆ ಬಲಿಕೊಟ್ಟನು. ಬಹಳ ದಿನಗಳ ತನಕ 'ಇವತ್ತೇನೋ ಆಗುತ್ತದೆ, ನಾಳೇನೋ ಆಗುತ್ತದೆ' ಎಂದು ಊರವರಲ್ಲಿ ನಿರೀಕ್ಷಣೆ ಉಂಟಾಗಿತ್ತು ಆದರೆ

ಫಿರ್ಯಾದಿಯೂ ಇಲ್ಲದೆ, ಮುಂಗಾರು ಮಳೆಯುಬ್ಬರದಂತೆ ಎಲ್ಲವೂ ಸ್ತಬ್ಧವಾಯಿತು. ನಾಗರಾಜ ಜಾನ್‌ಸನರ ಮೇಲಿನ ಹಗೆ ತೀರಿಸಿಕೊಳ್ಳ ಬೇಕೆಂದು ಮನಸ್ಸಿನಲ್ಲಿ ಎಣಿಕೆ ಹಾಕಿದ. ಆ ದಿನ ತನ್ನ ಬೆಂಬಲಕ್ಕಿದ್ದ ರಂಗಪ್ಪ, ನಡುವೆ ತನ್ನನ್ನು ಮೃತ್ಯುವಿಗೆ ಬಿಟ್ಟು, ತಾನು ಓಡಿಹೋದು ದರಿಂದ, ಅವನ ಮೇಲೆಯೂ ಅವನಿಗೆ ತುಂಬ ಅನಾದರ ಉಂಟಾ ಗಿತ್ತು. "ನಿನ್ನಂಥ ನಾಯಿಗೆ ಅನ್ನ ಹಾಕಿದರೆ, ನಮ್ಮ ಇದ್ದ ಮರ್ಯಾದೆ ಹೋದೀತು" ಎಂದಿದ್ದ. ರಂಗಪ್ಪ ಐನೂರು ಸಬೂಬುಗಳನ್ನು ಹೇಳಿ ನಾಗರಾಜನನ್ನು ಸಮಾಧಾನಪಡಿಸಿದರೂ, ಆತ 'ಕತ್ತಿಯೆತ್ತುವಾಗಲೇ ಅವನು ಓಡಿದನಲ್ಲಾ'ಎಂಬುದು ತಿಳಿಯದೆ! ಕೊನೆಗೆ ರಂಗಪ್ಪ,"ನಾನು ಕೋವಿ ತರಲು ಮನೆಗೆ ಓಡಿದ್ದು" ಎಂದು ಬಾಯಿ ಬಂದೂಕು ಹಾರಿಸಿ, ತನ್ನ ಅವನ ವಿಶ್ವಾಸ ಉಳಿಸಿಕೊಳ್ಳಬೇಕಾಯಿತು. "ಇನ್ನೊಮ್ಮೆ ನಾನೇ ಆ ಮಾಸ್ತರರನ್ನು ಹೆಡೆಮುರಿಗೆ ಕಟ್ಟುತ್ತೇನೆ" ಎಂದು ತನ್ನ ಧನಿಯ ಮುಂದೆ ಪ್ರಮಾಣವನ್ನೂ ಮಾಡಿದ. ನಾಗರಾಜ ತಿರುಗಿ ರಂಗಪ್ಪ ನನ್ನು ನಂಬುವಂತಾಯಿತು. "ಸಾವಿರ ರೂಪಾಯಿ ಹೋದರೂ ಅಡ್ಡಿ ಯಿಲ್ಲ ರಂಗಪ್ಪ! ಒಂದು ಕೈ ನೋಡಲೇಬೇಕು" ಎಂದ. ಅವನನ್ನು ತನ್ನ ಅಂಕದ ಕೋಳಿಯನ್ನಾಗಿ ಸಿಲ್ಲಿಸಲು ಆಲೋಚಿಸಿದ.

ಈ ಪ್ರಸಂಗದ ಬಳಿಕ ಕಡಬದ ಪೇಟೆಯಲ್ಲಿ, ರಂಗಪ್ಪ ಜಾನ್ ಸನರ ಎದುರಾದರೆ ಸಾಕು--ಜೂಜಿನ ಕೋಳಿಗಳಂತೆ ಒಬ್ಬೊಬ್ಬರನ್ನು ನೋಡಿ ಕತ್ತು ಕೊಂಕಿಸುತ್ತಿದ್ದರು.

ತನ್ನ ಅಭಿಮಾನವನ್ನು ಕಾಯ್ದುಕೊಳ್ಳಲು ಸಮನಾದ ಸಂಧಿ ದೊರಕದೆ ಹೋಯಿತಲ್ಲಾ ಎಂದು ಕೊರಗುತ್ತಿದ್ದ ನಾಗರಾಜಗೆ, ಕ್ಲಬ್ಬಿನ ನೆಪದಿಂದಾದರೂ ಕೀರ್ತಿಮೆರೆಯಿಸುವ ಹಂಬಲವಾಯಿತು! ದಸರೆ ಯಲ್ಲಿ ಮಳೆ ಬಂದೀತೆಂದು ಅಂಜಿ, ಷಷ್ಠಿಯ ಸಮಯ ಅದನ್ನು ಪ್ರಾರಂ ಭಿಸಲು ನಿರ್ಣಯಿಸಿದನು. ಆಗ ಕಡಬಕ್ಕೆ ಮೋಟರುಗಳ ಸಂಚಾರ ತೊಡಗುತ್ತದೆ. ನಾಗರಿಕ ಪ್ರಪಂಚಕ್ಕೆ ಅವರ ಊರು ಸಮೀಪವಾಗು ತ್ತದೆ. ಅಲ್ಲದೆ ಸುಬ್ರಮಣ್ಯ ಷಷ್ಠಿಗೆ ಬೋರ್ಡ್ ಪ್ರಸಿಡೆಂಟರೂ ಆ ಕಡೆ ಬರುತ್ತಾರೆ. ಅಲ್ಲವಾದರೆ ಜಿಲ್ಲಾ ಕಲೆಕ್ಟರ ದೊರೆಗಳನ್ನೇ ಬರಮಾಡ ಬಹುದು--ಎಂದು ಯೋಚಿಸಿದನು. ಕೊನೆಗೆ ತನ್ನ ಉದ್ದೇಶಕ್ಕೆ ಕಲೆಕ್ಟ

ರರೇ ತಕ್ಕ ಅಧ್ಯಕ್ಷರು-ಎಂದು ಅವರಿಗೇನೆ ಆಮಂತ್ರಣವಿತ್ತ. ಅವರಿಗೆ ವಿರಾಮವಿಲ್ಲೆಂದು ಉತ್ತರ ಬರಲು, ಪ್ರಸಿಡೆಂಟರಿಗೆ ಪತ್ರ ಬರೆದು ಹಾಕಿದ. ಅವರ ಒಪ್ಪಿಗೆ ಸುಲಭದಲ್ಲೇ ಬಂದಿತು. ದಶಂಬರ ಮೊದಲ ವಾರಕ್ಕೆ ನಾಗರಾಜನ 'Peoples Club'ನ ಜನ್ಮೋತ್ಸವವೆಂದು ನಿರ್ಣಯವಾಯಿತು. ಪೇಟೆಯಲ್ಲಿ ಒಂದು ಬಾಡಿಗೆ ಅಂಗಡಿ ಹಿಡಿದು, ಅದಕ್ಕೆ ಸುಣ್ಣವನ್ನು ಸವರಿ, ಚಪ್ಪರಹಾಕಿಸಿ ಚಂದಗಾಣಿಸಿದ್ದಾಯಿತು. ಉತ್ಸವದ ದಿನಕ್ಕೆ ಇನ್ನಿಲ್ಲದಂಥ ಉಪಾಹಾರದ ಏರ್ಪಾಡನ್ನೂ ಮಾಡಿ ಕುಡುಮತ್ತಾಯರ ಪಾಕವನ್ನು ಮೀರಿಸುವ ಪಾಕ ಸಿದ್ಧವಾಗಬೇಕೆಂದು ಏರ್ಪಾಡಾಯಿತು. ಪುತ್ತೂರಿನ ಆನಂದ ಭವನದವರನ್ನೇ ಕರೆಯಿಸಿ ಉಪಾಹಾರದ ಏರ್ಪಾಟು ಮಾಡುವುದೆಂದು ತೀರ್ಮಾನವಾಯಿತು. ಪುತ್ತೂರಿನ ವಕೀಲರುಗಳು, ಮಾಸ್ತರುಗಳು, ಉಪ್ಪಿನಂಗಡಿಯ ಸಾಹುಕಾರರು — ಎಲ್ಲರಿಗೂ ಆಮಂತ್ರಣ ಹೋಯಿತು. ಅವರು ಕಡಬಕ್ಕೆ ಬರಲು ಸ್ಪೆಶಲ್ ಮೋಟರಿನ ಏರ್ಪಾಟೂ ನಡೆಯಿತು. ಕನಿಷ್ಠ ನೂರು ಮಂದಿ, ಮಾನ್ಯ ಅತಿಥಿಗಳ ಸತ್ಕಾರಕ್ಕೆ ಸಿದ್ಧತೆಯಾಯಿತು. ಆ ಪ್ರಾರಂಭೋತ್ಸವಕ್ಕೆ ಶಾಲೆಯವರೆಲ್ಲರಿಗೂ ಬಹಿಷ್ಕಾರವೆಂದು ಪೂರ್ವ ಸಿದ್ಧಾಂತವಾಗಿತ್ತು. ಆದರೆ ಉಪಾಧ್ಯಾಯ ವರ್ಗದವರಿಗೆ ಮಾತ್ರ ಉಭಯಸಂಕಟವಾಯಿತು. ತಮ್ಮ ಅಧ್ಯಕ್ಷರೇ ಊರಿಗೆ ಬರುವಾಗ, ಅವರನ್ನು ತಾವು ಕಾಣಬೇಕೇ ಬೇಡವೇ-ಎಂದು. ಅದಕ್ಕಾಗಿ ಅವರೂ ತಮ್ಮ ಕ್ಲಬ್ ಮಂದಿರವನ್ನು ಅಲಂಕರಿಸಿದರು. ಅಲ್ಲಿಗೂ ಅವರನ್ನು ಕರೆದೊಯ್ಯುವ ನಿಶ್ಚಯಮಾಡಿದರು. ಆ ದಿನ ಸಂಜೆ ಆರು ಗಂಟೆಗೆ ಸಮಸಾಗಿ, ಎರಡು ಮೂರು ಟಾಕ್ಸಿಗಳು ಊರಲ್ಲಿ ಬಂದು ನಿಂತುವು. ಮೊದಲು ಬಂದಿ ನಿಂತುದು,ಉಪಾಧ್ಯಾಯರ International Club ನ ಎದುರುಗಡೆ. ಅಧ್ಯಕ್ಷರಲ್ಲಿಗೆ, ನಾಗರಾಜ ವಾದ್ಯಸಹಿತವಾಗಿ, ಅವರನ್ನು ಕರೆಯಲು ಬಂದ ಮೇಲೆಯೇ, ಅವರಿಗೆ ಇಳಿಯಬೇಕಾದ ಸ್ಥಳ ಹಿಂದೆ ಉಳಿಯಿತೆಂದು ತಿಳಿದುದು. ಅಲ್ಲಿಗೆ ಅವರನ್ನೆಲ್ಲ ಕರೆದೊಯ್ದು, ನಾಗರಾಜ ಸತ್ಕರಿಸಿದನು; ಉಪಹಾರವಾಯಿತು. ಉಪನ್ಯಾಸವಾಯಿತು. ನಾಗರಾಜನನ್ನು ಸಂಕಪ್ಪ ಮಾಸ್ತರರೂ, ನಾಗರಾಜ ಅಧ್ಯಕ್ಷರನ್ನೂ, ಅಧ್ಯಕ್ಷರು ನಾಗರಾಜನನ್ನೂ ಕ್ರಮವಾಗಿ ಭಾಷಣಗಳಲ್ಲಿ ಕೊಂಡಾ

ಡಿದರು. "ಇಂಥ ನಾಗರಿಕ ಹುಮ್ಮಸ ಹಳ್ಳಿಯಲ್ಲಿದ್ದರೆ, ಹಳ್ಳಿ-ಪೇಟೆಯೇ ಆದೀತು" ಎಂದು ಅಧ್ಯಕ್ಷರು ಅವರ ಸಾಹಸವನ್ನು ಕೊಂಡಾಡಿದರು. ಅಲ್ಲಿಂದ ಅಧ್ಯಕ್ಷರು ನೆಟ್ಟಗೆ ಪುತ್ತೂರಿಗೆ ಹಿಂತಿರುಗಿದರು. ಆ ಸಭೆಯಲ್ಲಿ ಅವರಿಗೆ ಉಪಾಧ್ಯಾಯರಾರೂ ಕಾಣಿಸದಿದ್ದುದು ಆಶ್ಚರ್ಯವಾಯಿತಂತೆ. "ಅದೇನು ಸಂಕಪ್ಪ ಮಾಸ್ತರರೇ, ನಿಮ್ಮನ್ನು ಬಿಟ್ಟು, ಊರಿನ ಮಾಸ್ತರ ಮಂದಿ ಯಾರೂ ಇಲ್ಲವಲ್ಲ" ಎಂದರು ಅಧ್ಯಕ್ಷರು. ಅದಕ್ಕೆ ನಾಗರಾಜ "ಊರಿಗೊಂದು ದಾರಿಯಾದರೆ ಪೋರನಿಗೊಂದು ದಾರಿ" ಎಂದನು. ಅಂದಿನ ದಿವಸದ ಮಟ್ಟಿಗೆ, ಉಪಾಧ್ಯಾಯರನ್ನು ಕುರಿತು ನಾಗರಾಜನಾಡಿದ ಚುಚ್ಚು ನುಡಿಗೆ, ಬೆಲೆ ಕಂಡಿತವಾಗಿಯೂ ಬಂದಂತಿತ್ತು.

ಆ ದಿನ ಅಧ್ಯಕ್ಷರ ಜತೆಯಲ್ಲಿ ನಾಗರಾಜನ ಮಿತ್ರರಾಗಿದ್ದ, ಇಬ್ಬರು ಬೋರ್ಡು ಸದಸ್ಯರೂ ಬಂದಿದ್ದರು. ಅವರೂ ನಾಗರಾಜನ ಪರವಾಗಿ ಮಾತನಾಡಿದರು. ಅವನ ಮನಸ್ಸಿನ ಉದ್ದೇಶವನ್ನು ಸಾಧಿಸುವುದರಲ್ಲಿ ಅವರು ನೆರವಾದರು. ಆ ದಿನ ಪೇಟೆಯವರಿಗೆ ಒಂದು ಸಮಾರಾಧನೆಯೇ ಆಯಿತು. ಕುಡುಮತ್ತಾಯರೂ ಹೊಸ ಕ್ಲಬ್ಬಿನ ಆರಂಭೋತ್ಸವಕ್ಕೆ ಹೋಗಿದ್ದರು. ಉಪಹಾರದಲ್ಲಿಯೂ ಭಾಗವಹಿಸಿದ್ದರು. ಅದನ್ನೆಲ್ಲ ಮುಗಿಸಿ ಮರಳುವಾಗ "ನಾಗರಾಜಯ್ಯ, ಈ ಕುಮಟು ವಾಸನೆಯ ಬೇಸನ್ ಲಾಡನ್ನು ಮಾಡಲಿಕ್ಕೆ ಪುತ್ತೂರಿನವರೇ ಆಗಬೇಕಪ್ಪ" ಎಂದು ಹಂಗಿಸಿ ಹಿಂದಿರುಗಿದರು.

ಪೀಪಲ್ಸ್ ಕ್ಲಬ್ಬಿನ ದೆಸೆಯಿಂದ ನಾಗರಾಜಗೆ ಮನ್ನಣೆ ಮತ್ತಷ್ಟು ಏರಿತು. ಅವನಿಂದ ಅಲ್ಪ ಸ್ವಲ್ಪವಾದರೂ ಸಾಲಪಡೆಯುವ ಬಯಕೆ ಇದ್ದವರೆಲ್ಲರೂ, ಸಾಲಿಗರು ಸಹಕಾರಿ ಸಂಘದ ಸದಸ್ಯರಾಗುವಂತೆ, ಅವರ ಕ್ಲಬ್ಬಿನ ಮೆಂಬರರಾದರು. ವಂತಿಗೆ ಕೊಡುವ ಮನಸ್ಸಿರಲಿ ಇಲ್ಲದಿರಲಿ, ಮೆಂಬರಿಕೆಯ ಪಟ್ಟಿಯಲ್ಲಿ—ಹಲವು ಹೆಸರುಗಳು ಆ ದಿನ ದಾಕಲಾದುವು. ಊರಿನ ಸಾಹುಕಾರರು ನೆರೆಯೂರಿನ ಪಟೇಲರು, ರಂಗಪ್ಪ--ಪ್ರತಿಯೊಬ್ಬರೂ ಸದಸ್ಯರಾದರು. ಅನೇಕ ಪತ್ರಿಕೆಗಳು ಅಲ್ಲಿ ಬಂದು, ಹೊಸತಾಗಿ ಹೂಡಿದ ಮೇಜುಗಳ ಮೇಲೆ ತಂಗಿ ವಿಜೃಂಭಿಸಿದುವು. ಅಲ್ಲಿಯೂ ಆಗಾಗ ಯಕ್ಷಗಾನ ಕೂಟ ಜರಗಿಸಬೇಕೆಂದು ಅವರು ನಿಶ್ಚಯಿಸಿದರು. ಹೇಗೂ ಭಾಗವತ ಸಂಕಪ್ಪ ಮಾಸ್ತರರು

ಈ ಕ್ಲಬ್ಬಿನವರೇ ಹೊರತು ಬೇರೆಯುವರಲ್ಲ. ಈಗ ಇಂಟರ್‌ನೇಶನಲ್ ಕ್ಲಬ್ಬಿಗೆ ಭಾಗವತರಿಲ್ಲ. ಅರ್ಥಗಾರರಾದ ಅಚ್ಯುತರಾವ್, ನಾರಾಯಣ ರಾಯರಿಗೆ ಎಲ್ಲದಲ್ಲೂ ವೈರಾಗ್ಯ ಬಂದಿದೆ. ಬರಿಯ ಜಾನ್ಸನರೊಬ್ಬರೇ ಏನು ಮಾಡಬಲ್ಲರು! "ಆಗಲಿ; ನಾವು ಮೆಲ್ಲಗೆ ಶುರುಮಾಡುವ. ಇವರ ಉಮೇದು ಎಷ್ಟು ದಿವಸ ಉಳಿಯುತ್ತದೆಂದು ಕಂಡು, ಆ ಬಳಿಕ ನಮ್ಮ ದನ್ನು ತೊಡಗಿದರಾಯಿತು" ಎಂದು ಅವರು ನಿರ್ಧರಿಸಿದರು.

ಪೀಪಲ್ಸ್ ಕ್ಲಬ್ಬಿಗೆ ಸಂಕಪ್ಪಗೌಡರಿದ್ದಾರೆ. ಆದರೆ ಹೊಟೇಲ್ ಕುಡುಮತ್ತಾಯರು, ತಮಗೆ ಆ ದಿನದ ಉಪಾಹಾರದ ಕಂಟ್ರ್ಯಾಕ್ಟು ಸಿಗ ಲಿಲ್ಲವೆಂಬ "ಅಲ್ಲಿನ ಯಕ್ಷಗಾನಕ್ಕೆ ನಾನು ಬರಲಾರೆ. ಎಷ್ಟೆಂದರೂ ನಮಗೆ ಹಳೆಯವರೇ ಸಾಕು" ಎಂದುಬಿಟ್ಟರು. ಅವರನ್ನು ಒಲಿಸಲು ನಾಗರಾಜ ತುಂಬ ಪ್ರಯತ್ನ ಮಾಡಿದ. ಆದರೆ ಅವರು ತಿರುಗಲೇ ಇಲ್ಲ. ಅದರಿಂದಾಗಿ ನಾಗರಾಜನೇನೂ ನಿರಾಶನಾಗಲಿಲ್ಲ. ಮಂಗಳೂ ರಿಂದ, ಉಡುಪಿ, ಕುಂದಾಪುರಗಳಿಂದ ಹೆಸರಾದ ಅರ್ಥಗಾರರನ್ನು ತರಿಸುತ್ತೇನೆ. ಒಂದು ಭಾರೀ ಯಕ್ಷಗಾನ ಜರುಗಿಸುವ. ಹಣ ಖರ್ಚಾ ದೀತು; ಅರ್ಥಗಾರರು ಬಂದುಹೋಗಲು ಟೇಕ್ಸಿಮಾಡಿ ಕರೆದುತರ ಬೇಕಾದೀತು! ತರುವ. ಅಷ್ಟರ ಮಟ್ಟಿಗೆ ನಾನು ಸೋಲಲ್ಲ" ಎಂದು ಹಾರಾಡಿದನು. ಒಂದು ಕ್ಲಬ್ಬಿನ ನೆಪದಿಂದ ಆತ ನೂರಿನ್ನೂರು ರೂಪಾ ಯಿಗಳ ವೆಚ್ಚ ತಾನೊಬ್ಬನೇ ಮಾಡಿದ. ಅವನು ಧಾರಾಳವಾಗಿ ಹಣ ವ್ಯಯಿಸುವಷ್ಟು ದಿವಸ, ಊರವರ ಬೆಂಬಲವಾಗಲೀ ಹುರುಪಾಗಲೀ ಅವನಿಂದ ನಿರಾಕೃತವಾಗದು.

ಅವರ ಕ್ಲಬ್ಬು ತೆರೆದ ಹದಿನೈದು ದಿನಗಳಲ್ಲೇ ಶಾಲೆಗೆ ರಜೆ ಬಂದಿತು. ಮೊದಲು "ರಜೆ ಬಾರದೆ ಏನು ಮಾಡಲಿ?" ಎಂದು ಕಾದು ಕುಳಿತ ಅಚ್ಯುತ, "ಈಗ ರಜೆ ಬಂದಿದೆ; ಎಲ್ಲಿಗೆ ಹೋಗಲಿ?" ಎಂಬುವ ಯೋಚನೆಗೆ ಈಡಾದ. ಒಮ್ಮೆ ಏನು ತೋಚಿತೋ ಏನೋ—ಆತ ಗಟ್ಟಿ ಮನಸ್ಸು ಮಾಡಿಕೊಂಡು, ಯಾರಿಗೂ ತಿಳಿಸದೆ ಉಪ್ಪಿನಂಗಡಿಗೆ ಹೊರಟನು. ತನ್ನ ಗೆಳೆಯ ಮಾಮುಂಜಿಗೆ ಉಪ್ಪಿನಂಗಡಿ ಊರಿನ ಸಾಹುಕಾರರ ಪರಿಚಯವಿರಬಹುದು; ಅವನನ್ನು ಮಾತನಾಡಿಸಿ ಕೊಂಡು ಬರುತ್ತೇನೆ. ಅಲ್ಲಿಂದ, ಅವಶ್ಯಬಿದ್ದರೆ, ಸುಬ್ರಾಯರ ಬಳಿಗೆ

ಹೋಗಿ ಕಣ್ಣೀರಿಡುತ್ತೇನೆ. ಇವರಿಬ್ಬರೊಳಗೆ ಒಬ್ಬರಾದರೂ ಸಹಾಯ ಮಾಡಿಯಾರು" ಎಂದು ಯೋಚಿಸಿ ಹೊರಟು ಹೋದ.

ಅವನ ಮಾವ ಪುಟ್ಟಯ್ಯನವರು ತುಂಬ ಯೋಚನೆಗೀಡಾಗಿದ್ದರು. ಕಳೆದ ಮೇ ರಜೆಗೆ ಬಂದ ತಮ್ಮ ಅಳಿಯರಾಯ, ಈ ಆರು ತಿಂಗಳಲ್ಲಿ ಮನೆಯ ಕಡೆಗೆ ಸುಳಿದಿರಲಿಲ್ಲ. ಇತ್ತ ರುಕ್ಮಿಣಿ, ಗರ್ಭಿಣಿಯಾಗಿರಬೇಕೆಂಬ ಸುದ್ದಿ ಕಿವಿಗೆ ಸೇರಿತ್ತು. ಅತ್ತ ಅಳಿಯ ಸಾಲದಲ್ಲಿ ಮುಳುಗಿದ್ದಾನೆಂದೂ,ಡಿಕ್ರಿದಾರರು ಅವನ ಜೀವಹಿಂಡುತ್ತಿದ್ದಾರೆಂದೂ ಅವರ ಊರಿಗೂ ಸುದ್ದಿಯಾಗಿತ್ತು. ಅದಕ್ಕೇನೆ ಆತ ಮನೆಗೆ ಬಾರದಿರಬಹುದೆಂದು ಊಹಿಸಿದರು. "ಏನೂ ಇರಲಿ; ಮಗಳ ಮನೆಯ ತನಕ ಹೋಗಿ ಸಂಗತಿಯನ್ನು ತಿಳಿದುಬರುತ್ತೇನೆ" ಎಂದು ಯೋಚಿಸಿ ಅವರು ಕೊಂಬಾರಿನ ಕಡೆಗೆ ಹೊರಟರು. ದಾರಿಯಲ್ಲಿ ನರಸಿಂಹಯ್ಯನಲ್ಲಿಗೆ ಬಂದರು. ಎಂದಿನಂತೆ ಅವರು ಮನೆಯಲ್ಲಿರಲಿಲ್ಲ. "ಸೀತೆ, ನಿಮ್ಮ ಮನೆಗೆ ಹೋಗುತ್ತಿದ್ದೇನೆ. ಅಂದರೆ ಹೀಗೆ, ಹೀಗೆ ಸುದ್ದಿ ಕಿವಿಗೆ ಬೀಳುತ್ತಿದೆ. ನನಗೇಕೋ ಮನಸ್ಸು ಸಮಾಧಾನವಿಲ್ಲ. ಅವನೂ ನನಗೆ, ಏನುಎಂಥದೆಂದು ತಿಳಿಸಿಲ್ಲ.ಹೋಗಿಯಾದರೂ ನೋಡಿಬರಬೇಡವೇ?" ಎಂದು ಅಲ್ಲಿಂದ ಕೊಂಬಾರಿಗೆ ಮುಂದುವರಿದರು.

ಆ ವಿಚಾರಗಳನ್ನು ಕೇಳಿ, ಸೀತೆಗೂ ತುಂಬ ಗಾಬರಿಯಾಯಿತು. "ಅಯ್ಯೋ, ಏನು ಗತಿ ಬಂತು? ಅವರು ಮನೆಯಲ್ಲಿದ್ದರೆ ನಾನೂ ಬರುತ್ತಿದ್ದೆ. ಆದರೆ ಮನೆಬಿಟ್ಟು ಹೇಗೆ ಹೊರಡಲಿ? ನೀವು ಹೋಗಿಬನ್ನಿ" ಎಂದು ಪುಟ್ಟಯ್ಯನವರನ್ನು ಅವಳು ಬೀಳ್ಕೊಟ್ಟಳು. ಪುಟ್ಟಯ್ಯನವರು ಕೊಂಬಾರು ಸೇರುವಾಗ, ಅಚ್ಯುತರಾಯ ಮನೆ ಬಿಟ್ಟು ಮೂರು ದಿನವಾಗಿತ್ತು.



# ೧೫ನೆಯ ಅಧ್ಯಾಯ

ಸಂಜೆಯ ಪುಟ್ಟಯ್ಯನವರು ಕೊಂಬಾರಿಗೆ ಬಂದರು. ಮಗಳನ್ನು ವಿಚಾರಿಸಿದರು; ಲಕ್ಷ್ಮಮ್ಮನನ್ನು ಕೇಳಿದರು; ಅವರಿಂದ ಅಚ್ಚುತನು ಪುತ್ತೂರಿಗೆ ಹೋದ ಕಾರಣವೂ ತಿಳಿಯಿತು. ಆದರೆ ಅವರಿಗೊದಗಿದ ಆಪತ್ತಿನ ವಿಷಯದಲ್ಲಿ ಅವರು ಏನೆಂದು ತೀರ್ಮಾನ ಹೇಳುವಂತೆಯೂ, ಸಹಾಯಕ್ಕೆ ಬರುವಂತೆಯೂ ಕಾಣಿಸಲಿಲ್ಲ. ಅವರಿಗೆ ವಯಸ್ಸಾಗಿದೆ; ತಲೆಗೂದಲು ಉದುರಿ ನಡುತಲೆಯು ಥಳಿಸುತ್ತಿರುವ ಈ ವಯಸ್ಸಿನಲ್ಲಿ, ಅವರು ತಮ್ಮ ಮನೆಯ ಯಜಮಾನರಾಗಿದ್ದರೂ, ಮನೆಯ ನಿಜವಾದ ಆಡಳಿತೆಯನ್ನು, ಅವರ ಇಬ್ಬರು ಗಂಡುಮಕ್ಕಳೇ ನಡೆಸುತ್ತಿದ್ದರು. ಹಿರಿಯವನು ಗೋಪಾಲ; ಆತನಿಗೆ ಮೂವತ್ತು ವಯಸ್ಸು; ಅಷ್ಟಕ್ಕೇನೆ ನಾಲ್ಕು ಮಕ್ಕಳ ತಂದೆಯಾಗಿದ್ದಾನೆ. ಅವನ ಒತ್ತಿನವನು ಮಹಾಬಲ. ಅವನಿಗೆ ಇಪ್ಪತ್ತೈದು ವಯಸ್ಸು; ಅವನಿಗೆ ಒಂದು ಗಂಡು ಮಗುವು ಹುಟ್ಟಿದೆ. ಅವನ ಹೆಂಡತಿ ಶಾರದೆ ತವರಿಗೆ ಹೋಗಿ ಎರಡನೆಯ ಸಂತಾನವನ್ನು ಇದಿರುಗಾಣುತಿದ್ದಾಳೆ. ಗೋಪಾಲನೂ ಮಹಾಬಲನೂ ಅಣ್ಣತಮ್ಮಂದಿರೇನೋ ನಿಜ. ಆದರೆ ಉಭಯತರೂ ತಂತಮ್ಮ ಮಡದಿಯರ ಮಾತಿಗೆ ಕಿವಿಗೊಡುವವರು. ಮನೆಯಲ್ಲಿ ಬೇರೆ ಹೆಂಗಸರಿಲ್ಲ; ಪುಟ್ಟಯ್ಯನವರ ಹೆಂಡತಿ ತೀರಿಕೊಂಡು ಹತ್ತು ವರ್ಷಗಳಾದುವು. ಅಂದಿನಿಂದ, 'ಮಗಳ ಮದುವೆಯೊಂದಾದರೆ ನಾನು ಯಾವುದರಲ್ಲಿಯೂ ಇಲ್ಲ'ಎಂದು ಯೋಚಿಸುತ್ತಿದ್ದ ಪುಟ್ಟಯ್ಯನವರಿಗೆ ರುಕ್ಮಿಣಿಯ ಮದುವೆಯೇ ವಾನಪ್ರಸ್ಥಾಶ್ರಮದ ಗಡುವಾಯಿತು. ಅವಳ ಮದುವೆಯಾದಂದಿನಿಂದ ಮನೆಯ ವಿಚಾರಗಳಲ್ಲಿ ಕೈಹಾಕುತ್ತಿರಲಿಲ್ಲ. "ಮಗು ಗೋಪಾಲ, ನೀನು ಅಡಿಕೆ ತೋಟ ನೋಡಿಕೋ; ಮಗು ಮಾಬಲ, ನೀನು ಗದ್ದೆಸಾಗುವಳಿ ಮಾಡಿಸು. ಸುಖದುಃಖ ಇನ್ನೇನಿದ್ದರೂ ನಿಮನಿಮಗೆ— ನನಗೇನಾಗಬೇಕು! ರುಕ್ಮಿಣಿ ಲಗ್ನದ ತನಕ ನನಗೊಂದು ಆತುರವಿತ್ತು. ಈಗ ನಾನು ಸಂಸಾರದಿಂದ ಪಾರಾದೆ" ಎಂದಿದ್ದರು. ಅದಕ್ಕೂ ಮುಂಚಿನಿಂದಲೇ ಅವರ ಸಂಸಾರ

ಹಾಗೇ ನಡೆದುಬಂದಿತ್ತು. ಪುಟ್ಟಯ್ಯನವರ ಕಾಲದತನಕ, ಮುಂದೆಯೂ ಹಾಗೆ ನಡೆಯಲು ಯಾವ ತೊಂದರೆಯೂ ಇದ್ದಿಲ್ಲ. ಅವರ ಹೆಸರೂ ಉಳಿದುಬಂದಿದೆ; ಈಗ ವಿಶ್ರಾಂತಿಯಿದೆ, ನಗದು ಕೈತುಂಬ ಹಣವಿಲ್ಲ ವಾದರೂ, ಈ ಮುಗ್ಗಟ್ಟಿನ ದಿನಗಳಲ್ಲಿ ಯಾವ ಸಾಲದ ವರಾತಕ್ಕೂ ಸಿಲುಕಿದವರೂ ಅಲ್ಲ. ತಮ್ಮ ಮಕ್ಕಳ ಕಾಲವೂ ಹಾಗೇನೆ ಸಂದು ಹೋದರಾಗುತ್ತಿತ್ತು ಎಂದು ಬಯಸುತ್ತಿದ್ದರು. ಹಾಗೆಂದೇ, ಕೃಷ್ಣಯ್ಯ ನವರ ಸಾಲದ ಹೊರೆ, ಮಗನ ಮೇಲೆ ಉಳಿದಿರಲಾರದೆಂದೇ ಲೆಕ್ಕಾ ಚಾರಮಾಡಿ, ಅಚ್ಯುತನಿಗೆ ಅವರು ಹೆಣ್ಣು ಕೊಡಲೊಪ್ಪಿದುದು. ಅಚ್ಯು ತಗೆ ಉಳಿದಿರುವ ಭೂಮಿಯ ಚೂರುಗಳು ಸಾಕೆಂದು. ಜತೆಗೆ ಮಗಳ ಜನ್ಮನಕ್ಷತ್ರವೊಂದು ತೀರ ಅರಿಷ್ಟವಾಗಿ ಬಂದುದರಿಂದ, ವರ ಹುಡುಕಿ ಬೇಸತ್ತಿದ್ದರು. ಸಿಕ್ಕಿದ ವರನ ಕೊರಳಿಗೆ ಅವಳನ್ನು ಕಟ್ಟುವ ಯೋಗ ವಿತ್ತು. ಅದು ತಪ್ಪಿ, ಮಗಳ ಮನಸ್ಸಿಗೆ ಬಂದ ವರನೇ ದೊರೆತನೆಂದರೆ ಸಂತೋಷವಲ್ಲವೇ!

ಆದರೆ, ಒಮ್ಮಿಂದೊಮ್ಮೆಗೆ, ಅಳಿಯರಾಯನ ಕೊರಳಲ್ಲಿ ಸಾಲದ ಕಲ್ಲು ತೂಗುತ್ತಿದೆಯೆಂದು ಕೇಳಿ, ಅವರಿಗೆ ಭೀತಿಯಾಯಿತು. ಆ ಭೀತಿಯಿಂದಲೇ ಅವರು ಓಡಿಬಂದವರು. ತಮ್ಮ ಮಕ್ಕಳಲ್ಲಿ ಅವರ ವಿಚಾರವಾಗಿ ಅವರು ಯಾವೊಂದು ಪ್ರಸ್ತಾಪವನ್ನೂ ಮಾಡಲು ಹೋಗಿರಲಿಲ್ಲ. 'ಯಾವುದಕ್ಕೂ ಸಂಗತಿಯೇನೆಂದು ತಿಳಿಯುವ' ಎಂದು ಬಂದರು. ಸಂಗತಿ ತಿಳಿದಾಯಿತು; ರುಕ್ಮಿಣಿ ತಂದೆಯೊಡನೆ ಮೋರೆ ಸಣ್ಣದುಮಾಡಿಕೊಂಡು "ಏನು ಮಾಡಿ ಬರುತ್ತಾರೋ; ಒಂದು ದಿವ ಸವೂ ಅವರಿಗೆ ಸುಖವಿಲ್ಲ. ಶಾಲೆಗೆ ಓಡಾಟ, ಶಾಲೆಯ ದುಡಿತ, ಎರಡೂ ಸೇರಿ ತುಂಬಾ ಇವೆ. ಇಲ್ಲಿ ಒಕ್ಕಲಿನ ಉಪದ್ರ ಬೇರೆ. ಈಗ ಯಾರಾರು ಸಾಲಗಾರರನ್ನು ಎತ್ತಿ ಕಟ್ಟಿದ್ದಾರೆ" ಎಂದಳು. "ಎಷ್ಟು? ಏನು?" ಎಂದು ಪುಟ್ಟಯ್ಯ ಕೇಳಿದರು. "ನನಗೆ ಅದೆಲ್ಲ ತಿಳಿಯದು! ಅತ್ತೆಯನ್ನು ಕೇಳಿದರೆ ಹೇಳುತ್ತಾರೆ" ಎಂದಳು. ಹಾಗಾಗಿ ಲಕ್ಷ್ಮಮ್ಮನನ್ನು ಅವರು ಮಾತನಾಡಿಸಿದರು. ಲಕ್ಷ್ಮಮ್ಮ ಮೊದಲು ಸುಮ್ಮಗೆ ಇದ್ದರು. ಅಚ್ಯುತನನ್ನು ಕೇಳದೆ ಅವರ ಮುಂದೆ ತಮ್ಮ ಗೋಳಿನ ಕಂತೆಯನ್ನು ಬಿಡಿಸಬಾರದೆಂದೇ ಇದ್ದರು. ರುಕ್ಮಿಣಿ ಬಂದು, "ಹೇಳಿ ಅತ್ತೆ, ಏನಾ

ದರೂ ಅವರಿಂದ ಸಹಾಯಮಾಡಲು ಸಾಧ್ಯವಾದರೆ ಮಾಡುತ್ತಾರೋ ಏನೋ" ಎಂದರು. ಲಕ್ಷ್ಮಮ್ಮ-'ನಮ್ಮವರೇ ಅಲ್ಲವೇ' ಎಂದು ಧೈರ್ಯ ತಾಳಿ, "ಸುಮಾರು ಸಾವಿರದ ಐನೂರು ಆಗುತ್ತದೆ-ಎಂದಿದ್ದ. ಏನೋ ರಿಕಾರ್ಡುಗಳ ಕಟ್ಟು ಹಿಡಿದುಕೊಂಡು ಪುತ್ತೂರಿಗೆ ಹೋಗಿದ್ದಾನೆ. ಅಲ್ಲಿ ಏನು ಮಾಡುತ್ತಾನೋ? ಇಲ್ಲಿ ಯಾರನ್ನೂ ಕೇಳುವ ಹಾಗಿಲ್ಲ; ಹಿಂದೆ ಸಾಲಕೊಟ್ಟವರೆಲ್ಲ ಹೊಂಡಕ್ಕೆ ಇಳಿಸಿದವರೇ. ಇನ್ನು ಕೊಟ್ಟರೂ, ನಾಳೆ ಆಸ್ತಿಯನ್ನು ಸೆಳೆಯುವ ನೆಪದಿಂದಲೇ ಕೊಟ್ಟಾರು. ದೂರದವರಿಗೆ ಆ ಬುದ್ಧಿ ಇರಲಾರದಲ್ಲ. ಕೊಂಬಾರಿನ ಭೂಮಿಗೆ ಯಾರು ಮರುಳು ಹಿಡಿದು ಬಂದಾರು?" ಎಂದಳು.

ಅವರು ಅಲ್ಲಿಗೆ ಬಂದ ದಿವಸ, ಅಷ್ಟು ಮಾತ್ರ ಸುದ್ದಿ ಸಂಗ್ರಹ ವಾಯಿತು. ಮುಂದೆ ಪುಟ್ಟಯ್ಯನವರು ನಾಲ್ಕು ದಿವಸಗಳ ಕಾಲ ಅಲ್ಲೇ ಉಳಿದರು. ಅಚ್ಯುತ ಊರಿಗೆ ಮರಳಿದರೆ, ನೋಡಿಹೋಗುವ ಎಂದು ಯೋಚಿಸಿದರು. ಅವನು ಬರಲಿಲ್ಲ. 'ಬಂದಾರು, ಬಂದಾರು' ಎಂದು ರುಕ್ಮಿಣಿ ತಂದೆಯನ್ನು ಬಲವಂತಪಡಿಸಿ ಕೂತುಕೊಳಿಸುತ್ತೇನೆಂದು ಯೋಚಿಸಿದಳು. ಆದರೆ ಪುಟ್ಟಯ್ಯನವರು, "ಮಗು, ನಾನಿನ್ನು ಮನೆಗೆ ಹೊರಡುತ್ತೇನೆ. ನಾನು ಬಂದು ನಾಲ್ಕು ದಿವಸವಾಯಿತು. ನಿನ್ನ ಗಂಡ ನನ್ನ ಪಂಜಕ್ಕೆ ಕಳುಹಿಸಿಕೊಡು. ಏನು-ಎಂಥದು ಎಂದು ನೋಡುವ" ಎಂದರು.

ರುಕ್ಮಿಣಿಗೆ ತಿಂಗಳು ಮೂರಾಯಿತೆಂದೂ, ಆಗ ತಾನೇ ಬಸಿರಿಯ ಕಾಯಿಲೆಗಳು ಒಂದೊಂದಾಗಿ ಕಾಣಿಸುತ್ತಿವೆಯೆಂದೂ ತಿಳಿಯಿತು. ವಾಂತಿ, ತಲೆ ತಿರುಗುವಿಕೆ, ಸಂಕಟಗಳು ಬರುತ್ತಿದ್ದುವು. "ಮಗು, ಸ್ವಲ್ಪ ಜಾಗ್ರತೆಯಿಂದಿರು; ಹೆಚ್ಚಿಗೆ ದಣಿಯಬೇಡ. ಮತ್ತೆ ಬೇಸಿಗೆಗೆ ಮನೆಗೆ ಬಂದರೆ ಸಮನಾಗುತ್ತದೆ. ಹೆರಿಗೆಯಾದ ಮೇಲೆ ಮೂರು ತಿಂಗಳಿದ್ದು ಹಿಂದೆ ಹೋಗಬಹುದು" ಎಂದರು. ಮರುಗಳಿಗೆಗೆ ಏನೋ ಒಂದು ಯೋಚನೆ ಹೊಳೆದು "ಲಕ್ಷ್ಮಮ್ಮ, ರುಕ್ಮಿಣಿಯನ್ನು ನಾನು ನಾಲ್ಕು ದಿವಸದ ಮಾತಿಗೆ ಮನೆಗೆ ಕರೆದುಕೊಂಡು ಹೋಗಲೇ; ನಡೆಯಲಾರಳು ಅವಳು; ಗಾಡಿಮಾಡಿದರಾಯಿತಲ್ಲ" ಎಂದರು. "ಅವಳು ಹೋಗಿ ಬರುವುದಾದರೆ ಬರಲಿ. ಅವಳಿಗೂ ಸುಖವಾದೀತು ನಾಲ್ಕು ದಿನ" ಎಂದರು

ಅತ್ತೆ. ಆದರೆ ಈ ಸೂಚನೆಯನ್ನು ರುಕ್ಮಿಣಿಯೇ ನಿರಾಕರಿಸಿದಳು. "ಅಪ್ಪಯ್ಯ ಅವರು ಬಂದ ಮೇಲೆ ಕೇಳಿ ಬರುತ್ತೇನೆ. ಅಲ್ಲದೆ ಅವರು ನೂರು ಯೋಚನೆ ತಲೆಗೆ ಸುತ್ತಿಕೊಂಡು ಅಲೆಯುತ್ತಿರುವಾಗ, ನಾನು ಮನೆ ಬಿಡುವುದೂ ಪಸಂದಲ್ಲ" ಎಂದಳು. "ನಾನು ಹೇಳುತ್ತೇನೆ ಅವನಿಗೆ ರುಕ್ಮಿಣಿ; ಅವನು ಬಂದವನೇ ಪಂಜದ ತನಕ ಬಂದು, ನಿನ್ನನ್ನು ಕರೆದುಕೊಂಡು ಬರುತ್ತಾನೆ. ನಿನಗೇನು ಅದರ ಯೋಚನೆ! ಅಲ್ಲದೆ ಯೋಚನೆ ಹಚ್ಚಿಕೊಂಡು ಬರುವುದೇನು? ಆಗುವುದೆಲ್ಲ ಆಗುತ್ತದೆ'' ಎಂದರು ಲಕ್ಷ್ಮಮ್ಮ. ಕೊನೆಗೆ ಅತ್ತೆಯ ಹೇಳಿಕೆ, ತಂದೆಯ ಬಲವಂತಗಳಿಂದ ಆ ರಾತ್ರಿ ರುಕ್ಮಿಣಿ ಹೊರಟಳು. ಊಟ ಮುಗಿಸಿ ಗಾಡಿಯಲ್ಲಿ ಕುಳಿತುಕೊಂಡು ತಂದೆಯೊಡನೆ ಪಯಣ ಬೆಳೆಯಿಸಿದಳು. ಅವಳಿಗೆ ನಿಜಕ್ಕೂ ಕೊಂಬಾರನ್ನು ಬಿಟ್ಟು ಕದಲುವ ಮನಸ್ಸಿಲ್ಲ. ತಂದೆಯನ್ನು ನೋಡುವ ಮನಸ್ಸಿತ್ತು; ನೋಡಿಯಾಯಿತು. ಇನ್ನು ಅತ್ತಿಗೆಯರ ದರ್ಶನಕ್ಕೆ ಅವಳೇನು ಹಾತೊರೆದುಕೊಂಡಿರಲಿಲ್ಲ. ತನ್ನ ಅಣ್ಣಂದಿರು ಬಹುವಾಗಿ ಅತ್ತಿಗೆಯರ ಆಳ್ವಿಕೆಯಲ್ಲಿದ್ದವರೆಂದು ಅವಳು ಬಲ್ಲಳು. ಆದರೆ ಒಂದು ಮನಸ್ಸಿತ್ತು-ಸೀತತ್ತಿಗೆಯನ್ನು ಕಾಣುವುದರಲ್ಲಿ. ಸರಸ್ವತಿ, ಮೂಕಾಂಬಿಕೆಯರ ದರ್ಶನ ಮಾಡುವುದರಲ್ಲಿ ಉತ್ಸಾಹಿತಳಾಗಿದ್ದಳು. ಹೊರಡುವಾಗ ಲಕ್ಷ್ಮಮ್ಮನೂ "ಮಗು, ಸೀತೆಯ ಮನೆಗೆ ಹೋಗಿಬಾ; ಹ್ಯಾಗಿದ್ದಾಳೋ ಏನೋ. ಈ ವರ್ಷ ಸರಸ್ವತಿಗೆ ಲಗ್ನವುಂಟೇ?-ಎಂದು ವಿಚಾರಿಸಿ ಬಾ" ಎಂದಿದ್ದರು. ಬಂಡಿ ಹೊರಟಿತು. ಬೆಳಗಿನ ಜಾವಕ್ಕೇನೇ ಅದು ಪಂಜವನ್ನು ಸೇರಿತು. ಬರಿಯ ಹದಿನೆರಡು ಮೈಲುಗಳ ಗಾಡಿಯ ದಾರಿಯು, ಯಾವ ಎತ್ತುಗಳಿಗೂ ಒಂದು ಭಾರಿ ಪಯಣವಲ್ಲವಷ್ಟೆ!

ಊರಿಗೆ ಬಂದ ಮೇಲೆ ಅವಳು ಸೀತೆ ಮನೆಯಿಂದ ತಮ್ಮಲ್ಲಿಗೆ, ತಮ್ಮಲ್ಲಿಂದ ಸೀತೆಯ ಮನೆಗೆ ಓಡುವುದರಲ್ಲಿ ಸಮಯವನ್ನು ಕಳೆದಳು. ರುಕ್ಮಿಣಿ ಬಸಿರಿ ಎಂದು ತಿಳಿದು ಸೀತೆಗೆ ಹಿಗ್ಗೇ ಹಿಗ್ಗು. ತನಗೊಬ್ಬ ಅಳಿಯ ಉದಯಿಸುವನೆಂದು ಯೋಚಿಸಿಕೊಂಡಳು. ಮನಸ್ಸಿನಲ್ಲೇ-'ಗಂಡಾದರೆ ಕೃಷ್ಣಯ್ಯನೆಂದೂ,' ಹೆಣ್ಣಾದರೆ [ಆಗಲಿಕ್ಕಿಲ್ಲ] ಲಕ್ಷ್ಮಿಯೆಂದೂ ಹೆಸರಿಡಬೇಕಾಗಿ ಯೋಚಿಸಿಕೊಂಡಳು. ಅವಳಿಗೂ

ಹೆಣ್ಣೆಂದರೆ ಹೆದರಿಕೆಯೇ! ಇನ್ನೂ ಇಬ್ಬರು ಅಳಿಯಂದಿರನ್ನು ಹುಡುಕ ಬೇಕು ತಾವು; ಪುಟ್ಟಯ್ಯನವರಿಗೆ ರುಕ್ಮಿಣಿಯಂಥ ಮಗಳಿದ್ದೂ ಅಳಿಯ ನನ್ನು ದೊರಕಿಸಲು ತಪಸ್ಸನ್ನೇ ಮಾಡುವಂತಾಯಿತು ಎಂದು ಅವಳು ತಿಳಿದಿರಲಿಲ್ಲವೇ?

ರುಕ್ಮಿಣಿಯಿಂದ ತಾಯಿಮನೆಯ ಸಾಲಶೂಲಗಳ ವಿಚಾರಗ ಳನ್ನು ಕುರಿತು ವಿಚಾರಿಸದೆ ಇರಲಿಲ್ಲ. ನರಸಿಂಹಯ್ಯ ಅಂತಹ ವಿಷಯ ಗಳಲ್ಲಿ ಊರಿನ 'ಗಜೇಟು'! ಪುತ್ತೂರು ಮುನೀಸಿಫರ ಕೋರ್ಟಿನಲ್ಲಿ ಯಾರ್‍ಯಾರ ಮೇಲೆ, ಯಾವ್ಯಾವ ದಿನ—ಎಷ್ಟು ಎಷ್ಟಕ್ಕೆ ಡಿಕ್ರಿಯಾಯಿ ತೆಂಬ ಸುದ್ದಿಯ ಪಟ್ಟಿಯೇ ಅವರ ನಾಲಗೆ ತುದಿಯಲ್ಲಿರುತ್ತದೆ. ಅವರು ಊರೂರು ಅಲೆಯುವುದು ಸುಮ್ಮನೇನು! ಅವರೊಬ್ಬರು ಊರಿನ ಒಳ ವಕೀಲರು. ಅದಕ್ಕಾಗಿ ಸುತ್ತಲಿನ ನಾಲ್ಕಾರು ಹಳ್ಳಿಯ ವರ ಪರಿಚಯ ಮಾಡಿಕೊಂಡು, ಊರಿನ ತಲೆಹರಟೆಗಳಲ್ಲಿ ಬಾಯಿ ಹಾಕಿ, ದಿನ ನಿರ್ವಹಿಸುತ್ತಿದ್ದವರು. ಅಂಥವರ ಕಿವಿಗೆ, ಅಚ್ಚುತರಾಯನ ಸಾಲ, ದಾವೆ, ಡಿಕ್ರಿಗಳು ಬೀಳುವುದು ಒಂದು ಹೆಚ್ಚಿನದಲ್ಲ. "ಹೆಣ್ಣೇ, ನಿನ್ನ ತಮ್ಮ, ಈಗಲೇ ಮೈತುಂಬ ಸಾಲಮಾಡಿಕೊಂಡು ಮಲಾಮತಿ ಮಾಡಿಕೊಂಡಿದ್ದಾನಂತೆ. ನಾನು ಅಂದಿರಲಿಲ್ಲವೆ! ಓದುಗೀದು ನಮಗೆ ಯಾವ ನುಣ್ಣಿಗೆ-ಎಂದು. ಶಾಲೆ ಮುಗಿಸಿ, ತಣ್ಣಗೆ ಮನೆಯ ಭೂಮಿ ನೋಡಿಕೊಂಡಿದ್ದರೆ ಹೇಗೆ ಸಾಲವಾಗುತ್ತಿತ್ತು? ನಾನೂ ಸ್ವಲ್ಪ ಸಹಾಯ ಮಾಡುತ್ತಿದ್ದೆ" ಎಂದರು. ಸೀತೆ ನಂಜಿನಲ್ಲಿ "ಸಹಾಯ ಮಾಡುವ ಮನ ಸ್ಸಿದ್ದವರು ಈಗಲೂ ಮಾಡಬಹುದಲ್ಲ. ಅವರೇನು ನಮಗೆ ಪರಕೀಯ ರಲ್ಲವಲ್ಲ" ಎಂದಳು. "ಹೂಂ, ನನ್ನ ಹತ್ತಿರ ಇರುವ ಒಂದು ಸಾವಿರ, ಎರಡು ಸಾವಿರ ರೂಪಾಯಿ ನಾನು ಭೂಮಿಗೆ ಹಾಕಲು ಹೆದರಿ, ಒಳ್ಳೆ ಬಡ್ಡಿ ಸಿಕ್ಕಿದರೆ ಸಾಕೆಂದು, ಅಡವಿನ ಸಾಲಕ್ಕೆ ಕೊಟ್ಟಿದ್ದೇನೆ. ಈಗ ಸಂಬಂಧದ ಹಂಗಿಗೆ ಬಿದ್ದು, ಜವಾಬುದಾರಿಯಿಲ್ಲದೆ, ಬಡ್ಡಿ ಆಸೆಯನ್ನು ಬಿಟ್ಟು—ಇವರಿಗೆ ಸಾಲ ಕೊಟ್ಟರೆ, ನಾಳೆ ನನ್ನ ಮಕ್ಕಳು ಬೇಡಿ ತಿನ್ನ ಬೇಕಾದೀತು" ಎಂದು ಉತ್ತರ ಬಂದಿತು. "ಹಾಗಿದ್ದರೆ, ಅವರವರು ಏನೂ ಮಾಡಿಕೊಳ್ಳಲಿ; ನೀವು ಅವರ ವಿಷಯ ನನ್ನ ಹತ್ತಿರ ಹೇಳಿ ಹಂಗಿಸುವುದು ಬೇಡ" ಎಂದಳು ಸೀತೆ.

ಆದರೂ, ಆಕೆಗೆ ತವರು ಮನೆಯ ಯೋಗಕ್ಷೇಮ ತಿಳಿಯುವ ಹಂಬಲ ಹೋಗಲಿಲ್ಲ. ರುಕ್ಮಿಣಿಯಿಂದ ಕೇಳಿ ತಿಳಿಯುವ, ಎಂದು ಈ ವರೆಗೆ ಕಾದಿದ್ದಳು. ರುಕ್ಮಿಣಿ, ಅಷ್ಟು ಸುಲಭದಲ್ಲಿ ಮನೆ ಸಂಗತಿಯನ್ನು ಅವಳ ಮುಂದಕ್ಕೆ ಬಡಬಡಿಸಲಿಲ್ಲ. ಅವಳಿಗೂ, ನರಸಿಂಹಯ್ಯನ ಕಿವಿಗೆ ಅವೆಲ್ಲ ಬೀಳದಿರಲಿ ಎಂದೇ ಇತ್ತು. ಸೀತೆಗೆ ರುಕ್ಮಿಣಿಯ ಬಾಣಂತಿತನ ತಮ್ಮ ಮನೆಯಲ್ಲಿ ಆದರೂ ಹರ್ಷವೇ ಇತ್ತು. ಗಂಡನ ಒಪ್ಪಿಗೆ ಅದಕ್ಕೆ ಸಿಗಲಾರದೆಂದು ಅವಳು ಬಲ್ಲಳು. ಅಲ್ಲದೆ ತವರನ್ನು ಬಿಟ್ಟು, ರುಕ್ಮಿಣಿ ಅಲ್ಲಿಗೆ ಬರುವುದೂ ಚಂದವಲ್ಲ. ಆದರೆ ರುಕ್ಮಿಣಿಯ ಚಿಂತೆ ಅವಳಿಗೂ ತಿಳಿದಿದೆ. ಅಣ್ಣಂದಿರ ಹೆಂಡಂದಿರು ಅವಳ ಸೇವೆಗೆ ನೆರವಾಗುವುದು ಅನುಮಾನ.ತಂದೆಯ ಮನೆಯಾದರೂ, ತೊಡಕಿಲ್ಲದೆ ದಿನ ಸಾಗದೆಂದು ಬಲ್ಲಳು. "ಅತ್ತಿಗೆ, ನೀವಿದ್ದೀರಲ್ಲ ಹತ್ತಿರದಲ್ಲಿ; ಹಾಗೆ ದಿನಕ್ಕೊಂದು ಸಾರಿಯಾದರೂ ಇಲ್ಲಿ ಬಂದು ಹೋಗಬಹುದಲ್ಲ" ಎಂದಳು ರುಕ್ಮಿಣಿ. "ಅದರ ಯೋಚನೆ ಈಗಲೇ ಏಕೆ! ದೇವರು ಇದ್ದಾನೆ. ನಾವ್ಯಾರೂ ಇಲ್ಲವೆ ಊರಲ್ಲಿ" ಎಂದು ಸೀತೆ ಅವಳಿಗೆ ಧೈರ್ಯಕೊಟ್ಟಳು. ಅಷ್ಟೇನೆ-ಆ ಬಾರಿ ಪಂಜದ ಊರಿಗೆ ಬಂದುದಕ್ಕೆ ರುಕ್ಮಿಣಿಗೆ ದೊರೆತ ಸಂತೋಷ. ಅಂದರೆ, ಸ್ವಂತ ಮನೆಯ ಗದ್ದಲ ಅವಳು ತಿಳಿದಳು. ಅವರು ಬಂದ ದಿನ ಪುಟ್ಟಯ್ಯನವರು ಮಕ್ಕಳನ್ನು ಕರೆದು ಅಳಿಯನ ವಿಚಾರ "ಹೀಗೆ ಹೀಗೆ ಇದೆ; ನಾವೇನಾದರೂ ಸಹಾಯ ಮಾಡಬೇಡವೇ?" ಎಂದರು.

ಮಹಾಬಲನು "ಹೌದು; ಊರಿನ ಭಾರವನ್ನೆಲ್ಲ ನಾವು ಹೊರಲಿಕ್ಕೆ ಬಂದೀತೆ? ಮಗಳಿಗೆ ಮದುವೆ ಮಾಡಿಸಿದಿರಿ. ನಿಮ್ಮಿಂದಾಗುಷ್ಟು ಚಿನ್ನ ಆಭರಣ ಹಾಕಿದಿರಿ. ಹಬ್ಬ ಹುಣ್ಣಿಮೆಗೆ, ಕರೆಸಿಕೊಳ್ಳುತ್ತಿದ್ದೀರಿ. ನಾಳೆ ಬಾಣಂತಿತನಕ್ಕೂ ಕರೆಸಿದರಾಯಿತು. ಅಷ್ಟೇ ಮಾಡಬಹುದು ಹೊರತು, ಅಳಿಯನ ಮನೆಯ ಸಾಲಸೋಲುಗಳಿಗೆ ನಾವು ಕೈಹಾಕಿದರೆ, ಗಾಣಕ್ಕೆ ಕೈಕೊಟ್ಟ ಹಾಗಾದೀತು" ಎಂದು ಆತ ತಂದೆಯನ್ನು ಎಚ್ಚರಿಸಿದನು.

"ಹೌದು ಮಗು, ರುಕ್ಮಿಣಿಯ ಸುಖದುಃಖ ಬೇರೆ, ಅಳಿಯನ ಸುಖದುಃಖ ಬೇರೆ—ಎಂದು ತಿಳಿಯುವುದಕ್ಕಾಗುತ್ತದೆಯೇ? ಪಾಪ, ಗಂಡನ ಯೋಚನೆಯಿಂದ ಮಗು ಎಷ್ಟು ಸೊರಗಿದೆ! ಅವಳನ್ನು

ಕಂಡರೆ ತಿಳಿಯುದೇ! ಮೊದಲಿನ ಮಾತು, ನಗು ಯಾವುದೂ ಇಲ್ಲ. ಕಳೆ ತುಂಬಿ ಕುಣಿಯಬೇಕಾದ ಕೆನ್ನೆಗಳವು—ಇವತ್ತು ಎಷ್ಟು ಬಾಡಿ ಹೋಗಿವೆ ನೋಡು"-ಎಂದರು ಪುಟ್ಟಯ್ಯ. ಮಗಳ ಮೇಲಿನ ಮಮತೆ ಇಷ್ಟು ಮಾತುಗಳನ್ನು ಅವರಿಂದ ನುಡಿಸಿತು.

ಅದಕ್ಕೆ ಹಿರಿಯ ಮಗ ಗೋಪಾಲ "ನೀವು ಅನ್ನುವುದೇನು? ಅವನಿಗೆ ಸಾವಿರವೋ ಎರಡು ಸಾವಿರವೋ ಸಾಲವಿದೆ ಎನ್ನುತ್ತೀರಿ. ನಾವು ತೀರಿಸಬೇಕೇ? ನಮ್ಮಲ್ಲೇನು ನಗದು ಹಣವೇ? ನಾವು ಅವರಿಗಾಗಿ ಸಾಲಮಾಡಿ, ಅವರ ಸಾಲ ತುಂಬಿಸಬೇಕೆನ್ನುತ್ತೀರಾ?" ಎಂದನು.

"ಯಾಕೆ ನಾವು ಸಾಲಮಾಡಬೇಕು? ಈ ಹತ್ತು ವರ್ಷದ ಹುಟ್ಟುವಳಿಯೆಲ್ಲ ಮನೆಯ ಖರ್ಚಿಗೇನೆ ಮುಗಿಯಿತೇ? ಅವನಿಗೆ ನಾವು ಧರ್ಮಕ್ಕೆ ಹಣ ಕೊಡಬೇಕಿಲ್ಲ. ಅವನು ಇನ್ನೊಬ್ಬರಿಗೆ ಆಸ್ತಿ ಅಡವು ಮಾಡುವುದನ್ನು ತಪ್ಪಿಸಿ, ನಾವು ಮಾಡಿಕೊಂಡು, ಹಣ ಕೊಡುವ. ಏನಾಯಿತು? ಯಾರಾರ ಕೈಯ್ಯಲ್ಲಿ ಅವನು ದಣಿಯುವುದು ಬೇಡಲ್ಲ" ಎಂದರು.

"ಹೌದು, ನಮ್ಮಲ್ಲಿ ಹಣದ ರಾಶಿ ಬಿದ್ದಿದೆ. ನಾಳೆ ಸಾಲ ಕೊಟ್ಟು ಅವರಿಂದ ಬಡ್ಡಿ ಬಾಕಿಯಾದರೆ, 'ಅಳಿಯನ ಮೇಲೆ ಕೋರ್ಟಿಗೆ ಹೋದರು' ಎಂಬ ಅಪವಾದ ಮಾತ್ರ ಉಳಿದೀತು. ಅಳಿಯನನ್ನು ಮಾವನೇ ನುಂಗಿದರು ಎಂದಾರು ಊರವರು. ಅದೆಷ್ಟಕ್ಕೂ ಬೇಡದ ಕೆಲಸ. ನಿಮಗೆ ಅವನನ್ನು ಉದ್ಧರಿಸಬೇಕೆಂಬ ಹಟವಿದ್ದರೆ—ಒಂದು ನೋಟಿನ ಸಾಲ ಐನೂರು ಬರುವುದಿದೆ. ಅದನ್ನು ವಸೂಲು ಮಾಡಿ ನಿಮಗೆ ಕೊಡುತ್ತೇನೆ. ಗಂಗಾಜಲ ಹಾಕಿ, ನಿಮ್ಮ ಕೈಯಿಂದಲೇ ಅವನಿಗೆ ಕೊಟ್ಟುಬಿಡಿ. ಸಾಲದ ಹೆಸರು ಬೇಡವೇ ಬೇಡ" ಎಂದನು ಗೋಪಾಲ.

ಪುಟ್ಟಯ್ಯನವರು ತೀರ ಖಿನ್ನರಾದರು. ಮಕ್ಕಳು ಇಷ್ಟು ದಿನ ಆಡಳಿತೆ ನೋಡಿದುದರಲ್ಲಿ ಸಾಕಷ್ಟು ನಗದು ಹಣ ಉಳಿಸಿರಬಹುದೆಂದು ಅವರು ತಿಳಿದಿದ್ದರು. ಅದರ ಲೆಕ್ಕಾಚಾರದ ಗೊಡವೆಗೆ ಅವರು ಹೋಗಿರಲಿಲ್ಲ. ಹೋಗುವ ಮನಸ್ಸೂ ಇರಲಿಲ್ಲ. ಅವರ ಮನಸ್ಸಿನಲ್ಲಿ, ಈಗ ಮಕ್ಕಳು ನೋಡಿಕೊಳ್ಳುವ ಭೂಮಿ ಅವರವರ 'ಹಿಸೆ'ಯೆಂದು ತಿಳಿಯ

ಬೇಕಿತ್ತು. ಈಗ ಇಬ್ಬರ ಮಾತನ್ನೂ ಕೇಳಿ ಅವರು ಸುಮ್ಮಗಾದರು. ರುಕ್ಮಿಣಿಯ ಕಿವಿಗೆ ಈ ಎಲ್ಲ ಪುರಾಣ ಬಿತ್ತು. ಹಿರಿ ಅತ್ತಿಗೆ, ರುಕ್ಮಿಣಿಯೊಡನೆ 'ಚಿರಿಚಿರಿ' ಮಾತನಾಡಿ, ಅವಳನ್ನು ಚುಚ್ಚಿ, ಕಣ್ಣೀರನ್ನು ಸುರಿಸಿಯೂ ಆಗಿತ್ತು. ಈ ಮನೆಗೆ ಬಾಣಂತಿತನಕ್ಕೆ ತಾನು ಬರುವುದು ತಪ್ಪೆಂದು ರುಕ್ಮಿಣಿಯ ಮನಸ್ಸಿಗೆ ಆಗಲೇ ಅನಿಸಿತು. ಅದರಿಂದಾಗಿ ನಾಲ್ಕು ದಿನ, ಗಂಡನ ಬರವನ್ನು ಹಾರೈಸುತ್ತ ಕುಳಿತಳು. ಯಾವ ಉತ್ಸಾಹದಿಂದ ಬಂದಳೋ, ಆ ಉತ್ಸಾಹ ಹೊರಡಲು! ಇಲ್ಲಿಗೆ ಬಾರದೆ ಹೋಗಿದ್ದರೆ ಲೇಸಿತ್ತು. ಬಂದು ತವರು ಮನೆಯ ಅಭಿಮಾನವನ್ನು ಕೆಡಿಸಿಕೊಂಡದ್ದೇ ಲಾಭ ಎಂದೆನಿಸಿತು ಅವಳಿಗೆ.

ಮುದಿ ಪುಟ್ಟಯ್ಯನವರಿಗೆ ತುಂಬಾ ಕೊರಗು ಉಂಟಾಯಿತು. ಆದರೂ ಮಕ್ಕಳನ್ನು ಮೀರಿ ವರ್ತಿಸಿದರೆ, ಯಾವ ಹಿತಸಾಧನೆಯೂ ಆಗದೆಂದೂ, ನಾಳೆ ಅದರ ಫಲವಾಗಿ, ತಾವೇ ಮಕ್ಕಳಿಗೆ ಬೇಡವಾಗಿ ತಮಗೆ ತಾವೇ ಹೊರೆಯಾಗಿ ಕುಳಿತಿರಬೇಕಾದೀತೆಂದೂ ಯೋಚಿಸಿದರು. ಯಾವ ಸಲುವಾಗಿ ನಿಷ್ಠುರ ಮಾಡಿಕೊಳ್ಳುವುದು? ಯಾರಾರ ಹಣೆಯಲ್ಲಿ ಬರೆದ ಕಷ್ಟಗಳನ್ನು ನಾವೇನಾದರೂ ತಪ್ಪಿಸಲು ಬಂದೀತೆ-ಎಂದು ಪಾರಮಾರ್ಥಕ್ಕೆ ಶರಣುಹೋಗಿ ಕುಳಿತರು. ಮಗಳ ಮುಂದೆ, ಇನ್ನು ಅಳಿಯನ ಸಾಲದ ಪ್ರಸ್ತಾಪವನ್ನು ಅವರು ಮಾಡುವಂತೆ ಇರಲಿಲ್ಲ.

ಶಾಲೆಗೆ ದೊರೆತ ರಜೆ, ಮುಗಿದು ಹೋಯಿತು. ಅಚ್ಯುತನು ಊರಿಗೆ ಮರಳಿ ಬಂದ. ಮನೆಗೆ ಬಂದವನಿಗೆ ರುಕ್ಮಿಣಿಯನ್ನು ಕಾಣದೆ ಬೇಸರವೂ ಆಯಿತು. "ಮಗು, ನೀನು ಹೋಗಿ ಅವಳನ್ನು ಕರೆದುಕೊಂಡು ಬಾ; ನೀನು ಅಲ್ಲಿಗೆ ಬರುತ್ತೀ ಎಂದು ಪುಟ್ಟಯ್ಯನವರಿಗೆ ಹೇಳಿದ್ದೇನೆ. ನಿನ್ನ ಮಾವನೂ-ಅವನು ಪುತ್ತೂರಿಂದ ಬಂದ ಕೂಡಲೇ ಅಲ್ಲಿಗೆ ಬರಲಿ-ಎಂದು ಹೇಳಿದರು. ಅವಳಿಗಾಗಿ ಹೋಗುವ ಇಷ್ಟವಿರಲಿಲ್ಲ. ನನ್ನ ಬಲವಂತಕ್ಕೆ ಹೋದಳು" ಎಂದು ತಿಳಿಸಿ, ಅಚ್ಯುತ ಏನು ಮಾಡಿಕೊಂಡು ಬಂದನೆಂದು ತಿಳಿಯಲು ಆತುರಳಾದಳು.

"ಅಮ್ಮ, ಹೋದುದಕ್ಕೆ ಏನೋ ಮಾಡಿಕೊಂಡು ಬಂದೆ; ನೀನೇನನ್ನುತ್ತೀಯೋ, ಅವಳು ಏನೆನ್ನುತ್ತಾಳೋ! ಆದರೆ ಏನು ಮಾಡಲಿ? ಈಗಿನ

ದಿನದಲ್ಲಿ, ಮಾಸ್ತರಿಕೆ ಕೆಲಸ ಸಿಕ್ಕಿದ್ದೇ ದೊಡ್ಡದು; ಅದನ್ನು ಹೇಗೂ ಉಳಿಸಿಕೊಳ್ಳಬೇಕಲ್ಲ. ನಾಗರಾಜನಂಥವರು ನಮ್ಮ ಪುರಾಣ ಆಗಾಗ ಮೇಲಿನವರಿಗೆ ಚುಚ್ಚಿಕೊಟ್ಟರೆ, ಕೆಲಸ ಕಾಯಂ ಆಗುವುದೂ ತಪ್ಪೀತು. ಏನೋ, ಡಿಪ್ಯುಟಿ ಇನ್ಸ್‌ಪೆಕ್ಟರರು ಒಲಿದುದರಿಂದ ನಾನು ಹೀಗಿದ್ದೇನೆ. ಇನ್ನು ಅವರಿಗೆ ವರ್ಗವಾಗುತ್ತದೆ ಎಂದು ಸುದ್ದಿಯಿದೆ. ಹಾಗೆಲ್ಲಾದರೂ ಆದರೆ ಇನ್ನೂ ಕಷ್ಟವುಂಟು........" ಎಂದ.

"ಹೋಗಲಿ, ಸಾಲಕ್ಕೇನು ಮಾಡಿ ಬಂದೆ? ಯಾರಾದರೂ ಕೊಟ್ಟರೋ? ಡಿಕ್ರಿ ಹಣ ಕಟ್ಟಿ ಬಂದೆಯಾ! ತತ್ಕಾಲಕ್ಕೆ ಏನಾದರೊಂದು ಸಮಾಧಾನ ಬರುವ ಹಾಗಿದೆಯೋ ಹೇಗೆ?" ಎಂದು ವಿಚಾರಿಸಿದಳು.

"ಅಮ್ಮ! ಹೋದವನೇ ಉಪ್ಪಿನಂಗಡಿಗೆ ಹೋದೆ. ನನಗೆ ಅಲ್ಲಿ ಯಾರ ಗುರುತೂ ಇಲ್ಲ. ಆದರೆ ಆ ಬ್ಯಾರಿ ಹುಡುಗನಿದ್ದಾನಲ್ಲ--ನಮ್ಮ ಮಾಮುಂಜಿ-ಅವನೇನೊ ಅಂದ-"ದೊಡ್ಡ ಸಾಲವಾದರೆ ಬ್ಯಾಂಕಿನಿಂದ ತೆಗೆಯಬೇಡ. ಅವರು ವಾಯಿದೆಯಾದ ನಂತರ ಒಂದು ಘಂಟೆಯೂ ಬಾಕಿ ಇಡುವವರಲ್ಲ. ಬಡ್ಡಿಗೂ ಕ್ಷಣ ಹೆಚ್ಚುಕಡಿಮೆಯಾಗಬಾರದು ಅವರಿಗೆ. ನೋಡುವ—ಉಪ್ಪಿನಂಗಡಿ ಸಾಹುಕಾರ ಗಣೇಶ ಪೈಗಳು ಮನಸ್ಸುಮಾಡಿದರೆ ಏನಾದರೂ ಆದೀತು. ಹೊಸಮಠ, ಕಡಬಗಳಲ್ಲಿ ಅವರಿಗೆ ತುಂಬಾ ಲೇವಾದೇವಿಯುಂಟು. ಕೊಂಬಾರೊಂದು ದೂರವಲ್ಲ" ಎಂದ. ನನಗೂ ಧೈರ್ಯವಿರಲಿಲ್ಲ; ಅವರಲ್ಲಿಗೆ ಹೋದೆ. ಮಾಮುಂಜಿ ತನ್ನ ಮಾತಿಗೆ ಭರಮು ಬಾರದೆಂದು ತಿಳಿದು, ಜತೆಗೆ ಬೇರೆ ಯಾರೋ ಗುರುತದವರನ್ನು ಕೊಟ್ಟಿದ್ದ. ಅವರಿಗೇನಾದರೂ ಕಮಿಶನಿನ ಆಶೆ ತೋರಿಸದೆ ಬರಲಾರರೆಂದೂ ಹೇಳಿದ್ದ. ಹಾಗೆಯೇ ಆಯಿತು. ಆದರೆ ಅವರು ಪೈಗಳ ಭಾರಿ ಆಪ್ತರು. ರಿಕಾರ್ಡುಗಿಕಾರ್ಡು ಹೊತ್ತುಕೊಂಡು ಹೋಗಿದ್ದೆನಲ್ಲ........ಎಲ್ಲವನ್ನು ತೋರಿಸಿದೆ. 'ಕೊಂಬಾರಿನ ಆಸ್ತಿಯೋ! ಯಾರು ಆ ಮೂಲೆಯಲ್ಲಿನ ಭೂಮಿಗೆ ಹಣಹಾಕುತ್ತಾರೆ? ನಾಳೆ ಕೊರಳಿಗೆ ಬಿದ್ದರೆ, ಒಕ್ಕಲು ಸಿಗಲಾರದ ಭೂಮಿ'ಯೆಂದರು. 'ಒಟ್ಟು ಹುಟ್ಟುವಳಿ ಅರುವತ್ತು ಮುಡಿ ರಿಕಾರ್ಡಿನಲ್ಲಿ ಕಂಡರೂ, ತೀರ್ವೆಯಿರುವುದು ನಲವತ್ತು ರೂಪಾಯಿ! ಅಂದರೆ ಭೂಮಿ ನಲವತ್ತು ಮುಡಿಗೇನೆ ಸಮ' ಎಂದರು. 'ಸರ್ವೆ ನಂಬ್ರಗಳು ಎಷ್ಟಿದ್ದರೇನು;

ಹಡಿಲು ಬಿದ್ದ ಭೂಮಿಯೇ ಇರಬೇಕು,' ಎಂದರು. ನನಗೆ ಅವರ ಮಾತು ಕೇಳಿ ಯಾವ ಧೈರ್ಯವೂ ಉಂಟಾಗಲಿಲ್ಲ. "ಯಾವುದಕ್ಕೂ ಯೋಚನೆ ಮಾಡಿ ಹೇಳುತ್ತೇನೆ" ಎಂದು ಎರಡು ದಿವಸ ಕುಣಿಸಿದರು. ಕೊನೆಗೆ—"ನಾನು ಕೊಂಡುಹೋದ ಜನದ ಒತ್ತಾಯಕ್ಕೆ" ಸಾವಿರದ ಐನೂರು ಸಾಲ ಕೊಡುವ, ೧೨॥ಗೆ ಕಡಮೆ ದರದ ಬಡ್ಡಿಯಲ್ಲಿ ಕೊಡ ಲಾರೆ; ಐದು ವರ್ಷಕ್ಕೆ ಅಡವು. ಬಡ್ಡಿ ಬಾಕಿಯಾದರೆ, ಅಂದೇ ಕೋರ್ಟಿಗೆ ಹೋಗಬೇಕಾದೀತು" ಎಂದರು.

"ನನಗೇನೂ ಧೈರ್ಯವಾಗಲಿಲ್ಲ. ಬಡ್ಡಿ ಹೆಚ್ಚಾಯಿತೆಂದು ತೋರಿತು; ಪುತ್ತೂರಿಗೆ ಹೋದೆ. ಅಲ್ಲಿ ಸುಬ್ರಾಯರನ್ನು ಹಿಡಿದು ಮೂರು ನಾಲ್ಕು ಕಡೆಗಳಿಗೆ ಸುತ್ತಿದೆ. ಅಲ್ಲಿಯವರು ಕಡಬದ ಆಸ್ತಿಯೆಂದರೆ ಬಹಳ ದೂರವಾಯಿತೆಂದರು. ತಿರುಗಿ ಉಪ್ಪಿನಂಗಡಿಗೆ ಬಂದೆ. ಪೈಗಳವರು ಉದಾಸೀನವಾಗಿಯೇ ಕುಳಿತರು. ಕೊನೆಗೆ ಅವರು ಹೇಳಿದ್ದಕ್ಕೆಲ್ಲ ಒಪ್ಪಿದೆ. 'ವಾಯಿದೆಗೆ ತಪ್ಪಿದಲ್ಲಿ, ಕ್ರಯ'-ಎಂಬ ಶರ್ತ ಹಾಕಬೇಕು; ಇಲ್ಲವಾದರೆ ಇಷ್ಟಕ್ಕೇ ಭೋಗ್ಯಮಾಡಬೇಕು"-ಎಂದರು. ಭೋಗ್ಯ ಬೇಡವೆಂದು ಮೊದಲಿನ ಶರ್ತಕ್ಕೊಪ್ಪಿದೆ. ತಿರುಗಿ ಸುಬ್ರಾಯರನ್ನು ಕೇಳಿ, ಮಾಡಿ, ಸಮನಾದ ಒಕ್ಕಣೆ ಬರೆಯಿಸಿ, ರಿಜಿಸ್ತ್ರಿ ಆಗುವಂತೆ ಮಾಡಿದೆ. ಅವರು ಕೊಟ್ಟ ಸಾಲದಲ್ಲಿ ಋಣಪತ್ರ, ದಲಾಲಿ, ಕೊಟ್ಟು ನೂರು ರೂಪಾಯಿ ಉಳಿಯಿತು. ಸಾವಿರದ ನಾನ್ನೂರನ್ನು ಕೋರ್ಟಿನಲ್ಲಿ ಕಟ್ಟಿಯೂ ಬಂದಾಯಿತು. ನಮ್ಮ ವಕೀಲರಿಗೂ ಫೀಸು ಕೊಟ್ಟಿರಲಿಲ್ಲ. ಅವರೆಲ್ಲರ ಋಣವನ್ನೂ ತೀರಿಸಿಯಾಯಿತು" ಎಂದು ನಡೆದ ಸಂಗತಿಗಳನ್ನು ಹೇಳಿದನು. ಅವನಿಗೆ ಈ ಕತೆ ಹೇಳುವುದೂ ಕೂಡ ಬೇಸರವಾಗಿತ್ತು. ತಾನು ಹೆಡ್ಡನಾಬಿದ್ದೆ; ಆಸ್ತಿ ಕೈಬಿಟ್ಟಂತೆಯೇ ಆಯಿತು -ಎಂದು ಒಳಗಿಂದೊಳಗೇನೆ ಅವನಿಗೆ ಭೀತಿ. ಆದರೆ ಊರಲ್ಲಿ ಇನ್ನೂ ಅಕ್ಕಿಮುಡಿಗೆ ಮೂರುವರೆ, ನಾಲ್ಕು ರೂಪಾಯಿಗಳಷ್ಟು ಕಡಿಮೆ ಬೆಲೆ ನಡೆಯುತ್ತಿರುವಾಗ, ತನ್ನ ಭೂಮಿಗೆ ಹೆಚ್ಚಿನ ಯೋಗ್ಯತೆ ಬರುವ ಸಂಭವವಿಲ್ಲ—ಎಂದು ತೋರಿತು. ಈ ಕತೆಯನ್ನು ತಾಯಿ ಮುಂದೆ ತೋಡಿಕೊಳ್ಳುವಾಗ ಅವನ ಮುಖ ತೀರ ಪೆಚ್ಚಾಗಿತ್ತು.

"ಸ್ವಲ್ಪ ಅವಸರವಾಯಿತೋ ಏನೋ, ನಿನ್ನ ಮಾವನೂ ಅದ

ಕ್ಕೇನೆ ಬಂದಿದ್ದರು; ವಿಚಾರಿಸಿ ಹೋದರು. ಏನಾದರೂ ಸಹಾಯ ಮಾಡು ತ್ತಿದ್ದರೋ ಏನೋ" ಎಂದು, ಕೆಟ್ಟ ಮೇಲೆ ಆಸೆ ಪಟ್ಟಳು ಲಕ್ಷ್ಮಮ್ಮ.

"ಅಮ್ಮ, ಹೆಣ ಸುಟ್ಟ ಮೇಲೆ ಅಳಬಾರದು. ಹೇಗೂ ಮುಗಿಯಿತಲ್ಲ—ಒಂದು ರಗಳೆ. ವರ್ಷ ವರ್ಷ ನೂರ ಆರುವತ್ತು ರೂಪಾಯಿ ಅಂದಾಜು ಬಡ್ಡಿ ತುಂಬಿದರಾಯಿತು. ತಿಂಗಳ ಸಂಬಳದಲ್ಲಿ ಅದಕ್ಕೆ ಹದಿನೈದು ತೆಗೆದಿರಿಸುವುದು. ಆಗ ಹತ್ತು ರೂಪಾಯಿ ಮಿಗುತ್ತೆ. ಅದನ್ನೂ ಮನೆಯ ಅಕ್ಕಿಯನ್ನೂ ಉಂಡು ಮುಗಿಸುವುದು; ಸುಖವೋ ದುಃಖವೋ ಇದ್ದದ್ದಿದೆ."

"ಯೋಚನೆ ಮಾಡಬೇಡ ಮಗು. ಈ ನೆಲದ ಋಣ ಹಣೆಯ ಮೇಲೆ ಬರೆದಿದ್ದರೆ ಉಳಿಯುತ್ತದೆ: ಇಲ್ಲವಾದರೆ ಅಲ್ಲ. ನೀನು ನಾಳೆ ಪಂಜಕ್ಕೆ ಹೋಗಿ ಅವಳನ್ನು ಕರೆದುಕೊಂಡು ಬಾ". ಎಂದಳು.

"ಅಮ್ಮ, ನಾಳೆಯೇ ನಮ್ಮ ಶಾಲೆ ಶುರು. ಮುಂದಿನ ಶನಿವಾರ ಹೋಗುವುದಾಯಿತು"

"ಯಾಕೆ? ನಾಳೆ ಸಾಯಂಕಾಲವೇ ಹೋಗಿ, ಬೆಳಿಗ್ಗೆಯೇ ಬರಬಹುದಲ್ಲ; ಮೂರು ಹರದಾರಿ ದೂರವಲ್ಲವೇ?"

"ಅವಳಿಂದ ಈ ದೂರ ನಡೆಯುವುದಕ್ಕಾದೀತೆ?"

"ಗಾಡಿ ಮಾಡಿಕೊಂಡು ಬರಬಾರದೇ?"

"ಹೂಂ, ಇನ್ನು ಗಾಡಿ, ರೈಲು, ಎಲ್ಲವನ್ನು ಕಂಡದ್ದೇ ಇದೆ. ಶನಿವಾರ ನಡೆದು ಹೋಗುತ್ತೇನೆ.

ಮಗನ ಮನಸ್ಸು ತುಂಬ ನೊಂದಿತ್ತು. ಓಡಾಟಗಳಿಂದ ಶರೀರ ದಣಿದಿತ್ತು-ಎಂದು ತಾಯಿ ತಿಳಿದುಕೊಂಡಳು. ಶನಿವಾರ ಬರುವ ತನಕ ಅವಳು ಮಾತನಾಡಲಿಲ್ಲ. ಶನಿವಾರ ಬೆಳಗ್ಗೆ ಶಾಲೆಗೆ ಹೊರಡುವಾಗ, "ಈವತ್ತು ಮಧ್ಯಾಹ್ನ ನಿನಗೆ ರಜೆಯಿದೆಯಲ್ಲ. ಪಂಜಕ್ಕೆ ಹೋಗಿ ಬಾ" ಎಂದು ಅವನನ್ನು ಎಚ್ಚರಿಸಿದಳು. ಅಚ್ಯುತ "ಆಗಲಿ" ಎಂದ. ಆದರೆ, ಆ ದಿನ ಸಂಜೆಯ ವೇಳೆಗೆ ನೇರಾಗಿ ಮನೆಗೇನೆ ಬಂದುಬಿಟ್ಟ.

"ಏನು, ಹೋಗಲಿಲ್ಲವೆ ನೀನು ಪಂಜಕ್ಕೆ?" ಎಂದು ಚಕಿತಳಾದಳು ಲಕ್ಷ್ಮಮ್ಮ.

"ಅಮ್ಮ, ಹೋಗಿ ಏನೆಂದು ಅಲ್ಲಿ ಮುಖ ತೋರಿಸುವುದು?

ಮದುವೆಯಾದ ಸ್ವಲ್ಪ ಕಾಲದಲ್ಲೇ, ಆಸ್ತಿ ಅಡವುಮಾಡಿ ಬಂದೆ ಎಂದು ತಿಳಿಸುವುದಕ್ಕೇನು?" ಎಂದನು ಅತಿ ಮರುಕದಿಂದ. ಪಾಪ; ಕಣ್ಣಿಂದ ಬಳಬಳನೆ ನೀರು ಉದುರಿತು.

ರಜೆಯ ದಿನಗಳಲ್ಲಿ ಅವನು, ಮಲಗಿದಾಗಲೆಲ್ಲ ದಿಂಬನ್ನು ಕಣ್ಣೀರಿನಿಂದ ತೊಯ್ಯಿಸಿದ್ದ. ತಾಯಿಯ ಮುಂದೆ ಮಾತ್ರ ಗೆಲವನ್ನು ನಟಿಸುತ್ತಿದ್ದ. ಆದರೆ ಇಂದು ಅವನಿಗೆ ಅದೂ ಸಾಧ್ಯವಾಗಲಿಲ್ಲ. ಅವನ ಮನಸ್ಸಿನಲ್ಲಿ ತನ್ನ ಇನಿಯಳ ಚಿತ್ರ ಕಾಣಿಸಿತು. ಅವಳು ಇಲ್ಲಿಗೆ ಬಂದು ಹೇಗೆ ಮೂಕಿಯಾದಳೆಂಬುದನ್ನು ಬಲ್ಲ. ಈಗ ಆಕೆ ತಾಯಾಗುವ ನಿರೀಕ್ಷಣೆಯಲ್ಲಿದ್ದಾಳೆ. ಆ ಸಮಯದಲ್ಲೂ ಅವಳ ಕಿವಿಗೆ ಕೇಳಿಸುತ್ತಿರಬೇಕಾದುದು ಇಂಥ ಅಶುಭವಾರ್ತೆಯೇ! ಮೇಲೆ, ಮಾವನ ಮನೆಯವರ ಮುಂದೆ, ಮುಖ ತಗ್ಗಿಸಬೇಕಾದ ಪ್ರಸಂಗ. ಒಂದೊಂದರಿಂದಲೂ ಅವನು ತುಂಬ ಮಿದುವಾದ.

ಲಕ್ಷ್ಮಮ್ಮ ಮಾತನಾಡಲಿಲ್ಲ. ಅಲ್ಲಿಂದ ಎದ್ದು ಹೋದಳು. ನಿತ್ಯ ಸಂಜೆ, ಬಿಸಿನೀರು ಕಾಯಿಸುವ ಪರಿಪಾಠ ಅವಳಿಗೆ. ಆ ಕೆಲಸಕ್ಕೆಂದು ಬಚ್ಚಲಿಗೆ ಹೋದಳು. ಮಧ್ಯಾಹ್ನ ತಂದು ಸುರುವಿದ ಅಡರು, ಕೊಳ್ಳಿಗಳನ್ನು ಉರಿಸುತ್ತ ಕುಳಿತಳು. ಒಲೆಯ ಒಳಗೆ ಬೆಂಕಿ ಇದೆಯೋ ಇಲ್ಲವೆ ಹೊರಗೆ ಕಟ್ಟಿಗೆ ಹೋಮವಾಗುತ್ತಿದೆಯೇ--ಎಂಬ ಲಕ್ಷ್ಯವೂ ಅವಳಿಗೆ ಉಂಟಾಗಲಿಲ್ಲ. ಒಂದೆರಡು ಬಾರಿ, ಒಟ್ಟಿದ ಕಟ್ಟಿಗೆ ಉರಿದು ಮುಗಿದ ಮೇಲೆಯೂ, ಅವಳು ಕಾಲು ನೀಡಿ ಅಲ್ಲೇ ಕುಳಿತಿದ್ದಳು. ಅವಳ ಮನಸ್ಸು ಪತಿಯು ಬದುಕಿದ್ದ ದಿನಗಳ ಕಡೆಗೆ ಹರಿಯಿತು. ತಾನು ಆ ಮನೆಯನ್ನು ತುಂಬಿಸಲು ಬಂದ ನೆನಪು ಮೂಡಿತು. ರುಕ್ಮಿಣಿ ಬಂದ ದಿನಕ್ಕೂ, ಅದಕ್ಕೂ ಎಷ್ಟು ಅಂತರವಿತ್ತು! ಆಗ ತಮಗೇನು ಕೊರತೆಯಿತ್ತು? ಎಷ್ಟು ಆಳುಗಳು, ಎಷ್ಟು ಒಕ್ಕಲುಗಳು! ತನ್ನ ಮದುವೆಯ ಕಾಲದಲ್ಲಿ ಮನೆಗೆ ಎಷ್ಟು ನದರು ಕಾಣಿಕೆಗಳು ಬಂದಿದ್ದುವು! ದಿನ ಹೋದಂತೆ, ವಯಸ್ಸು ಸರಿದಂತೆ, ಹೇಗೆ ಆ ವೈಭವ ಒಂದೊಂದಾಗಿ ಕರಗಿತು. ಗಂಡನ ಔದಾರ್ಯದ ನೀಡುಗೈ, ಹೇಗೆ ಸಾಲದ ಕೊಳ್ಳುಗೈಯಾಯಿತು — ಎಂಬುದನ್ನು ಆಕೆ ಒಂದೊಂದಾಗಿ ನೆನೆದಳು. ಆಗಲೇ, ತನ್ನ ಹುಡುಗನ ಭವಿಷ್ಯ ಅವಳಿಗೆ ಹೊಳೆದಿತ್ತು! ಮುಂದೆ

ಪತಿಯು ರುಗ್ಣಶಯ್ಯೆಯನ್ನು ಹಿಡಿದನು. ಆ ದಿನ ಅವಳ ಜೀವನಕ್ಕೆ ಬದನಿಕೆ ಅಂಟಿದಂತಾಯಿತು! ಇನ್ನು ಕೊನೆಯ ದಿನ-"ತಮ್ಮ ವಾಣಿಯದು ಚಿನ್ನದಂಥ ಗುಣವಲ್ಲವೇ?" ಎಂದು ನುಡಿದು, ಯಜಮಾನರು ತೀರಿಕೊಂಡ ದಿನ! ನೆನೆನೆನೆದು ಕಪೋಲ, ನೆಲವೆಲ್ಲ ಒದ್ದೆಯಾದುವು. "ಏನು ಒಳ್ಳೆತನದಿಂದ ಬಂತು? ಒಳ್ಳೆತನವಿದ್ದರೇನಂತೆ – ಬಾಳಿನಲ್ಲಿ ಅದೃಷ್ಟವೇ ಇಲ್ಲದಿರುವಾಗ? ಲಕ್ಷ್ಮಿ ಒಲಿಯದಿದ್ದ ಮನೆಗೆ ಇನ್ನೇನು ಸೌಖ್ಯವೂ ಉಳಿಯದು" ಎಂದುಕೊಂಡಳು.

ಅಲ್ಲಿಂದ ಆಕೆಯ ಮನಸ್ಸಿನಲ್ಲಿ ಮುಂಬರುವ ಮೊಮ್ಮಗನ ಕಡೆಗೂ ಯೋಚನೆ ಓಡಿತು! ಊಹೆಯ ರಾಜ್ಯ ನಿರಾತಂಕ! ಅಲ್ಲಿಯೂ ಸುಖವಿಲ್ಲ. ಸುಖದ ಬೇರು ಇಹದಲ್ಲಿ, ಅನುಭವದಲ್ಲಿ ನಟ್ಟಿರುವಷ್ಟು ದಿನ, ಊಹೆಗಳು ಕೊನರಿ ಹೂವಾದಾವು; ಕಂಪಿಟ್ಟಾವು. ಲಕ್ಷಮ್ಮ ನೂರಾರು ಯೋಚನೆಗಳಲ್ಲಿ ಮಿಂಯುತ್ತ, ಕಣ್ಣೀರಿನಲ್ಲಿ ತೊಯ್ಯುತ್ತ, ಕಾಯದ ಬಿಸಿ ನೀರಿನಲ್ಲಿ ಮಿಂದು, ಮೈಯುಜ್ಜಿಕೊಂಡು-ದೇವರ ಮನೆಗೆ ಬಂದಳು. ಆ ದಿನ ಅವಳು ದೇವರ ಮುಂದೆ ಎಷ್ಟು ಬಾರಿ ಜಪಸರವನ್ನು ತಿರುಗಿಸಿದಳೋ! ಇತ್ತ ಅಚ್ಚುತನ ಚಿಂತೆಗಳೆಲ್ಲವೂ ಅವಳ ಜಪದಲ್ಲಿ ಬೆರೆತವು. ಮಧ್ಯರಾತ್ರಿಗೇ ಆದಿನ ಅವರು ಊಟಮಾಡಿದರು.

ಬೆಳಗಾಗಲು ಲಕ್ಷ್ಮಮ್ಮ "ಮಗು, ನೀನು ಮನೆ ನೋಡಿಕೊಂಡಿರು. ನಾನೇ ಹೋಗಿ ಬರುತ್ತೇನೆ. ನನಗ್ಯಾಕೋ ಅವಳು ಈ ಮನೆಯಲ್ಲಿ ಇಲ್ಲದಿದ್ದರೆ ಸಮಾಧಾನವಾಗುವುದಿಲ್ಲ" ಎಂದು ಪಂಜಕ್ಕೆ ತಾನೇ ಹೋದಳು. ಆ ದಿನ – ಮನೆಗೆಲಸಗಳೆಲ್ಲ ಅಚ್ಚುತನಿಗೆ. ಅಡುಗೆ ಅಟ್ಟನು; ನೀರು ಕಾಯಿಸಿದನು; ಏನನ್ನೋ ಬೇಯಿಸಿ ತಿಂದನು. ಊಟಮಾಡಿ ಮಲಗಿಕೊಂಡು, ತೊರವೆ ರಾಮಾಯಣದ ಹಾಳೆಗಳನ್ನು ತಿರುವಿದನು. ಬೇಡವೆಂದು ಭಾರತದ ಹಳೆಯ ಪ್ರತಿಯೊಂದನ್ನು ಕೈಯಲ್ಲಿ ಹಿಡಿದುಕೊಂಡನು; ಗಟ್ಟಿಯಾಗಿ ಓದುತ್ತ ಕುಳಿತನು! ಆದರೆ ಬಾಯ ದನಿಗೂ, ಮನಸ್ಸಿನ ನಿಟ್ಟಿಗೂ ಹೆಣೆತ ಉಂಟಾಗಲಿಲ್ಲ.

ಸಂಜೆಯಾಯಿತು; ಕತ್ತಲಾಯಿತು. ತಾಯಿ ಇನ್ನು ಬರುವಂತಿಲ್ಲ. ಆತ ಒಂದು ಹೊತ್ತಿಗೆ ಅಡುಗೆ ಮಾಡಿರಿಸಿದ್ದ; ಅದನ್ನು ಉಂಡಾಗಿತ್ತು. ಈಗ ತಿರುಗಿ ಅನ್ನ ಬೇಯಿಸಬೇಕಲ್ಲಾ--ಎಂದು, ಬೆಳ್ತಿಗೆ ಅಕ್ಕಿಯನ್ನು

ಬೇಯಿಸಿ,ಬೋನ ಮಾಡಿದನು. ತೀರ ಹೆಚ್ಚಾಗಿ ಬೆಂದ ಆ ಮುದ್ದೆಯನ್ನು, ಉಪ್ಪಿನಕಾಯಿ ಹಪ್ಪಳಗಳ ಜತೆಗೆ ಹೇಗೋ ನುಂಗಿ, ಊಟದ ಸೆಪ ಮುಗಿಸಿದನು.

"ಅಯ್ಯ, ಒಡತಿ ಊರಲಿಲ್ಲವೇ" ಎಂದು ದೂಮು ಕೇಳಿದ್ದಕ್ಕೆ ಉತ್ತರವಿತ್ತ:"ಪಂಜಕ್ಕೆ ಹೋಗಿದ್ದಾರೆ" ಎಂದು. ಪ್ರಾಯಶಃ ಆ ದಿನದಲ್ಲಿ ಅವನು ಮಾತನಾಡಿದ ಶಬ್ದ ಅದೊಂದೇ ಇರಬೇಕು. ದೂಮುನೂ ಅವನನ್ನು ಹೆಚ್ಚಿಗೆ ಮಾತನಾಡಿಸಲಿಲ್ಲ.

ಮರುದಿನ ಬೆಳಗ್ಗೆ ಲಕ್ಷ್ಮಮ್ಮನೂ ರುಕ್ಮಿಣಿಯೂ ಮನೆ ಸಮೀಪ, ಗಾಡಿಯಿಂದ ಬಂದಿಳಿದರು. ಅಚ್ಯುತ ಉಸ್ಸೆಂದು ಕುಳಿತ. ಚೆಲುವಿನ ಮಾತಿನಿಂದ ಮಡದಿಯನ್ನು ಬರಮಾಡಿಕೊಂಡ. ಹೆಚ್ಚಿನ ಹರಟೆಗೆ ಅವಕಾಶವಿರಲಿಲ್ಲ. "ಏನೇನೋ ಮಾಡಿಕೊಂಡು ಬಂದೆ. ಹೇಳಿ ಫಲವಿಲ್ಲ" ಎಂದು ಅವಳ ಮುಂದೆ ತನ್ನ ಮರುಕವನ್ನು ಕೋಡಿಕೊಂಡ. "ಅತ್ತೆ ಎಲ್ಲವನ್ನು ಹೇಳಿದ್ದರು. ನೀವು ಪಂಜಕ್ಕೆ ಬಂದಿದ್ದರೂ ಸ್ವಾರಸ್ಯವಿದ್ದಿರಲಿಲ್ಲ. ಅಪ್ಪಯ್ಯನ ಕೈಯಿಂದ ಏನಾಗುತ್ತಿರಲಿಲ್ಲ. ಈಗ ಅಣ್ಣಂದಿರದ್ದಲ್ಲವೇ ಕಾರುಭಾರ" ಎಂದಳು. ಮಾತಾಡುವಾಗ ಅಚ್ಯುತನ ಮುಖ ನಿರುತ್ಸಾಹದಿಂದ ತುಂಬಿತ್ತು. "ಯಾಕೆ? ನೀವು ಅಷ್ಟು ಸಪ್ಪಗಾಗುವುದು? ಅನುಭವಿಸುವುದಿದ್ದರೆ ಅನುಭವಿಸುವ. ಅದನ್ನೆಲ್ಲ ಯೋಚನೆಮಾಡಿ ಕುಳಿತರೆ ಫಲವಿದೆಯೇ? ಮನುಷ್ಯ ಜನ್ಮಕ್ಕೆ ಬಂದುದಕ್ಕೆ ಅನುಭವಿಸಬೇಕು"ಎಂದಳು. ಬೆಳೆದವರಾಡುವ ಈ ಮಾತು ಅವಳಿಗೂ ಕಂಠಪಾಠವಾಗಿತ್ತು. ಗಾಡಿಯಲ್ಲಿ ಅತ್ತೆಯು, ಬೇಸರಿಸಿ ನುಡಿದ ನುಡಿಗಳೇ, ಆಕೆಯ ನಾಲಗೆಯಲ್ಲಿ ಮರುಕಳಿಸಿದುವು. ಅಲ್ಲವಾದರೆ "ಜನ್ಮಕ್ಕೆ ಬಂದುದೇ ಕಷ್ಟತಾಳಲು" ಎಂಬ ಪೂರ್ವಸಿದ್ಧಾಂತ ಅವಳಿಗೆಲ್ಲಿಂದ ಉಂಟಾಗಬೇಕು? ಬದುಕಿಗೆ ಬಂದವರೆಲ್ಲರೂ ನರಳುತ್ತಿದ್ದಾರೆಯೇ?

ವೇಳೆಯಾಯಿತೆಂದು ಅಚ್ಯುತ ಶಾಲೆಗೆ ಹೊರಟ. ಈಗ ಅವನಿಗೆ ತನ್ನ "ಶಾಲೆಯ ಕೆಲಸವೊಂದನ್ನು ಹೇಗಾದರೂ ನಿರ್ವಹಿಸುತ್ತೇನೆ ಬೇರೆ ಯಾವ ಹಾಳು ಹರಟೆಯೂ ಬೇಡ. ಈ ಮುಖ ಹೊತ್ತುಕೊಂಡು ತಿರುಗುವುದಾದರೂ ಹೇಗೆ?" ಎಂದು ತೋರುತಿತ್ತು. ಅವನ ಸಪ್ಪಗಿನ

ಘೋರಣೆಯನ್ನು ಕಂಡು ಜಾನ್‌ಸನರು ನಿರಾಶರಾದರು. "ಏ ಅಚ್ಯುತ ರಾವ್- ನೀವು ಹೀಗೆ ಸಪ್ಪೆಯಾದರೆ ಏನು ಗತಿ? ಸಾಲ ನಿಮ್ಮೊಬ್ಬರಿಗೇನು? ನನಗೂ ಇದೆ ಕುತ್ತಿಗೆಯವರೆಗೆ; ಮುಳುಗುವ ಕಾಲಕ್ಕೆ ಮುಳುಗುವುದಪ್ಪ. ಆದರೆ ಅದಕ್ಕಾಗಿ, ನಮ್ಮ ತಲೆಕರಡು ಮಾಡಿಕೊಂಡರೆ ಹೇಗೆ? ನಮ್ಮೊಬ್ಬರಿಗೂ ಸಾಲವಿಲ್ಲವೆಂದು ತಿಳಿದಿದ್ದೀರೇನು? ನಮ್ಮೂರಲ್ಲಿ ಜರಿ ಕಚ್ಚೆ ಹಾಕಿ ತಿರುಗುವವರಿಗೂ ಸಾಲಕ್ಕೆ ಕಡಿಮೆಯಿಲ್ಲ. ಬೇರೆ ಬಿಡಿ; ನಿಮಗೆ ಸಾಲ ತೆತ್ತ ದೊಡ್ಡ ಸಾಹುಕಾರರಿಲ್ಲವೇ? ಅವರು ಮಂಗಳೂರಲ್ಲಿ ಬಂದರದವರಿಗೆ, ಸಾವಿರಗಟ್ಟಲೆಯಿಂದ ರೂಪಾಯಿ ತುಂಬಿಸಬೇಕಂತೆ.ಸತ್ತ ಮೇಲೆ ಹೆಗ್ಗಣದ ವಾಸನೆ ತಿಳಿಯುತ್ತದೆ-ಎಂಬ ಹಾಗೆ, ಅಂಥವರ ಗುಟ್ಟೆಲ್ಲ ಆ ಮೇಲೆ ತಿಳಿಯುವುದಿಲ್ಲವೇ? ಸಾಲ ಇಲ್ಲದವರು ಯಾರಂತೆ-ಈ ಊರಲ್ಲಿ? ಸಾಲಕ್ಕೆ ಹಾಗೆಲ್ಲ ಬೆದರಬಾರದೆ"ಂದರು. ಜಾನ್‌ಸನರನ್ನುವಂತೆ ಅದಕ್ಕೊಂದೇ ಮದ್ದು ಇದೆ--ಅದು ರಸ್ಯದ್ದು. "ಊರಲ್ಲಿರುವ ಹಣಕಾಸು ನಾಗರಾಜನ ಹಾಗಿನವರ ಕೈಗೆ ಸಿಕ್ಕಿದ್ದಕ್ಕಲ್ಲವೇ ನಾವು ಸಾಲಮಾಡಬೇಕಾಗಿ ಬಂದದ್ದು. ಅದಕ್ಕೆಲ್ಲ ರಸ್ಯದ ನಮೂನೆ ಬರಬೇಕು. ಈ ದೊಡ್ಡವರ ತಲೆಗಳು, ಬೊಳ್‌ಶೇವಿಸಮ್ ಬಂದು, ನುಣ್ಣಗೆ ಆಗಬೇಕು" ಅನ್ನುತ್ತಾರೆ!

ಅಂಥ ಮಾತಿನಿಂದ ಅಚ್ಯುತನಿಗೂ ಒಂದೊಂದು ಸಲ ಹುರುಪು ಬರುತ್ತದೆ"ಆದರೆ ರಸ್ಯದ ಕ್ರಮ ನಮ್ಮೂರಿಗೆ ಬಂದೀತೇ? ನಮ್ಮೂರಲ್ಲಿ ನಾಗರಾಜನೇ ಅರಸ! ಸಾಹುಕಾರರೇ ಅರಸರು; ಕಾಸಿರುವ ಕಾಳ ಮೂಳರೇ ಅರಸರು!" ಎನ್ನುತ್ತಾನೆ.

"ಥೂತ್-ನೀವು ಹೆದರ ಬೇಡಿಯಯ್ಯ! ದೊಡ್ಡವರು ಹೀಗೇನೆ ಬಡವರನ್ನು ಹಿಡಿದು ತಿಂದರೆ, ಹತ್ತು ವರ್ಷದಲ್ಲಿ ಇಲ್ಲಿಗೂ ಬರುತ್ತದೆ, ಬೋಳ್‌ಶೇವಿಸಮ್". ಈಗ ನಿಮ್ಮ ಮಹಾತ್ಮಗಾಂಧಿ, ನೆಹರು ಎಲ್ಲರೂ ಇದ್ದಾರಲ್ಲ ನಮ್ಮ ಕಷ್ಟವನ್ನು ನೋಡುತ್ತ. ಅವರು ನಿಜಕ್ಕೂ ತೋರುವ ಹಾಗೆ ಹೀಗಿದ್ದಾರಂತಲೇ? ಅವರ ಅಹಿಂಸೆ ಎಂಬುದೆಲ್ಲ—ಮೇಲಿನ ನೊರೆ! ಒಂದು ಸರ್ತಿಗೆ ಸ್ವರಾಜ್ಯ ಸಿಕ್ಕಲಿ; ಅ ನಾಗರಾಜನಂಥವರನ್ನು ಸಮ ಸುಲಿಗೆ ಮಾಡುವುದಿಲ್ಲವೇ? ಗಾಂಧಿಯವರೇ ಬಂದು-"ತಕೊಳ್ಳಿ, ಅಚ್ಯುತ ಮಾಸ್ತರೇ, ನಿಮಗೆ ಒಂದು ಸಾವಿರ,ಜಾನ್‌ಸನ್ ಮಾಸ್ತರರೇ-

ನಿಮಗೆ ಎರಡು ಸಾವಿರ—ಎಂದು ನಮಗೆಲ್ಲ ಹಂಚುವುದಿಲ್ಲವೇ? ಬೇಗನೆ ಬರುತ್ತದೆ ಆ ಕಾಲ. ಗಾದೆಯೇ ಉಂಟಲ್ಲ-ಅತ್ತೆಗೊಂದು ಕಾಲ. ಸೊಸೆಗೊಂದು ಕಾಲವೆಂದು" ಎಂದು ಸ್ಫೂರ್ತಿ ತಾಳಿದರು.

ಇಂಥ ಹುರಿದುಂಬಿಸುವ ಮಾತುಗಳಿಂದ, ಕೆಲವೊಮ್ಮೆ ಅಚ್ಯುತ ರಾಯನು ತನ್ನ ಚಿಂತೆಗಳನ್ನು ಮರೆತುಬಿಡುತ್ತಾನೆ. ಆದರೆ, ಒಂಟಿ ಯಾಗಿರುವಾಗಲೆಲ್ಲ ಹೋದ ಚಿಂತೆಗಳು ತಿರುಗಿ ಬಂದು, ಅವನಲ್ಲೇ ಗೂಡುಕಟ್ಟುತ್ತವೆ.

ಜನವರಿ ತಿಂಗಳು ಸರಿಯಿತು, ಫೆಬ್ರವರಿ ಬಂದಿತು. ಅಚ್ಯುತ ರಾಯನ ನಭದಲ್ಲಿ ಇನ್ನಷ್ಟು ಕಾರ್ಮುಗಿಲುಗಳು ಕೂಡಿದುವು. ರುಕ್ಮಿ ಣಿಗೆ ಆಗಾಗ ಜ್ವರ ಬರತೊಡಗಿತು. ಅನೇಕ ಬಗೆಯ ಸಂಕಟಗಳೂ ಕಾಡಿದುವು. ಕಡಬಕ್ಕೆ ಅವಳನ್ನು ಕರೆತಂದು ಡಾಕ್ಟರರಿಗೆ ತೋರಿಸಿ ದ್ದಾಯಿತು. "ಮಾಸ್ಟರರೇ, ಇದು ಅವಳ ಮೊದಲ ಬಾಣಂತಿತನ; ನೀವು ತುಂಬ ಎಚ್ಚರವಾಗಿರಬೇಕು. ಕೆಲ್ಸಿಯಂ ಕಡಿಮೆಯಾಗಿದೆ; ತುಂಬ ಹಾಲು ಬೇಕು, ಹಣ್ಣು ಬೇಕು"-ಎಂದು ಮದ್ದುಗಳ ಪಟ್ಟಿಯನ್ನು ಅವ ನಿಗೆ ಕೊಟ್ಟರು. "ಅವೆಲ್ಲವೂ ನಮ್ಮ ಬೋಳು ಡಿಸ್ಪೆನ್ಸರಿಯಲ್ಲಿರುವು ದಾದರೆ ನಾನೇ ಕೊಡುತ್ತಿದ್ದೆ. ಆದರೆ ಅವೆಲ್ಲ ಪೇಟೆಂಟು ಮದ್ದುಗಳು. ನೀವು ಪುತ್ತೂರಿಗೆ ಹೋಗಿಯೇ ತರಬೇಕು" ಎಂದರು. ಅಚ್ಯುತರಾಯ ಯೋಚನೆಗೀಡಾದ; ಆ ಮದ್ದುಗಳನ್ನೆಲ್ಲ ತರಲು ಅವನಲ್ಲಿ ಕಾಸು ಇರ ಬೇಡವೇ?

ಮನೆಯಲ್ಲಿ ಕರಾನೆಯ ಹಸು ಬತ್ತಿತ್ತು. ದೇವರ ಮುಂದಿರಿಸು ವುದಕ್ಕೂ ಹಾಲು ಇರಲಿಲ್ಲ. ಹಾಗೆಂದು ರುಕ್ಮಿಣಿಯನ್ನು ಬಳಲಿಸಲು ಮನಸ್ಸುಬಾರದು. ಹೀಗೆಂದು ದೊಡ್ಡ ಸಾಲದಲ್ಲಿ ಉಳಿಸಿಕೊಂಡ ಹಣ ವನ್ನು, ಒಂದು ಎಮ್ಮೆ ಕೊಳ್ಳುವುದರಲ್ಲಿ ಮುಗಿಸಿಬಿಟ್ಟ. "ಹಣ ಉಳಿಸಿ ಕೊಂಡುದ್ದೇ ಒಳಿತಾಯಿತು" ಎಂದುಕೊಂಡ. ಅಂತು ಸೊಸೆಯು ತುಸುವೂ ಕಷ್ಟಕ್ಕೊಳಗಾಗದಂತೆ ಲಕ್ಷ್ಮಮ್ಮ, ಮನೆಗೆಲಸಗಳನ್ನೆಲ್ಲಾ ತಾನೇ ನಿರ್ವಹಿಸುತ್ತಿದ್ದಳು. ರುಕ್ಮಿಣಿ ಬಹಳ ಮಟ್ಟಿಗೆ ಸುಧಾರಿಸುತ್ತ ಬಂದಳು. ಆದರೂ ತಿಂಗಳು ತುಂಬಿದಂತೆ ಅಶಕ್ತಳಾಗುತ್ತಲಿದ್ದಳು. ಅವಳ ಮನಸ್ಸಿಗೆ ಉಲ್ಲಾಸವಾಗುವಂತೆ, ಅಚ್ಯುತ ರಾತ್ರಿ ವೇಳೆ,

ಒಂದಲ್ಲ ಒಂದು ಕತೆಯನ್ನು ಓದಿಹೇಳುತ್ತಿದ್ದ. ಲಕ್ಷ್ಮಮ್ಮನಿಗೆ, ಬಲ್ಲವರಿಗೊಮ್ಮೆ ಜಾತಕ ತೋರಿಸದೆ ಸಮಾಧಾನವೇ ಇರಲಿಲ್ಲ. ಅದಕ್ಕೇನೆ ನಾಲ್ಕಾರು ಮೈಲು ದೂರ ನಡೆದು ಜಾತಕ ನೋಡುವ ಒಬ್ಬ ಪರಿಚಿತರ ಮನೆಗೆ ನುಗ್ಗಿ "ಹೇಗೆ ನಮ್ಮ ಸೊಸೆಯ ಕುಂಡಲಿ?" ಎಂದು ಕೇಳಿದಳು. ಅವರು ಮೊದಲೇ ಅನುಮಾನಕ್ಕೆ ಗುರಿಯಾದವಳಿಗೆ–"ಹೆರಿಗೆಯ ಸಮಯ ತುಂಬ ಕಷ್ಟವಾದೀತು, ಸಂಧಿಕಾಲ; ತುಂಬ ಎಚ್ಚರ ಬೇಕು. ಅಂತು ದೇವರಿಗೆ ನಿತ್ಯವೂ ಎಳ್ಳು ಎಣ್ಣೆಯಿಂದ ದೀಪ ಉರಿಸಿ, ಬ್ರಾಹ್ಮಣರಿಗೆ ಒಂದು ಅನ್ನ ಹಾಕಿ" ಎಂದು ತಮ್ಮ ಚಿಕಿತ್ಸೆಯ ಪಟ್ಟಿಯನ್ನು ಕೊಟ್ಟರು. ತಾಯಿ ಆ ವಿಚಾರವನ್ನು ಮಗನ ಕಿವಿಗೆ ಹಾಕಲು ಅಂಜಿದಳು. ಅವನಿಂದ ಈ ಸುದ್ದಿಗಳು ಸೊಸೆಯ ಕಿವಿಗೂ ಬಿದ್ದು ಅವಳು ಅಧೀರಳಾಗಬಾರದಷ್ಟೆ.

ಮುಂದಿನ ತಿಂಗಳಲ್ಲಿ ಒಂದು ದಿನ ನಾರಾಯಣ ಮಾಸ್ತರರು, ತಾವಾಗಿ ಉಳಿದ ಗೆಳೆಯರನ್ನು ಕರೆಯಿಸಿಕೊಂಡು "ಬನ್ನಿ ಹೋಗುವ. ಈವತ್ತು ನನ್ನ ಲೆಕ್ಕಕ್ಕೆ ನಿಮಗೆಲ್ಲ ಒಂದು ಕಾಫಿ" ಎಂದರು. ಕಾಫಿ ಕುಡಿಯಲು ಯಾರು ಹಿಂದಾದಾರು? ಜಾನ್‌ಸನರಂತು "ಇವತ್ತು ಯಾರು ಸತ್ತರಪ್ಪ! ನಾರಾಯಣ ಮಾಸ್ತರರು ತಾವು ಖುದ್ದಾಗಿ ಕಾಫಿ ಕೊಡುತ್ತೇನೆನ್ನಲು" ಎಂದರು. "ಕೊನೆಗೂ ನಾಗರಾಜ ಸತ್ತನೇ" ಎಂದೂ ಉದ್ಗರಿಸಿದರು. ನಾರಾಯಣರಾಯರಿಗೆ ನಗು ಬಂತು. "ಏನು, ನಾನು ಯಾರದ್ವಾದರೂ ಸೂತಕಕ್ಕೆ ಮಾತ್ರ ಕಾಫಿ ಕೊಡುವವನೆಂದು ತಿಳಿದಿರಾ? ಇವತ್ತಿನ ಕಾಫಿಗೆ ಬೇಕಾದರೆ ನಾಗರಾಜನನ್ನೂ ಕರೆಯಿಸುತ್ತೇನೆ" ಎಂದು ಅವರೆಲ್ಲರ ಮುಂದೆಯೇ ಒಂದು ಪತ್ರ ಬರೆದು ನಾಗರಾಜನಿಗೆ ಕಳುಹಿಸಿದರು. ಅದರಿಂದ ಸಂಗತಿ ಮತ್ತಷ್ಟು ಗಹನವಾಗಿ ಕಂಡಿತು.

ಸಂಜೆ ಇಂಟರ್‌ನೇಶನಲ್ ಕ್ಲಬ್ಬಿನಲ್ಲಿ ಕಾಫಿಯ ಏರ್ಪಾಟು ನಡೆಯಿತು. ಕುಡುಮತ್ತಾಯರು ಆ ದಿನ ಬಲು ಮೆಹತ್ತಿನಿಂದ ಕಾಯಿಹೋಳಿಗೆ ಮಾಡಿದ್ದರು. ಉಪಹಾರಕ್ಕೆ ನಾಗರಾಜ ಬರಲಿಲ್ಲವೆಂದು, ಹೇಳಬೇಕಿಲ್ಲವಷ್ಟೆ. ಉಪಾಹಾರ ಮುಗಿಯುತ್ತ ಬರಲು, ನಾರಾಯಣರಾಯರು "ಇದು ಸುಮ್ಮನೆ ಕಾಫಿಯಲ್ಲ. ನಿಮ್ಮ ಚಿನ್ನದಂಥ ಊರಿನಿಂದ ನಾನು ಬಿಡುಗಡೆಯಾದ ಬಗ್ಗೆ" ಎಂದು ನಕ್ಕು ಹೇಳಿದರು.

"ಇಲ್ಲಿಗೆ ಮಹಾಲಿಂಗ ಮಾಸ್ತರರು ಬರುತ್ತಾರೆ ನನ್ನ ಬದಲಿಗೆ; ನನಗೆ ಕುರ್ಚಿಪಳ್ಳಕ್ಕೆ ವರ್ಗಮಾಡಿಸಿಕೊಂಡೆ" ಎಂದರು.

ಈ ವಾರ್ತೆಯು ಎಲ್ಲರ ಪಾಲಿಗೂ ಸಿಡಿಲಿನಂತಾಯಿತು. ಜಾನ್ ಸನರೂ ಅಚ್ಚುತರಾಯರೂ ತುಂಬ ನೊಂದುಕೊಂಡರು. "ಈಗ ನೀವು, ಒಟ್ಟಾರೆ ನಮ್ಮಿಂದ ಜಾರಿದ್ದೇ ಅಲ್ಲವೇ? ನಮ್ಮನ್ನು ಮಾತ್ರ ಇಲ್ಲಿ ಕೊಳೆಯಲು ಬಿಟ್ಟು" ಎಂದರು ಜಾನ್‌ಸನರು. ಅದಕ್ಕೆ ಅವರು "ನೀವು ಈ ಊರಿನವರು; ನನ್ನ ಊರಲ್ಲಿ ಶಾಲೆಯಿಲ್ಲ. ಆದರೆ ಕುರ್ಚಿಪಳ್ಳ ನನಗೆ ಸಮೀಪದ್ದು; ಅದಲ್ಲದೆ ಈ ಊರಿನ ಮಾದರಿ ಕಂಡಾಯಿತು. ಇಲ್ಲಿ ಬರಿಯ ಒಬ್ಬಿಬ್ಬರು ಮಾತುಗಾರರಿದ್ದಿದ್ದರೇನಾದರೂ ಮಾಡಬಹುದು. ಯಾಕೆ ನಮಗೆ ಅದೆಲ್ಲ" ಎಂದು ಮಾತು ಅಲ್ಲಿಗೆ ನಿಲ್ಲಿಸಿದರು. ಅಚ್ಚುತನಿಗೆ ಗುರುಗಳೂ, ಹಿತೈಷಿಗಳೂ, ಗೆಳೆಯರೂ ಆದ ಅವರು ದೂರವಾಗುತ್ತಿರುವುದನ್ನು ಕೇಳಿ ವ್ಯಥೆಯಾಯಿತು. "ನಾಗರಾಜನಿಂದ ನಿಮಗೆ ಅಷ್ಟಾಯಿತೇ" ಎಂದು ಕೇಳಿದನು. "ಈಗಿನ ವರ್ಗಾವರ್ಗಿ, ನಾನೇ ಕೇಳಿಕೊಂಡು ಆದುದು. ಅವನ ಮೆಹನತ್ತಿನಿಂದಾದರೆ ಜಿಲ್ಲೆಯ ಯಾವ ಮೂಲೆಗಾಗುತಿತ್ತೋ ಏನೋ! ಅವನ ತಳ್ಳಿ ಅರ್ಜಿಗಳು ಒಂದೇ, ಎರಡೇ? ಆದರೂ ಅವನಿಗೂ ಸಂತೋಷವಾದೀತು. ಅದಕ್ಕೇನೆ ನಾನು ಅವನನ್ನು ಆಮಂತ್ರಿಸಿದ್ದು" ಎಂದರು.

ಮುಂದಿನ ಎರಡು ದಿವಸಗಳ ತನಕ ಅವರಿಗೆ ಹಲವು ಮರು ಉಪಹಾರ, ಸತ್ಕಾರಗಳಾದುವು. ಅದಕ್ಕೆ ಊರವರೂ ಬಂದಿದ್ದರು. ನಂಜಪ್ಪ ಗೌಡರೂ ರಿಯಾಯಿತಿಯಿಂದ ಚಿತ್ರೈಸಿದರು. ಸತ್ತ ಎಮ್ಮೆಗೆ ಹಾಲು ಹೆಚ್ಚು ಎಂಬ ಗಾದೆಯಂತೆ ನಾರಾಯಣ ಮಾಸ್ತರರ ಗುಣಗಾನವನ್ನು ಮಾಡದವರೇ ಇರಲಿಲ್ಲ. ಆ ಮರುದಿನ ಅಚ್ಚುತ ಬಲವಂತದಿಂದ ಅವರ ಮನೆಯವರನ್ನು ತನ್ನ ಮನೆಯ ತನಕವೂ ಕರೆಯಿಸಿಕೊಂಡು ಸತ್ಕರಿಸಿದ. ಕೊಂಬಾರಿಗೆ ಆ ದಿನ ಜಾನ್‌ಸನ್ ಹೆಲನಾಬಾಯಿಯವರ ಆಗಮನವೂ ಆಗಿತ್ತು. ಊಟದ ವೇಳೆಯಲ್ಲಿ ಜಾನ್ ಸನರು "Mr. Achuth, Don't be proud. If you think you become one child's father, I become two child's father" ಎಂದರು. ಹೆಲೆನ್ ನಕ್ಕಳು. "ಆ ಎರಡರಲ್ಲಿ, ಇನ್ನೊಂದು ಮಗುವನ್ನು,

ಅವರೇ ಹೆರುತ್ತಾರೆ" ಎಂದಳು. ಉಳಿದವರು ನಕ್ಕರು-"ಅದೇನೆ ಚೆನ್ನ" ಎಂದರು.

* * * *

ಕೊನೆಗೂ ನಾರಾಯಣರಾಯರು, ದುಃಖಭಾರದಿಂದ ಅವರೆಲ್ಲರಿಗೂ ವಂದನೆ ಸಲ್ಲಿಸಿ,ಕಡಬದಿಂದ ಹೊರಟುಹೋದರು. ಜಾನ್‌ಸನರು ತಮ್ಮ ಕ್ಲಬ್ ಮಂದಿರದಲ್ಲಿ, ತಮ್ಮ ಮೊದಲ ಅಧ್ಯಕ್ಷರಾದ ನಾರಾಯಣರಾಯರ ಭಾವಚಿತ್ರ ತೂಗಬೇಕೆಂಬ ನಿರ್ಣಯವನ್ನು ತಂದರು. ಅಲ್ಲಿದ್ದ ಸಾಹುಕಾರು ಮಂದಿಯಿಂದ ಆ ನಿರ್ಣಯವು ಸರ್ವಾನುಮತದಿಂದಲೇ ಮಂಜೂರಾಯಿತು.

ನಾರಾಯಣರಾಯರು ತಮ್ಮ ಊರಿಂದ ತೊಲಗಿ ಹೋದ ಸಲುವಾಗಿ 'ಪೀಪಲ್ಸ್ ಕ್ಲಬ್ಬಿನಲ್ಲಿ' ನಾಗರಾಜನೂ ಒಂದು ಉಪಹಾರ ಏರ್ಪಡಿಸಿದನು. "ಅವರು ನನ್ನನ್ನು ಟೀ-ಗೆ ಕರೆದು ಅವಮಾನಿಸಬೇಕೆಂದಿದ್ದರು. ಹೋಯಿತಲ್ಲ ಒಂದು ಮಾರಿ! ನಾನು ಅವರ ವರ್ಗಕ್ಕಾಗಿ ಎಷ್ಟು ಸಾಹಸಪಟ್ಟಿದ್ದೇನೆ" ಎಂದು ನಾಗರಾಜನ ಬಡಾಯಿಯಾಯಿತು. "ಇನ್ನೂ ಎರಡು ಉಪದ್ವ್ಯಾಪಗಳಿದ್ದಾವೆ; ಅವನ್ನಿಷ್ಟು ಹದಮಾಡಬೇಕು.ಬದಲಿ, ನಮ್ಮ ಹೊಸ ಮಾಸ್ತರರು. ಮಾಲಿಂಗ ಮಾಸ್ತರರಾದರೆ ಪುತ್ತೂರಿನವರು; ಒಳ್ಳೆಯ ಜನ; ಕುಶಾಲುಬಾಯಿ. ನನಗೆ ಬಹಳ ಹಿಂದಿನಿಂದ ಪರಿಚಯ. ಬ್ರಿಜ್ ಆಡುವುದರಲ್ಲಿ ಅವರನ್ನು ಬಿಟ್ಟರೆ ಇಲ್ಲ" ಎಂದು ಅವರ ವಿಷಯ ಹೆಗ್ಗಳಿಕೆ ಕೊಚ್ಚಿಯೂ ಆಯಿತು. ಆ ಮಾಲಿಂಗ ಮಾಸ್ತರರು ಬರುವ ತನಕ, ಉಳಿದ ಉಪಾಧ್ಯಾಯರಿಗೆ ಇನ್ನು 'ಬದಲಿಗೆ ಬರುವ ಮಾಲು' ಎಂಥದೋ ಏನೋ—ಎಂದು ಅನುಮಾನ. ಅವರು ಎಂದು ಬಂದಾರೆಂದು ಇದಿರುಕಾದರು. ನಾರಾಯಣರಾಯರು ತಮ್ಮ ಚಾರ್ಜನ್ನು ತಮ್ಮ ಒತ್ತಿನ ಉಪಾಧ್ಯಾಯರಿಗೆ ವಹಿಸಿ ಹೋಗಿದ್ದರು. ಅವರು, ಮಹಾಲಿಂಗಯ್ಯನವರನ್ನು ಇದಿರು ಕಾಯುತ್ತಿದ್ದರು. ಐತು ಮೂಲ್ಯರು ಈಗ ಅವರ ಹಂಗಾಮಿ ಹೆಡ್‌ಮಾಸ್ತರರು. ಅವರ ಈ ಮುಖ್ಯೋಪಾಧ್ಯಾಯತನ ಬರಿಯ ಎರಡು ದಿವಸಗಳದ್ದು; ಕಾರಣ, ಎರಡನೆಯ ದಿನವೇ ಮಹಾಲಿಂಗಯ್ಯ ಬಂದರು. ಮಹಾಲಿಂಗಯ್ಯ ಯಾವ ಜಾತಿಯವರೆಂದು ಯಾರಿಗೂ ತಿಳಿಯದಂತೆ. ಅಂತು ಬರುವ

ದಿನ-ಹೇಟ್, ಇಜಾರಗಳನ್ನು ಧರಿಸಿ ಬಂದಿದ್ದರು. ಆ ಡ್ರೆಸ್ಸು ಡಿಪ್ಯೂಟಿ ಇನ್ಸ್‌ಪೆಕ್ಟರರಿಗೂ ಹೆಚ್ಚೆಂದು ಜಾನ್‌ಸನರು ಅಭಿಪ್ರಾಯಪಟ್ಟರು. ಅವರು ಬಂದ ಒಂದು ವಾರದಲ್ಲಿ, ಅವರ ವೇಷದ ಒಂದೊಂದೇ ಭಾಗ ಕಳಚಿ, ಉಳಿದವರಂತೆಯೆ ಷರಾಯಿ, ಪಂಚೆ, ಕ್ರಾಪುಗಳ ಮಟ್ಟಕ್ಕೆ ಇಳಿಯಿತು. "ಇಲ್ಲಿನ ಸೆಕೆ ಯಾರಿಗೆ ಬೇಕಪ್ಪ!" ಎಂದವರು ಕಾರಣವನ್ನು ನಿವೇದಿಸಿದರು. ಅವರು ಬಿಡಾರ ತಂದಿರಲಿಲ್ಲ. ಎಲ್ಲ ವ್ಯವಸ್ಥೆಗಳನ್ನು ಗೊತ್ತುಪಡಿಸಿ-ಮುಂದಿನ ಜೂನಿಗೆ ಮನೆ, ಸಂಸಾರ ಹೂಡುವ-ಎಂದು ಬಂದಿದ್ದರು. ಬಂದೊಂದು ಹತ್ತು ದಿವಸ, ಉಳಿದ ಉಪಾಧ್ಯಾಯರೊಡನೆ ಚೆನ್ನಾಗಿಯೇ ಇದ್ದರು. ನಾಗರಾಜನಂತು ಹಳೆಯ ಗುರುತಿನಿಂದ "ಬಂದಿರಾ, ನಮ್ಮ ಊರಿಗೆ! ಗ್ರಾಂಡ್" ಎಂದು 'ಭಲರೇ' ಎಂದು, ಬೆನ್ನು ಚಪ್ಪರಿಸಿ, ಸ್ನೇಹ ಬೆಳೆಯಿಸಿಕೊಂಡ. ಮೊದಲಿನ ಆ ಕೆಲವು ದಿವಸಗಳಲ್ಲಿ ಮಹಾಲಿಂಗಯ್ಯ ಎರಡೂ ಕ್ಲಬ್ಬುಗಳಲ್ಲಿ ಅಲೆದಾಡಿದರು. ಕೊನೆಗೆ ಇಂಟರ್ನೇಶನಲ್ ಕ್ಲಬ್ಬಿನವರು ಕಾಸು ಕಟ್ಟಿ ಇಸ್ಪೀಟು ಆಡದ್ದನ್ನು ಕಂಡು, ಪೀಪಲ್ಸ್ ಕ್ಲಬ್ಬಿಗೇನೆ ಅಂಟಿದರು. ಅವರಿಗೆ ಇಸ್ಪೀಟು ಆಟದ ಹುಚ್ಚು ತುಂಬ. ರಜೆಗೆ ಊರಿಗೆ ಹೋಗುವ ಮುಂಚೆ, ಜಾನ್‌ಸನರನ್ನು ಕರೆದು "ಮಾಸ್ತರರೇ, ಈ ಸಣ್ಣ ಊರಿಗೆ ಎರಡೆರಡು ಕ್ಲಬ್ಬು ಎಂದರೆ ಅರ್ಥವಿಲ್ಲ. ನೋಡಿ ನಮ್ಮದನ್ನು ಅದರಲ್ಲಿಯೆ ಸೇರಿಸುವ" ಎಂದರು. "ಯಾವುದು ಬೇಡವೋ, ಅದೇ ಉದುರಿಬಿಟ್ಟರೆ ಚಂದ! ಮಾಸ್ತರರ ಜಾತಿ ಹೊಲೆಯರ ಜಾತಿ-ಎಂದು ತಿಳಿಯುವ ಮಹಾನುಭಾವರು ಆ ಕ್ಲಬ್ಬಿನವರು. ನಿಮಗೆ ಅವರೇ ಬೇಕಾಯಿತಲ್ಲ. ನಮ್ಮದು ಬೇಡವಾಯಿತು" ಎಂದು ತಮ್ಮ ವಿಷಾದವನ್ನು ಜಾನ್‌ಸನರು ವ್ಯಕ್ತಮಾಡಿದರು.

ಆದರೂ, ಮಹಾಲಿಂಗ ಮಾಸ್ತರರು, ಮುಂದೆ ಜೂನಿಗೆ ತಾನು ಬಂದುದಾದರೆ "ಶಾಲೆ ಊರುಗಳಲ್ಲಿ ಸೌಹಾರ್ದ ತಂದುಬಿಡುತ್ತೇನೆ. ಒಂದೇ ಕ್ಲಬ್ಬು ಆಗುವಂತೆ ಮಾಡುತ್ತೇನೆ. ನಾನು ಹೆಡ್‌ಮಾಸ್ತರನಾಗಿರುವ ತನಕ, ಈ ಜಟಾಪಟಿ ನಡೆಯದಂತೆ ನೋಡುತ್ತೇನೆ"—ಎಂದು ನಾಗರಾಜನಿಗೆ ಭರವಸೆ ಕೊಟ್ಟುಹೋದರು. ನಾಗರಾಜನೂ, ಅವರ ವಾಸಕ್ಕೆ ಉತ್ತಮ ಮನೆ ಹುಡುಕಿಡುವುದಾಗಿ, ಮಳೆಗಾಲದ ಕಟ್ಟಿಗೆ ಅಕ್ಕಿಗಳನ್ನು ಪೂರೈಸುವುದಾಗಿ, ಮಾತು ಕೊಟ್ಟನು. ಅವರನ್ನು ಕಾಣು

ವುದಕ್ಕೆಂದೇ, ರಜೆಯಲ್ಲಿ ಅವನು ಹಲವು ಬಾರಿ ಪುತ್ತೂರಿಗೂ ಹೋಗಿ ಬಂದನು. ಇದನ್ನೆಲ್ಲ ತಿಳಿದು "ಅಂತು, ಒಂದು ಆಸಾಮಿ ನಮ್ಮ ಪಾಲಿಗೆ ಸತ್ತಂತೆ; as good as dead"-ಎಂದು ಜಾನ್‌ಸನರು ತಮ್ಮ ಮುಖ್ಯರ ವಿಷಯದಲ್ಲಿ ಅಭಿಪ್ರಾಯಪಟ್ಟರು. "ಅವರು ಹೊಳೆಗೆ ಹಾರಲಪ್ಪ – ನಮಗೇನು?" ಎಂದು ಅಚ್ಯುತನೂ ಉದಾಸೀನನಾದ. ಅವನು ಬಯಸಿದ ರಜಾ ಕಾಲ ಬಂದಿತು. ಅದೇ ಅವನಿಗೆ ಬೇಕಿತ್ತು.

ರುಕ್ಮಿಣಿಗೆ ಏಳನೆಯ ತಿಂಗಳು ಕಳೆಯುವಲ್ಲಾಯಿತು. ಮನೆಯಲ್ಲಿ ಸೀಮಂತದ ಶುಭಕಾರ್ಯ ನಡೆಯಿತು. ಅದು ಬರಿದೆ ನಡೆಯಲಿಲ್ಲ. ಎರಡು ತಿಂಗಳ ಸಂಬಳವನ್ನು ಕಚ್ಚಿ ಒಯ್ದಿತು. ಆದರೂ ರುಕ್ಮಿಣಿಯ ಮನಸ್ಸಿಗೆ ಅದರಿಂದ ನೆಮ್ಮದಿಯಾಯಿತು. ಅವಳನ್ನು ಅಚ್ಯುತ ಪಂಜದ ತನಕ ಮುಟ್ಟಿಸಿ ಬಂದ. ಲಕ್ಷ್ಮಮ್ಮ ಅವಳು ಹೊರಡುವಾಗ "ಮಗು, ಗಾಬರಿಪಡಬೇಡ. ನಾನು ಬರುತ್ತೇನೆ ಸಮಯಕ್ಕೆ" ಎಂದು ಹರಸಿ ಕಳುಹಿದಳು. ರುಕ್ಮಿಣಿ ಅತ್ತೆಯ ಹರಕೆಯನ್ನು ನೆನೆದು, ಹೊಸ ಹಿಗ್ಗಿನಿಂದ ತವರಿಗೆ ಹೋದಳು. ಮನಸ್ಸಿನಲ್ಲಿ ಹೆರಿಗೆಯನ್ನು ಕುರಿತು, ಹೆಣ್ಣು ಕರುಳಿಗಿರುವ ಆತುರ ಅವಳಿಗೂ ಇತ್ತು. ಆತುರವನ್ನು ಮೀರಿ, ತಾನು ತಾಯಾಗುವೆನೆಂಬ ಹಿಗ್ಗು ಮನಸ್ಸಿನಲ್ಲಿ! ಅಚ್ಯುತ ಆಗಾಗ ಹೋಗಿ,ಡಾಕ್ಟರರು ಹೇಳಿದ ಮದ್ದುಗಳನ್ನು ತೆಗೆದುಕೊಂಡು, ಪಂಜಕ್ಕೆ ಮುಟ್ಟಿಸಿ ಬರುತ್ತಿದ್ದ. ಒಮ್ಮೆ ಸೀತಕ್ಕನ ಮನೆಯ ತನಕವೂ ಹೋಗಿ ಬಂದ.

ಅವನದೇ ಭವಿಷ್ಯದ ಯೋಚನೆಗಳ ಜತೆಗೆ, ಅವನ ಒಕ್ಕಲನ್ನು ಕುರಿತಾದ ಯೋಚನೆಗಳೂ ಅವನಿಗೆ ಅಂಟಬೇಕೆ! ಅಣ್ಣುಗೌಡ ಇವರ ಭೂಮಿಗೆ ಬಂದು, ಅಂದಿಗೆ ಒಂದು ವರ್ಷ ಸಂದಿತು. ಅವರಿವರ ಬೆಂಬಲದಿಂದ, ಅವನು ಬೇಸಾಯದ ಕೆಲಸವನ್ನು ನಿರ್ವಹಿಸಲು ಶಕ್ತನಾದನು. ಗೇಣಿಗೂ ಅವನಿಂದ ತೊಡಕು ಬರಲಿಲ್ಲ. ಅವನ ಮೊಮ್ಮಗಳಿಗೆ ಗಂಡನನ್ನು ಹುಡುಕುವ ಗೋಳು ಮಾತ್ರ ನಿವೃತ್ತಿಯಾಗಿರಲಿಲ್ಲ. ಈ ಬಾರಿ ಅಚ್ಯುತ ಅವರ ಮನೆ ಮುಂಗಡೆಯ ಮಾವಿನ ಮರವನ್ನು ಹೊಂಚು ಹಾಕಲು ಹೋದಾಗ, ಅಣ್ಣು ಗೌಡನು, "ಏನು ಮಾಡಲಿ ಅಯ್ಯ, ಮೊಮ್ಮಗಳಿಗೊಂದು ಮದುವೆಯಾಗದೆ" ಎಂದು ವ್ಯಥೆ ತೋರಿ

ಸಿದ. "ಮೇಲೆ, ಇಲ್ಲಿಗೂ ಆ ಹಾಳು ರಂಗಪ್ಪ ಎರಡು ಮೂರು ಬಾರಿ ಬಂದಿದ್ದ. ಧನಿಯರ ಬಾಕಿ ಹಣ ಕೇಳಲು ಬಂದೆ-ಎಂದು ನೆಪಮಾಡಿ, ಪೊಮ್ಮಗಳನ್ನು ಕೇಳುವುದಕ್ಕೇನೆ ಬಂದ" ಎಂದನು. "ಅವನಿಗೆ ಮಗಳನ್ನು ಯಾವ ಜನ್ಮಕ್ಕೂ ಕೊಡಬೇಡ. ಅವನು ತೀರ ಪೋಲಿಯಂತೆ! ಅವನ ಉಡಾಳತನದಿಂದ, ಎಂದಾದರೂ ಒಂದು ದಿನ ಜೈಲಿಗೆ ಹೋಗದೆ ಇರಲಾರ" ಎಂದು ಅಚ್ಯುತ ವಿವೇಕ ಹೇಳಿದ. ಮುಂದೊಮ್ಮೆ ಅವರ ವಟಾರಕ್ಕೆ ಕಾಲಿರಿಸಿದ ಬಗ್ಗೆ, ರಂಗಪ್ಪನನ್ನು ಅಚ್ಯುತ ಗದರಿಸಲೂ ಬೇಕಾಯಿತು.

ಬೇರೊಂದು ದಿವಸ ಅಚ್ಯುತನಲ್ಲಿಗೆ ಅಣ್ಣಿಗೌಡ ಬಂದನು; "ನಾನು ನಾಲ್ಕು ದಿನ ಮನೆಬಿಟ್ಟು ತಿರುಗಾಡಿ ಕೊಂಡು ಬರಬೇಕೆಂದಿದ್ದೇನೆ. ಅಯ್ಯ, ನಿಮ್ಮ ದೂಮುನನ್ನೋ, ಇನ್ನಾರನ್ನೋ ಗುಡಿಗೆ ಕಳುಹಿಸುತ್ತೀರಾ? ಹೆಣ್ಣಾಳು ಆಗಬಹುದು. ಸುಬ್ಬಿಗೆ ಗಂಡನನ್ನು ಹುಡುಕದೆ ನಿರ್ವಾಹವಿದೆಯೇ? ಮನೆಯಲ್ಲಿ ಸುಬ್ಬಿಯೊಬ್ಬಳಿಗೆ ಹೆದರಿಕೆಯಾದೀತು" ಎಂದು ಹೇಳಿದ. ಅಚ್ಯುತ 'ಆಗಲಿ' ಎಂದ. ಅದರಿಂದ ಅಣ್ಣಿಗೌಡ ಅಳಿಯನ ಶೋಧನೆಗೆ ಮನೆ ಬಿಟ್ಟು ಹೊರಡುವುದು ಸಾಧ್ಯವಾಯಿತು. ಅವನ 'ಬಳಿ'ಗೆ ಹೊಂದಿಕೆಯಾಗುವವರು ಊರಲ್ಲಿ ಯಾರೂ ಇದ್ದಿರಲ್ಲಿಲ್ಲ. ಮೇಲೆ ಅವನ ಮೆಚ್ಚಿನ ಜನಗಳೂ ಕಡಮೆ. ಹಾಗಾಗಿ ಅವನು ನಿರಾಶೆಗೊಂಡಿದ್ದ". "ಯಾವುದೂ ಆಗದೆ ಹೋದರೆ, ರಂಗಪ್ಪನಾದರೆ ರಂಗಪ್ಪ"ನೆನ್ನುವಷ್ಟು ನಿರಾಶೆಯಾಗಿತ್ತು. "ರಂಗಪ್ಪನನ್ನು ಬಿಟ್ಟು ನೀನು ಯಾರನ್ನು ಹುಡುಕಿದರೂ ಚೆನ್ನ" ಎಂದು ಅಚ್ಯುತ ನುಡಿದಿದ್ದ. ಹೀಗೆ ವರಶೋಧನೆಯ ಕೆಲಸಕ್ಕೆ ಮಕರ ಸಂಕ್ರಾಂತಿ ದಿನಗಳಿಂದ, ಬೇಸಗೆಯ ತನಕ ಅಣ್ಣಿಗೌಡ ಆಚೀಚೆ ಸುಳಿದಾಡಬೇಕಾಯಿತು.

ಅಚ್ಯುತನು ರಜೆ ಬಂದ ಮೇಲೆ, ಮಾಡುವುದಕ್ಕೆ ಕೆಲಸವಿಲ್ಲದೆ, ಮಾವನ ಮನೆಗೆ ಹೋಗುತ್ತಿದ್ದ. ಅಲ್ಲಿ ನಾಲ್ಕು ದಿನ ಇರಲು ಬೇಸರವಾದರೆ ಮನೆಗೆ ತಿರುಗಿ ಬರುತ್ತಿದ್ದ. ತೀರ ಬೇಸರವಾದರೆ ತಮ್ಮ ಭೂಮಿಯನ್ನು ಸುತ್ತಾಡುವ. ಎಲ್ಲಿ ಗೇರು ಬೀಜವಾಗಿದೆ; ಎಲ್ಲಿ ಮಾವಿನ ಕಾಯಿ, ಎಲ್ಲಿ ಹಲಸಿನ ಕಾಯಿ ಎಂದು ಹುಡುಕುತ್ತ ಅಲೆದಾಡುವ. ಈ ಅಲೆದಾಟದ ದೆಸೆಯಿಂದ ಅಣ್ಣಿಗೌಡನ ಮನೆ ಮುಂದಿನ ಮಾವಿನ

ಮರವನ್ನು ಸುತ್ತಾಡಿ ಬರುವುದೂ ಉಂಟು. ಅಂಥದೊಂದೆರಡು ಗಳಿಗೆ ಗಳಲ್ಲಿ, ಸುಬ್ಬಿ ಅವನ ಕಣ್ಮುಂದೆ ಮಿಂಚಿ ಹಾದುಹೋಗಿದ್ದಳು. ಆಕೆ ಬೆಳೆದ ಜೀವ! ಗಂಡಿನ ಬಯಕೆಯಿಂದ ಕೊರಗುತ್ತಿದ್ದ ವಯಸ್ಸು. ಆ ಚೆಲುವು ಮೂಡಿದ ತರುಣಿ, ತನ್ನ ಅಜ್ಜನು ತನಗೆ ವರನನ್ನು ಹುಡುಕಿ ತರುವ ಮುಹೂರ್ತವನ್ನು ಇದಿರುಕಾಯಲು ಸಿದ್ಧಳಾಗಿರಲಿಲ್ಲ.

ಬೇಸಗೆಯ ರಜೆಯಲ್ಲಿ ಬಲುವಾಗಿ ಬೇಸರ ತುಂಬಿದ ಅಚ್ಯುತನ ಮನಸ್ಸಿಗೆ, ಮೆಲ್ಲಮೆಲ್ಲನೆ ಒಕ್ಕಲಗಿತ್ತಿ ಸುಬ್ಬಿಯ ಚೆಲುವು, ಒಂದು ಬಲವಾದ ಸೆಳೆತವಾಗಿ ಪರಿಣಮಿಸಿತು. ಅವನ ದಿನ ರಾತ್ರಿಗಳು-ಭೀತಿ, ಯೋಚನೆ, ಅವಳದ್ದೇ ಆಸೆಗಳಿಂದ ತುಂಬಿಕೊಂಡುವು. ಆತ ತನ್ನ ಬುದ್ಧಿಯನ್ನು ತಾನೇ ಅರಿಯದಾದ. ಹಾಗೊಂದು ಸಂಜೆ ಅಲ್ಲಿಂದ ಮಾವಿನ ಕಾಯಿ ಕುಯ್ಯಿಸಿಕೊಂಡು ಬಂದವನು, ಕತ್ತಿ ಅಲ್ಲೇ ಉಳಿಯಿತು ಎಂದು, ಅವರ ಮನೆಗೆ ಮರಳಿದ. ಆ ಮುಸ್ಸಂಜೆಯ ವೇಳೆ, ಆತ ಸುಬ್ಬಿಯ ಮೋಹದ ಗಾಳಕ್ಕೆ ಸುಲಭ ಆಹುತಿಯಾದ. ಅಚ್ಯುತನ ಮನಸ್ಸು ಅವನ ಮಿತಿಯನ್ನು ಮೀರಿ ಮುಂದುವರಿಯಿತು. ಅಲ್ಲದೆ ಬಾಹ್ಯ ಪ್ರತಿಬಂಧಕಗಳಾವುವೂ ಅವನನ್ನು ತಡೆಯಲಿಲ್ಲ.



## ೧೬ನೆಯ ಅಧ್ಯಾಯ

“ಮಳೆಗಾಲದಲ್ಲಿ ಮದುವೆಯಾದರೆ, ಜನ ಬಂದು ಹೋಗಲು ತುಂಬ ತೊಂದರೆ ನಿಜ; ಆದರೆ ವಿಶೇಷ ಗದ್ದಲವಿಲ್ಲದೆ ಬರಿಯ ನಾಲ್ಕು ಮಂದಿಯೊಳಗೇನೆ ಲಗ್ನ ಮುಗಿಸಲು ಬರುತ್ತದೆ” ಎಂದು ನರಸಿಂಹಯ್ಯನ ತೀರ್ಮಾನ. ಹಾಗಾದುದರಿಂದ ಅವರು ಈ ಬಾರಿ ತಮ್ಮ ಮಗಳು ಸರಸ್ವತಿಯ ಲಗ್ನವನ್ನು ಮಳೆಗಾಲದಲ್ಲೇ ನಿಶ್ಚೈಸಿದರು. “ನಿಮಗೆ ಬೆಳ್ಳೂರೆ ಊರು ಗುತ್ತಿಗೆಯೇ! ಬೇರೆ ಎಲ್ಲೂ ಗಂಡು ಇಲ್ಲವೇ”-ಎಂದು ಸೀತೆ ಅವರನ್ನು ಕೇಳಿದಳು. ಅಂದರೆ ಅವಳಿಗೆ ಮಹಾಲಕ್ಷ್ಮಿಯ ವಿಷಯದಲ್ಲಿ, ಅನಂತರ ಅನೇಕ ಅನುತಾಪಗಳು ಉಂಟಾದುವು. ಅತ್ತೆ ಮನೆಯಲ್ಲಿ, ಹಲವಾರು ಹಿಂಸೆಗಳನ್ನು ಮಹಾಲಕ್ಷ್ಮಿ ಸಹಿಸಬೇಕಾಗಿತ್ತು-

ಎಂಬುದು ಅವಳಿಗೆ ತಿಳಿಯಬಂತು. ಅವಳು ತನ್ನ ಮಟ್ಟಿಗೆ, 'ಸಂಕಟ ಪಡುವುದಕ್ಕೇನೆ ಹೆಣ್ಣು ಜನ್ಮ ಬರುವುದು' ಎಂದು ತೀರ್ಮಾನಿಸಿದ್ದಳಾದರೂ, ಎರಡನೆಯ ನಂಟಸ್ತಿಕೆ ಹುಡುಕುವಾಗ, ಮೊದಲಿಗಿಂತ ಎಚ್ಚರವಾಗಿರಬೇಕು ಎಂದುಕೊಂಡಿದ್ದಳು. ಅವಳ ಮೊದಲನೆಯ ಎಚ್ಚರವೆಂದರೆ "ಬೆಳ್ಳಾರೆ ಊರಿಗೇ ಹುಡುಗಿ ಕೊಡಬಾರದು" ಎಂದು. ಒಂದು ಮನೆಯವರು ಸೊಸೆಯನ್ನು ಕಾಡಿದರೆ, ಊರಿಂದ ಊರೇ ಕೆಟ್ಟದ್ದು ಎಂದು ತೀರ್ಮಾನಿಸಿದ್ದು ಕರುಳಿನ ಮರುಕ. ಮಹಾಲಕ್ಷ್ಮಿಯ ಸ್ಥಿತಿಯನ್ನು ನೆನೆದು ಆ ಕಾಠಿಣ್ಯ ಮನಸ್ಸಿಗೆ ಬಂದಿತ್ತು. ಆದರೆ ನರಸಿಂಹಯ್ಯ ತಮ್ಮ ಮಕ್ಕಳ ಮೆರವಣಿಗೆ ಹೊಸ ಹೊಸ ಊರುಗಳಿಗೆ ಮಾಡಬೇಕೆ! ಈ ಬಾರಿ ಸರಸ್ವತಿಯ ಜಾತಕವನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು, ಅಲೆದಾಡಿದುದೂ ಸ್ವಲ್ಪವಲ್ಲ. ಆದರೆ ಅವರ ಮುಖ್ಯ ಸಂಚಾರ ಕ್ಷೇತ್ರವೇ ಬೆಳ್ಳಾರೆಯಾಗಿತ್ತು. ಹಾಗೆಂದು ಅಲ್ಲಿನ ಒಂದು ಸಂಬಂಧವನ್ನು ಒಪ್ಪಿದರು. ಸೀತೆಯ ಮನಸ್ಸಮಾಧನಕ್ಕೆಂದು "ಹೋ ಇವಳೇ, ನೀನು ಅಷ್ಟೆಲ್ಲ ಗಾಬರಿಯಾಗಬೇಕಿಲ್ಲ. ಅವರಿಗೆ ಇರುವುದು ಒಂದೇ ಮಾಣಿ" ಎಂದರು. "ಒಂದೇ ಮಾಣಿಯಾದರೇನು? ಮನೆಗೊಬ್ಬಳು ಅತ್ತೆಯೆಂದಿಲ್ಲವೇ?" ಎಂದು ಸೀತೆ ಕೇಳಿದಳು. "ಛೀ, ಛೀ ಆ ಮನೆಯಂತಲ್ಲ ಇದು; ನಮ್ಮ ಈ ಗೋವಿಂದಯ್ಯನ ಅಮ್ಮ ಇದ್ದರೂ, ಸತ್ತಲೆಕ್ಕಕ್ಕೇ ದಾಖಲು" ಎಂದರು. "ಅದು ಹೇಗಪ್ಪ" ಎಂದು ಸೀತೆ ಯೋಚನೆಮಾಡುವುದರೊಳಗೆ ಉತ್ತರವೂ ಸಿಕ್ಕಿತು. "ಅಂದರೆ-ಅಂದರೆ ಅವಳಿಗಾಯಿತು ಎಪ್ಪತ್ತು ವರ್ಷ. ಈಗಲೋ ಇನ್ನೊಂದು ಗಳಿಗೆಗೋ ಎನ್ನುತ್ತಿರುವ ಮುದುಕಿ" ಎಂದರು. ಅದರ ಮೇಲೇನೆ, ಸೀತೆ ಸಮಾಧಾನವಾಗಿ, ಮದುವೆಗೆ ಒಡಂಬಟ್ಟದ್ದು.

ಖರ್ಚಿನ ಉಳಿತಾಯಕ್ಕೆ ನಂಟರು ಬೀಗರಿಬ್ಬರು ಸೇರಿ ಮಾತನಾಡಿಕೊಂಡೇ ಮಳೆಗಾಲವನ್ನು ಆರಿಸಿದರು. ಅಂದರೆ ಗೋವಿಂದಯ್ಯನವರಿಗೆ ತುಂಬ ನಂಟರು. ಅವರನ್ನು ಕರೆಯುವಂತೆಯೂ ಇಲ್ಲ, ಬಿಡುವಂತೆಯೂ ಇಲ್ಲ. ಅದರಿಂದ ಈ ಉಪಾಯವನ್ನು ಹುಡುಕಿದರು. ಲಗ್ನಕ್ಕೆ ನರಸಿಂಹಯ್ಯ ಮನೆಯ ಮುಂದೆ ಒಂದು ಕಿರಿಯ ಮಳೆ ಮಾಡನ್ನು ಕಟ್ಟಿಸಬೇಕಾಯಿತು. ಲಗ್ನವು ಬಲು ಚುಟುಕಿನಲ್ಲಿ ಮುಗಿಯಿತು. ಅಚ್ಯುತ, ಲಕ್ಷ್ಮಿಯರು ಹೋಗದೆ ಕಳೆಯದಲ್ಲ. ಲಗ್ನಕ್ಕೆ, ಸಮೀಪ

ವಿದ್ದೂ ದೂರವಾದವಳೆಂದರೆ-ರುಕ್ಮಿಣಿ. ಅವಳು ಲಗ್ನದ ಸಮಯವೇ ನಾಲ್ಕಾರು ದಿನಗಳಿಂದ ವೇದನೆಯಿಂದ ನರಳುತ್ತಿದ್ದಳು. ಲಕ್ಷ್ಮಮ್ಮ ಒಂದು ವಾರದ ಹಿಂದೇನೆ ಪಂಜಕ್ಕೆ ಹೋಗಿದ್ದಳು. ಸೊಸೆಯ ಆತುರ ಕಳೆಯುವ ತನಕ, ಅಲ್ಲೇ ಇರುತ್ತೇನೆಂದು ಬಂದಿದ್ದಳು. ಆದುದರಿಂದ, ಅಚ್ಚುತನೊಬ್ಬನೇ ಮದುವೆಯನ್ನು ಮುಗಿಸಿಕೊಂಡು ತಮ್ಮ ಮನೆಗೆ ಮರಳಿದ. ನಿತ್ಯ ಶಾಲೆಯ ವೇಳೆಗೆ ಕಡಬಕ್ಕೆ ಹೋಗಿ ಬರುವುದು; ಬಂದು, ಮನೆಯಲ್ಲಿ ಅಡುಗೆಯ ಕೆಲಸವನ್ನು ಸಾಗಿಸುವುದು ಅವನ ಉದ್ಯೋಗವಾಗಿತ್ತು.

ತಮ್ಮ ಆಸ್ತಿಯನ್ನು ಪರರಿಗೆ ಅಡವುಮಾಡಿದಂದಿನಿಂದ, ಅವನಿಗೆ ಜನರೆದುರಿಗೆ ಮುಖವನ್ನು ತೋರಿಸುವ ಸಾಹಸವಾಗುತ್ತಿರಲಿಲ್ಲ. ಅದರಿಂದ ಮನಸ್ಸು ತುಂಬ ಮುಗ್ಗಿತ್ತು. ಮೇಲೆ ರುಕ್ಮಿಣಿಯು ಕಾಯಿಲೆಯಿಂದ ಮನಕ್ಕೆ ತುಂಬ ವ್ಯಥೆ ಹತ್ತಿತ್ತು. ತಿಂಗಳ ಸಂಬಳ ವಾರದೊಳಗಾಗಿಯೇ ಕರಗಿ ಮಾಯವಾಗುತಿತ್ತು. ಈ ತೆರನಾಗಿ, ಆತ ಸ್ಥೈರ್ಯಹೀನ ಮನಸ್ಕನಾಗಿರುವಾಗಲೇ ಒಕ್ಕಲಗಿತ್ತಿ ಸುಬ್ಬಿಯು ಸೆಳವಿಗೆ ಬಲಿಯಾದುದು. ಅದು ಒಂದು ರೀತಿಯಿಂದ, ಅವನ ಲಾಸ್ಯದ ಕಾಂಕ್ಷೆಯನ್ನೇನೋ ತಣಿಸಿತು. ಆದರೂ-ಮನಸ್ಸಿನಲ್ಲಿ ತಾನು ಅಪರಾಧಿಯೆಂಬ ಕೊರಗು, ಬಹುಕಾಲ ಅವನ ಬೆನ್ನುಬಿಡದಾಯಿತು. ಅಲ್ಲಿಗೆ ಹೋಗುವಾಗಲ್ಲೆಲ್ಲ, ತನ್ನಿರವಿನ ಮೇಲೆ ಅಧಿಕಾರವಿಲ್ಲದವನಂತೆ, ಬಲೆಗೆ ಸಿಕ್ಕಿದ ಬೇಟೆಯಂತೆ, ನಿರುತ್ಸಾಹಿಯಾಗಿ ಹೋಗುತ್ತಿದ್ದ. ಮನಸ್ಸು ಸದಾ ತಾಂಡನವಾಡುತ್ತಲೇ ಇತ್ತು. ಗ್ರಾಮ್ಯ ಲಾವಣ್ಯವೊಂದು ಅವನ ಮನಸ್ಸನ್ನು ತೀರ ಸೆಳೆದು ರಮಿಸುತ್ತಿತ್ತು. ಯಾರ ಶೋಧನೆಗೂ ಎಟುಕದ ರಾಜ್ಯವದು. ಯಾವುದೋ ಮೋಹಕತೆ "ಭೀತಿಯೇತಕ್ಕೆ?" ಎಂದು ಭರವಸೆ ನೀಡುತ್ತಿತ್ತು. ಜತೆಗೆ, ಶರೀರ ಕಾಂಕ್ಷೆಯೂ ಅದೇ ಲಹರಿಯನ್ನು, ತನ್ನ ಹಂಬಲದಿಂದ ಬಲಪಡಿಸುತ್ತಿತ್ತು. ಅವೆಲ್ಲ ಒಟ್ಟು ಶಕ್ತಿಗಳನ್ನು ಇದಿರಿಸುವ ಪ್ರತಿ ಸೆಳೆತಗಳೂ ಅಲ್ಲಿದ್ದುವು. ತಾಯಿಗೆ ಈ ಸಂಗತಿ ತಿಳಿದರೆ ಹೇಗೆ? ರುಕ್ಮಿಣಿಯ ಮನಸ್ಸಿಗೆ ತನ್ನ ಈ ನಡತೆ ಬಂದೀತೆ?-ಎಂಬ ಅನುಮಾನಗಳು ಒಂದೆಡೆಯಲ್ಲಿ. ಇನ್ನೊಂದೆಡೆಯಲ್ಲಿ ನಾಗರಾಜನ ನೆನಪಾಗುತ್ತದೆ. ಅವನಿಂದ ತಾನು ಈ ಬಲಿಯನ್ನು

ತಪ್ಪಿಸಿ, ಏನು ಸಾಧಿಸಿದಂತಾಯಿತು--ಎಂಬ ಲಜ್ಜೆಯು ಹುಟ್ಟುತ್ತದೆ. ಮರುಕ್ಷಣಕ್ಕೆ 'ತನ್ನದೇನು ಅಪರಾಧವಂತೆ! ತಾನು ಕೇವಲ ಮನುಷ್ಯ. ಮನುಷ್ಯಕಾಂಕ್ಷೆಗೂ, ಚೇಷ್ಟೆಗೂ ಬಲಿಯಾಗುವವ. ಮೊದಲ ಅಪರಾಧಿಯು ಆಕೆಯೇ! ಅವಳ ರೀತಿಯು ಆಮಂತ್ರಣವೀಯುವಂತಿತ್ತು. ತನ್ನ ಲಕ್ಷ್ಯವನ್ನು ಸೆಳೆವ ಬಗೆಯಲ್ಲಿ ಅವಳು ಮಾಯೆ ಹರಡಿದಳು, ತಾನು ಬಲಿಯಾದೆ. ಒಮ್ಮೆ ಬೀಸಿದ ಬಲೆ ಬಿಗುವಾಯಿತು. ಆ ಬಿಗಿತದಿಂದ ಮನಸ್ಸನ್ನು ಕಿತ್ತು ಬರಲು ಕಠಿಣವಾಗಿದೆ' ಎಂದು ಸಮಾಧಾನ ತಂದುಕೊಳ್ಳುತ್ತಾನೆ. ತಿರುಗಿ, ಸುಬ್ಬಿಯೊಬ್ಬಳನ್ನೇ ಅಪರಾಧಿನಿಯಾಗಿ ಮಾಡಲು ಮನಸ್ಸು ಒಡಂಬಡುವುದಿಲ್ಲ. ಹೇಗೆ ಒಪ್ಪೀತು? ತುಂಬು ವಯಸ್ಸಿನ ಜವ್ವನೆ! ಅವಳ ಸಮವಯಸ್ಕ ಗೆಳತಿಯರು ಈಗಾಗಲೇ ಮೂರು ಕೂಸುಗಳ ತಾಯಂದಿರಾಗಿದ್ದಿರಬಹುದು. ಜೀವನ ಬರಿಯ ಶಾಸ್ತ್ರದ ಅಕ್ಷರಗಳನ್ನೇ ಆಧರಿಸಿಲ್ಲ. ಅವಳ ಪಾಲಿಗೆ ಒಲಿದ ಗಂಡಿಲ್ಲ, ಅನುಕೂಲ ದಾಂಪತ್ಯವಿಲ್ಲ--ಎಂದ ಮಾತ್ರಕ್ಕೆ ಮಾಂಸ ತನ್ನ ಬಯಕೆಯನ್ನು ಬೇಡುವುದೇನು ತಪ್ಪು? ಯಾರು ಎಷ್ಟು ದಿನ ಸುಮ್ಮನಿದ್ದಾರು? ಶರೀರ ಧರ್ಮವೂ ಒಂದು ಧರ್ಮವಲ್ಲವೇ—ಎಂದು ಅವಳ ನಡತೆಗೊಂದು ಸಮರ್ಥನೆಯನ್ನು ಕೊಡುವ.

ಆದರೆ ಅವನ ಪ್ರೀತಿಯ ಒಲವು ಒಂದೇ ಕಡೆ ಕೇಂದ್ರೀಕೃತವಾಗಿತ್ತು. ಅವನ ಮನಸ್ಸಿನ ರಾಣಿ ರುಕ್ಮಿಣಿಯೇ. ಅವಳ ವೇದನೆಯ ಪ್ರತಿಗಳಿಗೆಯೂ ಅವನದೇ. ಅವಳ ಆತುರ ವ್ಯಥೆಗಳು ಅವನವೇ. ಮನಸ್ಸಿನಿಂದ ಅಚ್ಚುತ ಅವಳಿಗೇನೆ ದತ್ತುಹೋದವನು. ಅದರಲ್ಲಿ ಅವನಿಗೂ ಅನುಮಾನವಿಲ್ಲ. ಆದರೆ ಈಗ ಮೈಯಿಂದ ಅವನು ಇತರರಿಗೂ ಬಲಿಯು. ಈ ಎರಡು ಶಕ್ತಿಗಳನ್ನು ಹೊಂದಿಸಲು, ಅದರ ವಿಷಯದಲ್ಲಿ ಸುಖಚಿತ್ತನಾಗಲು, ಇಲ್ಲವೆ ಜಡಚಿತ್ತನಾಗಲು ಅವನು ಶಕ್ತಿಯಿಲ್ಲದಾಗಿದ್ದಾನೆ. ಹಾಗೆಂಬ ವೇಳೆಯಲ್ಲೇ ಅವನಿಗೆ ಎರಡು ಅನುಕೂಲ ಒಸಗೆಗಳು ದೊರೆತುವು. ಅತ್ತ ಪಂಜದಲ್ಲಿ, ರುಕ್ಮಿಣಿಗೆ ಗಂಡು ಕೂಸು ಜನಿಸಿದೆ; ಬಾಣಂತಿಯೂ, ಮಗುವೂ ಸೌಖ್ಯವಾಗಿದ್ದಾರೆ ಎಂದು ಬಾಣಂತಿಯ ಆರೋಗ್ಯ ಚೆನ್ನಾಗಿದೆ ಎಂಬ ಪತ್ರವು ದೊರೆಯಲು ತುಂಬ ಉಬ್ಬಿತು ಮನಸ್ಸು. ತಾನೊಬ್ಬ ತಂದೆಯಾದೆನಲ್ಲ ಎಂಬ ವಿಶೇಷವಾದ

ಉತ್ಸಾಹ ಒಳಗಿಂದೊಳಗೇ ಇತ್ತು. ಆದರೆ ಹೊಸ ತಂದೆಯು ಪಾಲಿನ ನಾಚಿಕೆಯೂ ಅದಗಲ್ಲಿ ಬೆರೆತಿತ್ತು. ಇಂಥ ಸಂದರ್ಭ ಒದಗಿದರೆ, ಇಂಟರ ನೇಶನಲ್ ಕ್ಲಬ್ಬಿನಲ್ಲಿ ಉಪಾಹಾರವಾಗದೆ ನಿರ್ವಾಹವೇ ಇಲ್ಲವಲ್ಲ. ಆಯಿತು; ಅದನ್ನೂ ಒಪ್ಪಿಸಿದ ಅಚ್ಚುತರಾಯ. “ಜಾನ್‌ಸನ ಮಾಸ್ತರರೇ, ನಿಮ್ಮ ಡಬ್ಬಲ್ ಹೆರಿಗೆ ಕಾಫಿ ನಮಗೆಂದು ಬರುವುದೋ?” ಎಂದು ಕೇಳಿದ. ಜಾನ್‌ಸನರು ಈಗ ಒಂದು ಬಗೆಯ ವೈರಾಗ್ಯ ತಾಳಿರುವರೆಂದೂ ಹೇಳಬಹುದು. ಕ್ಲಬ್ಬು ಹುಟ್ಟಿದ್ದಕ್ಕೆ ಅದನ್ನು ಕಾಪಾಡಬೇಕು –ಎಂಬುದು ಅವರ ಮನಸ್ಸು. ಅಚ್ಚುತನ ಪ್ರಶ್ನೆಗೆ ಅವರು “ನನ್ನ ಕಾಫಿ ಮನೆಯಲ್ಲೇ. ನಾನಾಗಲಿ, ನನ್ನ ಹೆಂಡತಿಯಾಗಲಿ ಹೆರುವುದರೊಳಗೆ ನಮ್ಮ ಕ್ಲಬ್ಬೇ ನಿಂತುಬಿಡುವ ಸಂಭವ” ಎಂದರು. ಎಲ್ಲರಿಗೂ ಅದರ ಕಾರಣ ತಿಳಿದಿದೆ. ತಮ್ಮ ಶಾಲೆಯ ಹವೆ ಬದಲಾದುದೇ ಅದಕ್ಕೆ ಕಾರಣ. ಹೊಸತಾಗಿ ಬಂದ ಮಹಾಲಿಂಗಯ್ಯನವರು, ನಾಗರಾಜನ ಪಂಗಡ ಸೇರಿದರು. ಅವರು “ಪೀಪಲ್ಸ್ ಕ್ಲಬ್ಬಿನ” ಗಟ್ಟಿಯಾದ ಮೆಂಬರರು. ಜೂನ್ ತಿಂಗಳಿಂದ ಇಂಟರ್ನೇಶನಲ್ ಕ್ಲಬ್ಬಿಗೆ ಕಾಲಿರಿಸಲೂ ಇಲ್ಲ. ಬಾಯಲ್ಲಿ “ನಾನು ನನ್ನಷ್ಟಕ್ಕೆ; ನಿಮ್ಮ ಊರವರೊಳಗಿನ ಮಾರಾಮಾರಿ ನನಗೇಕೆ” ಎಂದು ಇಂದಿಗೂ ಹೇಳುತ್ತಿದ್ದಾರೆ. ಆದರೆ ಅವರ ನಡತೆಯಿಂದ ಜಾನ್‌ಸನ್ ಅಚ್ಚುತರಾಯರಂಥವರಿಗೆ, ಯಾವ ವಿಶ್ವಾಸವೂ ಉಳಿಯಲಾರದು.

ಎರಡು ತಿಂಗಳೊಳಗೆ ಅವರ ಶಾಲೆಯಲ್ಲಿ, ನಿಶ್ಚಿತವಾದ ಎರಡು ಬಣಗಳೇ ಉಂಟಾದುವು. ಐತು ಮೂಲ್ಯರು, ಅಚ್ಚುತ, ಜಾನ್‌ಸನರು ಕೂಡಿ ಒಂದು ಬಣ. ಉಳಿದವರೆಲ್ಲರೂ ಬೇರೊಂದು ಪಂಗಡದವರು. ಅವರ ನಿತ್ಯ ಉದ್ಯೋಗದ ಆವರಣವು, ಕಿರುಕುಳಗಳ ತವರು ಮನೆಯಾಯಿತು. ಬಹು ದಿನಗಳಿಂದ ಅವರ ಕ್ಲಬ್ಬಿನಲ್ಲಿ ಯಾವ ಸಂತೋಷ ಕೂಟವೂ ಜರುಗಿರಲಿಲ್ಲ. ಅಚ್ಚುತ ಸಲಿಸಿದ ಉಪಹಾರವೇ ಒಂದು. ಅವನು ಮಹಾಲಿಂಗಯ್ಯನವರಿಗೂ ಅದಕ್ಕೆ ಬರಲು ಆಮಂತ್ರಣ ವಿತ್ತಿದ್ದ. ಅವರು ತಲೆನೋವನ್ನು ನಟಿಸಿದ್ದರು. “ಒಳ್ಳೆಯದಾಯಿತು; ಉಳಿದವರಿಗೆ ಒಂದು ತೊಟ್ಟು ಕಾಫಿ ಹೆಚ್ಚೇನೆ ಸಿಕ್ಕಿತು” ಎಂದರು ಜಾನ್‌ಸನರು.

ಅಚ್ಯುತ, ತಂದೆಯಾದ ಒಂದು ವಾರದೊಳಗೆ ಬೇರೊಂದು ಶುಭ ವಾರ್ತೆಯು ಅವನಿಗೆ ಅಣ್ಣುಗೌಡನಿಂದ ಬಂದಿತು. ಆತ ಎಲ್ಲೆಲ್ಲೋ ತಿರುಗಾಡಿಕೊಂಡು, ಒಬ್ಬ ಅಳಿಯನನ್ನು ಗಳಿಸಿ ತಂದ. ಸುಬ್ಬಿಯನ್ನು ಅದೇ ವಾರ ಅವನಿಗೇನೆ ಕೊಟ್ಟು ಲಗ್ನ ಮಾಡಿ, ಅವನನ್ನು ಮನೆಯ ಅಳಿಯನನ್ನಾಗಿ ಮಾಡಿಕೊಳ್ಳಲು ನಿಶ್ಚಯಿಸಿದ. ಅದನ್ನು ಧನಿಯಲ್ಲಿಗೆ ಬಂದು ಬಿನ್ನವಿಸಿದ. "ಆಗಲಪ್ಪ" ಎಂದು ಅಚ್ಯುತ ಹರಸಿದನು. ಮದುವೆಯ ಖರ್ಚಿಗೆ ಕಿಂಚಿತ್ ಸಹಾಯ ಮಾಡುವುದಕ್ಕೂ ಒಪ್ಪಿಕೊಂಡ. ಲಕ್ಷ್ಮಮ್ಮ ಪಂಜದಿಂದ ಬರಲು ಇನ್ನೂ ಹತ್ತು ದಿನ ಹಿಡಿದುವು. ಈತ ಪಂಜಕ್ಕೆ ಹೋಗಿ ನಾಮಕರಣ ಮುಗಿಸಿಕೊಂಡು 'ಕೊಂಬಾರ ಕೃಷ್ಣನ' ತಂದೆ ಎನಿಸಿ, ಮರಳುತ್ತ ತಾಯನ್ನು ಕರೆದುಕೊಂಡು ಬಂದ. ಕೆಲವು ದಿನಗಳಲ್ಲಿ ಸುಬ್ಬಿಗೂ ಲಗ್ನವಾಯಿತು.

ರುಕ್ಮಿಣಿ ಬಾಣಂತಿತನದಿಂದ ತುಂಬಾ ಕಾಂತಿಹೀನಳಾಗಿದ್ದಳು. ಅಶಕ್ತಿ ಬಹಳವಾಗಿತ್ತು. ಶಿಶುವಿನ ಪೋಷಣೆಗೂ ಸಮರ್ಥಳಾಗಿರಲಿಲ್ಲ. ಅವಳ ಅನುಪಾನ ಬಲು ಎಚ್ಚರದಿಂದಾಗಬೇಕೆಂದು ಡಾಕ್ಟರರು ಹೇಳಿದುದರಿಂದ, ಅಚ್ಯುತ ಸಂಬಳವನ್ನೆಲ್ಲ ಬರಿದುಮಾಡಿ ಮದ್ದನ್ನು ತರಿಸಿದ. ತಿಂಗಳಲ್ಲಿ; ಎರಡು ಮೂರಾವೃತ್ತಿ ಪಂಜಕ್ಕೆ ಹೋಗಿ ಬಂದ. "ಒಮ್ಮೆ ರುಕ್ಮಿಣಿ ಸುಖದಿಂದ ಮನೆಗೆ ಬಂದರೆ, ತಾನು ಪಾರಾದೇನು" ಎಂದು ತಿಳಿದನು. ಸುಬ್ಬಿಗೂ ಲಗ್ನವಾದುದರಿಂದ, ಬೇರೊಂದು ಸುಳಿಯಿಂದಲೂ ತಾನು ದಾಟಿದೆನಲ್ಲಾ--ಎಂದು ಉತ್ಸಾಹವೇ ಆಯಿತು. ಆದರೂ ಒಮ್ಮೊಮ್ಮೆ, ಮನಸ್ಸು ನಿಲುಗಡೆಯಿಲ್ಲದೆ ಚಂಚಲವಾಗುತ್ತದೆ. ಅಂಥ ಧೈರ್ಯವಿಲ್ಲದವನಿಂದ ಕೆಡುಕೂ ಸಾಧನೆಯಾಗಲಾರದು; ಒಳಿತೂ ಆಗದು. ಮನಸ್ಸಿನ ಅಡ್ಡ ನಿಟ್ಟಿನ ಓಟವನ್ನು ಹಿಂಬಾಲಿಸುವ ಎದೆಗಾರಿಕೆ ಅವನಲ್ಲಿಲ್ಲ. ಸುಬ್ಬಿ ಗಂಡನುಳ್ಳಾಕೆ; ಅಜ್ಜನೂ ಮನೆಯಲ್ಲಿರುವ ಕಾಲ. ಅಚ್ಯುತನ ಎದೆಗಾರಿಕೆಯು, ಈ ತಡೆಗಳನ್ನು ಇದಿರಿಸಿ ಹೋಗುವಷ್ಟು ಕೆಚ್ಚಿನದಲ್ಲ; ದಿಟ್ಟತನದ್ದಲ್ಲ. ಆದರೂ ಅವನದು ಬಳುಕುವ ಮನ. ತನ್ನ ಮನೆಗೆ ರುಕ್ಮಿಣಿ ಬರಲು ಎರಡು ತಿಂಗಳ ಕಾಲ ಹಿಡಿದೀತು. ಪಶುವಿನ ಕಾಂಕ್ಷೆ ಅವನನ್ನು ಕೆರಳುತ್ತದೆ. ಹಳೆಯ ನೆನಹನ್ನು ಕೆದರುತ್ತದೆ. ತಿರುಗಿ ಪಾಪ-ಪುಣ್ಯಗಳ ನೈತಿಕ ಸಮಸ್ಯೆಯನ್ನು

ಮುಂದೊಡ್ಡುತ್ತದೆ. ಒಮ್ಮೊಮ್ಮೆ ಆದಿತ್ಯವಾರ ಬಂದಾಗ, ಬಯಲನ್ನು ಸುತ್ತಾಡಿ ಬರಲು ಹೊರಡುತ್ತಾನೆ. ಉದ್ಯೋಗವಿಲ್ಲದ ಉದ್ಯೋಗವನ್ನು ನೆನೆದುಕೊಂಡು, ಊರಿನ ಹೊಲಮನೆಗಳನ್ನು ಸುತ್ತುತ್ತಾನೆ. ಎಲ್ಲಾದರೂ ಸುಬ್ಬಿ ಕಣ್ಣಿಗೆ ಬೀಳುವುದುಂಟು. ಹಾಗೆ ಬೀಳುವ ತನಕ ಇವನು ಅಲೆದಾಡುವುದೂ ಉಂಟು. ಏನೋ! ಅರೆಗಣ್ಣಿನ ನೋಟದ ದಿಕ್ಕಿಗೇನೆ ಕಾಲು ತೇಲಿ ಹೋಗುವುದೂ ಉಂಟು. ಆದರೆ-ಸಮೀಪ ಅವಳ ಗಂಡನಿರಬಹುದು; ತಂದೆಯಿರಬಹುದು, 'ಎಚ್ಚರ!' ಎಂದು ಎದೆ ನಡುಗಿ, ಅವಳ ಕಟಾಕ್ಷಕ್ಕೆ ಮನ ಅಳುಕಿ, ಹಿಂದಿರುಗಿ, ಬಳಿಕ ಅವಳು ಮರೆಯಾದ ಮೇಲೆ, ಮನೆಗೆ ಬರುವುದುಂಟು. ಆಗ ಅವನ ಬಯಕೆಯೇ ಕಣ್ಣಾದಂತೆ, ಗಾಬರಿಗೊಂಡ ಹರಿಣದ ಬೊಗಸೆಗಣ್ಣಿನಂತಾಗುತ್ತದೆ. ಮರುಗಳಿಗೆಯಲ್ಲಿ "ಹೊತ್ತಾಯಿತು, ಮನೆಗೆ ಹೋಗುತ್ತೇನೆ! ಹಿಂತಿರುಗಿದ್ದೇ ಒಳಿತಾಯಿತು. ಇನ್ನು ನಾನು ಕನಸಿನಲ್ಲೂ ಅಡ್ಡಹಾದಿ ಹೋಗಲಾರೆ. ಅದರಿಂದ ತನ್ನಲ್ಲೂ ವಿಪ್ಲವ; ಪರರ ಜೀವನದಲ್ಲೂ ವಿಪ್ಲವ!" ಎಂದು ತನಗೆ ತಾನೇ ಸಮಾಧಾನವನ್ನು ತಂದುಕೊಳ್ಳುತ್ತಾನೆ.

ಅಣ್ಣುವಿನ ಅಳಿಯನಂತು, ಚೆಲುವಾಂಬೆಯಾದ ಸುಬ್ಬಿಯನ್ನು ಕಂಡು ಮರುಳನೇ ಆಗಿದ್ದ. ಅವನೇನೋ ಊರು ಮನೆಯಿಲ್ಲದೆ, ಕೊಕ್ಕಡದಲ್ಲಿ ಅಲೆದಾಡುತ್ತಿದ್ದ. ಅಷ್ಟೊಂದು ಪ್ರಾಣಿಯಲ್ಲದುದರಿಂದ, ಜೀವನ ಒಂಟಿಯಾಗಿ ನಡೆಯಿಸಿಕೊಂಡು ಹೋಗುವ ಎದೆಗಾರನಲ್ಲ. ಆಗ ಬೇಸಾಯಗಾರ ಅಣ್ಣು ಬಂದು ಅವನನ್ನೇ ಮನೆಯ ಅಳಿಯನನ್ನಾಗಿ ಆರಿಸಬೇಕೆ? ಅವನು ಕೊಕ್ಕಡದಲ್ಲಿ ಇದ್ದಾಗ "ಯಾಕೂ ಮುಡಿಯದ ಅವನಿಗೆ ಹೆಣ್ಣು ಯಾರು ಕೊಡುತ್ತಾರೆ?" ಎಂದು ಅವನ ಬಂಧುಗಳು ಯೋಚಿಸಿದ್ದರು. ಆದರೂ ಅಣ್ಣುವಿನ ದೃಷ್ಟಿಗೆ ಅವನು ಬಿದ್ದಾಯಿತು. ಈಗ ಕೊಂಬಾರಿಗೆ ಬಂದು, ಅಣ್ಣುವಿನ ಮನೆಗೆ ಕಾಲಿರಿಸಿದರೆ, ಅಲ್ಲೊಬ್ಬಳು ಅಪ್ಸರೆಯೇ ತನಗೆ ಕಾದಿರುವಳೆಂಬ ಬೋಧೆಯಾಯಿತು. ತಾನು ಕರಿಯ; ಅವಳು ಬೆಳ್ಳಗಿದ್ದಾಳೆ. ತಾನು ಒಣಕಲು ಜೀವ; ಅವಳು ತುಂಬ ಚೆಲುವೆ! ತನ್ನಷ್ಟು ಭಾಗ್ಯಶಾಲಿಗಳೇ ಇಲ್ಲ. ಇನ್ನು ಆ ಮನೆಯಲ್ಲಿ ತಾನು ದುಡಿದು, ಎಲ್ಲರ ಮನ್ನಣೆಗಳಿಸುವೆನೆಂದು ಯೋಚಿಸಿದ. ಮದುವೆಗೆ ಎಂಟು ದಿನ ಮುಂಚಿತವಾಗಿ ಬಂದು, ಅವರನ್ನು ನೋಡಿ

ಹೋದ. ಮದುವೆಗೆ ಸಮನಾಗಿ, ಇದ್ದೊಬ್ಬಿಬ್ಬರು ಬಂಧುಗಳನ್ನು ಕರೆದುಕೊಂಡು ಬಂದ. ಲಗ್ನವಾಗಿ ಅಲ್ಲಿಯೇ ನಿಂತು, ಜತೆಗೆ ಕರೆ ತಂದ ಬಂಧುಗಳನ್ನು ಮಾತ್ರ ಮರಳಿ ಕಳುಹಿಸಿದ.

ಆ ಮರುದಿನವೇ—"ಅಜ್ಜ, ಇಲ್ಲಿ ಬಾಳೆ ನಡುವ, ಇಲ್ಲಿ ಹಸಿರು ವಾಣಿ ಹಾಕುವ, ಇಲ್ಲಿ ಮೆಣಸು" ಎಂದು ಮುಂದಾಗಿ ಕೆಲಸಕ್ಕೆ ತೊಡಗಿದ. ಅಣ್ಣುವಿಗೆ, ಹೊಸ ವರನನ್ನು ಮದುವೆಯ ಮರುದಿನವೇ ಕೆಸರಿಗೆ ತಳ್ಳಿ ದುಡಿಸುವ ಇಚ್ಛೆ ಇದ್ದಿರಲಿಲ್ಲ. ಆದರೆ ಆತನ ಆತುರ ಹೇಳಿ ತೀರದು. ಹುಡುಗನ ಆತುರಗಳೆಲ್ಲ ಸುಬ್ಬಿಯನ್ನು ಒಲಿಸಲು. ಆದರೆ ಸುಬ್ಬಿಯ ಮನಕ್ಕೆ ಆತ ಬಂದೇ ಇರಲಿಲ್ಲ; ಬರುವಂತೆಯೂ ಇರಲಿಲ್ಲ. ಅವನೊಡನೆ ಆಕೆ ಬಾಯಿ ತೆರೆಯಳು! "ಬ್ರಹ್ಮ ಇವಳಿಗೆ ಗಂಡನನ್ನು ಸೃಷ್ಟಿಮಾಡಿಯಾಗಬೇಕು" ಎಂದ ಅಣ್ಣು, ಮುದುಕ, ಉದ್ಗಾರ ತೆಗೆಯುತ್ತಿದ್ದ ಕಾಲದಲ್ಲಿ, ಬೇರೆ ಯಾರು ಸಿಗುತ್ತಾರೆ! ಬಾಯಾರಿ ಬಂದ ರಂಗಪ್ಪನೇ! "ರಂಗಪ್ಪನೇ ಆದೀತೆ?" ಎಂದರೆ "ಒಲ್ಲೆ" ಎನ್ನುತ್ತಿರಲಿಲ್ಲ ಅವಳು. ಕಾರಣ, ನೋಟಕ್ಕಾದರೂ ಅವನು ಅವಳಿಗೆ ತಕ್ಕವನೇ. ಆದರೆ ಈತ ಅವನ ವಿಚಾರವನ್ನು ಕೇಳಿಯೇ ಬೇಡವೆಂದಿದ್ದ.

ಆದರೆ ಒಂದು ಸಂಗತಿ; ಸಮಾಜದ ಬಿಗು ಯಾರಿಗೂ ತಪ್ಪಿದ್ದಲ್ಲ. ಸುಬ್ಬಿಗೇನು ತಪ್ಪೀತು? ಪ್ರತಿಯೊಬ್ಬರಿಗೂ ಮನವನ್ನು ಬೇಕೆಂದಲ್ಲಿ ಹರಿಯಗೊಟ್ಟು, ಸ್ವಯಂವರ ನಿರ್ವಹಿಸಲು ಸಮಾಜವು ಏರ್ಪಡಿಸೀತೇ? ಮನಸಿನ ಗಾನಲಹರಿ ಗುಪ್ತವಾಗಿ ಯಾವ ದಾರಿ ಹಿಡಿದರೂ, ಅದು ಸಮಾಜದ ಕಟ್ಟನ್ನು ನಿರಾಕರಿಸುವಂತಿಲ್ಲ. ಅಂತೆಯೇ, ಅಣ್ಣು ತಂದ ಹೊಸ ವರನ ಹಕ್ಕನ್ನು ಸುಬ್ಬಿ ನಿರಾಕರಿಸಲು ಸಾಧ್ಯವಿರಲಿಲ್ಲ. ಮನಕ್ಕೊಲಿಯದವಳು ಮೈಗೊಲಿಯುವಂತಾಯಿತು. ಅವಳ ಗಂಡನ ಹೆಸರು ಕಾಳ. ಕಾಳ ಕುಳ್ಳೂ ಅಹುದು, ಕಪ್ಪೂ ಅಹುದು. ಅವನು ಸುಬ್ಬಿಯ ತುಟಿಗಳಿಂದ ನಗುವನ್ನು ತರಿಸಲು, ತುಂಬ ಚಮತ್ಕಾರವಾಗಿ ಮಾತನಾಡಲು ಯತ್ನಿಸುತ್ತಿದ್ದ! ಅವಳ ಬಾಯಿಂದ ಎರಡು ಸಮಾಧಾನದ ಮಾತುಗಳನ್ನು ಹೊರಡಿಸಲು ತುಂಬ ದುಡಿಯುತ್ತಿದ್ದ. ಆದರೇನು? ಬಾಯಾರಿಕೆಯಾಗಿ ನೀರು ಬೇಕಾದರೆ, "ನೀರು" ಎಂದು ಕೂಗಿ ತರಿಸಿಕೊಳ್ಳಬೇಕು. ಇವನ ಕೆನ್ನೆಯ ಮೇಲಿನ, ಇಲ್ಲವೆ ಹಣೆಯ

ಮೇಲಿನ ಬೆವರಿನ ಮಣಿಗಳನ್ನು, ಕಂಡು 'ನೀರು ಬೇಕೇ' ಎಂದು ಕೇಳು ವಾಕೆ ಅವಳಲ್ಲ. ಅವಳ ಮನಸ್ಸು ತನ್ನ ದಾರಿಯನ್ನು ಮೊದಲಿಗೇನೆ ಕಂಡು ಹಿಡಿದಿತ್ತು. ಆದುದರಿಂದ ಅವಳು ಕೆಲವೊಮ್ಮೆ ಧನಿಯ ಮನೆಗೂ ಬರುತ್ತಾಳೆ. ಅಲ್ಲಿ ಲಕ್ಷ್ಮಮ್ಮನ ಮುಂದೆ ಕುಳಿತು ಏನಾದರೂ ಮಾತಾ ಡುತ್ತಿರುತ್ತಾಳೆ. "ಒಡತಿ, ಸಣ್ಣ ಒಡತಿಯರು ಊರಿಗೆಂದು ಬರುವುದು? ಬಾಣಂತಿ, ಮಗು ಚೆಂದವಾಗಿದ್ದಾರೆಯೇ" ಎಂದು ಮಾತು ತೊಡಗು ತ್ತಾಳೆ. ಮುಂದೆ ಹೊತ್ತು ಸಾಗದೆ, ದೂಮನ ಹತ್ತಿರವೂ ಅರೆತಾಸು ಕುಳಿತಿರುತ್ತಾಳೆ. "ಹೊತ್ತಾಯಿತು; ಹೋಗುತ್ತೇನೆ ಅವರೇನೆಂದಾರೊ" ಎಂದು ಮಾತಿನ ಮೇಲೆ ಮಾತು ಆರಿಸಿ, ವೇಳೆ ಮಾಡಿಕೊಂಡು ಮನೆಗೆ ಹೊರಡುತ್ತಾಳೆ. ಅವಳ ಮನೆಯ ದಾರಿ, ಕೊಂಬಾರಿನ ರಸ್ತೆಯಿಂದ ಅಚ್ಚುತನ ಮನೆಗೆ ಬರುವ ದಾರಿಯನ್ನು ಕತ್ತರಿಸುತ್ತದೆ. ತನ್ನ ಧನಿ, 'ಆ ದಾರಿಯಾಗಿ ಬರುತ್ತಿದ್ದರೆ, ಕಂಡು ನಕ್ಕು, ಓಡುತ್ತೇನೆ ಎಂಬುದಕ್ಕೇ ಇಷ್ಟೆಲ್ಲ ಚಪಲ. ಹಾಗೆ ಹತ್ತು ದಿನ ಕಾದರೆ, ಒಂದು ದಿನ ಅಚ್ಚುತನ ಭೇಟಿಯಾಗುವುದುಂಟು. ಪಾಪ, ಆತ ಅಲ್ಲಿ ನಿಲ್ಲಲಾರದೆ ಕತ್ತೆತ್ತಿದವನೇ ಅದನ್ನು ತಗ್ಗಿಸಿ ಮನೆಯನ್ನು ಸೇರುತ್ತಾನೆ.

ಇನ್ನು ಕೆಲವು ದಿನಗಳಲ್ಲಿ, ಬಿಸಿಲು ಬಿದ್ದ ಗಳಿಗೆಯನ್ನು ಕಂಡು ಕೊಂಡು ಅಚ್ಚುತನ ದಾರಿಯಲ್ಲೇ, ಆಕೆ ಮರದ ಒಣಗೆಲ್ಲುಗಳನ್ನು ಮುರಿಯಲು ನಿಂತಿರುವುದುಂಟು. ಈ ನೆಪದಿಂದ ಇನಿಯನ ಮುಖ ವನ್ನು ಕಂಡು, ನಕ್ಕು, ನಗಿಸಿ, ಅವನನ್ನು ಕಳುಹಿಸುವುದುಂಟು. ಅದ ರಿಂದ ಅಚ್ಚುತನಿಗೆ ಅವಳ ಮೇಲೆ ಕೋಪವೂ ಬರುತ್ತದೆ; ಪ್ರೀತಿಯೂ ಉಂಟಾಗುತ್ತದೆ. ಆದರೆ ಇವಳು ತನ್ನನ್ನೆಲ್ಲಿ ತಿರುಗಿ ಸೆಳೆಯುತ್ತಾಳೋ! ತಾನೆಲ್ಲಿ ಎಲ್ಲರ ಕಣ್ಣಲ್ಲಿ ಸಿಕ್ಕಿಬಿದ್ದು ಅಪರಾಧಿಯಾಗುತ್ತೇನೋ-ಎಂದು ಅಂಜುತ್ತಾನೆ. ಅವಳ ಮದುವೆಯಿಂದ ಅವಳು ತನಗೆ ದೂರಾದಳು; ಒಂದು ಕಾಟ ತಪ್ಪಿತು-ಎಂದುಕೊಂಡ ಮನಕ್ಕೆ, ಅವಳ ಈ ನಡತೆ ಅವ ನಲ್ಲಿ ನಡುಕವನ್ನು ತರುತ್ತದೆ. ಅದರ ಜತೆಗೇನೆ ಅನುತಾಪದ ಉದ ಯವೂ ಆಗುತ್ತದೆ. ಅಹುದು; ಅಣ್ಣುಗೌಡ ಬರಿಯ ಒಂದು ಗಂಡ ನನ್ನು ತಂದುಕೊಟ್ಟರೆ ಏನಾದೀತು? ಜೀತದ ಆಳಾಯಿತು. ಆತ ಮನೆ ಸಾಗುವಳಿ ಕಸಬಿಗಾಗಿ ಒಬ್ಬ ಹುಡುಗನನ್ನು ತಂದನೇ ವಿನಾ

ಸುಬ್ಬಿಯ ಯೋಗ್ಯತೆಗೆ ಸಮನಾದ ಗಂಡನನ್ನು ತಂದಂತಾಯಿತೇ! ಅವಳೇನು ಮಾಡಿಯಾಳು? ಅವನ ಮುಂದೆ ತನ್ನ ಚೆಲುವಿಗಾಗಿ ಹೆಮ್ಮೆಯುಂಟಾಗಿ, ಕಾಳನ ವಿಷಯವಾದ ತಾತ್ಸಾರಕ್ಕೆ ಅವನ ಮನಸ್ಸು ಎಡೆ ಕೊಡುವುದು.

ಇಂಥ ನೂರಾರು ಸೆಳೆತದಲ್ಲಿ ಸಿಕ್ಕಿದ ತನ್ನ ದುರ್ಬಲ ಮನಸ್ಸನ್ನು ಹೊತ್ತುಕೊಂಡು ಅಚ್ಯುತ ಶಾಲೆ ಸೇರಿದರೆ, ಅಲ್ಲಿ-ಪಾಠಗಳ ಗದ್ದಲ, ಮುಖ್ಯ ಉಪಾಧ್ಯಾಯರ ಹತ್ತಿರ ತಗಾದೆ, ಜಗಳ-ಇವೆಲ್ಲ ಇದಿರುಕಾದಿರುತ್ತವೆ. ಅವೆಲ್ಲ ಮುಗಿಯುವುದಕ್ಕೆ 'ಐದು ಘಂಟೆ ಎಂದು ಆಗುತ್ತದೆ" ಎಂದು ಅವನು ಮನಸ್ಸು ತುಂಬ ಕಾದಿರುತ್ತದೆ. ಘಂಟೆಯಾಯಿತೆಂದರೆ, ಕೊಂಬಾರಿಗೆ ಓಟ! ಇತ್ತ ಕ್ಲಬ್ಬೂ ಇಲ್ಲ. "ಅದೀಗ ನನ್ನೊಬ್ಬನ ತಲೆಗೆ ಸುತ್ತಿದ ಗ್ರಹಚಾರವಾಗಿದೆ"ಯೆಂದು ಅನ್ನುತ್ತಿದ್ದಾರೆ ನಮ್ಮ ಜಾನ್ಸನರು. ಅದಕ್ಕೆ ಅಚ್ಯುತ "ನಾನೀಗ, ತಿಂಗಳ ವರ್ಗಣಿ ತಪ್ಪಿಸಿದೆನೇ, ಹೇಳಿ. ಕ್ಲಬ್ಬಿಗೆ ಬಾರದಿದ್ದರೂ ವಂತಿಗೆ ಸರಿಯಾಗಿ ಕೊಡುತ್ತಿದ್ದೇನಲ್ಲ" ಎನ್ನುತ್ತಾನೆ.

"ಹೌದಯ್ಯ, ಅವರ ಕ್ಲಬ್ಬಿನಲ್ಲಿ ಇಸ್ಪೀಟಿನ ಗದ್ದಲವೆಷ್ಟು, ಜನರ ಓಡಾಟವೆಷ್ಟು? ನಾವು ಕ್ಲಬ್ಬನ್ನು ಮಾಡಿದ ಗ್ರಹಚಾರಕ್ಕೆ, ಕತ್ತೆ ಆಟಕ್ಕಾದರೂ ಎರಡು ಜನ ಬರಬೇಡವೇ?" ಅನ್ನುತ್ತಾರೆ ಜಾನ್‌ಸನರು. "ಮಹಾರಾಯರೇ, ಮಳೆಯ ದಿನ ಹೋಗಲಿ- ಮುಂದೆ ಬೆಳುದಿಂಗಳ ದಿವಸಗಳು ಬಂದಾಗ, ಸಂಜೆ ಕ್ಲಬ್ಬಿನಲ್ಲಿ ತಾಸು ಕಳೆಯದೆ, ಎಂದಿಗೂ ಕೊಂಬಾರಿಗೆ ಹೊರಡುವುದಿಲ್ಲ" ಎಂದು ಅಚ್ಯುತ ಅವರಿಗೆ ಭರವಸೆ ಕೊಡುತ್ತಾನೆ.

ಅಕ್ಟೋಬರ್ ತಿಂಗಳು ಬಂದಿತು. ಪುಟ್ಟಯ್ಯನವರ ಅನುಜ್ಞೆಯಂತೆ, ಅಚ್ಯುತ ನವರಾತ್ರಿಗೆ ಅವರ ಮನೆಗೆ ಹೋಗಿದ್ದ. ಬರುವಾಗ ಉತ್ಸಾಹದಿಂದ ರುಕ್ಮಿಣಿಯನ್ನೂ ಕೂಸನ್ನೂ ಕರೆದುಕೊಂಡು ತನ್ನ ಊರಿಗೆ ಬಂದನು. ಅವು, ಮಳೆಯಿಂದ ಗಾಡಿಗಳು ಸಮನಾಗಿ ಹೋಗಿ ಬರುವ ದಿನಗಳಲ್ಲ. ಆದುದರಿಂದ ಆ ದಾರಿಯಲ್ಲಿ ರುಕ್ಮಿಣಿಯನ್ನು ನಡೆಯಿಸಿಕೊಂಡು, ಮಳೆ ತಪ್ಪಿಸಿಕೊಂಡು, ಸಾಗಬೇಕಾಯಿತು. ಅವರು ತುಸು ದೂರವನ್ನು, ಒಂದು ಲಟಕು ಗಾಡಿಯಲ್ಲಿ ತುಳಿತೂ ಕಳೆದರು.

ಅಂತು ಅಷ್ಟು ಸಣ್ಣ ಪಯಣಕ್ಕೆ ಹಗಲೆಲ್ಲ ಹಿಡಿಯಿತು.

ಆ ರಾತ್ರಿ ಮಗು ದಾರಿಯ ಆಯಾಸಕ್ಕೆ ಕಣ್ಣು ಮುಚ್ಚಲಿಲ್ಲ; ಕಿರು ಚಾಟ ನಿಲ್ಲಿಸಲಿಲ್ಲ. ಅದನ್ನು ತೊಟ್ಟಿಲಲ್ಲಿ ಹಾಕಿ, ಲಕ್ಷ್ಮಮ್ಮ ತೂಗಿ ತೂಗಿ ದಣಿದರು. ಅಚ್ಚುತ ಮಗುವನ್ನು ಎದೆಗೆ ಚಚ್ಚಿಕೊಂಡು, ಅತ್ತಿತ್ತ ಶತ ಪಥ ಹಾಕಿದ. ಆದರೂ ಅದರ ರೋದನ ಮುಗಿಯದು. ಬೆಳಗಾಗು ವಾಗ, ಅದರ ಮೈ ಬಿಸಿ ಏರಿತ್ತು; ಮೂಗು ಕಟ್ಟಿತ್ತು, ಕಫ ಹುಟ್ಟಿತ್ತು! ಓಡೋಡಿ ಕಡಬದ ಡಾಕ್ಟರರನ್ನು ಕರೆಯಿಸಬೇಕಾಯಿತು. "ಇಲ್ಲೇ ಏನಾದರೂ ಮಾಡುವ"-ಎಂದು, ತಾಯಿ ಸಂಬಾರಬಳ್ಳಿಯ ರಸವನ್ನು ಹಿಂಡಿ ಹಣೆಗೆ ಲೇಪ ಹಚ್ಚಿದಳು. ಆದರೂ ಅಚ್ಚುತನಿಗೆ ತುಂಬ ಕಳವಳ. ಡಾಕ್ಟರರು ಬಂದರು. "ಗಾಬರಿಯಿಲ್ಲ. ಶೈತ್ಯದ ಸುರುವಷ್ಟೆ. ನಿಮೋನಿಯಕ್ಕೆ ಇಳಿದರೆ ಮಾತ್ರ ಕಷ್ಟ. ಈಗ ಮದ್ದು ಕೊಡುತ್ತೇನೆ. ಮಳೆಗಾಲ ಮುಗಿದ ಮೇಲೆ ಮಗುವನ್ನೂ, ಬಾಣಂತಿಯನ್ನೂ ತರುವ ಬದಲು, ಈಗಲೇ ಏಕೆ ಅವಸರ ಮಾಡಿದಿರಿ?" ಎಂದರು. "ಹೇಗೂ ಬಂದಿದ್ದೀರಿ, ನಮ್ಮ ರುಕ್ಮಿಣಿಯನ್ನೊಮ್ಮೆ ಪರೀಕ್ಷಿಸಿರಿ" ಎಂದ ಅಚ್ಚುತ. "ಆಗಲಿ" ಎಂದು ಮಗುವನ್ನು ಬಿಟ್ಟು, ಮಗುವಿನ ತಾಯಿಯ ಪರೀ ಕ್ಷೆಗೆ ಡಾಕ್ಟರರು ನಿಂತರು. "ತುಂಬ ಪೌಷ್ಟಿಕ ಆಹಾರ, ಹಸುವಿನ ಹಾಲು, ಟಾನಿಕ್ ಎಲ್ಲ ತರಿಸಿಕೊಡಬೇಕು. ಏನೂ ಉದಾಸೀನಮಾಡ ಬಾರದು. ಈಗ ಕಾಯಿಲೆ ಏನಿಲ್ಲವಾದರೂ, ಮುಂದೆ ಈ ಅಶಕ್ತಿಯೇ ಬೆಳೆದು ಕಾಯಿಲೆಗೆ ತಿರುಗಬಾರದಲ್ಲ" ಎಂದು ಎಚ್ಚರವಿತ್ತು ಕಡಬಕ್ಕೆ ಹೋದರು.

ಮಗುವಿಗೆ ಶೀತ, ಜ್ವರಗಳು ಬಿಡಲು ಎಂಟು ದಿನ ಹಿಡಿದುವು. ಅಲ್ಲಿಯ ತನಕ ಅಚ್ಚುತನಿಗೆ ಬಿಡುವೂ ಇರಲಿಲ್ಲ; ಮನಕ್ಕೆ ಶಾಂತಿಯೂ ಇರಲಿಲ್ಲ. ಈಗ ಎಳೆಯ ಕೃಷ್ಣನು ಚೇತನಗೊಂಡಿದ್ದಾನೆ. ಹಿಡಿದೆತ್ತಿದ ವರು, ಕವುಳು ಕುಲುಕಿ "ಟೂ ಟೂ" ಅಂದರೆ ನಗುತ್ತಾನೆ! ಅದೇ ಬದುಕಿನ ಹಿರಿಯ ಹಿಗ್ಗೆಂದು ಅಚ್ಚುತ ಮನಗಾಣುತ್ತಾನೆ! ಅವನ ಎಷ್ಟೆಷ್ಟೋ ಚಿಂತೆಗಳನ್ನು ಆ ಒಂದೊಂದು ನಗು ಮಾಯಿಸುತ್ತಿತ್ತು. ಕೂಸನ್ನು ಬಿಟ್ಟು, ಶಾಲೆಗೆ ಹೊರಡಲು, ಮನಸ್ಸೂ ಬರದಂತಾಯಿತು. ಆ ಮುಗ್ಧ ಮುಗುಚದ ಮಗುವಿನ ಮುಂದೆ, ಅಚ್ಚುತ ತಾಸು ತಾಸಿನ

ಉಪನ್ಯಾಸ ಕೊಡುತ್ತಿರುವುದನ್ನು ಕಂಡು, ರುಕ್ಮಿಣಿ "ಇವರಿಗೇನು ಹುಚ್ಚೋ?" ಎಂದು ಪರಿಹಾಸ್ಯ ಮಾಡುತ್ತಾಳೆ.

ವೈದ್ಯರ ನಿರ್ಣಯದಂತೆ, ರುಕ್ಮಿಣಿ ಇನ್ನು ಮೂರು ತಿಂಗಳ ಕಾಲ ಹೊರಗೆ ಅಲೆದಾಡುವಂತಿರಲಿಲ್ಲ; ಅವಳು ಮನೆ ಕೆಲಸ, ಕಜ್ಜಗಳಿಗೆ ಕೈ ಹಾಕುವಂತಿರಲಿಲ್ಲ. ಅವಳಿಗೆ,ತಾನು ಮಲಗಿಕೊಂಡು,ಅತ್ತೆಯಿಂದ ಎಷ್ಟು ದಿನ ಸೇವೆ ನಡೆಯಿಸಿಕೊಳ್ಳಬೇಕಪ್ಪ-ಎಂಬ ಯೋಚನೆ. ಆದರೆ ಲಕ್ಷ್ಮಮ್ಮ ಸೌಜನ್ಯದ ತವರೂರು. ಮಗಳಿಗೂ, ಸೊಸೆಗೂ ವ್ಯತ್ಯಾಸವನ್ನು ಕಾಣದ ದೊಡ್ಡ ಮನಸ್ಸು ಆಕೆಯದು. ಆದುದರಿಂದ ಎಲ್ಲವೂ ಸುಗಮವಾಗಿ ಸರಿಯಿತು. ರುಕ್ಮಿಣಿಗೆ ಈ ಅಶಕ್ತಿಯ ದಿನಗಳನ್ನು ಕಳೆಯುವುದು ಕಷ್ಟವಾಗಲಿಲ್ಲ. ಆದರೆ ಅವಳಿಗೆ ತುಂಬ ಬೇಸರ. ಅವಳು ಕುಳಿತಿರಬಲ್ಲಳು. ಗೋಡೆಗೊರಗಿ, ಕಾಲು ನೀಡಿ, ಕಾಲಿನ ಮೇಲೆ ಗೇಣುದ್ದದ ಮಗುವನ್ನು ಮಲಗಿಸಿಕೊಂಡು, ಒಂದೆರಡು ತಾಸಿಗೂ ಹೆಚ್ಚು ಕಳೆಯಬಲ್ಲಳು. ಆದರೆ ಸಮಯ ಹೋಗಬೇಕಲ್ಲ. ಅದರಿಂದ ಸುಬ್ಬಿಯನ್ನು ಕರೆಯಿಸಿಕೊಳ್ಳುವುದುಂಟು!"ಸುಬ್ಬಿ, ನಿನ್ನ ಗಂಡ ಹೇಗಿದ್ದಾನೆ? ನಾನು ಬರುವುದರೊಳಗೆ ಮದುವೆಮಾಡಿಕೊಂಡೆಯಲ್ಲವೇ! ಗಟ್ಟಿಗಿತ್ತಿ. ನಮ್ಮವರು ಅನ್ನುತ್ತಾರೆ, ನಿನ್ನ ಗಂಡ ಗೊಬ್ಬರ ಹೊರುವುದರಲ್ಲಿ, ಹಾರೆ ಹಿಡಿಯುವುದರಲ್ಲಿ ಭಾರಿ ಹುಷಾರಂತೆ" ಎಂದರೆ, ಸುಬ್ಬಿಯು ನಗುತ್ತ "ಹೂಂ — ಅದಕ್ಕೇ ಅವರು ಸೈ" ಎಂದುಬಿಡುತ್ತಾಳೆ. ಅವಳ ಗಂಡನ ವಿಷಯದ ಹೆಚ್ಚಿನ ಮಾತನ್ನು ಅವಳು ಆಡುತ್ತಿರಲಿಲ್ಲ. ಸಣ್ಣೊಡತಿಯು ಆ ವಿಷಯ ಮಾತನಾಡಿದರೂ, ಅವಳು ಒಂದೆರಡು ಮಾತಿನಲ್ಲಿ ವಿಷಯವನ್ನು ಅಡ್ಡ ಹರಿಯಿಸಿ ಬಿಡುತ್ತಾಳೆ. ಆದರೂ-ಮಾತಾಡುತ್ತಿರಲಿ, ಆಡದಿರಲಿ-ಅವಳು ಸಂಜೆ ಬಲು ಹೊತ್ತಿನ ತನಕ ಅಲ್ಲಿ ಕುಳಿತುಬಿಡುತ್ತಾಳೆ. ಹೊತ್ತು ಕಂತಬೇಕು-ಅವಳು ಮನೆಗೆ ಹೊರಡಲು. ಕಾರಣ ಮಾತ್ರ, ಅವಳ ಅಂತರಂಗಕ್ಕೆ ಚೆನ್ನಾಗಿ ತಿಳಿದಿದೆ.

ಸಂಜೆಯಾದುದನ್ನು ಕಂಡು, ರುಕ್ಮಿಣಿಯು "ಹೋಗು ಸುಬ್ಬಿ. ನನ್ನ ಬೇಸರ ಇರುವುದೇ. ಅವರು ಬರುತ್ತಾರೆ ಈಗ. ನಿನಗೆ ಮನೆಗೆ ಹೋಗಿ ಗಂಜಿ ಬೇಯಿಸಿಯಾಗಬೇಡವೇ? ನೀರಿಗೂ ಕಿಚ್ಚೊಟ್ಟಿ ಆಗಬೇಕು" ಅನ್ನುತ್ತಾಳೆ. "ಹೂಂ, ಆಗುತ್ತದೆ. ಅದಕ್ಕೇನು? ಎಲ್ಲ ನಾನೇ

ಮಾಡಬೇಕೆಂದಿದೆಯೇ? ಅಜ್ಜ ನಿತ್ಯ ಬಿಸಿನೀರು ಮಾಡುತ್ತಾರೆ. ನನ್ನ ದಾರಿ ಕಾಯುವುದಿಲ್ಲ. ಮತ್ತೆ, ಅವರಿಲ್ಲವೇ, ಎಸರಿಗೆ ನೀರಿಡುತ್ತಾರೆ. ನಾನು ಹೋಗಿ ಎರಡು ಅಕ್ಕಿಕಾಳು ಹಾಕಿದರಾಯಿತು. ನಿಮ್ಮ ಅಡಿಗೆಯ ಹಾಗೆ ನಮ್ಮದು ಕಷ್ಟವೇ? ನಂಜಿಕೊಳ್ಳಲು, ಉಪ್ಪು ಮೆಣಸು ಇಲ್ಲವೇ?" ಎನ್ನುತ್ತಾಳೆ. ಕೆಲವು ಬಾರಿ, ಧನಿ ಬಂದು, ಕಳದಲ್ಲಿ ಕಾಲು ಜಾಡಿಸಿದ ಬಳಿಕವೇ, ಅಲ್ಲಿಂದ ಅವರನ್ನು ಕಣ್ತುಂಬ ನೋಡಿ ಎದ್ದು ಹೋಗಬೇಕು.

ರುಕ್ಮಿಯು ಮನೆಗೆ ಬಂದ ಮೇಲೆ, ಅಚ್ಚುತನ ಮನಸ್ಸು ಹದವಾಗಿದೆ. ತಾನೇನೋ ಪಾರಾದೆ ಎಂಬ ಧೈರ್ಯ ಉಂಟಾಗಿದೆ. ಅವನ ಸಮಯವೂ ಸರಸವಾಗಿ, ಮಗುವಿನೊಡನೆ ಕಳೆಯುತ್ತಿದೆ. ವಿರಾಮವಿದ್ದಾಗ, ಆತನು ಮೊದಲಿನಂತೆ, ಬೇಸರ ಕಳೆಯಲು ಊರಿನ ಸುದ್ದಿಯನ್ನೋ, ಏನಾದರೂ ಪುಸ್ತಕವನ್ನೋ ಓದಿ ಹೇಳುತ್ತಾನೆ. ಕಷ್ಟವಾದರೂ, ಅವಳ ದಿನನಿತ್ಯದ ಅನುಪಾನ ಸಮನಾಗಿ ನಡೆಯುತ್ತದೆ. ದಶಂಬರ ತಿಂಗಳು ಕಾಲಿರಿಸುವಾಗ ರುಕ್ಮಿಣಿ 'ಒಂದು ರೂಪಕ್ಕೆ' ಬಂದಳು. ಕೂಸೂ ಉತ್ಸಾಹ ತಾಳಿದೆ. ಕೈಕಾಲು ಚೆನ್ನಾಗಿ ಸಿಡಿದು ಕಿರುಚುತ್ತದೆ; ಮಗ್ಗಲು ಮಗುಚುತ್ತದೆ; ತಾನು ಒಬ್ಬ ಗಟ್ಟಿ ವ್ಯಕ್ತಿಯು ಈ ಪ್ರಪಂಚಕ್ಕೆ ಬಂದಿಳಿದಿದ್ದೇನೆ, ನೋಡಿಕೊಳ್ಳಿ-ಎಂಬುದನ್ನು ಸಾರುತ್ತಿದೆ!

ರುಕ್ಮಿಣಿ ಗಂಡನ ಮನೆಗೆ ಬಂದು ಒಂದೆರಡು ತಿಂಗಳಲ್ಲಿ, ಒಂದು ದಿವಸ ಅಣ್ಣು ಅವರ ಮನೆಗೆ ಬಂದಿದ್ದ. ಅವನ ಬೆಂಗಡೆಯಲ್ಲಿ ಅವನ ನೆರಳಿನಂತೆಯೇ ಅಲೆದಾಡುತ್ತಿದ್ದ ಕಾಳನೂ ಬಂದ. "ಏನು ಬಂದೆಯ ಅಣ್ಣು?" ಎಂದು ಧನಿಯರು ಕೇಳಿದರು. "ಮತ್ತೇನಿಲ್ಲ, ಕುಳ್ಕುಂದದ ಜಾತ್ರೆ ಬಂದಿತಯ್ಯ. ನನ್ನವು ಎರಡು ಒಣಕಟೆ ಎತ್ತುಗಳನ್ನು ಮಾರಾಟ ಮಾಡಿ, ಇನ್ನೆರಡು ಗಟ್ಟಿಯಾದುವನ್ನು ತರುವ ಎಂದು ಆಲೋಚನೆಯಾಗಿದೆ. ಈಗಿರುವುದನ್ನು ನಂಬಿದರೆ, ಮುಂದಿನ ವರ್ಷ ಗದ್ದೆಯಲ್ಲಿ ಗೇಣಿ ಹುಟ್ಟಲಾರದು. ಒರಾಬ್ಬರಿ ಕೋಣಗಳೇ ಬೇಕು. ಕೋಣಗಳಿದ್ದರೆ ಕೆಲಸ. ಅಲ್ಲದೆ ಈಗ ನಮ್ಮ ಹುಡುಗನೂ ಇದ್ದಾನೆ ನೋಡಿ. ನಿಮ್ಮ ಕಡೆಬೈಲನ್ನು ಸಾಗುವಳಿ ಮಾಡುವ ಎಂದಿದೆ ನನಗೆ! ಅದು ಬರಿದೇ ಹಡಿಲು ಬೀಳುವ ಬದಲು ಬೇಸಾಯ ಮಾಡುತ್ತೇನೆ" ಎಂದ.

"ಅದನ್ನು ಯಾರಾದರೂ ಸಾಗುವಳಿ ಮಾಡಿದರೆ ಸಾಕೆಂದು

ನನಗಾಗಿದೆ" ಎಂದನು ಅಚ್ಯುತ.

ಮುಂದಿನ ಮಾತು ಇಪ್ಪತ್ತು ರೂಪಾಯಿಗಳ ಸಾಲದ ವಿಚಾರ. ಅದಕ್ಕೇನೆ ಅಣ್ಣು ಧನಿಗಳಲ್ಲಿಗೆ ಹೊರಟದ್ದು. ಅಚ್ಯುತ "ಶಾಲೆಯು ಶುರುವಿಗಾದರೆ ಏನಾದರೂ ಮಾಡುವ" ಎಂದನು. ತಿರುಗೊಮ್ಮೆ ಅಣ್ಣು ಬರಬೇಕಾಯಿತು; ಬಂದು ಐದು ವರಹಗಳ ಸಾಲಕೊಂಡು ಹೋದ. ಆ ತಿಂಗಳಲ್ಲಿ ಮದ್ದಿನ ಸಲುವಾಗಿ ಅಚ್ಯುತನ ಕೈಯಲ್ಲಿ ಬಿಡುಗಾಸೂ ಉಳಿಯಲಿಲ್ಲ. ರುಕ್ಮಿಣಿಯು ಚೇತನಗೊಂಡಳೆಂಬ ಧೈರ್ಯದಿಂದ, ತಮ್ಮ ಹಾಳುಬಿದ್ದ ಹೊಲವು ಸಾಗು ಆಗುವುದೆಂಬ ಉತ್ಸಾಹದಿಂದ, ಅಣ್ಣುವಿಗೆ ಹಣಕೊಡಲು ಒಡಂಬಟ್ಟ. ಕೊಟ್ಟದ್ದೂ ಆಯಿತು. ಅಲ್ಲದೆ, ಅಣ್ಣುವಿನಂತೆ ದುಡಿಯುವ ಒಕ್ಕಲು ಇನ್ನಾರೂ ಸಿಗಲಾರರು. ಗೇಣಿ ಸಲಿಸುವುದರಲ್ಲೂ ಅವನಿಂದ ವಂಚನೆಯಿಲ್ಲ. "ಅವನಿಗೆ ಸಹಾಯವನ್ನು ಮಾಡದೆ ಇನ್ನಾರಿಗೆ?" ಎಂದು ಲಕ್ಷ್ಮಮ್ಮನೂ ಸಾಲ ಕೊಡಲು ಒಪ್ಪಿದಳು

ಕುಳ್ಕುಂದದ ಜಾತ್ರೆಗೆ ಮಾವ ಅಳಿಯಂದಿರಿಬ್ಬರೂ ಹೋದರು. ಅದರಿಂದ ಕಾಳನ ರಾಣಿಗೆ ತುಂಬ ವಿರಾಮ. ಅಲ್ಲದೆ ಅದು ಅಷ್ಟೊಂದು ಮನೆಗೆಲಸಗಳ ಸಮಯವೂ ಅಲ್ಲ. ತರಕಾರಿಗೂ ನೀರೆರೆಯಬೇಕಿಲ್ಲ. ಗುಡ್ಡಗಳಿಂದ ಕರಡ ಕತ್ತರಿಸಲು ಇನ್ನೂ ಸಮಯವಿದೆ. ಅದರಿಂದಾಗಿ ಸುಬ್ಬಿ, ಅಚ್ಯುತನ ಮನೆಗೆ ದಿನಕ್ಕೆ ನಾಲ್ಕು ಸಾರಿ ಬಂದು, ರುಕ್ಮಿಣಿಯಮ್ಮನನ್ನು ಕಂಡು ಹರಟೆ ಹೊಡೆದು, ಹೋಗುತ್ತಿದ್ದಳು. "ಏನೋ ಅಪ್ಪ, ಈ ಅಮ್ಮನ ಹತ್ತಿರ ನಾಲ್ಕು ಮಾತಾಡದೆ ಹೋದರೆ, ದಿನ ಹೋದಂತೆ ಅನಿಸುವುದೇ ಇಲ್ಲ" ಅನ್ನುತ್ತಾಳೆ. ಬೆಳಗ್ಗೆ ಬಂದವಳು, ಹೋಗಲು ಹೊತ್ತು ಹಿಂತಿರುಗಬೇಕು; ಮಧ್ಯಾಹ್ನ ಬಂದರೆ ಸಂಜೆ ಹೋಗಬೇಕು. ಹೀಗೆ ಮೊದಲ ದಿನವೇ, ಅವಳು ಹೊಂಚು ಹಾಕಿ ತನ್ನ ಧನಿಯನ್ನು ಸಂಜೆಯ ವೇಳೆ ಹಾದಿಯಲ್ಲಿ ಇದಿರುಕಾದಳು. ಆತ, ಹಲವು ದಿನ ಉಪವಾಸವಿದ್ದ ಹುಲಿಯು, ಮೇಕೆಯನ್ನು ಕಂಡು, ಹಿಂಬಾಲಿಸುವಂತೆ, ಆಕೆಯನ್ನು ಹಿಂಬಾಲಿಸಿದ. ಆತಗೆ ಎಚ್ಚರವೂ ಇರಲಿಲ್ಲ. ಎಳೆಯ ಬೆಳುದಿಂಗಳು ಮರಗಳ ಎಡೆಯಿಂದ ಕುಣಿದಾಡುತ್ತಲಿತ್ತು. ಇವರು ನೆರಳಿಂದ ನೆರಳಿಗೆ ಸರಿದು ಹೋಗಿ, ತಮ್ಮ ತಾಣವನ್ನು ಸೇರಿ

ದರು. ಅಚ್ಚುತನ, ಇಷ್ಟು ದಿನಗಳ ಸಾಹಸದ ಮನೋನಿರ್ಧಾರವು, ಇಂದು ಅಷ್ಟು ಸುಲಭದಲ್ಲಿ ಕುಸಿದುಹೋಯಿತು. ಆದರೆ, ಸುಬ್ಬಿಯು ಎಷ್ಟು ದಿನಗಳಿಂದ ಈ ಗಳಿಗೆಗಾಗಿ ಕಾದಿದ್ದಳೆಂದು ಅವನು ತಿಳಿಯನು! ಕಾಳನ ಮೇಲೆ ಅವಳಿಗೆ ಜಿಗುಪ್ಸೆ. ಅವನಲ್ಲಿ ಯಾವುದೊಂದು ದುರ್ಗುಣಗಳನ್ನು ಅವಳು ಕಾಣಳಾದರೂ, ಅವನಿಗಾಗಿ ಒಲಿದವಳೇ ಅಲ್ಲ. ಈಗ ಅವಳ ಕನಸುಗಳು ಬೇರೆಯೇ ಆಗಿವೆ.

ಅಚ್ಚುತನಿಗೆ ಮನೆಗೆ ಬರುವಾಗ ತುಂಬ ಎದೆಯಳುಕು. ಬಂದು ಯಾರೊಡನೆ ಮಾತನಾಡುವುದಕ್ಕೂ ಅಳುಕು. ತನ್ನ ಗಂಟಲನ್ನು ಯಾರೋ ಅದುಮಿದಂತೆ ಕಾಣುತಿತ್ತು. ನಿಜಕ್ಕೂ ಅವನ ಕಣ್ಣುಗಳು ತುಂಬ ಮಿಟುಕುತ್ತಿದ್ದುವು. ಅಣ್ಣ ತನ್ನ ಹಿಂದೆ ಬಂದಾನೆಯೇ ಎಂಬ ಭೀತಿ ಅವನದ್ದು; ಅವನು ತಿರುಗಿ ಊರಿಗೆ ಬಂದರೆ, ತಾನು ಬಿಡುಗಡೆಯಾಗುವೆನೆಂಬ ಬಯಕೆಯೂ ಅವನದ್ದೇ. ಆದರೇನು? ಆರು ದಿನ ತಡೆದು ಅಣ್ಣ ಕಾಳರು ಬರುವಾಗ, ಅಚ್ಚುತ ತನ್ನ ಪ್ರಜ್ಞೆಯ ಮೇಲಿನ ಅಧಿಕಾರವನ್ನು ಸಂಪೂರ್ಣವಾಗಿ ಕಳೆದುಕೊಂಡಿದ್ದನೆಂದು ಅವನಿಗೇ ತಿಳಿಯಿತು.

ಮಕರ ಸಂಕ್ರಾಂತಿಯ ವೇಳೆಗೆ ಸೂರ್ಯ ತನ್ನೊಂದು ಅಯನ ಮುಗಿಸಿ ಉತ್ತರಕ್ಕೆ ಬರುತ್ತಾನಷ್ಟೆ. ಅದರಂತೆ ರುಕ್ಮಿಣಿ ಅಶಕ್ತಿಯಿಂದ ಹಾಸುಗೆ ಹಿಡಿದವಳು, ಆ ಅಯನ ಮುಗಿಸಿ ಓಡಾಡುತ್ತಿದ್ದಾಳೆ. ತನ್ನ ಎಂಟು ತಿಂಗಳ ಕೂಸಿನೊಡನೆ ತುಂಬ ಸಮಯ ಕಳೆಯುತ್ತಿದ್ದಾಳೆ. ಮನೆಯ ಕೆಲಸಗಳಲ್ಲೂ ನೆರವಾಗುತ್ತಿದ್ದಾಳೆ. ಆಗಲೇ ಲಕ್ಷ್ಮಮ್ಮನಿಗೆ ತುಸು ವಿರಾಮ ದೊರಕಿತು ಎಂಬುವಷ್ಟಕ್ಕೆ, ಅವರ ಪಾಲಿಗೆ ಬೇರೊಂದು ಹೊರೆ ಬಂದು ನಿಂತಿತು. ಸೀತೆಯ ಮನೆಯಿಂದ—"ಅಮ್ಮನೊಮ್ಮೆ ಬಂದು ಹೋಗಬೇಕೆ"ಂಬ ಕರೆಯು ಲಕ್ಷ್ಮಮ್ಮಗೆ ಮಗಳಿಂದ ಬಂದಿತು. ಮೂಕಾಂಬಿಕೆಯ ಮದುವೆಗೇನಲ್ಲ. ಇನ್ನೇಕೆಂದು ಆಳಿನೊಡನೆ ಆಕೆ ತಿಳಿಸಿರಲೂ ಇಲ್ಲ. ಆದರೂ ಸುಮ್ಮನೆ ಕರೆದಿರಲಾರಳೆಂದು ಎಣಿಸಿ, ರುಕ್ಮಿಣಿಯೊಡನೆ "ಮಗು, ಸೀತೆ ಬರಲಿಕ್ಕೆ ಹೇಳಿಕಳುಹಿಸಿದ್ದಾಳಂತೆ. ಯಾಕೆಂದು ಗೊತ್ತಿಲ್ಲ. ಹೋಗದೆ ನಿರ್ವಾಹವಿಲ್ಲ. ನೋಡಿಕೊಳ್ಳುತ್ತೀಯಲ್ಲ—ಮನೆಯನ್ನು. ಒಂದೆರಡು ದಿನದಲ್ಲೇ ಬರುತ್ತೇನೆ...ಹೆಚ್ಚು ಏನೂ

ಮಾಡಬೇಡ. ಅಕ್ಕಚ್ಚಿಗೆ, ಹೊರಗಿನ ನೀರಿಗೆ, ಸುಬ್ಬಿಯನ್ನು ಬರಲಿಕ್ಕೆ ಹೇಳು. ನೀನು ಬರಿಯ ಒಳಗಿನ ಕೆಲಸಗಳನ್ನಷ್ಟು ನೋಡಿಕೋ" ಎಂದಳು. ಸುಬ್ಬಿಯೂ ಮುಟ್ಟಾಳು; ಆದುದರಿಂದ ಮನೆಯ ಕೆಲವೊಂದು ಕೆಲಸಗಳನ್ನು, ದನಕರುಗಳ ಆರೈಕೆ, ಕರೆಯುವಿಕೆ, ಇವೆಲ್ಲವನ್ನು ಮುಗಿಸಬಲ್ಲಳು. ಅದೂ ಅಲ್ಲದೆ ಬರಿಯ ಒಂದೆರಡು ದಿನಗಳ ಮಟ್ಟಿಗಲ್ಲವೇ-ಹೇಗೂ ಆಗುತ್ತದೆ! ಎಂದುಕೊಂಡಳು. ಅಚ್ಚುತ ಕಡಬದಿಂದ ಮನೆಗೆ ಬಂದಿಲ್ಲವಾದರೂ ಆ ವಾರ್ತೆ ದೊರೆತ ಒಂದೆರಡು ಗಳಿಗೆಯಲ್ಲೇ ಲಕ್ಷ್ಮಿ ತನ್ನ ಮಗಳ ಮನೆಗೆ ಹೊರಟೂ ಆಯಿತು.

ಆಕೆ ತನ್ನ ಮಗಳ ಮನೆಯನ್ನು ಓಡೋಡಿ ಹೋಗಿ ಸೇರಿದಳು. "ಏನು, ಏಕೆ"-ಎಂದು ಕೇಳಿ ತಿಳಿಯುವ ವರೆಗೆ ಅಧೈರ್ಯ; ಆತುರ. ಅಲ್ಲಿ ಹೋದ ಮೇಲೆ ಏನು ನೋಡಬೇಕು? ನರಸಿಂಹಯ್ಯ ಹಾಸಿಗೆ ಹಿಡಿದಿದ್ದಾರೆ. ಸೀತೆ ತಿರುಗಿ ಬಸಿರಿ. ಹಿರಿಯ ಹೆಣ್ಣು ಮಕ್ಕಳು ತಮ್ಮ ತಮ್ಮ ಗಂಡಂದಿರ ಮನೆಗೆ ಹೋಗಿದ್ದಾರೆ. ಅವರನ್ನು ಬರಲು ಹೇಳಿಕಳುಹಿಸಿದ್ದರೂ ಯಾರೂ ಬಂದಿರಲಿಲ್ಲ. ಅದಕ್ಕೇನೆ ಸೀತೆ ಈಗ ತಾಯಿಯನ್ನು ಬರಮಾಡಿಕೊಳ್ಳಬೇಕಾಯಿತು. ಆದರೆ ಅವಳನ್ನೂ "ಇಲ್ಲಿರು" ಅನ್ನುವ ಧೈರ್ಯ ಅವಳಿಗಿಲ್ಲ. ಲಕ್ಷ್ಮಮ್ಮ ಅಳಿಯನ ಮುಖ ಕಾಣಲು ಹೋದರೆ, "ಬಂದಿರಾ, ಬಡವರನ್ನು ಕಾಣುವ ಮನಸ್ಸನ್ನು ದೇವರು ಕೊಟ್ಟನಲ್ಲಾ" ಎಂದು ನರಸಿಂಹಯ್ಯ ಬಲುವಾಗಿ ನೋವಿನಿಂದ ಕಳಿತ, ಮಾತನ್ನು ಆಡಿದರು. ಅವರು ಹಾಸುಗೆಯನ್ನು ಹಿಡಿದು ಮೂರು ತಿಂಗಳ ಮೇಲಾಗಿತ್ತು. ಇನ್ನೂ ನರಳುತ್ತಿದ್ದಾರೆ. ಹೆಸರಿಗೆ ಆಮಶಂಕೆಬೇನೆ. ಹಾಗೆಂದು ಊರಿನ ನೂರಾರು ಕೆತ್ತೆ, ಕಷಾಯಗಳನ್ನು, ಬೇಯಿಸಿ ಕುಡಿದುದಾಯಿತು. ಘುಟ್ಟಸು, ಚೂರ್ಣ, ಲೇಪಗಳೂ ಹಲವಾದುವು. ಮೊದಲೇ ಕೃಶವಾದ ಅವರ ಶರೀರವು ಈಗ ಬರಿಯ ಅಸ್ಥಿಪಂಜರವಾಗಿದೆ. ಹಾಸಿಗೆಗೆ ಅಂಟಿರುವ ಸ್ಥಿತಿ ಬಂದಿದೆ. ಇತ್ತ, ಆರು ತಿಂಗಳಿನ ಬಸಿರಿ ಸೀತೆ. ಕೊಳಕೆ ಕೊಯ್ಲಿನ ಏರ್ಪಾಡು, ದನಕರುಗಳ ಆರೈಕೆ, ಅಡುಗೆ, ರೋಗಿಯ ಶುಶ್ರೂಷೆ ಎಲ್ಲವನ್ನೂ ಅವಳೇ ಮಾಡಬೇಕು. ತಾಯಿಯನ್ನು ಕಂಡು, "ನನಗೀಗತಿ ಬಂತೇ!" ಎಂದು ಸೀತೆ ತುಂಬ ಅತ್ತಳು. ಲಕ್ಷ್ಮಮ್ಮ-"ನೀನೀಗ ಏತಕ್ಕೆ ಅಳುವುದು? ನಾವ್ಯಾರೂ ಬದು

ಕಿಲ್ಲವೇ? ಅಲ್ಲಿ ರುಕ್ಮಿಣಿ ಇದ್ದಾಳೆ. ಈಗ ಅವಳು ಒಯಿನವಾಗಿದ್ದಾಳೆ. ಹೇಗೂ ಮನೆಯನ್ನು ನಡೆಯಿಸಿಕೊಂಡುಹೋದಾಳು. ನಾನು ಇಲ್ಲಿರುತ್ತೇನೆ ನಾಲ್ಕು ದಿನ" ಎಂದು ಮಗಳಿಗೆ ಸಮಾಧಾನ ಹೇಳಿ, ಅಳಿಯನ ಮನೆಯ ಹೊರೆಯನ್ನು ತನ್ನ ಹೆಗಲ ಮೇಲೆ ಇರಿಸಿಕೊಂಡಳು.

ಸರಿ, ಅವಳಿದ್ದ ನಾಲ್ಕು ದಿನಗಳು ಸರಿದು ನಾಲ್ಕು ತಿಂಗಳಾದುವು. ಬೇಸಗೆಯೂ ಕಾಲಿರಿಸಿತು. ಈ ಮಧ್ಯೆ,ಒಂದು ದಿನ ಅಚ್ಯುತನು ಅವರಲ್ಲಿಗೆ ಬೆಳಗ್ಗೆ ಬಂದು ಸಂಜೆ ಮರಳಿದ್ದ. ಅಷ್ಟರಲ್ಲಿ ಸೀತೆ ಮತ್ತೊಂದು ಹೆಣ್ಣನ್ನು ಹೆತ್ತು ಕಳೆದುಕೊಂಡೂ ಆಗಿತ್ತು. ಅಚ್ಯುತ ಬರುವಾಗ,ತಾಯಿ ಮನೆಯ ನೆಲಗುಡಿಸುತ್ತಿದ್ದಳು. ಲಕ್ಷ್ಮಮ್ಮ ಸದ್ಯಕ್ಕೆ ಮಗನ ಮನೆಗೆ ಬರುವಂತಿರಲಿಲ್ಲ. ಅಚ್ಯುತನ ಮನಸ್ಸಿಗೆ, ತನ್ನ ಭಾವ ಕಾಯಿಲೆಯಿಂದ ಮೇಲೆ ಬೀಳುವಂತಿಲ್ಲ ಎಂದೂ ಕಂಡಿತ್ತು. ಆತ ಧೈರ್ಯವಿಲ್ಲದ ಧೈರ್ಯದಿಂದ ಅವರ ಬಳಿಗೆ ಹೋಗಿ ಕುಳಿತಾಗ, "ಬಂದೆಯಾ, ಹೆಂಡತಿ, ಮಗು ಚೆನ್ನಾಗಿದ್ದಾರೋ. ನಿನಗೆ ತುಂಬ ತೊಂದರೆ, ಅತ್ತೆ ಇಲ್ಲಿಗೆ ಬಂದುದರಿಂದ — ನೀನು ಕೊಯಿಲಿಗೆ ಕರೆಯಲಿಕ್ಕೆ ಬಂದಿರಬೇಕು. ಅಲ್ಲವೇ?" ಎಂದರು. ಕೇಳಿ ಅಚ್ಯುತನಿಗೆ ವ್ಯಥೆಯಾಯಿತು. "ಅಲ್ಲಿನ ಕೆಲಸ ನಾವು ನೋಡಿಕೊಂಡೇವು. ಹಾಗೆ, ಒಕ್ಕಲೂ ಇದ್ದಾನೆ" ಎಂದು ಸಮಾಧಾನಪಡಿಸಿದ. "ಆಯಿತು. ಹ್ಯಾಗಾದರೂ ಈ ಒಂದು ಸಾರಿ ನನ್ನನ್ನು ಉಳಿಸಿ" ಎಂದು ಅವರು ಅವನನ್ನು ಬೇಡಿದರು. ಮನೆಯಲ್ಲಿ ರುಕ್ಮಿಣಿಯೊಬ್ಬಳೇ ಎಂದು ಅಚ್ಯುತ ಆ ಸಂಜೆಗೆ ಊರಿಗೆ ಹಿಂದಿರುಗಬೇಕಾಯಿತು.

ಬೇಸಗೆ ಕಳೆಯಿತು; ಮಳೆ ಬಡಿಯಿತು. ಅಣ್ಣುವನ್ನು ಅಚ್ಯುತ ಕರೆದು "ಕಡೇಬಯಲಿನ ಸಾಗುವಳಿ ಈ ವರ್ಷ ಬೇಡ ಅಣ್ಣು. ನಮ್ಮಮ್ಮ ಪಂಜದಲ್ಲೇ ಉಳಿಯುವ ಹಾಗಾಗಿದೆ. ಆದ್ದರಿಂದ ನೀನು ಈ ವರ್ಷ ನಮ್ಮ ಮನೆ ಸಾಗುವಳಿಗೆ ಸ್ವಲ್ಪ ಸಹಾಯಮಾಡಬೇಕು. ಇಲ್ಲವಾದರೆ ನಮ್ಮದರಲ್ಲಿ ಒಂದೆರಡು ಮುಡಿ ಗದ್ದೆ ನೀನು ವಹಿಸಿಕೋ" ಎಂದು ಬಲವಂತಪಡಿಸಿದನು. ಅದರಂತೆ ಅವನು ಹೂಟೆ, ಬಿತ್ತನೆಗಳ ತಯಾರಿ ನಡೆಯಿಸಿದನು.

ಈಗ, ದಿನ ನಿತ್ಯವೆಂಬಂತೆ ಸುಬ್ಬಿ ಅವರ ಮನೆಗೆ ಬಂದು ಹೋಗುತ್ತಿದ್ದಾಳೆ. ಅಚ್ಯುತ ಬೇಸಾಯ ಮತ್ತು ಶಾಲೆಗಳ ನಡುವೆ ಓಡಾಡು

ತ್ತಿದ್ದಾನೆ. ರುಕ್ಮಿಣಿಗೆ ಮನೆಗೆಲಸವೇ ಸಾಕಾಗುತ್ತಿದೆ. ಒಂದು ದಿನ, ಆಷಾಢ ಕಳೆದಿರಬೇಕು, ಅವಳು ಮನೆ ಜಗುಲಿಯಲ್ಲಿ ಅಲೆದಾಡುತ್ತಿರುವಾಗ, ಕಣ್ಣು ಕತ್ತಲೆಯಿಂದ ಬಿದ್ದು ಬಿಟ್ಟಳು. ಅದರಿಂದ ಸುಬ್ಬಿ, ಗಾಬರಿಗೊಂಡು ತನ್ನ ಮನೆಗೆ ಹೋಗಿ, ಧನಿಯನ್ನು ಕಡಬದಿಂದ ಕರೆತರುವುದಕ್ಕೆ ಗಂಡನನ್ನು ಕಳುಹಿಸಿದಳು. ಅಚ್ಯುತ ಸುದ್ದಿ ಕೇಳಿ, ಡಾಕ್ಟರರ ಬಳಿಗೆ ಓಡಿ ಹೋದ. ಅವರು ಅಚ್ಯುತರಾಯರನ್ನು ಕರೆದು "ಮಾಸ್ಟರರೇ, ನಿಮ್ಮ ಹೆಂಡತಿ ತಿರುಗಿ ಗರ್ಭಿಣಿಯೇ?" ಎಂದು ಕೇಳಿದರು. "ಅಹುದು, ಐದಾರು ತಿಂಗಳಾಯಿತು" ಎಂದ ಆತ.

"ಹಾಗೆನ್ನಿ. ಅವಳಿಗೆ ಮೊದಲಿನ ಹೆರಿಗೆಯ ಅಶಕ್ತಿಯಿಂದ ಚೇತರಿಸುವುದಕ್ಕೇನೆ ಅಷ್ಟು ಸಮಯ ಹಿಡಿದಿತ್ತು. ಈಗ ತಿರುಗಿ ಗರ್ಭಿಣಿಯಾದರೆ ಹೇಗೆ? ಅವಳಿಗೀಗ ತುಂಬ ವಿಶ್ರಾಂತಿ ಬೇಕು. ಅವಳು ಏನೂ ದಣಿಯಬಾರದು. ಈ ಬಾರಿಯ ಬಾಣಂತಿತನದಿಂದ ಆರೋಗ್ಯ ಇನ್ನಷ್ಟು ಇಳಿಯುದಂತೆ ನೋಡಿಕೊಳ್ಳಬೇಕು. ಅವಳು, ಮುಂದೆ ಬಾಣಂತಿಯಾಗದಿದ್ದರೇನೆ ಚಂದ" ಎಂದು ವಿಚಿತ್ರವಾದ ಉಪನ್ಯಾಸ ಮಾಡಿ ಕಳುಹಿಸಿದರು.

ಅಚ್ಯುತ ಮನೆಗೆ ಹೋಗುವಾಗ, ರುಕ್ಮಿಣಿ ಚೇತರಿಸಿಕೊಂಡು, ನಿತ್ಯ ಕೆಲಸದಲ್ಲಿ ನಿರತಳಾಗಿದ್ದಳು. "ರುಕ್ಮಿಣಿ, ನಾನು ರಜೆಯನ್ನಾದರೂ ತೆಗೆದುಕೊಳ್ಳುತ್ತೇನೆ. ನೀನು ಮಲಗಿಕೊಂಡಿರು. ಅಮ್ಮನನ್ನು ಕರೆಯುವ ಎಂದರೆ, ಅಲ್ಲಿ ಭಾವನ ಸ್ಥಿತಿ ಏನೇನೂ ಸ್ವಾರಸ್ಯವಿಲ್ಲ. ಅಕ್ಕನಿಗೆ ಅವರ ಶುಶ್ರೂಷೆಯಾಯಿತು. ಅಲ್ಲದೆ ನಿನ್ನ ವಿಷಯದಲ್ಲಿ ಗಾಬರಿ ಹುಟ್ಟಿಸಿದರೆ, ಅಮ್ಮ ಅಲ್ಲೂ ಅಲ್ಲ, ಇಲ್ಲೂ ಅಲ್ಲವಾದೀತು" ಎಂದನು. ಅಂತು ಆ ವಾರವೆಲ್ಲ ಅಚ್ಯುತನಿಗೆ ರಜೆ. ರುಕ್ಮಿಣಿಗೂ ಅವನಿಗೂ ಜಗಳ. "ನೀನು ಮಲಗಿರು" ಎಂದು ಈತ. "ನಿಮಗೇನು ಚೇಷ್ಟೆ!" ಎಂದು ಅವಳು–ಹೀಗೆ ಹೇಳುತ್ತ ಕಾದಾಡಬೇಕಾಯಿತು. ಡಾಕ್ಟರರು ತನಗೆ ಮಾಡಿದ ಉಪನ್ಯಾಸದ ವಿಷಯವನ್ನು ಮಾತ್ರ ಆತ ರುಕ್ಮಿಣಿಗೆ ತಿಳಿಸಲಿಲ್ಲ.

"ನಾವೆಲ್ಲ ಚೆನ್ನಾಗಿದ್ದೇವೆ. ರುಕ್ಮಿಣಿಯನ್ನು ಮುಂದಿನ ತಿಂಗಳು ಮಾವನ ಮನೆಗೆ ಕಳುಹಿಸುತ್ತೇನೆ" ಎಂದು ಇಲ್ಲಿಂದ ಪತ್ರ ಪಂಜಕ್ಕೆ ಹೋಯಿತು. ಅಲ್ಲಿಂದ ಲಕ್ಷ್ಮಮ್ಮ "ನರಸಿಂಹ ಬದುಕುವ ಆಸೆಯಿಲ್ಲ.

ಸೀತೆಯ ದುರ್ದೈವ"ಎಂದು ಮರು ವರ್ತಮಾನ ಕಳುಹಿದಳು. ಅಚ್ಯುತರಾಯ ಕೆಲವು ದಿವಸಗಳಲ್ಲಿ ಇನ್ನೊಮ್ಮೆ ಹೆಂಡತಿಯನ್ನು ತವರಿಗೆ ಕಳುಹಿಸಿ ಬಂದನು. ಮಗುವನ್ನೂ ಬಿಟ್ಟುಕೊಟ್ಟನು. ಕೂಸಿಂದ ದೂರಾಗುವ ಗಳಿಗೆಯಲ್ಲಿ, "ರುಕ್ಮಿಣಿ-ಎಚ್ಚರ. ಏನಾದರೂ ಮದ್ದು ಬೇಕಾದರೆ ಬರೆ" ಎನ್ನುವ ಗಳಿಗೆಯಲ್ಲೇ ಅವನ ಹೃದಯ ಕರಗಿ ನೀರಾಗಿತ್ತು. ಈ ಬಾರಿ ರುಕ್ಮಿಣಿಯ ಔಷಧೋಪಚಾರಗಳ ಸಲುವಾಗಿ ಆತ ತುಂಬ ಹಣವನ್ನು ಸಾಲಮಾಡಬೇಕಾಯಿತು.

ತಾನು ಆರು ತಿಂಗಳ ಕಾಲ ರಜೆ ಪಡೆಯೋಣವೆಂದೂ ಕಂಡಿತು. ಅವನಿಗೆ ತುಂಬ ಸರ್ವಿಸೂ ಆಗಿರಲಿಲ್ಲ. ರಜೆ ಬೇಕೆಂದಾಗ ಸಿಗುವಂತೆಯೂ ಇರಲಿಲ್ಲ. ಅಲ್ಲದೆ ಮಹಾಲಿಂಗಯ್ಯನವರು, ಅವನ ಪಾಲಿನ ಹುಲಿಯಂತೆ ಬಾಯಿ ತೆರೆದೇ ಕಾದಿದ್ದರು. ಇವನು ಕೊಂಬಾರಿನಿಂದ ನಡೆದು, ಮಳೆಯಿಂದ ತಡವಾಗಿ ಬಂದಾಗಲೆಲ್ಲ, ದಿನವನ್ನು ಬರೆದಿರಿಸಿಕೊಂಡು, ನಿಮಿಷ ಕಾಲಗಳ ವಿವರವನ್ನು, ಮೇಲಿನವರಿಗೆ ತಿಳಿಸುತ್ತಿದ್ದರು. 'ಅವರಿಗೆ ಪಾಠ ಕಲಿಸುವುದರಲ್ಲಿ ಮನಸ್ಸಿಲ್ಲ. ದೂರ ದೂರ ಮನೆಯಿರುವ ಉಪಾಧ್ಯಾಯರನ್ನು ಇಲ್ಲಿರಿಸಿದರೆ ಶಾಲೆಯ ಕೆಲಸವೇ ಹಾಳಾಗುತ್ತದೆ' ಎಂದು ಅವರಿಂದ ಅಧ್ಯಕ್ಷರಿಗೆ ದೂರೂ ಹೋಯಿತು. ಅಲ್ಲದೆ ಈಗ ಅವನ ಮೇಲಿನ ಆಫೀಸರರೂ ಬೇರೆಯವರು. ಹೀಗಾಗಿ ಅವನು ಬೆದರಿ, ಬೆದರಿ ಶಾಲೆಯ ಕೆಲಸಗಳನ್ನು ಮುಗಿಸಿ ನಿತ್ಯ ಮನೆಗೆ ಬರುತ್ತಿದ್ದ. ಇತ್ತ ಮನೆಯ ಅಡುಗೆ ಮೊದಲಾದ ಒಳಗೆಲಸಗಳೆಲ್ಲ ಅವನಿಂದಲೇ ಆಗಬೇಕು.

ಅವನ ಮನಸ್ಸು ಹೀಗೆ ಹರಿಹಂಚಾದ ಕಾಲದಲ್ಲಿ, ಆತನಿಗೆ ಕಳ್ಳ ಪ್ರಣಯವೊಂದೇ ಸುಖದ ಬಗೆಯಾಗಿತ್ತು. ಆದರೂ ಅವನು ಭೀತಿ ರಾಜ್ಯಗಳಿಂದ ದೂರವಾಗಿರಲಿಲ್ಲ. 'ಇನ್ನೊಮ್ಮೆ ರುಕ್ಮಿಣಿಯು ಮನೆಗೆ ಬಂದರೆ, ಈ ತೊಡಕಿಂದ ಪಾರಾದೇನು' ಎಂದುಕೊಳ್ಳುತ್ತಾನೆ. ಕೊನೆಗೆ —'ರುಕ್ಮಿಣಿ ತಿರುಗಿ ತಾಯಾಗಬಾರದೆ'ಂಬ ಡಾಕ್ಟರರ ಅಸಾಧ್ಯವಾದ ತಾಕೀತನ್ನು ನೆನೆದು, ಬೆದರಿ, "ನಾನೇನು ತಿರುಗಿ ಲಗ್ನವಾಗಬೇಕೆಂದು ಅವರ ಮನಸ್ಸೋ?" ಎಂದು ಯೋಚಿಸುತ್ತಾನೆ. ಅದರಿಂದ 'ಸುಬ್ಬಿಯು ಕನವರಿಕೆಯೇ ತನ್ನ ಉಳಿಗಾಲದ ಹಾದಿ'-ಎಂದು ಎಣಿಕೆಹಾಕುತ್ತಾನೆ.

"ಆದರೆ ಕಾಳನ ಬಾಯಿಗೆ ನಾನೆಲ್ಲಾದರೂ ಬಿದ್ದರೆ ಉಳಿಗಾಲವುಂಟೇ?" ಎಂಬ ಬೆದರಿಕೆಯೂ ಬಂದು ಸೇರುತ್ತದೆ. ಅವನ ಮನಸ್ಸಿನ ವಿಪ್ಲವವನ್ನು ಅಳೆಯುವವರಾರು?

ಆ ವರ್ಷ ಶಾಲೆಯ, ವರ್ಷಾವಧಿ ಇನ್ಸ್‌ಪೆಕ್ಷನ್ ದಶಂಬರದಲ್ಲಿ ಎಂದು ತಿಳಿಯಬಂದಿತು. ಅಚ್ಯುತನು ಭಯಪಟ್ಟು ನಿತ್ಯವೂ ಅರೆ ತಾಸು ಮುಂಚಿತವಾಗಿ ಶಾಲೆಗೆ ಹೋಗಿ, ಏನೂ ಕೊರತೆ ಬಾರದ ರೀತಿಯಲ್ಲಿ ಪಾಠಗಳ ತಯಾರಿ ನಡೆಯಿಸಿದನು. "ಈಗ ಬರುವ ಇನ್ಸ್‌ಪೆಕ್ಟರರು ಯಾವ ಮರ್ಜಿಯವರೋ" ಎಂದು ಜಾನ್‌ಸನರೂ ಅನುಮಾನ ಹೇಳಿದ್ದರು. "ಅಲ್ಲದೆ ಮಹಾಲಿಂಗಯ್ಯ, ನಾಗರಾಜ ಸೇರಿ, ಅವರಿಗೂ ಕಾಫಿ ಕುಡಿಸಿ ತಮ್ಮ ಬಲೆಗೆ ಸಳೆದರೆ, ನಮ್ಮಗೆರೆ ವಕ್ರವಾದಂತೆಯೇ" ಎಂದು ತಮ್ಮಲ್ಲೇ ತರ್ಕಿಸಿದರು. "ಇನ್ಸ್‌ಪೆಕ್ಟರರು ಬಂದು ಹೋಗುವ ತನಕ ಶಾಲೆಯಲ್ಲೇ ಬಿದ್ದಿರುತ್ತೇವೆ" ಎಂದು ನಿರ್ಣಯಿಸಿಕೊಂಡರು. ಈ ಎಲ್ಲ ಗದ್ದಲಗಳ ಅವಧಿಯಲ್ಲಿ ಅವರ ಇಂಟರ್‌ನೇಶನಲ್ ಕ್ಲಬ್ ತೀರಿಕೊಂಡಿತ್ತು. ಜಾನ್‌ಸನರಿಗೆ ಬೇರೆ ಯೋಚನೆಯಿಲ್ಲ; ಸಂಜೆ ಮನೆಗೆ ಹೋದರಾಯಿತು. ಮನೆಯಲ್ಲಿ ನಿರ್ಮಲಾ ಹೆಲನಳೂ ತಾಯಿಯಾಗಿದ್ದಾಳೆ. ಆದರೆ ಅಚ್ಯುತನಂತೆ ಎರಡನೆಯ ಆವೃತ್ತಿಯನ್ನು ಕಾದಿರಲಿಲ್ಲ.

ಹೀಗೆ ಅಚ್ಯುತ--ಜಾನ್‌ಸನರು ಬೆದರಿಕೊಂಡು ಇರುವಾಗಲೇ, ಒಂದುದಿನ ಅವರ ಇನ್ಸ್‌ಪೆಕ್ಷನ್ ಆಯಿತು. ಬಂದ ಆಫೀಸರರು ಅಚ್ಯುತ ಜಾನ್‌ಸನರ ಸಲುವಾಗಿಯೇ ಬಂದವರಂತೆ. ಅವರಿಬ್ಬರ ಕೆಲಸದಲ್ಲಿ ಹುಳುಕನ್ನು ಹುಡುಕಲು ನಿಂತುಕೊಂಡರು. ಅವರ ಕೆಲಸದಲ್ಲಿ ಕೊರತೆಯೇನೂ ಕಾಣಿಸಲಿಲ್ಲ. ಅಚ್ಯುತ ಮಾತ್ರ ಒಂದು ಆಕ್ಷೇಪಕ್ಕೆ ನಿರುತ್ತರವಾದಿಯಾದ. ಮಹಾಲಿಂಗಯ್ಯನವರು, ಎಷ್ಟು ದಿನ ಆತ ತಡವಾಗಿ ಬಂದಿರುವರೆಂದು ಮಾಡಿರಿಸಿದ ದೀರ್ಘಪಟ್ಟಿಯ ಎದುರು, ಅಚ್ಯುತ ಸ್ತಂಭಿತನಾದನು. "ನಾನು ತಡಮಾಡಿ ಬಂದಿಲ್ಲ ಎನ್ನಲಾರೆ; ಆದರೆ ಇವರು ಬರೆದಷ್ಟು ದಿನ, ಹೀಗೆಲ್ಲ ಮಾಡಿರಲಿಲ್ಲ" ಎಂದನು. ಆಫೀಸರರು "ನಿಮಗೆಲ್ಲ, ಊರು ಮನೆಯಲ್ಲಿ ಕೆಲಸ ಕೊಟ್ಟರೆ ಇದೇ ಗತಿ" ಎಂದು ಗದರಿಸಿ ಹೊರಟುಹೋದರು.

ಪಂಜದಿಂದ ರುಕ್ಮಿಣಿಯನ್ನು ಎರಡನೆಯ ಮಗುವಿನ ಸಮೇತ

ಕರೆತರುವ ಎಂದು ಹಾತೊರೆದು ಕುಳಿತ ಗಳಿಗೆಯಲ್ಲೇ ಈ ಅನಿಷ್ಟ ಸಂಭವಿಸಬೇಕೇ-ಎಂದು ಆತ ಚಿಂತಿಸುವಂತಾಯಿತು. ಕೊನೆಗೆ "ಬಂದದ್ದೆಲ್ಲ ಬರಲಿ!" ಎಂದುಕೊಂಡು, ನಾರಾಯಣಮಾಸ್ತರರು ಅಂಥ ವೇಳೆಯಲ್ಲಿ ಧೈರ್ಯದಿಂದ ಆಡುತ್ತಿದ್ದ ಮಾತುಗಳನ್ನು ನೆನೆದುಕೊಂಡು, ಮನೆಗೆ ತೆರಳಿದ. ಕ್ರಿಸ್‌ಮಸ್ ರಜೆ ತೊಡಗಿದ ಮರುದಿನ ಪಂಜಕ್ಕೆ ಹೋದನು. ಈ ಬಾರಿ ಮಳೆಗಾಲವಲ್ಲ; ಕೂಸನ್ನು ಗಾಳಿಗೊಡ್ಡಿ ತರಬೇಕಿಲ್ಲನೆಂದು, ಮುಂಜಾನೆಯೇ ಗಾಡಿಕಟ್ಟಿಸಿ, ಹೊರಟು, ಮಧ್ಯಾಹ್ನದೊಳಗೆ ತಮ್ಮ ಮನೆಯನ್ನು ಆ ಗಂಡಹೆಂಡಿರು ಸೇರಿದರು. ಪಂಜದಲ್ಲಿ ತಾಯಿ, ಭಾವಂದಿರ ದರ್ಶನವಾಗಿತ್ತು. ತನಗೆ ತಾಯ ವಿರಹ ಬಲು ತೀವ್ರವೇ ಇದೆಯೆಂದು ಅನಿಸಿತು ಅಚ್ಚುತನಿಗೆ! ನರಸಿಂಹಯ್ಯ ಚೇತನಗೊಂಡು ಬಿಡುಗಡೆಗೆ ಬರುವಂತಿರಲಿಲ್ಲ; ಅವರ ಯಾತ್ರೆ ಮುಗಿದು, ಬರುವಂತಿತ್ತು. ಸೀತೆಗೆ ತನ್ನ ಕಣ್ಣೆದುರು ಯಮರಾಯ ನಿಂತು, "ನಿನ್ನ ಕುಂಕುಮ ಅಳಿಸು" ಎಂದು ನಿತ್ಯವೂ ಬೆದರಿಸುತ್ತಿದ್ದಂತೆ ಕಾಣುತ್ತಿತ್ತು. ಅವಳು ನಿತ್ಯವೂ ತಾಯಿಯ ಮುಂದೆ ಕಣ್ಣೀರು ಕರೆಯುತ್ತಾಳೆ. ಅತ್ತ ಲಕ್ಷ್ಮಮ್ಮ ತನ್ನ ಅಳಿಯನಿಗೆ ಧೈರ್ಯ ಹುಟ್ಟಿಸುವುದರ ಜತೆಗೆ, ಸೀತೆಯ ಎದೆಗೂ ರಕ್ತ ತುಂಬಿಸಬೇಕಾಗುತ್ತಿತ್ತು.

ಈಚೆ ಕೊಂಬಾರಿನಲ್ಲಿ ಅಚ್ಚುತನ ಬಿಡಾರ ತಿರುಗಿ ಸ್ಥಾಪನೆಯಾಯಿತು. ತಿರುಗಿ ಮಕ್ಕಳು ಮರಿ; ತಿರುಗಿ ಅದೇ ವ್ಯಾಮೋಹ ತುಂಬಿದ ಸಂಸಾರ! ಆದರೆ ಈ ಬಾರಿ ವೈದ್ಯರ ಭವಿಷ್ಯ ಸುಳ್ಳಾಯಿತು. ರುಕ್ಮಿಣಿ ಮೊದಲ ಬಾರಿಯಂತೆ ಸೊರಗಿರಲಿಲ್ಲ. ಮೊದಲಿನ ಕೂಸಿಗೂ, ತೂಕವಾದ, ಪುಷ್ಟವಾದ ಕೂಸನ್ನು ರುಕ್ಮಿಣಿ ತಂದಿದ್ದಳು. ಆದರೆ, ಎಲ್ಲರಂತೆ ಅವುಗಳಿಗೂ, ಹಾಲು ಮಾತ್ರ ಗಂಗಾಜಲವೇ ಆಯಿತು. ಅದರಿಂದ ಎರಡು ತಿಂಗಳ ಸಂಬಳಕ್ಕೆ ಸಂಚಕಾರ ಬಂತು. ಹಾಲು ಕಡಮೆಯಾದರೂ ಚೆನ್ನಾಗಿ ಒದೆ ಕೊಡಬಲ್ಲ,ಹಸುವೊಂದನ್ನು ಕಟ್ಟಿಕೊಂಡು ಗಂಡಹೆಂಡಿರು ಹಾಲಿನ ಜತೆಗೆ,ದನದ ಪ್ರಾಣವನ್ನು ಹಿಂಡುವ ಸರ್ಕಸು ನಡೆಸಿದರು. ಕೊನೆಕೊನೆಗೆ ಹಸು ರೂಢಿಗೆ ಬಂದಿತು; ಪಳಗಿತು! ಎದುರಿಗೆ ರುಕ್ಮಿಣಿ ಕೋಲು ಹಿಡಿದು ನಿಂತರೆ, ಸುಬ್ಬಿ ಮನೆಗೆ ಬಂದು ಹಾಲನ್ನು ಕರೆದು ಕೊಟ್ಟು ಹೋಗುತ್ತಾಳೆ. ಅದಕ್ಕೆಂದು ಅಚ್ಚುತ ಶಾಲೆಗೆ ರಜೆಯ

ಅರ್ಜಿ ಬರೆಯಬೇಕಾಗಿಲ್ಲ. ರುಕ್ಮಿಣಿಗೆ ದಣಿವಾಗುತ್ತದೆ. ಆದರೆ ಅತ್ತೆಯನ್ನು ಕರೆಸುವಂತಿರಲಿಲ್ಲ. ಮೊಮ್ಮಗನ ನಗುವನ್ನು ಕಾಣಬೇಕೆಂದು ಅವಳಿಗೆ ಬಯಕೆಯಿತ್ತಾದರೂ, ಹೇಗೆ ಬಂದಾಳು? ಅಲ್ಲಿಯೂ ಕೂಸುಗಳಿವೆ. ಮಗ್ಗುಲನ್ನು ಹಿಡಿಯದೆ ಅಲುಗಿಸಲಾರದ ನರಸಿಂಹಯ್ಯನನ್ನು ಬಿಟ್ಟು ಬರಲು ಅವಳಿಗೆ ಬಂದೀತೇ?—ಎಂಬುದನ್ನು ನೆನೆದು ಸುಮ್ಮನಾದಳು.

ಸುಬ್ಬಿಯೊಡನೆ ಹರಟುವುದೆಂದರೆ ರುಕ್ಮಿಣಿಗೆ ತುಂಬ ಉತ್ಸಾಹ. ಈಗ ಅವಳಿಗೆ ಮೈಯಲ್ಲಿಯೂ ತುಂಬಾ ಉತ್ಸಾಹವಿದೆ. ಮೊದಲಿನಂತಿರಲಿಲ್ಲ. ಸುಬ್ಬಿಯೂ ಈಗೀಗ ಅವಳ ಉಪದೇಶವನ್ನು ಅಳುಕಿ, ಅಳುಕಿ, ನಾಚಿ, ನಾಚಿ ಕೇಳುತ್ತಿದ್ದಾಳೆ! ಅವಳೂ ಈಗ ಬಸಿರಿಯಂತೆ! ಮುಖದಲ್ಲಿ ಕಾಂತಿ ತುಂಬಿದೆ. ಅವಳನ್ನು ಕಂಡು "ಏನು ನಿನಗಾಗಿದೆ? ಏನು ಗಾಬರಿಯೂ ಇಲ್ಲ. ಸುಖ ನಿನಗೆ; ಗಟ್ಟಿಮುಟ್ಟು ಜೀವ ನಿನ್ನದು! ನಿನಗೆ ಹೆರಿಗೆ ಕಷ್ಟವಾಗಲಿಕ್ಕಿಲ್ಲ. ಅಲ್ಲದೆ ಹೆರಿಗೆಗೆ ಇನ್ನು ತಿಂಗಳು ಐದು ಇರುವಾಗ ನಿನಗೇನು ಚಿಂತೆ?" ಎಂದು ಅಳುಕುವ ಅವಳನ್ನು ಸಮಾಧಾನಪಡಿಸುತ್ತಿದ್ದಳು. ಸುಬ್ಬಿ ಗರ್ಭಿಣಿ ಎಂದು ತಿಳಿದ ಮೊದಲ ದಿನವೇ, ರುಕ್ಮಿಣಿ ಗಂಡನೊಡನೆ "ಇನ್ನು ಸುಬ್ಬಿ ಬಹುದಿನ ನಮ್ಮ ಮನೆ ಕೆಲಸಕ್ಕೆ ಬರುವಂತಿಲ್ಲ" ಎಂದು ತಿಳಿಸಿದಳು.

"ಏಕಂತೆ?"

"ಅವಳಿಗೆ ತಿಂಗಳು ನಾಲ್ಕಾಯಿತು. ಇನ್ನು ಹೆಚ್ಚೆಂದರೆ ಎರಡು ತಿಂಗಳು ಬಂದಾಳು. ಮುಂದೆ ಮನೆ ಕೆಲಸಕ್ಕೆ ಯಾರನ್ನಾದರೂ ಕರೆಯಬೇಕಾಗುತ್ತದೆ ನಾವು" ಎಂದಳು. ಮುಂದೆ ಅವಳ ಮನಸ್ಸು 'ಸುಬ್ಬಿಯ ಸಂತತಿಯು' ಕಡೆಗೆ ಹರಿಯಿತು. "ಸುಬ್ಬಿಯ ಮಗು ಗಂಡನ ಹಾಗಿದ್ದೀತೇ? ಕಪ್ಪಗಾದೀತೇ ಕೆಂಪಗೋ" ಎಂದು ಹಾಸ್ಯಮಾಡಿ ನಕ್ಕಳು. ಅಚ್ಯುತ ಅದನ್ನು ಕೇಳಿ ತುಟಿಮೀರದ ನಗುವನ್ನು ನಕ್ಕನು.

ಜನವರಿ ಕಳೆಯಿತು. ಫೆಬ್ರವರಿ ಕಳೆಯಿತು, ಮಾರ್ಚಿ ಬಂದಿತು. ಅಚ್ಯುತನ ಭೀತಿ ದೂರವಾಯಿತು. ಇನ್ನು ಕಡಬದಿಂದ ತನ್ನನ್ನು ವರ್ಗಾಯಿಸಲಾರರು ಎಂದು ಧೈರ್ಯವಾಯಿತು. "ಒಮ್ಮೆಗೆ ಉಳಿದುಕೊಂಡೆ. ಇನ್ನು ಈ ಚಾಡಿಕೋರರ ಬಾಯಿಂದ ಹೇಗೂ ಬಚಾವಾದೇನು?" ಎಂದು

ಆತ ಯೋಚಿಸುತ್ತಿರುವಾಗಲೇ ಬೇರೊಂದು ಯೋಚನೆಗೆ ಅವಕಾಶ ಬಂದಿತು. ಇವನಿಗೆ ಸಾಲವಿತ್ತ ಉಪ್ಪಿನಂಗಡಿ ಸಾಹುಕಾರರು "ನೀವು ಕೂಡಲೇ ಬಂದು ಹೋಗಬೇಕು" ಎಂದು ಅವನಿಗೆ ತಿಳಿಸಿದರು. ಈತಗೆ ಜ್ಞಾನೋದಯವಾಯಿತು. ಈ ತನಕ ಸಾಲದ ಬಡ್ಡಿಯನ್ನು ಅವರು ಕೇಳಲಿಲ್ಲವೆಂದೂ, ತಾನು ಅದನ್ನು ಕೊಡಲಿಲ್ಲವೆಂದೂ. ಇತ್ತ ಬಡ್ಡಿಗಾಗಿ ಸಂಬಳ ತೆಗೆದಿರಿಸುವೆನೆಂದು ಮಾಡಿದ ಅವನ ನಿರ್ಣಯ, ಬೆಳೆಯುತ್ತಿದ್ದ ಬೇನೆ, ಸಂಸಾರಗಳಿಂದ ಮಣ್ಣುಪಾಲಾಗಿತ್ತು. ಈಗೇನು ಮಾಡಲಿ-- ಎಂದು ಕಂಗಾಲಾದ. ನೆಟ್ಟಗೆ ಒಂದು ದಿನ ಸಾಹುಕಾರರೊಡನೆ ಮಾತಿಗೆಂದು ಹೊರಟ. ಮಾಮುಂಜಿಯನ್ನು ಕರೆದುಕೊಂಡು, ಸಂಧಾನ ಬೆಳೆಸಲು ದಾರಿ ಹುಡುಕೋಣವೆಂದರೆ, ಆತನೂ ಊರಲ್ಲಿದ್ದಿರಲಿಲ್ಲ. ಹಾಸನಕ್ಕೆ ವ್ಯಾಪಾರಕ್ಕೆಂದು ಹೋಗಿದ್ದ. ಹೀಗಾಗಿ ಸಾಹುಕಾರರನ್ನು ಒಬ್ಬಂಟಿಗನಾಗಿ ಭೇಟಿಯಾಗುವುದಾಯಿತು. ತನ್ನ ಸ್ಥಾನಮಾನಗಳನ್ನೆಲ್ಲ ಮರೆತು, ಈ ಜನ್ಮದಲ್ಲಿ ಕೇಳದಿರದ ನಿಂದೆ ಮಾತುಗಳನ್ನು ಅವರಿಂದ ಕೇಳುವುದಾಯಿತು. ತನ್ನ ತಪ್ಪಿಗಾಗಿ ಅವರ ಮುಂದೆ ನಡುಗುವಂತಾಯಿತು. "ಕೊನೆಗೆ, ನಾನೇನು ಮಾಡಬೇಕೆನ್ನುತ್ತೀರಿ" ಎಂದು ಕೇಳಿದನು. "ನಾವು ನಂಬ್ರ ಮಾಡಬೇಕಾಗುತ್ತದೆ; ಆಸ್ತಿಯನ್ನು ಏಲಮಿಗೆ ಇರಿಸಬೇಕಾಗುತ್ತೆ; ಇಲ್ಲವಾದರೆ ಸಾಲಮೂಲಕ್ಕೆ ನೀವು ಅದನ್ನು ನಮಗೆ ಬರೆದು ಕೊಡಬೇಕು" ಎಂದರು.

"ಆಗಲಿ, ಊರಿಗೆ ಹೋಗಿ ಯೋಚಿಸಿ ಬರುತ್ತೇನೆ. ಅಮ್ಮನ ಹತ್ತಿರ ಒಂದು ಮಾತನ್ನು ಕೇಳಿಕೊಂಡು ಬರುತ್ತೇನೆ" ಎಂದನು. ಅವರಾಗ ಕಬ್ಬಿಣದಂತಾದರು. "ನಾನು ನಿಮ್ಮ ಅಮ್ಮನ ಹತ್ತಿರ ಕೇಳಿ ನಿಮಗೆ ಸಾಲ ಕೊಡಲಿಲ್ಲ" ಎಂದರು. "ಈ ಅವಮಾನಕ್ಕಿಂತ ಅವರ ಸಾಲ ತೀರಿಸಿ ಋಣ ಮುಕ್ತನಾಗುತ್ತೇನೆ" ಎಂದುಕೊಂಡ. ಸಾಲ, ಬಡ್ಡಿಗಳನ್ನು ಎಣಿಕೆಹಾಕಿದರೆ ಎರಡು ಸಾವಿರಕ್ಕೆ ಸಮೀಪ ಬಂದಿತ್ತು! ಆಸ್ತಿ ಮಾರಲು ಮನಸ್ಸು ಬರಲೊಲ್ಲದು. ಹೆಚ್ಚಿಗೆ ಬೆಲೆ ಸಿಗಲಾರದೇ? ಬಿಡಿಸಿಕೊಳ್ಳಲು ದಾರಿ ಸಿಕ್ಕದೇ-ಎಂದು ಯೋಚಿಸಿದ. ತಿರುಗಿ ಅವರೊಡನೆ ಅಂಗಲಾಚಿ "ಒಟ್ಟು ಭೋಗ್ಯಕ್ಕೆ ಮಾಡಿಕೊಳ್ಳಿರಿ. ನಾನು ತಿರುಗಿ ನಿಮ್ಮಿಂದ ಅದನ್ನು ಗೇಣಿಗೆ ಮಾಡಿಕೊಳ್ಳುತ್ತೇನೆ. ಭೂಮಿಯಾದರೆ ಭೂಮಿ, ಬರಿಯ ಮನೆ

ಯಡಿಯಾದರೆ ಅದು" ಎಂದ. ಒಮ್ಮೆಗೇ ಅಚ್ಯುತನ ಕರುಳನ್ನು ಹಿಚು ಕುವುದು ಧರ್ಮವಲ್ಲವೆಂದು ಸಾಹುಕಾರರು "ಹೂಂ" ಎಂದರು. ಅದೇ ದಿನ ದಸ್ತಾವೇಜನ್ನು ಬರೆಯಿಸಿಯಾಯಿತು. ಮರುದಿನ ಪುತ್ತೂರಿಗೆ ಹೋಗಿ ರಿಜಿಸ್ತ್ರಿ ಮಾಡಿಸಿದ್ದಾಯಿತು. ಮಾರನೆಯ ದಿನ, ಆತ ತಲೆಯ ಮೇಲೆ ಕೈಯಿರಿಸಿಕೊಂಡು ಊರಿಗೆ ಮರಳಿದ್ದೂ ಆಯಿತು. ಮನೆಯನ್ನು ಸೇರಿ, ಜಗುಲಿಯನ್ನೇರಿ, ತಲೆಗೆ ಕೈಕೊಟ್ಟು ಕುಳಿತ. ರುಕ್ಮಿಣಿ ಬಂದ ವನಿಗೆ ಬಾಯಾರಿಕೆ ತಂದಿರಿಸಿದಳು. ಮುಖ ಕಂಡಳು; ಮಗುವಿಗಿಂತ ಸಣ್ಣದಾಗಿ ಅಳುತ್ತಿದ್ದಾನೆ ಗಂಡ. "ಏನು ಏನು!" ಎಂದು ಕಳವಳಿಸಿ ಕೇಳಿದಳು. "ಎಲ್ಲ ಮುಗಿಯಿತು, ಆಸ್ತಿ ಹೋಯಿತು ಸಾಲ ಕೊಟ್ಟವ ರಿಗೆ. ತಂದೆಯಂತೆ ಮಗ. ಇನ್ನು ಎಂಟು ದಿನಗಳಲ್ಲಿ ಹೋಗಿ, ಬರಿ ಮನೆ ಸಾಕೇ, ಭೂಮಿ ಬೇಕೇ ಎಂದು ತಿಳಿಸುತ್ತೇನೆ ಎಂದು ಬಂದಿದ್ದೇನೆ. ಅಮ್ಮನನ್ನು ಅಷ್ಟಕ್ಕಾದರೂ ಕೇಳಬೇಕಲ್ಲ. ನೋಡು: ಬ್ರಹ್ಮನ ಆಟ— ಇವತ್ತು ಧನಿ; ನಾಳೆ ಒಕ್ಕಲು! ನನ್ನ ಗ್ರಹಚಾರಕ್ಕೆ ಮಾಮುಂಜಿ ಏನಾ ದರೂ ಸಹಾಯ ಮಾಡುತ್ತಿದ್ದ. ಅವನೂ ಊರಲ್ಲಿರಬಾರದೆ?" ಎಂದು ಕೊಂಡ. ರುಕ್ಮಿಣಿ ಅವನಿಗೆ ಏನು ಸಮಾಧಾನ ಹೇಳಬಹುದು?

ಶಾಲೆಗೆ ಇನ್ನೂ ಆರು ದಿವಸಗಳಿದ್ದುವು. ಮುಂದೆ ಬೇಸಗೆಯ ರಜೆ. ಅಚ್ಯುತ ಅಲ್ಲಿಯ ತನಕವೂ ತಾಯಿಯ ಕಡೆಗೆ ಹೋಗಿರಲಿಲ್ಲ. ಹೋಗುವುದಕ್ಕೆ ಧೈರ್ಯವಾಗದು. ಶಾಲೆ ಮುಗಿಯುವ ದಿನಕ್ಕಾಗಿ ಆತ ಕಾದನು. ಆ ದಿನವೂ ಬಂದಿತು. ರುಕ್ಮಿಣಿಯೊಡನೆ "ರುಕ್ಮಿಣಿ ಬೇಸಾಯ ನಮ್ಮಿಂದಾಗದು; ಬೇಡ. ಗೇಣಿ ನಮ್ಮಿಂದ ಕೊಡುವುದಕ್ಕಾಗದೆ ಹೋ ದರೆ" ಎಂದು ಅನುಮಾನಿಸಿ ಹೊರಬಿದ್ದನು. ಆ ದಿನದ ಟಪ್ಪಾಲಿನಲ್ಲೇ 'ಅಚ್ಯುತನಿಗೆ ಶಂಕರನಾರಾಯಣಕ್ಕೆ ವರ್ಗ' ಎಂದು ಅಪ್ಪಣೆ ಬಂದಿತ್ತು. "ಶಂಕರನಾರಾಯಣವೇ!" ಎಂದು ಅಚ್ಯುತ ಗಾಬರಿಯಿಂದ ಮೌನ ವಾದನು. "ಹಾಗದರೆ ತಾಯಿಯನ್ನು ಇನ್ನು ಕೇಳಬೇಕಿಲ್ಲ; ಮನೆಯನ್ನು ಬಿಟ್ಟಂತೆಯೇ" ಎಂದುಕೊಂಡ. ಪಂಜದ ಪಯಣವನ್ನು ನಿಲ್ಲಿಸಿ, ತಿರುಗಿ ಕೊಂಬಾರಿಗೆ ಹೊರಟನು. ಅವನ ಹಿಂದೆ ಧೈರ್ಯಕೊಡುತ್ತ ಜಾನ್‌ಸ ನರೂ ಹೊರಟು ಬಂದಿದ್ದರು. ಒಂದು ಮೈಲು ಪೂರ ಹೋಗಿರಲಿಲ್ಲ- ನಿಂತುಬಿಟ್ಟ. 'ಇಲ್ಲ, ಅಮ್ಮನಿಗೆ ಸಂಗತಿ ತಿಳಿಸಿ ಬಂದುಬಿಡುತ್ತೇನೆ"--

ಎಂದು ಪಂಜದ ಹಾದಿಯನ್ನು ಹಿಡಿದ. ಜಾನ್‌ಸನರು ಅವನನ್ನು ಪಂಜಕ್ಕೆ ಕಳುಹಿಸಿದರು.

ಭಾವನ ಮನೆ ಅಂಗಳ ಇಳಿದು ಅಚ್ಯುತ "ಅಮ್ಮ" ಎಂದನು. ಚಾವಡಿಗೆ ಬಂದರೆ, ಅಲ್ಲಿ ನರಸಿಂಹಯ್ಯ ಮಲಗಿದ ಚಿತ್ರವಿಲ್ಲ. ಬದಲೊಂದು ನೀಲಾಂಜನ ಉರಿಯುತ್ತಿತ್ತು! ಗಾಬರಿಯಾಯಿತು—ಒಳಗೆ ಹೋದ. ಅಲ್ಲೂ ಯಾರಿರಲಿಲ್ಲ. ಹಿಂದಿನ ಅಂಗಳಕ್ಕೆ ಹೋದರೆ ಅಲ್ಲಿ ದೂರದಲ್ಲಿ ಮೂಕಿ ಆಡುತ್ತಿದ್ದಳು. ಸೀತೆ ಲಕ್ಷ್ಮಿಯರು ತಲೆಯನ್ನು ತಗ್ಗಿಸಿ ಕುಳಿತಿದ್ದರು. "ಅಮ್ಮ" ಎಂದ. ಲಕ್ಷ್ಮಮ್ಮ ತಲೆಯೆತ್ತಿದಳು. "ಮಗು, ಇಲ್ಲಿನದು ನಿನ್ನೆಗೆ ಮುಗಿಯಿತು" ಎಂದಳು. ಅಲ್ಲಿನದೂ ಮುಗಿಯಿತು-ಎಂದು ಈತ ಮನಸ್ಸಿನಲ್ಲೇ ಉತ್ತರಿಸಿದ. ಆದರೆ ಗಟ್ಟಿಯಾಗಿ ತಿಳಿಸಲು ಧೈರ್ಯ ಬರಲಿಲ್ಲ. ಅಕ್ಕನನ್ನು ನೋಡಲು ಕಣ್ಣು ಹೊರಳಿಸಿದ.

ಅವಳು ಕೊನೆ ಮೊದಲಿಲ್ಲದ ಅಳುವಿನ ಮಳೆಯನ್ನೇ ಕರೆದಳು. ಅವನು ಹೊತ್ತು ತಂದ ವ್ಯಥೆಯನ್ನು, ಈಗ ಸಂಧಿಸಿದ ವ್ಯಥೆಯೆಂಬುದು ಸಂಪೂರ್ಣ ನುಂಗಿಬಿಟ್ಟಿತು.



## ೧೭ನೆಯ ಅಧ್ಯಾಯ

ನರಸಿಂಹಯ್ಯನ ಉತ್ತರಕ್ರಿಯೆಗೆ, ಎಲ್ಲರೂ ಸೇರಿದರು. ರುಕ್ಮಿಣಿಯೂ ಬಂದಿದ್ದಳು. ಸೀತೆಯ ಇಬ್ಬರು ಅಳಿಯಂದಿರೂ ಬಂದಿದ್ದರು. ಸೀತೆ ಲಕ್ಷ್ಮಮ್ಮರ ವ್ಯಥೆಯನ್ನು ನೂರ್ಮಡಿಮಾಡಲು ಎಲ್ಲರ ದರ್ಶನವೂ ಆಯಿತು. ನೆರೆಮನೆಯವರಾದ ಪುಟ್ಟಯ್ಯನವರು ಬಂದಿದ್ದರು. ಅಂತು ಎಲ್ಲರ ಸೇರಿಕೆಯಿಂದ ಅದೊಂದು ದುಃಖದ ಕೆಲಸ ಕೊನೆಗಾಣಿಸಿದ್ದಾಯಿತು. ಈಗ ಅವರವರ ಹೊಟ್ಟೆಯ ಪಾಡನ್ನು ಕುರಿತು ಯೋಚಿಸಬೇಕಾದ ಕಾಲ ಒದಗಿದೆ. ಪುಟ್ಟಯ್ಯನವರಿಗೆ ಅಳಿಯನೂ ಮಗಳೂ ಯಾವುದೋ ಒಂದು ಮೂಲೆಯಾದ, ಶಂಕರನಾರಾಯಣಕ್ಕೆ ಹೋಗುವುದು ಏನೂ ಇಷ್ಟವಿರಲಿಲ್ಲ. ಊರು ಮನೆಯಾದರೆ-ಸತ್ತಿದ್ದಾರೆಯೋ ಬದುಕಿದ್ದಾರೆಯೋ-ಎಂದು ಕಾಣುವುದಕ್ಕಾದರೂ ಆಗುತ್ತದೆ. ಕಣ್ಣು

ಕಾಣದ ಪರವೂರನ್ನು ಸೇರಿಕೊಂಡರೆ, ಮುಖದರ್ಶನವೂ ಆಗುವಂತಿರಲಿಲ್ಲ–ಎಂಬುದರಿಂದ, ಅಳಿಯನೊಡನೆ, "ನೋಡು ಮಂಗಳೂರಿಗೆ ಹೋಗಿ, ಯಾರ ಕಾಲನ್ನಾದರೂ ಹಿಡಿದು, ತಾಲೂಕಿನಲ್ಲಿಯೇ ವರ್ಗವಾಗುವಂತೆ ಹೇಳಿಕೊ. ಅದು ಎಷ್ಟಕ್ಕೂ ಸಾಧ್ಯವಾಗದೆ ಹೋದರೆ, ಕೆಲಸಬಿಟ್ಟರೂ ಚಿಂತೆಯಿಲ್ಲ. ಎಲ್ಲಾದರೂ ಗೇಣಿಗೆ ನಾಲ್ಕು ಮುಡಿ ಗದ್ದೆ ಪಡೆದಾದರೂ ದಿನ ಕಳೆಯಬಹುದು" ಎಂದು ಉಪದೇಶ ಮಾಡಿದರು.

ಅಚ್ಯುತನಿಗೆ ತನ್ನ ವರ್ಚಸ್ಸಿನ ಮಿತಿ ತಿಳಿದಿತ್ತು. ತನ್ನ ಇದಿರಾಳಿ ನಾಗರಾಜನ ಪ್ರಭಾವವೂ ತಿಳಿದಿದೆ. ತಾನು ಯಾರನ್ನು ಬೇಡಿದರೂ, ತತ್ಕಾಲಕ್ಕೆ ಈ ಶಿಕ್ಷೆಯನ್ನು ಅನುಭವಿಸಲೇಬೇಕು. ಅವನಿಗೆ ಸಾಹಯ ಮಾಡುವವರಿದ್ದರೆ,ಅವರು ಇನ್ಸ್‌ಪೆಕ್ಟರ್ ಸದಾನಂದರಾಯರು. ಅವರಿಗೆ ಈಗ ಬಳ್ಳಾರಿಗೆ ವರ್ಗವಾಗಿದೆ. "ತನಗೆ ಶಂಕರನಾರಾಯಣವಾದರೇನು, ಇನ್ನೊಂದಾದರೇನು? ಕಡಬಕ್ಕಿಂತ ಯಾವ ಊರೂ ವಾಸಿಯೇ. ಅಲ್ಲಿ ಇಂಥ ಕನ್ನಡಿ ಹಾವುಗಳ ಎಡೆಯಲ್ಲಿ ಸಂಸಾರಮಾಡಿಕೊಂಡಿರಬೇಕಿಲ್ಲ" ಎಂದು ಆತ ತೀರ್ಮಾನಿಸಿದ. ಮಾವನ ಇನ್ನೊಂದು ಉಪದೇಶ ಅವನಿಗೆ ಹಿಡಿಯಲಿಲ್ಲ. ಮನೆಯಲ್ಲಿ ಸಾಗುವಳಿ ಮಾಡುತ್ತಿದ್ದಾಗಲೇ ಅವನು ಪಟ್ಟ ಕಷ್ಟಗಳು ಅವನಿಗೆ ತಿಳಿದಿವೆ. "ಇನ್ನು ಬೇಸಾಯದ ಸುಖಬೇಡ; ಸಾಲವಿಲ್ಲದೆ ಹೋದರೆ, ದೊರೆಯುವ ಇಪ್ಪತ್ತೈದು-ಇಪ್ಪತ್ತೆಂಟರಲ್ಲಿಯೇ ಜೀವನ ನಿರ್ವಹಿಸಿಯೇನು" ಎಂದು ನಿರ್ಧರಿಸಿ ಮಾವನಿಗೂ ತಿಳಿಸಿದ. ಅವರ ಅವಕೃಪೆಯನ್ನೂ ಗಳಿಸಿಕೊಂಡನು. ಪುಣ್ಯಕ್ಕೆ, ರುಕ್ಮಿಣಿಯು ಗಂಡನ ಅಭಿಪ್ರಾಯವನ್ನೇ ತಳೆದಿದ್ದಳು.

ಹೊರಡುವುದು ನಿಜವೆಂದಾದ ಬಳಿಕ, ಮನೆಮಾರಿನ ಚಿಂತೆ ಉಳಿಯಲಿಲ್ಲ. ನಾಲ್ಕು ದಿವಸ ಮುಂಚಿತವಾಗಿ ಊರು ಬಿಟ್ಟರಾಯಿತು. ಆದರೆ ಅವನಿಗೆ ತೀರ ತೊಡಕಿನ ಪ್ರಶ್ನೆಯಾದುದು, ತಾಯಿಯ ವಿಚಾರ. ಅವಳನ್ನು ಜತೆಗೆ ಕರೆದೊಯ್ಯಬೇಕೆಂಬ ಮನಸ್ಸು. ಆದರೆ ತಾಯಿ ಆ ದೂರದ ಊರಿಗೆ ಹೋಗಲೊಲ್ಲಳು. ಅವಳ ಮನಸ್ಸು ಮಗ ಮತ್ತು ಮಗಳ ಎಡೆಯಲ್ಲಿ ಪಾಲಾಗಿ ಹೋಗಿದೆ. ಕೊನೆಗೆ "ಮಗು, ಈಗಂತೂ ನಾನು ಸೀತೆಯನ್ನು ಬಿಟ್ಟಿರಬಾರದು. ನೋಡುವ, ಮುಂದಿನ ವರ್ಷ. ನೀನು ಹೋಗಿ ಏನುಮಾಡಿಕೊಂಡಿದ್ದೀಯೆಂದು ತಿಳಿಸು" ಎಂದಳು.

ಕೊಂಬಾರಿನ ಮನೆಯೆಂಬುದು ಅವರಿಗೀಗ ಸ್ಮರಣೆಗಳ ಸ್ಮಶಾನವಾಯಿತು. ಎಳೆತನದ ಹಲವು ಚೆಲುವಿನ ನೆನಹುಗಳ ಪಾಲಿನ ರುದ್ರಭೂಮಿಯಾಯಿತು. ಆ ನೆಲವನ್ನು ಬಿಡಬೇಕು; ನಂಬಿಸಿ ಕರೆತಂದ ಅಣ್ಣನನ್ನು ಬಿಡಬೇಕು. ಆ ಜಾನುವಾರುಗಳನ್ನು ಬಿಡಬೇಕು-ಎಂದು ಕಾಣುವಾಗ ಎಂಥ ವ್ಯಥೆಯಾಗಬೇಡ. ಅತ್ತ ಕಡಬದಲ್ಲೂ ಆಗಾಗ, "ತಾನೊಬ್ಬನೇ ಉಳಿದೆನಲ್ಲಾ" ಎಂದು ಜಾನ್‌ಸನರು ವ್ಯಥೆಪಡುವಂತಾಯಿತು. ಅವರು ಅಚ್ಚುತನ ವಿರಹವನ್ನು ತುಂಬ ಮನಸ್ಸಿಗೆ ತಂದುಕೊಂಡರು. ಈಗ ತನ್ನ ಎಡಗೈ; ಬಲಗೈಯಾದವರೆಲ್ಲರೂ ತೊಲಗಿದರು. ಎಲ್ಲವೂ ಈ ಹೆಮ್ಮೆಯ ಮುದ್ದೆ ನಾಗರಾಜನಿಂದಲೇ ಆಯಿತು-ಎಂಬುದನ್ನು ಬಲ್ಲರು. ಈಗ ಅವರ ಮುಖ್ಯ ಉಪಾಧ್ಯಾಯರೂ ಅವರ ವೈರಿಗಳೇ! ಅದನ್ನೆಲ್ಲ ಮನಸ್ಸಿನಲ್ಲಿ ತುಂಬ ನೆನೆದು, "ಅಚ್ಚುತರಾವ್, ನಿಮಗೆ ಒಂದಲ್ಲ, ಒಂದು ದಿವಸ ನಾನು ಒಳ್ಳೆಯ ಸುದ್ದಿ ತಂದೇನು. ಒಂದು ದಿನ ನಾಗರಾಜನ ಕಾಲು ಮುರಿದ ಸುದ್ದಿಯನ್ನು ತಿಳಿಸಿಯೇನು!" ಎಂದೂ ಸಿಟ್ಟಿನಿಂದ ಸಾರಿದರು. ಅವರ ಸೇಡಿನ ಹಂಬಲವನ್ನು ತಣಿಸಲು, ಆ ದಿನ ಅಚ್ಚುತ ಪಟ್ಟ ಪ್ರಯತ್ನಗಳೆಲ್ಲವೂ ವ್ಯರ್ಥವಾದುವು.

ಅಚ್ಚುತ ಪಂಜದಿಂದ ತಮ್ಮ ಮನೆಗೆ ಬಂದ ಎಂಟು ಹತ್ತು ದಿನಗಳಲ್ಲಿ, ತನ್ನ ಭವಿಷ್ಯಕ್ಕೆ ಮನಸ್ಸನ್ನು ಹೊಂದಿಸಿಕೊಳ್ಳತೊಡಗಿದ. ಊರಿಂದ ಹೊರಡುವ ಮೊದಲು ನಾರಾಯಣರಾಯರನ್ನೂ, ಮಾಮುಂಜಿಯನ್ನೂ ಒಮ್ಮೆಗೆ ಕರೆಯಿಸಿಕೊಳ್ಳಬೇಕೆಂದು ಕಂಡಿತು; ಅವರಿಗೆ ಬರಲು ಪತ್ರ ಬರೆದನು. ನಾರಾಯಣರಾಯರು ಕೊಂಬಾರಿಗೆ ಬಂದು ಹೋದರು. ಅಚ್ಚುತನಲ್ಲಿ ತುಂಬ ಧೈರ್ಯ ತುಂಬಿದರು. "ಬೆದರುತ್ತೀಯಾಕೆ? ನಾನೀಗ ಕುರ್ಚಿಪಳ್ಳದಲ್ಲಿಲ್ಲವೇ? ಐದು ಮಕ್ಕಳೂ ಹೆಂಡತಿಯೊಡನೆ ಇದ್ದುದರಲ್ಲಿ ಚೊಕ್ಕವಾದ ಜೀವನಮಾಡಿಕೊಂಡಿದ್ದೇನೆ. ನಿನಗಿನ್ನು ಸಾಲದ ಭೀತಿಯಿಲ್ಲವಲ್ಲ!" ಎಂದರು. ರುಕ್ಮಿಣಿಗೂ ಹುರುಪಿನ ಮಾತುಗಳನ್ನು ಹೇಳಿದರು. ಹಾಗೆಯೇ "ನೀವು ಅಲ್ಲಿಗೆ ಹೊರಡುವ ಮೊದಲೊಮ್ಮೆ ನಮ್ಮ ಮನೆಗೂ ಬಂದು ಹೋಗಿ" ಎಂದು ಮರು ಆಮಂತ್ರಣವಿತ್ತು ಹೊರಟು ಹೋದರು. ಅವರು ಬಂದುದರಿಂದ

ಅಚ್ಯುತನ ಒಡಲು ಎಷ್ಟೋ ಹಗುರವಾಯಿತು. ಶಂಕರನಾರಾಯಣದ ಊರು ಶಹರಲ್ಲ, ಪಟ್ಟಣವಲ್ಲ. ಕಡಬಡಂಥ ಹಳ್ಳಿ; ಅಲ್ಲಿದ್ದರೆ ಜೀವನ ಅಗ್ಗವಾಗಿ ನಡೆದೀತು— ಎಂದು ಒಂದು ಬಗೆಯಿಂದ ಅಚ್ಯುತ ಸಮಾಧಾನ ತಂದುಕೊಂಡ.

ಇನ್ನೊಂದು ದಿನ ಅವನಿಗೆ ಮಾಮುಂಜಿಯ ಭೇಟಿಯಾಯಿತು. ಆತನು ತೀರ ವ್ಯಥೆಗೊಂಡು ಬಂದಿದ್ದ. "ಅಚ್ಯುತ, ನಾನು ಆ ದಿನ ಊರಲ್ಲಿರದೆ ಹೋಗಬೇಕೆ? ನಿಮ್ಮ ಭೂಮಿಯನ್ನು ಅವರಿಗೆ ಆರು ವಾರು ಮಾಡದಂತೆ ನೋಡಬಹುದಿತ್ತು. ಸಾಹುಕಾರರ ಬಡ್ಡಿಯನ್ನು ಒಮ್ಮೆಗೆ ತೀರಿಸಬಹುದಿತ್ತು. ಹೂಂ, ಕೆಟ್ಟ ಮೇಲೆ ಮಾತಾಡಿ ಪ್ರಯೋಜನವೇನು? ಎಷ್ಟುವರ್ಷಕ್ಕೆ ಭೋಗ್ಯಮಾಡಿಕೊಟ್ಟದ್ದು" ಎಂದು ಕೇಳುತ್ತಲೇ, "ಎಂಟು ವರ್ಷಕ್ಕೆ, ಆ ಮೇಲೆ ಬಿಡಿಸಿಕೊಳ್ಳಬೇಕೆಂದು ಕರಾರು" ಎಂದು ಆತ ತಿಳಿಸಿದ. "ನೋಡುವ ಅಚ್ಯುತ, ನಾನು ಬದುಕಿ ಉಳಿದರೆ ಆ ವಾಯಿದೆಯೊಳಗೆ ಏನಾದರೂ ಒಂದು ಸಹಾಯ ಮಾಡಿಯೇನು! ನಿನಗೆ ಆಸ್ತಿ ಹೋದದ್ದೇ ಶಾಸನವಾಗಿರುವಾಗ, ಅದರ ಜತೆಗೆ ಅಂದ ಮಾನಕ್ಕೆ ಗಡೀಪಾರು ಮಾಡಿವರಲ್ಲ; ಅದು ದೊಡ್ಡದು. ಎಲ್ಲಿಂದೆಲ್ಲಿಗೆ ವರ್ಗಾವರ್ಗಿ? ಹೋಗುವುದಕ್ಕೇನೆ ಇಪ್ಪತ್ತು ಇಪ್ಪತ್ತೈದು ರೂಪಾಯಿ ಬೇಕಾದೀತು. ಮಕ್ಕಳು, ಮರಿ ಎಲ್ಲರನ್ನು ಕರೆದುಕೊಂಡು ಹೋಗಬೇಡವೇ?" ಎಂದನು. ಎರಡು ದಿವಸ ಅವನು ಅಚ್ಯುತನ ಮನೆಯಲ್ಲಿ ಕಳೆದನು. ಕೊನೆಗೆ ಹೊರಡುವಾಗ, "ಕಾಗದವನ್ನಾದರೂ ಬರೆಯುತ್ತಿರು. ಸಾಧ್ಯವಾದರೆ ಈ ಕಡೆಗೆ ತಿರುಗಿ ವರ್ಗಾಯಿಸಿಕೋ! ಕೊನೆಗೆ ಮಂಗಳೂರಿನ ಈಚೆ ಎಲ್ಲಿಗೆ ವರ್ಗವಾದರೂ, ನಿನ್ನನ್ನು ಆಗಾಗ ಬಂದು ನೋಡಬಹುದು" ಎಂದನು.

ಇನ್ನು ಬರಿಯ ಹತ್ತು ದಿನ ಮಾತ್ರ ಉಳಿದುವು. ಮೇ ತಿಂಗಳು ಮುಗಿದು, ಬಸ್ಸು ಸರ್ವಿಸು ನಿಲ್ಲುವುದರೊಳಗೆ ಬಿಡಾರ ಸಾಗಿಸಬೇಕು. ಅದರೊಳಗೆ ಮನೆಯನ್ನು ಆತ ಬರಿದು ಮಾಡಬೇಕು. ಅದಕ್ಕೆ ಮೊದಲೇ ಅಣ್ಣುವನ್ನು ಕಳುಹಿಸಿ, ಮಾಮುಂಜಿಯ ಸಹಾಯದಿಂದ, ತಮ್ಮ ಭೂಮಿಯನ್ನು ಅಣ್ಣುವಿಗೇ ಗೇಣಿಗೆ ಕೊಡಿಸಿದ್ದ. ಅದನ್ನೆಲ್ಲ ಅಣ್ಣುವೊಬ್ಬನೇ ಸಾಗುವಳಿ ಮಾಡಲು ಅನುಕೂಲವಿಲ್ಲದುದರಿಂದ, ಇನ್ನು

ರಿಗೋ ಒಳಗೇಣಿಗೆ ಕೊಡುವ ಏರ್ಪಾಡಾಗಿತ್ತು. ಈಗ ಮನೆಯ ಜಾನುವಾರುಗಳ ವಿಚಾರ ಬಂತು.....ಕೆಲವನ್ನು ಸಂಜಕ್ಕೆ ಕಳುಹಿಸಿದ. ರುಕ್ಮಿಣಿಯ ಸಲುವಾಗಿ ತಾನು ಕ್ರಯಕ್ಕೆಕೊಂಡ ಹಸುವನ್ನು ಬೀಳ್ಕೊಡುವುದು ಕಷ್ಟವಾಯಿತು. ಅದೂ ಈಗ ಗಬ್ಬವಾಗಿದೆ. ಆದರೆ ಅದನ್ನು ಶಂಕರನಾರಾಯಣದಂಥ ಉತ್ತರ ಧ್ರುವಕ್ಕೆ ಸಾಗಿಸಲು ಬಂದೀತೆ? ಅದು ಸೀತೆಯ ಮನೆಗೆ ಹೋಯಿತು. ಉಳಿದೆರಡು ಜತೆ ಕೋಣಗಳಲ್ಲಿ ಒಂದನ್ನು ಅಣ್ಣುಗೌಡನಿಗೇನೆ ಬೆಲೆಗೆ ಕೊಟ್ಟನು. ಇನ್ನೊಂದು ಜತೆಯನ್ನು ಅವನಿಗೆ ದಾನವಾಗಿ ಕೊಟ್ಟನು. ಮನೆಯ ಹಳೆಯ ಚಂಬು ಚರಿಗೆಗಳನ್ನು ಒಯ್ಯುವುದು ಕಷ್ಟವಾದುದರಿಂದ, ಅವನು ಸಂಜಕ್ಕೆ ಸಾಗಿಸಿದನು. ತನ್ನ ಜತೆಗೆ, ತೀರ ಅವಶ್ಯವಾದ ಹತ್ತೆಂಟು ಚಿಕ್ಕ ಪುಟ್ಟ, ವಸ್ತು ಒಡವೆಗಳನ್ನು ಸಾಗಿಸುವುದೆಂದು ತೀರ್ಮಾನಮಾಡಿದ.

ಊರನ್ನು ಬಿಡುವ ದಿನವೂ ಬಂದಿತು. ಅದಕ್ಕೆ ಎರಡು ದಿನಗಳ ಮುಂಚಿತವಾಗಿ, ಲಕ್ಷ್ಮಮ್ಮ ಕೊಂಬಾರನ್ನು ಸೇರಿದಳು. ಮನೆಯ ಕಂಬ, ಜಗುಲಿ, ದನ, ಜನಗಳನ್ನು ಕಂಡು ಭಾರವಾದ ಮನಸ್ಸಿನಿಂದ ನಿಡುಸುಯ್ದಳು. ಒಂದೊಂದು ಒಡವೆಯ ನೆನಪೂ ಒಂದೊಂದು ಬಾರಿ ಅವಳ ಕಣ್ಣೀರನ್ನು ಕರೆಯಿಸುತ್ತಿತ್ತು. ಹೊರಡುವ ದಿನ ಬರಲು, ಅದೊಂದು ಸೂತಕದ ಮನೆಯೇ ಆಯಿತು. ಆ ಮಧ್ಯಾಹ್ನ ಅಚ್ಯುತರಾಯ ನೇರಾಗಿ ಮಂಗಳೂರಿಗೆ ಪಯಣಮಾಡುವವ. ಮನೆಗೆ ಅಣ್ಣು, ಕಾಳ, ಸುಬ್ಬಿ ಎಲ್ಲರೂ ಬಂದಿದ್ದಾರೆ. ದೂಮನೂ ಅವನ ಮನೆಯವರೂ ಬೆಳಗಿಂದ ಅವರ ಮನೆಯ ಅಂಗಳವನ್ನು ಬಿಟ್ಟು ಕದಲಲಿಲ್ಲ. ಸುಬ್ಬಿಯು ತನ್ನ ತಿಂಗಳ ಕೂಸನ್ನು ಎತ್ತಿಕೊಂಡು ಬಂದು, ಚಾವಡಿಯ ಬಳಿ ಕುಳಿತಿದ್ದಾಳೆ. ಕೆಂಪಗಿನ ಕೂಸು! ರುಕ್ಮಿಣಿ ಅದರ ಬಳಿಗೆಹೋಗಿ ಇದು "ಗಂಡನ ಹಾಗಲ್ಲ. ಅದು ನಿನ್ನ ಹಾಗೆಯೇ ಇದೆ" ಎಂದಳು. "ಯಾರ ಹಾಗಿದ್ದರೇನು! ನೀವೆಲ್ಲ ಕೈಬಿಟ್ಟು ಹೋದ ಮೇಲೆ" ಎಂದಳು ಆಕೆ. ಅಣ್ಣು, ಆ ದಿನ ಶಿಶುವಿಗೂ ಕಿರಿದಾಗಿ ಅತ್ತುಬಿಟ್ಟ. ಅಚ್ಯುತ ಸುಬ್ಬಿಯ ಮುಖವನ್ನು ಕಾಣಲಿಲ್ಲ; ಕಾಣುವ ಧೈರ್ಯವೂ ಬರಲಿಲ್ಲ. ಬದಲು ತಾನು, ಈ ಒಂದು ವ್ಯಾಮೋಹದಿಂದಲಾದರೂ ಪಾರಾಗುತ್ತೇನಲ್ಲ ಎನ್ನಿಸಿತು. ಆಳುಗಳೆಲ್ಲ ಅವರ ನಾಲ್ಕಾರು ಹೊರೆ ಒಡವೆಗಳನ್ನು

ರಸ್ತೆಯ ಮಗ್ಗುಲಿಗೆ ಹೊತ್ತು ಮುಟ್ಟಿಸಿದರು. "ಇನ್ನು ಹೊರಡುವ" ಎಂದು ಎಲ್ಲರೂ ಎದ್ದು ನಿಂತರು. ಲಕ್ಷ್ಮಮ್ಮ ಗಂಡನ ಕೊನೆಗಾಲದಲ್ಲೂ ಅಷ್ಟು ಕಂಬನಿ ಕರೆದಿರಲಾರಳು. ಒತ್ತಿದ ಕೊರಳಿಂದ, "ಅಣ್ಣು, ನೆಲದ ಋಣ, ನೀರಿನ ಋಣಗಳನ್ನೆಲ್ಲ ಬರೆಯುವುದು ಬ್ರಹ್ಮ" ಎಂದು ಹೊರಟಳು. ಅಣ್ಣು ಅವರನ್ನು ಹಿಂಬಾಲಿಸುತ್ತ "ಅಮ್ಮ, ಹುಟ್ಟಿಸಿದ ದೈವವೇ ಕಾಡುವಾಗ ಮನುಷ್ಯರೇನು ಮಾಡಿಯಾರು?" ಎಂದು ಒಡತಿಗೆ ಸಮಾಧಾನತರಲೆತ್ನಿಸಿದ.

ಆ ಯಾತ್ರಿಕರ ಸಾಲು ಹೊರಟಿತು. ಸಾಲಿನ ಹಿಂದೆ ಸುಬ್ಬಿಯೂ ಇದ್ದಳು. ಬಸ್ಸು ಬಂದಿತು. ಇನ್ನೊಮ್ಮೆ ಕಣ್ಣೀರಿನ ಸಂಧಾನವಾಯಿತು. ಹೊರಡುವವರು ಕುಳಿತು, ಬಸ್ಸು ಹೊರಟೂ ಹೋಯಿತು. ಲಕ್ಷ್ಮಮ್ಮ ತಿರುಗಿ ನೋಡುತ್ತಾಳೆ; ಸುಬ್ಬಿಯು ನಿಂತು ತುಂಬ ರೋದಿಸುತ್ತಿದ್ದಾಳೆ. "ನಿಂಗೇನು ಮಗು, ಈ ಪುಟ್ಟಕೂಸನ್ನು ಹಿಡಿದು ಇಲ್ಲಿಯ ತನಕ ಯಾಕೆ ಬಂದೆ? ಏನೋ ಋಣ ಇರುವಷ್ಟು ದಿನ ಊರಲ್ಲಿದ್ದೆವು. ಅದು ಹರಿದ ಮೇಲೆ ಅತ್ತು ಪ್ರಯೋಜನವೇನು? ನೀವು ಬೊಗ್ಗಾಡಿ ಬಿಟ್ಟು ಇಲ್ಲಿಗೆ ಬರಲಿಲ್ಲವೇ?" ಎಂದಳು. ಅಣ್ಣುಗೌಡ ಮೊಮ್ಮಗಳನ್ನು ಮನೆಗೆ ಕಳುಹಿಸಿದ; ಕಾಳನೂ ಹೊರಟ. ದೂಮು, ಮತ್ತಿಬ್ಬರು ಆಳುಗಳೂ ಹಿಂದಿರುಗಿದರು. "ಅಮ್ಮ ನೀವೀಗ ಪಂಜಕ್ಕಲ್ಲವೇ? ನಾನು ಬಂದು ಮುಟ್ಟಿಸಿ ಹೋಗುತ್ತೇನೆ" ಎಂದ. ಲಕ್ಷ್ಮಮ್ಮ ತಲೆತಗ್ಗಿಸಿ, ಮಾತು ಮರೆತು, ಗುಡ್ಡ ತೆವರುಗಳನ್ನು ಏರುತ್ತ ಇಳಿಯುತ್ತ ಮುಸ್ಸಂಜೆಗೆ, ಮಗಳ ಮನೆಯನ್ನು ಸೇರಿದಳು. ಅವಳಷ್ಟೇ ಮೂಕನಾದ, ಅಣ್ಣುಗೌಡ ಪಂಜದ ತನಕ ಅವಳನ್ನು ಕಳುಹಿಸಿಕೊಟ್ಟ.

ಇತ್ತ, ಬಸ್ಸು, ಅಚ್ಯುತನ ಕುಟುಂಬವನ್ನೂ, ಅವನ ಸುಖದುಃಖಗಳನ್ನೂ ಹೊತ್ತು ಮುಂದುವರಿಯಿತು. ಹಿಂದಣ ಜನರ ಕಣ್ಣಿಗೆ ಅವರ ಗೋಳು ಕಾಣಿಸದಂತೆ, ಧೂಳಿನ ತೆರೆಯನ್ನು ಮರದೆತ್ತರಕ್ಕೆ ಅದು ಹಾರಿಸುತ್ತ ಹೋಯಿತು! ಬಸ್ಸು ಕಡಬದಲ್ಲಿ ನಿಂತಾಗ ಅಲ್ಲಿ ಜಾನ್‌ಸನ್ ದಂಪತಿಗಳು ಅವರನ್ನು ಕಾದಿದ್ದರು! ಹೊಟೇಲಿನ ಕುಡುಮತ್ತಾಯರು "ಮಕ್ಕಳಿಗೆ ಹಾಲಿರಲಿ"-ಎಂದು ಹಾಲು ಹಿಡಿದು ನಿಂತಿದ್ದರು. ಜಾನ್‌ಸನ್ ಮಾಸ್ತರರು, ಗೆಳೆಯನಿಗೆ ಹಾರಹಾಕಿ ನಿಂತರು. ಬಾಯಿಂದ ಮಾತು ಬರ

ಲಿಲ್ಲ; ಬದಲು ಕಣ್ಣೀರು ತುಂಬಿ ಹರಿಯಿತು. ಬಸ್ಸು ಹೊರಡುವಾಗ-"ಮರೆಯಬಾರದು" ಎಂದರು. ಆ ಸ್ನೇಹ ಮರೆಯಲು ಬಂದೀತೇ!

ತಿರುಗಿ ಬಸ್ಸು ಹೊರಟಿತು. ರಸ್ತೆ, ಹೊಳೆಗಳನ್ನು ಹಾಯ್ದು ಎರಡು ತಾಸಿನೊಳಗಾಗಿ ಅದು ಉಪ್ಪಿನಂಗಡಿ ಊರನ್ನು ಸೇರಿತು. ಅಲ್ಲಿಯೂ ಕಣ್ಣೀರಿನ ಸಂಗಮವಾಯಿತು. ಅವನ ಬರವನ್ನು ಮಾಮುಂಜಿ ಕಾದಿದ್ದ. ಮಕ್ಕಳಿಗೆ ಪೆಪ್ಪರಮಿಂಟು, ಕಿತ್ತಳೆ ಹಣ್ಣುಗಳನ್ನು ಹಿಡಿದುಕೊಂಡು ನಿಂತಿದ್ದ. ಯಾರು ಏನು ಮಾತನಾಡಬಲ್ಲ ಗಳಿಗೆಯದು! ಬಸ್ಸು ತಿರುಗಿ ಮುಂದುವರಿಯಿತು. ಅವರೆಲ್ಲರೂ ಸಂಜೆಯೇ ಮಂಗಳೂರನ್ನು ಸೇರಿಕೊಂಡರು. ಅಲ್ಲಿ ಯಾವುದೋ ಒಂದು ಹೊಟೇಲಿಗೆ ಹೋಗಿ, ವಸತಿ ಮಾಡಿದರು. ಒಮ್ಮೆಗೆ ಹಳೆಯ ನೆನಪಿನ ರಾಜ್ಯವು ಮರೆಯಾಯಿತು. ಇನ್ನು 'ನಾಳೆಯೇ ಶಂಕರನಾರಾಯಣಕ್ಕೆ ಹೋಗೋಣ'ವೆಂದು ನಿರ್ಣಯಿಸಿದರು. "ಮಂಗಳೂರನ್ನು ನೋಡಬೇಕಾದರೆ, ಒಂದು ದಿನ ನಿಲ್ಲುವ ರುಕ್ಮಿಣಿ. ಅಲ್ಲದೆ, ನಾರಾಯಣ ಮಾಸ್ತರರನ್ನು ಕುರ್ಚಿಪಳ್ಳಕ್ಕೆ ಹೋಗಿ ನೋಡಿಬರಬಹುದು. ರೈಲು ಕಂಡಿಲ್ಲ ನೀನು. ಕಂಡ ಹಾಗೂ ಆಯಿತು" ಎಂದು ಹೇಳಿದನು. "ಯಾವುದನ್ನೂ ಕಾಣಬೇಕಿಲ್ಲ; ಇಷ್ಟೇ ಸಾಕು ಕಂಡದ್ದು. ಇನ್ನು ಕಾಣುವುದೆಷ್ಟಿದೆಯೋ" ಎಂದಳು ಆಕೆ. ರಾತ್ರಿ ಮಲಗಿಕೊಂಡರೂ ಅವರಿಗೆ ನಿದ್ರೆ ಬರಲಿಲ್ಲ. ಬೆಳಗಿನ ನಸುಕಿಗೆ ಎದ್ದು, ಮೊದಲಿನ ಬಸ್ಸನ್ನೇರಿದರು. ತಿರುಗಿ ಮೈಮರೆತವರಂತೆ ಮೂಕರಾಗಿ, ಮೋರೆಗಳನ್ನು ಸಣ್ಣಗೆ ಮಾಡಿಕೊಂಡು ಕುಳಿತರು. ನದಿ ಬಂದಲ್ಲಿ ಇಳಿಯುವುದು, ಮುಂದೆ ನದಿ ದಾಟಿ ತಿರುಗಿ ಬಸ್ಸನ್ನೇರುವುದು; ಮಗು ಕೃಷ್ಣ ಕೂಗಿದರೆ, ಬಸ್ಸು ನಿಂತಾಗ ಅವನಿಗೇನಾದರೂ ಬಾಳೆಯಹಣ್ಣನ್ನೋ, ಬಿಸ್ಕಿಟನ್ನೋ ಕೊಡಿಸುವುದು-ಅಷ್ಟೇ ಅವರ ಕೆಲಸ. ಅಲ್ಲದೆ ದಂಪತಿಗಳೀರ್ವರೂ ಯಾವ ತಿನಿಸನ್ನೂ ಮುಟ್ಟಲಿಲ್ಲ.

ಆ ದಿನ ಎರಡು ಘಂಟೆಯ ಉರಿ ಬಿಸಿಲಿಗೆ ಅವರು ಕುಂದಾಪುರವನ್ನು ಸೇರಿದರು. ಅಲ್ಲಿ ಮಕ್ಕಳಿಗಷ್ಟು ತಿಂಡಿತೀರ್ಥ ಕೊಡಿಸಿದರು. ಇನ್ನೊಂದು ತಾಸಿನಲ್ಲಿ ಶಂಕರನಾರಾಯಣಕ್ಕೆ ಹೊರಡುವ ಬಸ್ಸಿದ್ದುದರಿಂದ ಒಡನೆಯೇ ಪಯಣ ಮುಂದುವರಿಸಿದರು. ಹೊತ್ತು ಮುಳುಗುವ ಮೊದಲೇ ಅವರ ಪರಿವಾರ, ಶಂಕರನಾರಾಯಣ ಪೇಟೆಯಲ್ಲಿ ಇಳಿ

ಯಿತು. ಅಚ್ಯುತ ಆ ಚರಿತ್ರಾರ್ಹವಾದ ಸ್ಥಳವನ್ನು ಕುರಿತು ಓದಿದ್ದ; ಕೇಳಿದ್ದ. ಆದರೆ ಈ ದಿನ ಬರುವೆನೆಂದು ಯಾರಿಗೂ ಬರೆದಿರಲಿಲ್ಲ. ಶಾಲೆಗೆ ಇನ್ನೂ ನಾಲ್ಕು ದಿನ ರಜೆಯಿತ್ತು. ಈತನಿಗೆ ತಾನು ಎಲ್ಲಿ ಇಳಿದು ಕೊಳ್ಳಬೇಕೆಂಬುದು ಗೊತ್ತಿರಲಿಲ್ಲ. ನೆಟ್ಟಗೆ-ಊರಲ್ಲಿ ಒಂದು ಛತ್ರವಿದೆ ಯೆಂದು ಕೇಳಿ ಅಲ್ಲಿಗೆ ಹೋದನು. ಛತ್ರದಲ್ಲಿ ಊಟ ಸಿಕ್ಕಿತು. ಇರಲು ತಾವೂ ಅನುಕೂಲವಾಗಿತ್ತು. ಆದರೆ, ಊರಲ್ಲಿ ಜನಗಳ ಸುಳಿದಾಟ ಕಾಣಿಸಿಗುವುದು ತೀರ ದುರ್ಲಭ. ಛತ್ರದ ಬಳಿಯೇ ಹತ್ತೆಂಟು ಬ್ರಾಹ್ಮಣರ ಮನೆಗಳಿದ್ದುವು. ಅವರೆಲ್ಲರಿಗೂ, ತಮ್ಮಂತೆ ಮಾತಾಡುವುದೇ ಮರವೆಯಾಗಿದ್ದಂತೆ ಕಾಣಿಸಿತು.

ಅಂತು, ಎರಡು ಮೂರು ದಿನಗಳೊಳಗಾಗಿ, ಒಂದು ಹಾಳು ಮನೆಯನ್ನು ಗೊತ್ತುಮಾಡಿಕೊಂಡು ಒಕ್ಕಲಾದರು. ಮಳೆ ಎಂದೂ ಬೀಳಬಹುದು ಎಂಬ ಬೆದರಿಕೆಯಿತ್ತು. ಅದರಿಂದ, ಕಟ್ಟಿಗೆ ಸಂಪಾದನೆ ಮಾಡಬೇಕಿತ್ತು. ತಾವೇ ಅದನ್ನು ಕೂಡಿಸುವುದು ಅದಕ್ಕೆ ಸುಲಭೋಪಾಯವೆಂದು ತಿಳಿದರು. ಶಾಲೆ ತೊಡಗುವ ಮುಂಚಿನ ದಿನ, ಮುಖ್ಯ ಉಪಾಧ್ಯಾಯರೂ ಬಂದರು. ಅವರು ಬಾರಕೂರಿನವರು. ಅವರ ಮನೆಗೆ ಬರಿಯ ಹದಿನಾರು ಹದಿನೆಂಟು ಮೈಲಿನಷ್ಟು ಸಮೀಪವಿದ್ದರೂ, ಅವರು ಈ ಊರನ್ನು ಜೈಲೆಂದೇ ತಿಳಿದಿದ್ದರು. ಮರುದಿನ ಅವರು ಶಾಲೆಯಲ್ಲಿ "ಹೊಸ ಮಾಸ್ತರರು ಬಂದಿದ್ದಾರೋ?" ಎಂದು ಕೇಳುವಾಗ, ಅಚ್ಯುತನ ಸವಾರಿ ಶಾಲೆಗೆ ಕಾಲಿರಿಸಿತು. ಅವರಲ್ಲಿ ಪರಸ್ಪರ ಭೇಟಿಯಾಯಿತು. ನಮಸ್ಕಾರವಾಯಿತು. "ಎಂದು ಬಂದಿದ್ದೀರಿ? ಎಲ್ಲಿ ಮನೆಮಾಡಿದಿರಿ? ಮಳೆಗಾಲದ ತಯಾರಿ ಏನೇನು ಮಾಡಿಕೊಂಡಿದ್ದೀರಿ" ಎಂಬ ಉಪಚಾರದ ಮಾತುಗಳಾದುವು. ಜಿಲ್ಲೆಯ ನಕ್ಷೆಯನ್ನು ತರಿಸಿಕೊಂಡು, 'ಕೊಂಬಾರು ಎಲ್ಲಿದೆ' ಎಂದು ಕೇಳಿ, ಗುರುತಿಸಿದರು. "ಚಿಂತೆಯಿಲ್ಲ; ದಕ್ಷಿಣ ಧ್ರುವದಿಂದ ಉತ್ತರ ಧ್ರುವಕ್ಕೆ ವರ್ಗಮಾಡಿದ್ದಾರೆ ನಿಮ್ಮನ್ನು. ರಾಜ್ಯಭಾರ ಹೀಗಿದ್ದರೆ, ಬಡವರಿಗೊಂದು ಸಹಾಯ" ಎಂದರು ಆ ಮುಖ್ಯ ಉಪಾಧ್ಯಾಯರು.

ಆ ಊರಿನಲ್ಲಿ ಅಚ್ಯುತನಿಗೆ, ಅವನಂತೆಯೇ ನಾಲ್ಕಾರು ಮಂದಿ ಬಡಪಾಯಿ ಉಪಾಧ್ಯಾಯರ ನೆರವು, ಸಹಾನುಭೂತಿ ದೊರೆಯಿತು.

"ಅಚ್ಯುತ ಮಾಸ್ತರರೇ, ನೀವು ವಿದ್ವಾನ್ ಆದವರು. ಇವತ್ತಲ್ಲ ನಾಳೆಗೆ ಯಾವುದಾದರೂ ಒಂದು ಹೈಸ್ಕೂಲು ಸೇರಬಹುದು. ನಮ್ಮ ಹಾಗಲ್ಲ ನೀವು"-ಎಂದು ಇವರ ವಿಷಯದಲ್ಲಿ ಅವರ ಅಭಿಮಾನವಿತ್ತು. "ಆದರೆ ಈ ಊರು, ಒಂದಕ್ಕೆ ಒಳ್ಳೆಯದು; ಇಲ್ಲಿ ಹೆಚ್ಚಿನ ಖರ್ಚುವೆಚ್ಚ ಇಲ್ಲ. ಅಂದರೆ ಖರ್ಚಿಗೆ ಇಲ್ಲಿ ದಾರಿಯೇ ಇಲ್ಲ. ನಟ್ಟು ಬೆಳೆಯಿಸಿದರೆ ತರಕಾರಿ! ನೀವು ಮಳೆಗಾಲಕ್ಕೆ ಬಚಾಯಿಸಬೇಕೆಂದಿದ್ದರೆ, ಒಂದಿಷ್ಟು ಉಪ್ಪಿನಕಾಯಿ, ಅಡುಗಾಯಿ ಹಾಕಿ ಇರಿಸಿಕೊಳ್ಳಿ. ಗರ್ಜ, ಹೆಬ್ಬಲಸುಗಳು ಕಾಸು ಕೊಡದೆ ಎಷ್ಟು ಬೇಕೋ ಅಷ್ಟು ಸಿಕ್ಕುತ್ತವೆ. ಹಾಗೆ ಹಲಸಿನ ಕಡಿಗೆಗೂ ಅಭಾವವಿಲ್ಲ. ಅವನ್ನೇ ತಿರುಗಿಸಿ, ತಿಗುಗಿಸಿ. ಪಲ್ಯ ಹುಳಿ ಮಾಡಿದರಾಯಿತು" ಎಂದು ಸಲಹೆಯಿತ್ತರು. ಅಚ್ಯುತನಿಗೆ, ಬಂದ ಕೆಲವು ದಿನ, ಬಿಡಾರದ ಅಸ್ತಿವಾರ ಹಾಕುವುದೇ ಕೆಲಸವಾಯಿತು. ಮಕ್ಕಳು ಹಾಲಿಲ್ಲದೆ ಸೊರಗಬಾರದೆಂದು, ಮನೆಯ ಜಾನುವಾರು ಮಾರಿ ಪಡೆದ ಹಣದಿಂದ, ಒಂದು ಎಮ್ಮೆಯನ್ನಾಗಲೀ ದನವನ್ನಾಗಲೀ ತೆಗೆದುಕೊಳ್ಳಬೇಕೆಂದು ಹುಡುಕಾಡಿದನು. "ಎಮ್ಮೆಯನ್ನು ಸಾಕಿ ಪೂರೈಸೀತೇ?" ಎಂದರು ಆಚೀಚಿನವರು. ಹಾಲು ಹೆಚ್ಚಾದರೆ ಮಾರಬಹುದಲ್ಲ, ಒಳ್ಳೆಯ ಎಮ್ಮೆ ಕೊಂಡರಾಯಿತು" ಎಂದ ಅಚ್ಯುತ. "ಮಾರುವುದು ಯಾರಿಗೆ? ಇಲ್ಲಿರುವ ಒಂದೂವರೆ ಕಾಫಿ ಹೊಟೇಲಿನವರು, ಅವರ ಹಾಲನ್ನು ಅವರೇ ಮಾಡಿಕೊಳ್ಳುತ್ತಾರೆ" ಎಂದರು ನೆರೆಕರೆಯವರು. ಆದುದರಿಂದ ದನವನ್ನು ಕೊಳ್ಳಲೇ ಎಂದು ಯೋಚಿಸಿದರೆ, ಅಲ್ಲಿನ ಕಾಮಧೇನುಗಳು ಎರಡು ಸಿದ್ದೆ, ಒಂದೂವರೆ ಸಿದ್ದೆ ಹಾಲು ಕೊಟ್ಟರೇನೆ ಮಹಾ ಭಾಗ್ಯವೆಂದು ಜನ ತಿಳಿದಿದ್ದರು. ಆದರೂ ಮಳೆ ಬೀಳದೆ ಇದ್ದುದರಿಂದ, ಎಮ್ಮೆ ಹುಡುಕುವುದೆಂದು ಯೋಚಿಸಿದನು. ಎಮ್ಮೆ ಬರುವ ಮುಂಚೆ, ಹುಲ್ಲನ್ನು ಕೊಂಡಿರಿಸಿದನು. ದನ ಕೊಂಡರೆ, ಮೇಯಲು ಹೋದದ್ದು ಮನೆಗೆ ಬಾರದೆ ಹುಲಿಗಳ ಬಾಯಿಗೆ ಬೀಳುವುದುಂಟು ಎಂದು ಕೇಳಿ ಆ ಯೋಚನೆ ಬಿಟ್ಟನು.

ಲೆಕ್ಕ ಬರೆದಿರಿಸಿದಂತೆ ಜೂನ್ ಏಳನೇ ತಾರೀಕಿಗೇನೆ ಮಳೆ ಬಡಿಯಿತು. ಒಂದೇ ಒಂದು ದಿನ ಹೆಚ್ಚುಕಡಿಮೆಯಾದರೆ, ಮಳೆಗಾಲದ ಸಂಗ್ರಹ ಅಯಿಲಾಗುತ್ತಿತ್ತು. ಅವರ ಶಾಲೆ ತೊಡಗಿಯಾಗಿತ್ತು. ಅಚ್ಯು

ತನ ಜೀವನ— ಮನೆ, ಶಾಲೆಗಳ ನಡುವೆ ಸಾಗಿತು. ಯಾವ ಹಾಳು ಹರಟೆಗಳಿಲ್ಲದ ಊರು! ಮನಸ್ಸಿನ ಯಾವ ಅಡ್ಡ ಸೆಳೆತಗಳೂ ಅಲ್ಲಿಲ್ಲ. ಹಳೆಯ ನೆನಹನ್ನು ಮರೆಯಲು ಶಕ್ಯನಾದರೆ, "ನಾನು ಈ ಊರಲ್ಲಿ ಹೊಸ ಮನುಷ್ಯನೇ ಆಗಬಲ್ಲೆ" ಎಂದು ಅಚ್ಯುತಗೆ ಧೈರ್ಯವಾಯಿತು. ಅದರಿಂದ ಅವನ ಮನಸ್ಸಿಗೂ ನೆಮ್ಮದಿಯಾಯಿತು.

ಅವನಿಗೆ ಈಗೇನು ಕೆಲಸ? ಸಮಯ ಅವನ ಮುಂದೆ ಕುಣಿದಾಡುತ್ತದೆ. ದಿನನಿತ್ಯ ಆರಾರು ಮೈಲು ಓಡಬೇಕಿಲ್ಲ. ಒಂದು ಕೂಗಿನಷ್ಟು ದೂರಕ್ಕೆ ಶಾಲೆಯಿದೆ; ಕೆಲಸವಿಲ್ಲದೆ ಬೇಸರ ಬಂದರೂ ಬಂದೀತು. ಮನೆಯಲ್ಲಿ ರುಕ್ಮಿಣಿ ದಿನೇ ದಿನೇ, ತನ್ನ ಹೊಸ ಆವರಣವನ್ನು ಹೊಂದಿಕೆಗೆ ತರಲು ಯತ್ನಿಸುತ್ತಿದ್ದಾಳೆ. ಮನೆಯಿದೆ; ಮಕ್ಕಳಿವೆ- ಕೆಲಸ ಕಡಿಮೆಯಾದರೆ, ಹೊಸತಾಗಿ ಕೊಂಡ ಅವರ ಎಮ್ಮೆ ಎಷ್ಟು ಉಪಚಾರಕ್ಕೂ ಒಲ್ಲೆ ಎನ್ನುವುದಿಲ್ಲ. ಅದಕ್ಕೆ ಹಾಲು ತಕ್ಕಮಟ್ಟಿಗೆ ಇದೆ. ಅವರ ವೆಚ್ಚಕ್ಕೆ ಸಾಕು. ಮಾರಾಟಕ್ಕೆ ಸಿಗುವಂತಿರಲಿಲ್ಲ. ಅದಕ್ಕೆ ಸಮನಾದ ಮೇವು ಹಾಕಬೇಡವೇ? ಅಲ್ಲದೆ ಸ್ವದೇಶದ ಎಮ್ಮೆಯಾದುದರಿಂದ, ಮೊದಲು ಮೊದಲು ಹಳೆಯ ಒಡೆಯನ ಮನೆಗೆ ಪ್ರತಿ ಸಂಜೆ ಹೋಗುತ್ತಿದ್ದರೂ, ಈಗೀಗ ರುಕ್ಮಿಣಿಯ ಉಪಚಾರದಿಂದ ಅವಳ ಗೆಳೆತನವನ್ನು ಬೆಳೆಸಿದೆ. ಬೆಳಗ್ಗೆ ಗುಡ್ಡಗಳಿಗೆ ಮೇಯಲು ಹೋಗಿ, ಸಂಜೆಗೆ ಮೊದಲೇ ಮನೆಗೆ ಬರುತ್ತದೆ. ಅಚ್ಯುತರಾಯನಿಗೆ ಎರಡು ಕೂಸುಗಳಿಲ್ಲವೇ? ಒಂದಕ್ಕಾಯಿತು ಹತ್ತು ತಿಂಗಳು. ಇನ್ನೊಂದಕ್ಕೆ ಎರಡು ವರ್ಷ ಸಮೀಪಿಸಿತು. ಹಿರಿಯ ಕೃಷ್ಣ ತುಂಬ ಚುರುಕಿನ ಮಗುವಾಗಿದ್ದಾನೆ. ಅವನನ್ನು ಬಗಲಲ್ಲಿ ಚಚ್ಚಿಕೊಂಡೇ ಅಚ್ಯುತನ ವಿರಾಮ ಕಳೆಯುತ್ತದೆ. ಶಾಲೆಯ ಗಳಿಗೆಯನ್ನು ಬಿಟ್ಟು, ಉಳಿದ ವೇಳೆಯಲ್ಲಿ ಆತ ತಂದೆಯ ಬಗಲಿನಲ್ಲಿ ವಿರಾಜಿಸುತ್ತಾನೆ.

ಮಳೆ ಬಿಟ್ಟರೆ, ಅಚ್ಯುತ ಸಂಜೆಗೆ ತಿರುಗಾಟಕ್ಕೆ ಹೋಗುತ್ತಾನೆ. ಎಲ್ಲವೂ ಒಂಟಿ ಸಂಚಾರಗಳು. ಶಾಲೆಯು ನಡೆಯುವಷ್ಟು ಕಾಲ, ಸಹ ಉಪಾಧ್ಯಾಯರು ಕಾಣಸಿಗುತ್ತಾರೆ. ಅನಂತರ ಅವರವರ ಪಾಡಿಗೆ ಅವರವರು ಹೋಗಿಬಿಡುತ್ತಾರೆ. ಅಲ್ಲಿಯೂ ನಿತ್ಯ ನಾಲ್ಕಾರು ಮೈಲು ಓಡಾಟ ಮಾಡುವ ಟಪ್ಪಾಲುರನ್ನಗ ಉಪಾಧ್ಯಾಯರಿದ್ದಾರೆ. ಇನ್ನು

ಮುಖ್ಯ ಉಪಾಧ್ಯಾಯರು ಶುಕ್ರವಾರಸಂಜೆಗೆ ಆ ಊರನ್ನು ಬಿಟ್ಟರೆ, ಸೋಮವಾರ ಬೆಳಗ್ಗೆ ತಿರುಗಿ ಬರುತ್ತಾರೆ ಊರಿಂದ! ಸಾಮಾನ್ಯವಾಗಿ ಅವರು ಮನುಷ್ಯರೊಡನೆ ಬಹಳವಾಗಿ ಬೆರೆಯುವಂತೆ ಕಾಣುವುದಿಲ್ಲ. ಆ ಊರಲ್ಲಿ ಮಂದಿ ಇದ್ದಾರೆಯೇ ಎಂದು ತಿಳಿಯಲು, ಅವರೂರಿನ ತೀರ್ಥದಂತಿರುವ, ಪಾಚಿ ಬೆಳೆದ ಕೆರೆಗೆ ಬರಬೇಕು. ಅಲ್ಲಿ ಅಪೂರ್ವ ಕ್ಕೊಮ್ಮೆ "ಮಾಸ್ಟರರೇ" ಎಂದು ಜನ ಮಾತನಾಡಿದರೆ ಭಾಗ್ಯ. ಅದಕ್ಕೂ ಮೀರಿದ ಮಾತಿಲ್ಲ. ಈ ಜನ ಯಾಕೆ ಇಷ್ಟು ಅಂಜುತ್ತವೆಂದು ಅಚ್ಯುತ ನಿಗೇನೆ ಆಶ್ಚರ್ಯ. ಹೀಗಾಗಿ--ರುಕ್ಮಿಣಿಗೂ ಗೆಳೆತಿಯರಿರಲಿಲ್ಲ. ಅವ ಳಿಗೆ ಅವಳ ಕೆಲಸವೇ ಗೆಳೆತನವಾಗಿದೆ. ಈಗ ಕೊಂಬಾರಿನಂತಲ್ಲ; ಗಂಡನ ಸಾಮೀಪ್ಯ ಬಯಸಿದಾಗಲೆಲ್ಲ ಇದ್ದೇ ಇದೆ.

ಅಚ್ಯುತ ಆಗಾಗ ತಾಯಿಗೆ ಪತ್ರ ಬರೆಯುತ್ತಿದ್ದ; ಅಲ್ಲಿಂದ ಉತ್ತರ ಗಳೂ ಬರುತ್ತಿದ್ದುವು. ಪಂಜದಿಂದ ಪುಟ್ಟಯ್ಯನವರೂ ಮಗಳಿಗೆ ಕಾಗದ ಬರೆಯುತ್ತಿದ್ದರು. "ಬೇಸರವೊಂದಲ್ಲದೆ ಹೋದರೆ, ನಮಗೆ ಈ ಊರಾ ಗಬಹುದು. ಇದು ನಮ್ಮ ಕೊಂಬಾರಿನಂತೆಯೇ ಇದೆ. ಊರೆಂದರೆ ಕಾಡಿನ ಊರು. ಹೆಚ್ಚಿಗೆ ಎಂದರೆ ಪುರಾತನವಾದ್ದೊಂದು ದೇವಸ್ಥಾನ ವಿದೆ. ಇಲ್ಲಿ ಸುಖವಾಗಿದ್ದೇವೆ" ಎಂದು ತಂದೆಗೆ ಆಕೆ ಬರೆದಿದ್ದಳು. ಅಚ್ಯುತನೂ ಕಾಗದ ಬರೆಯುವ ಪರಿಪಾಠ ಇರಿಸಿಕೊಂಡಿದ್ದನು. ಇದ್ದ ನಾಲ್ವರು ಗೆಳೆಯರಿಗೆ ತನ್ನ 'ಅಂದಮಾನ' ವನವಾಸವನ್ನು ಬಣ್ಣಿಸಿ ಪತ್ರ ಬರೆಯುತ್ತಿದ್ದ. ಆ ಊರಿನ, ಹಸಿ ಮೆಣಸಿನ ಧಾರಣೆಯಿಂದ ಹಿಡಿದು, ಯಾರ್‍ಯಾರ ಮನೆಯ ದನ ಕುರ್ಕ (ನಾಯಿಚಿರತೆ) ಹಿಡಿದು ಕೊಂಡು ಹೋಯಿತು ಎಂಬೆಲ್ಲ ವಾರ್ತೆಗಳನ್ನು ತಿಳಿಸಿ, ಕಾಗದ ತುಂಬಿ ಸುತ್ತಿದ್ದ.

ಮಳೆಗಾಲದ ಎರಡು ತಿಂಗಳು ಸರಿಯುವಾಗ, ಒಂದು ದಿನ ಅವನ ಮಗ ಕೃಷ್ಣ ಮಳೆಯಲ್ಲಿ ನೆನೆದು, ತುಂಬ ಶೀತವನ್ನು ತಂದು ಕೊಂಡ. ಅದರಿಂದ ಅಚ್ಯುತ ತನ್ನ ದಿನಚರಿಯನ್ನು ಬದಲಿಸಿ, ಊರಿನ ವೈದ್ಯಾಲಯವನ್ನು ಸಂದರ್ಶಿಸಬೇಕಾಯಿತು. ಆ ಊರಲ್ಲಿ ಒಂದು ಆಸ್ಪತ್ರೆ, ಒಂದು ರಿಜಿಸ್ಟ್ರಿ ಆಫೀಸು ಇದ್ದುವೆಂದು ತಿಳಿದು ಹಿಗ್ಗಿದ. ಮೇಲೆ ವಾರಕ್ಕೊಮ್ಮೆ ಹೆಸರಿಗಾದರೂ ಒಂದು ಸಂತೆಯಾಗುತ್ತಿತ್ತು-

ಗಡಿಗೆ, ಕುಡಿಕೆಗಳನ್ನು ಕೊಳ್ಳಲು, ಕುಂಬಾರರ ಮನೆಗೆ ಓಡಬೇಕಾಗಿಲ್ಲ ಎಂದು ಧೈರ್ಯಗೊಂಡನು. ಈಗ ಆಸ್ಪತ್ರೆಯನ್ನು ನೋಡುವ ಸಂದರ್ಭ ಒದಗಿತು. ಅಲ್ಲಿನ ವೈದ್ಯರು ಮಗುವನ್ನು ಪರೀಕ್ಷಿಸಿ ಮದ್ದು ಕೊಡುತ್ತ, "ನೀವು ಇಲ್ಲಿನ ಮಾಸ್ತರರಲ್ಲವೇ?" ಎಂದು ವಿಚಾರಿಸಿದರು. ಮನುಷ್ಯರ ಗೆಳೆತನಕ್ಕೆ ಅವರು ಹುಲಿಯಷ್ಟು ಹಸಿದಿದ್ದರು. ಅಚ್ಯುತನನ್ನು ಅಲ್ಲೇ ಕುಳ್ಳಿರಿಸಿಕೊಂಡು, ಕಾಫಿಕೊಟ್ಟು, ಅವನ ಗೆಳೆತನ ಬೆಳೆಸಿದರು. ಅವರಿಗೆ ಅಚ್ಯುತನ ರೀತಿಗಳು ಒಪ್ಪಿದುವು. "ಈ ಊರಲ್ಲಿ ಸ್ನೇಹ-ಸರಸ ಎಂದರೆ ಹರಹರ! ನಿಮ್ಮೊಬ್ಬರದಾದರೂ ಪರಿಚಯವಾಯಿತಲ್ಲ" ಎಂದರು. ಕೃಷ್ಣನಿಗೆ ಗುಣವಾಯಿತೆಂದು, ಅವನ ಡಾಕ್ಟರರ ಗೆಳೆತನ ಅಷ್ಟಕ್ಕೇ ನಿಲ್ಲಲಿಲ್ಲ. ಅವರು ತಮ್ಮವರೆಂಬುದರಿಂದ ರುಕ್ಮಿಣಿ ಅವರ ಮನೆಗೆ ಹೋಗಲು ಅನುಕೂಲವಾಯಿತು. ಅವರ ಮನೆಯವರೂ ಇಲ್ಲಿಗೆ ಬರತೊಡಗಿದರು. ಇದರಿಂದ ಅಚ್ಯುತನ ಮನಸ್ಸಿಗೆ ತುಂಬಾ ಉಲ್ಲಾಸವಾಗತೊಡಗಿತು. "ಸ್ವರ್ಗ ಎಂಬುದು ಮನುಷ್ಯ ಮನಸ್ಸಿನಲ್ಲಿ ಕಟ್ಟಿದರೆ ಉಂಟು" ಎಂದು ತಿಳಿದು ಆತ ತೃಪ್ತನಾದ. ಹಾಗೇನೆ ಡಾಕ್ಟರರ ಗುರುತಿನವರಾದ ರಿಜಿಸ್ಟ್ರಾರರ ಪರಿಚಯ್ವವೂ ಆಯಿತು. ಅಲ್ಲಿಂದ ಈ ತ್ರಿಮೂರ್ತಿಗಳ ವಾಕಿಂಗ್ ಕ್ಲಬ್ ನಿರ್ಮಾಣವಾಯಿತು.

ಮಾ। ಅಚ್ಯುತರಾಯರು, ಡಾ। ಶಾಮರಾಯರು, ರಿ। ವೆಂಕಟರಮಣರಾಯರು--ಮೂವರೂ ಆ ಊರ ನಾಗರಿಕ ನಕ್ಷತ್ರರೆನಿಸಿಕೊಂಡರು. ಮುಖ್ಯ ಉಪಾಧ್ಯಾಯರಾದ ನಾಗಣ್ಣಸೆಟ್ಟರು ಆ ತನಕ, ಸಂಜೆ ವೇಳೆಗಳಲ್ಲಿ ದಿನಸಿನ ಅಂಗಡಿಯ ಜಗಲಿಯೊಂದರಲ್ಲಿ ಕಳೆಯುತ್ತಿದ್ದವರು, ಈ ಮೂವರ ಪಂಗಡವನ್ನು ಸೇರಿ, ಸಂಖ್ಯೆಯನ್ನು ನಾಲ್ಕಕ್ಕೆ ಏರಿಸಿದರು. ಬಂದ ದಿನ-"ಮೋಕ್ಷವಿಲ್ಲದ ಶಂಕರನಾರಾಯಣ ಇದು" ಎಂದು ಅಚ್ಯುತಗೆ ಅನಿಸಿದ್ದರೂ, ಮಳೆಗಾಲ ಕಳೆಯುವುದರೊಳಗೆ "ಆಗಬಹುದು ಈ ಊರು; ನಮ್ಮ ಊರಿಗೆ ದೂರವಾದರೂ ಚಿಂತಿಲ್ಲ; ನಮ್ಮಮಟ್ಟಿಗೆ ಸಾಕಿದು" ಎಂದೆನಿಸಿತು. ಅವನಾಗಿ "ಡಾಕ್ಟರರೇ, ಮಳೆಗಾಲ ಬಿಡುವಲ್ಲಾಯಿತು; ನಿಮ್ಮ ಆಸ್ಪತ್ರೆಯ ಹಿಂದೆ ಜಾಗವೂ ಇದೆ. ನಾವೊಂದು ಬೆಡ್‌ಮಿಂಟನ್ ಕೋರ್ಟು ಮಾಡುವ" ಎಂದನು. "ನಮ್ಮ ಶಾಲೆಯ ಹಿಂದೆಯೂ ಇದೆಯಲ್ಲ ಜಾಗ" ಎಂದರು ನಾಗಣ್ಣ ಸೆಟ್ಟರು.

ಆದರೂ ಡಾಕ್ಟರರ ಮೇಲಿನ ಗೌರವಕ್ಕೆ ಆಸ್ಪತ್ರೆಯು ಹಿಂದಣ ಜಾಗವೆ ಮಂಜೂರಾಯಿತು. ಬೆಡ್‌ಮಿಂಟನ್ ಪ್ರಾರಂಭವಾಗಿ ಶಂಕರನಾರಾಯಣ ಊರು ನಾಗರಿಕತೆಗೆ ಕಾಲಿರಿಸಿತು. ಡಾಕ್ಟರರೂ ರಿಜಿಸ್ಟ್ರಾರರೂ, ಮಾಸ್ತರರೂ, 'ಬೇಟ್ ಆಡುವುದನ್ನು' ಕಾಣಲು ಹಳ್ಳಿಯ ಜನ ಬಂದು ನೆರೆಯುವುದೂ ಒಂದು ನೋಟವಾಯಿತು!

ಜನವರಿಯಲ್ಲಿ ಶಂಕರನಾರಾಯಣದಲ್ಲಿ ಜಾತ್ರೆಯ ದಿನ! "ಆಗ ನಮ್ಮ ಆಟ ನೋಡಲು, ಜಾತ್ರೆಯ ತೇರು ಕಾಣುವುದಕ್ಕಿಂತಲೂ ಮಿಕ್ಕಿದ ಜನ ನೆರೆದಿದ್ದರು" ಎಂದು ಅಚ್ಯುತರಾಯ ಒಂದು ಪತ್ರದಲ್ಲಿ ಜಾನ್‌ಸನರಿಗೆ ಬರೆದಿದ್ದನು.

ಗೆಳೆಯರ ಉತ್ಸಾಹದಿಂದ, ಹಳೆಯ ಹುಣ್ಣುಗಳ ನೆನಪು ಮಾಸಿ ಬಂದು, ಬರಿಯ ಒಂದು ವರ್ಷದೊಳಗೆ ಅಚ್ಯುತರಾಯನ ಮೈಯ್ಯು ತುಸು ತುಂಬಿಕೊಂಡಿತು. ಮನಸ್ಸು ಹಗುರವಾಯಿತು. ತನ್ನ ಸಂಬಳದೊಳಗೆ ಸಂಸಾರವನ್ನು ನಿರ್ವಹಿಸುವ ಕೆಲಸ ಅಷ್ಟೊಂದು ಸುಲಭವಾಗದಿದ್ದರೂ, ಹಾಗೂ ಹೀಗೂ ದಿನ ಸರಿಯುತ್ತಿತ್ತು. ಇದರಿಂದ ಆತ ತಿರುಗಿ ಹಳೆಯ ಅನೇಕ ಕನಸುಗಳಿಗೆ, ಮನದಲ್ಲಿ ಎಡೆಮಾಡಿಕೊಟ್ಟ. "ಇಲ್ಲಿ, ಶಾಲೆಯ ಚಟುವಟಿಕೆಗಳನ್ನು ಬೆಳೆಯಿಸಬಹುದಲ್ಲ. ಈ ಊರಲ್ಲೂ ಯಕ್ಷಗಾನದ ಪುನರುಜ್ಜೀವನ ಮಾಡಬಹುದಲ್ಲ. ತಮ್ಮ ಇಂಟರ್‌ನೇಶನಲ್ ಕ್ಲಬ್ಬಿನ ಮಾದರಿಯಲ್ಲಿ ಅಲ್ಲವಾದರೂ, ಪುಟ್ಟದೊಂದು ಕ್ಲಬ್ಬನ್ನು ತೆರೆಯಬಹುದಲ್ಲ" ಎಂದು ಯೋಚಿಸಿದನು. ಅವನ ಹೊಸ ಯೋಜನೆಗಳನ್ನು ತನ್ನ ಉಪಾಧ್ಯಾಯ ಗೆಳೆಯರೊಡನೆ ತರ್ಕಿಸಿದನು.

"ಅಚ್ಯುತರಾಯರೇ, ನೀವು ಇದೇ ಊರಲ್ಲಿ ಇರುವವರು. ನಾವು ನಿತ್ಯವೂ ಸಂಜೆಗೆ ಮನೆಗೆ ಓಡುವವರು" ಎಂದರು ಒಬ್ಬರು ಉಪಾಧ್ಯಾಯರು.

ಅವನ ಮುಖ್ಯೋಪಾಧ್ಯಾಯ ನಾಗಣ್ಣಸೆಟ್ಟರು "ಅಚ್ಯುತ ಮಾಸ್ತರರಿಗೆ ಏನೂ ಕಸಬಿಲ್ಲ. ಹಾಗೆಲ್ಲ ಮಾಡಿ ಏನು ಬರುತ್ತದೆ? ಈ ಊರಿಗೆ ನಾವು ಮಾಡುವ ಕೆಲಸ ಮಸ್ತಾಯಿತು. ಹೌದು, ನೀವು ಹೇಳುವ ಹಾಗೆ ಮಕ್ಕಳಿಗೆ ಡಿಬೇಟ್, ಚಂಡಾಟ ಏನೆಲ್ಲ ಮಾಡಬಹುದು. ಆದರೆ ಅದರಿಂದ ಒಂದು ಕಾಸು ಹೆಚ್ಚಿಗೆ ಸಂಬಳ ಸಿಕ್ಕೀತೆಂದು ತಿಳಿಯಬೇಡಿ.

ಬೇಕಾದರೆ ನನ್ನ ಮಾತನ್ನು ಕೇಳಿ, ಈ ವರ್ಷ ನಮ್ಮ ಈಗಿನ ಸಂಬಳಕ್ಕೇನೆ ಕೊಡಲಿ ಹಾಕುತ್ತಾರೆ. ಅವರಿಗೆ ಮಂಗಳೂರಲ್ಲಿ ಕುಳಿತು, ದರ್ಬಾರು ಮಾಡಬೇಕು. ಇಲ್ಲಿ ಪಾಪದ ಮಾಸ್ತರುಗಳು ಸತ್ತಿದ್ದಾರೋ ಬದುಕಿದ್ದಾರೋ ಎಂದು ಗೊತ್ತಿಲ್ಲ." ಎಂದು ರೇಗಿಯೇ ಮಾತಾಡಿದರು. "ನಿಮ್ಮನ್ನೂ ಈಗ ಎಲ್ಲಿಂದೆಲ್ಲಿಗೆ ಹಾಕಿಲ್ಲ? ನಿಮ್ಮ ಊರಿಗೆ ಹೋಗಿ ಬರಬೇಕಾದರೆ ತಿಂಗಳ ಸಂಬಳ ಕಟ್ಟಿಡಬೇಕು. ಯಾತಕ್ಕೆ? ನಮಗೇನು ನೂರು, ಸಾವಿರ ಸಂಬಳ ಕೊಡುತ್ತಾರಂತೇನು! ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ ಸಾಕು" ಎಂದರು.

"ನನ್ನನ್ನು ಈ ಮೂಲೆಗೆ ಹಾಕಿದ್ದಾರೆ. ಮನೆಗೆ ಸಮೀಪವಾದ ಬಹ್ಮಾವರದಲ್ಲೋ, ಬಾರಕೂರಲ್ಲೋ, ಹಂಗಾರಕಟ್ಟೆಯಲ್ಲೋ ಕೆಲಸ ಕೊಡಿ -- ಎಂದು ಸಲಾಮು ಹಾಕಿದೆ. ಬದಲಿಗೆ ಬಹ್ಮಾವರದಲ್ಲಿ ಬೇಕಾದವರಿಗೆ ಕೆಲಸಕೊಟ್ಟರು. ಯಾಕೆ ಹೇಳಿ? ಕಾರಣ ಗೊತ್ತೇ? ನಮ್ಮ ಇನ್ಸ್‌ಪೆಕ್ಟರರು ಬಂದಾಗ ನಾನು ಅವರು ನೋಡುವ ತನಕ ನಮಸ್ಕಾರ ಮಾಡಿ ನಿಂತಿರಲಿಲ್ಲ--ಎಂಬುದಕ್ಕೆ. ಅವರ ಶಾಲೆಯಾಯಿತು; ಅವರಾಯಿತು!" ಎಂದರು. ಅಚ್ಯುತರಾಯನ ಉತ್ಸಾಹ ತನ್ನಂತೆಯೇ ಇಳಿಯಿತು. "ಹೌದು-ಮೊದಲೇ ಜೀವನಕ್ಕೆ ಕಠಿಣವಾದ ಕಾಲದಲ್ಲಿ, ಸಂಬಳಕ್ಕೂ ಖೋತಾ ತರುವ ಯೋಚನೆಯುಳ್ಳ ಬೋರ್ಡಿನವರ ಸಲುವಾಗಿ ನಾವೇಕೆ ಹೆಚ್ಚಿಗೆ ದುಡಿಯಬೇಕು" ಎಂದು ನಾಗಣ್ಣ ಸೆಟ್ಟರು ಕೊನೆಯ ತೀರ್ಮಾನ ಹೇಳಿದರು.

ಆ ವರ್ಷದ ಹೊಸ ಬಜೆಟ್ಟಿನಲ್ಲಿ, ಬೋರ್ಡಿನ ಆಯವ್ಯಯ ಸರಿಪಡಿಸಲು, ದಯಾಳುವಾದ ಬೋರ್ಡಿನವರು ರೂಪಾಯಿಗೆ ಎರಡಾಣೆಯಂತೆ ಉಪಾಧ್ಯಾಯರ ವೇತನದಲ್ಲಿ ತೂತು ಕೊರೆಯುವುದೆಂದು ನಿಶ್ಚಯಿಸಿದರು. ಆ ವಾರ್ತೆ ಬಂದ ದಿನ "ಹೇಗೆ ನಾನೆಂದದ್ದು?" ಎಂದು ನಾಗಣ್ಣ ಸೆಟ್ಟರು ರೇಗಿ, ನಕ್ಕರು. "ಅವರಿಗೊಂದು ಮೆಮೋರಿಯಲ್ ಮಾಡುವ; ಜಿಲ್ಲಾ ಮಾಸ್ತರುಗಳು ಸಭೆ ಸೇರಿಸುವ" ಎಂದು ಅಚ್ಯುತರಾಯ ಸಲಹೆಕೊಟ್ಟ. ನಾಗಣ್ಣ ಸೆಟ್ಟರು "ಸಭೆ ಅವರ ಬೊಜ್ಜಕ್ಕೆ! ಅರ್ಜಿ ಮಾಡಿದರೆ, ಲಕೋಟೆಗೆ ಒಂದಾಣೆ ಚೀಟು ದಂಡ. ಸಭೆ ಮಾಡಿದರೆ ಮೋಟರಲ್ಲಿ ಹೋಗಿ ಬರುವ ಹಣ ದಂಡ--ಮತ್ತೇನಾಗದು. ಈ

ಬೋರ್ಡು ಮೆಂಬರರಿಗೆ ಮನೆಯಲ್ಲಿ ಊಟಕ್ಕಿರುವಷ್ಟು ದಿನ, ಬಡ ಮಾಸ್ತರರ ಹೊಟ್ಟೆ ಸಂಕಟ ತಿಳಿಯುವ ಹಾಗೆಯೇ ಇಲ್ಲ" ಎಂದರು.

ಮೇ ತಿಂಗಳೊಳಗೆ ಜಿಲ್ಲೆಯಲ್ಲಿ ಉಪಾಧ್ಯಾಯರ ಹಲವು ಸಭೆಗಳಾದುವು. ಬೋರ್ಡಿಗೆ ಅರ್ಜಿಗಳೂ ಹೋದುವು. ದಯಾಳುವಾದ ಬೋರ್ಡಿಗೆ ಬಡ ಉಪಾಧ್ಯಾಯರುಗಳ ಗೋಳಿನ ಮಳೆಯೇ ಬಡಿಯಿತು. ಆದುದೇನಿಲ್ಲ. ಬೋರ್ಡು ಮನುಷ್ಯ ಪ್ರಾಣಿಯಾಗಿರಲಿಲ್ಲ. ಅದೊಂದು ಆಫೀಸು! ಯಂತ್ರದಂತೆ ನಡೆಯುವುದು ಅದರ ಕೆಲಸ. ಅದರಲ್ಲಿ ಮನುಷ್ಯರೆಂದರೆ, ಅಧ್ಯಕ್ಷರು ಸದಸ್ಯರು. ಅವರು ಓಟಿನ ಕಾಲದಲ್ಲಿ ಮನುಷ್ಯರ ನೆನಪುಳ್ಳವರು; ಉಳಿದ ವೇಳೆ ಪ್ರಪಂಚ ವಿಸ್ಮೃತರು.

ಮೇ ತಿಂಗಳು ಬಂದೊಡನೆಯೇ, ರುಕ್ಮಿಣಿಯ ಮನಸ್ಸು ಊರಿಗೆ ಹೋಗುವ ಎಂದಿತ್ತು. ಆಗ ಅವಳಲ್ಲಿ ತಿರುಗಿ ತಾಯ್ತನದ ಚಿಹ್ನೆಗಳು ಕಾಣಿಸಿದುವು. ಮೂರು ತಿಂಗಳ ಗರ್ಭಿಣಿ. ಅಚ್ಚುತಗೆ ತಿರುಗಿ ಯೋಚನೆಗೆ ಅವಕಾಶವಾಯಿತು. ಅವನು ಸಕುಟುಂಬಿಕನಾಗಿ ಪಯಣ ಹೊರಡಲು ಇಪ್ಪತ್ತು ಇಪ್ಪತ್ತೈದು ರೂಪಾಯಿಗಳಾದರೂ ಬೇಕು. ಸಂಬಳ ಖೋತಾಗೊಂಡ ಗಳಿಗೆಯನ್ನು ಅರಸಿಯೇ, ತಾವು ಪಯಣ ಹೊರಡಬೇಕೇ" ಎಂದು ಆತ ವಿಚಾರಕ್ಕೊಳಗಾದ. "ಹೊರಡುವುದಾದರೆ ತಮ್ಮ ಎಮ್ಮೆಯನ್ನು ಎಲ್ಲಿ ಕಟ್ಟಬೇಕು?" ಎಂದೂ ಯೋಚಿಸಬೇಕಾಯಿತು. "ಬೇಸರಕ್ಕೆ ನೀವಾದರೂ ಇದ್ದೀರಲ್ಲ ಎಂದರೆ ನೀವೂ ಊರಿಗೆ ಹೊರಡುವುದೇ" ಎಂದು. ಅವನ ಮಿತ್ರರಾದ ಡಾ। ಶಾಮರಾಯರೂ ಹೇಳಿದರು. ಅವರು ಊರು ಬಿಡುವುದು ದೇವರ ಮನಸ್ಸಿಗೆ ಸರಿ ಬರಲಿಲ್ಲವೋ ಏನೋ; ಸ್ವಲ್ಪ ದಿನಗಳಲ್ಲಿ ಕೃಷ್ಣನೂ ಬಸಿರಿಯಾದ ರುಕ್ಮಿಣಿಯೂ ಆ ಊರಿನ ದಿವ್ಯ ಹವೆಗೆ ಬಲಿಯಾಗಿ ಮಲಗಿದರು. ಇಬ್ಬರಿಗೂ ಮಲೇರಿಯದ ಕಾಟ ತೊಡಗಿತು. "ಪುಣ್ಯಕ್ಕೆ ಬಿಟ್ಟಿ ಡಾಕ್ತ್ತರರು ಸಿಕ್ಕಿದುದಕ್ಕಾಯಿತು. ಇಲ್ಲವಾದರೆ ನಮಗೆ ಉಳಿಗಾಲವುಂಟೇ?" ಎಂದು ಅಚ್ಚುತ ಅಡಿಗಡಿಗೆ ಉದ್ಗರಿಸುವಂತಾಯಿತು. ಅಂತು, ಯಾರ ಆಕ್ಷೇಪವೂ ಇಲ್ಲದೆ, ಅವರು ರಜೆಯಲ್ಲಿ ಊರಿಗೆ ಹೋಗದಂತಾಯಿತು. ಅದರಿಂದ ಉಳಿತಾಯವೇನೂ ಆಗಲಿಲ್ಲ. ಅವನು ಹಳೆಯ ಎಮ್ಮೆಯನ್ನು ವಿಕ್ರಯಿಸಿ ಹೊಸತೊಂದನ್ನು ಕೊಂಡುಕೊಂಡ. ಅದಕ್ಕೆ ಒಂದು ತಿಂಗಳ

ಸಂಬಳವನ್ನು ಮೇಲುವಾಸಿಯಾಗಿ ತೆರಬೇಕಾಯಿತು.

ಅಚ್ಚುತನ ಮನಸ್ಸು, ತುಸುವಾದರೂ ಚಟುವಟಿಕೆಯಿಲ್ಲದೆ ಕುಳಿತಿರಲಾರದ ಮನಸ್ಸು; ಆದುದರಿಂದ ಮುಂದಿನ ಜೂನಿನಲ್ಲಿ ಶಾಲೆ ತೆರೆದೊಡನೆಯೇ ಒಂದು ತರ್ಕಸಂಘವನ್ನು ಪ್ರಾರಂಭಿಸಲು ಸಾಹಸಪಟ್ಟ. ತಿಂಗಳಿಗೊಮ್ಮೆ ಮಕ್ಕಳ ಹಬ್ಬ ಮಾಡೋಣ ಎಂದ. "ಮಕ್ಕಳು ಪತ್ರಿಕೆ ತರಿಸಿ ಓದಲಿ"ಎಂದ. ಶಾಲೆ ಬಿಟ್ಟ ಮೇಲೆ, ನಿತ್ಯ ಅರೆತಾಸಿನ ತನಕ, ಅವುಗಳೆಲ್ಲವನ್ನು ನಡೆಯಿಸಿಕೊಂಡು ಹೋಗುವೆನೆಂದ. ಅವೆಲ್ಲ "ತನ್ನ ಬೇಸರ ಕಳೆಯಲು" ಎಂದು ತನ್ನ ಕಿಸೆಯಿಂದಲೇ ನಾಲ್ಕು ಕಾಸನ್ನು ವ್ಯಯಿಸುವ ನಿರ್ಧಾರವನ್ನು ಮಾಡಿದನು. ಈ ಪ್ರಯತ್ನಗಳಿಂದಾಗಿ ಹುಡುಗರಿಗೆ ಹುಮ್ಮಸ ಹೆಚ್ಚಿತು. ಅಚ್ಚುತಮಾಸ್ತರರು ಅವರ ಆರಾಧ್ಯ ದೇವತೆಯಾದರು. ಅದನ್ನು ಕಂಡು ನಾಗಣ್ಣ ಮಾಸ್ತರರಿಗೆ ಸಮಾಧಾನವಾಗಲಿಲ್ಲ. ಆದರೆ "ಇರಲಿ, ನನ್ನಪ್ಪನ ಗಂಟೇನು ಖರ್ಚು?" ಎಂದು ಅವರು ಸುಮ್ಮನಾದರು. ಒಂದು ದಿನ ಇನ್ಸ್‌ಪೆಕ್ಟರರು ಬಂದ ಕಾಲದಲ್ಲಿ, ಮಕ್ಕಳ ಹಲವಾರು ಚಟುವಟಿಕೆಗಳನ್ನು ಪ್ರದರ್ಶಿಸಿದರು. "ಶಾಲೆಯು ಬಾಹ್ಯ ಚಟುವಟಿಕೆಗಳು ತುಂಬ ಅಭಿವೃದ್ಧಿ ತಾಳಿವೆ" ಎಂದು ಅವರು ಬರೆದರು. "ಆದರೂ ಉಕ್ತಲೇಖನ ಸಾಲದು" ಎಂದು ಅವರೇನೆ ಬರೆದು ಹೋದರು."ನೋಡಿದಿರಾ ಅಚ್ಚುತಮಾಸ್ತರೇ. ಇಷ್ಟು ಪ್ರಾಣಬಿಟ್ಟಿರಲ್ಲ—ನೀವು. ಕೊನೆಗೂ ಒಂದು ಕುಂಟುಪಂಕ್ತಿ ಬರೆದೇ ಹೋದರು ಅವರು. ಈ ಜನಗಳಿಗೆ ನಾನೆನ್ನುತ್ತೇನೆ—ಅನ್ನ ನೀರು ಎರಡೂ ಸಿಗದಲ್ಲಿಗೆ ವರ್ಗಾಯಿಸಬೇಕು. ಅವರಲ್ಲಿ ಕರುಣೆಯ ಹನಿಯಿಲ್ಲ" ಎಂದರು ನಾಗಣ್ಣ ಮಾಸ್ತರರು.

ಒಂದೊಂದು ಬಾರಿ ಅಚ್ಚುತನಿಗೆ "ಜಗತ್ತಿಗೆ ಮರುಕವೂ ಇಲ್ಲ, ಕನಿಕರವೂ ಇಲ್ಲ; ಕೃತಜ್ಞತೆಯೂ ಇಲ್ಲ"ಎಂದೇ ತೋರುತ್ತಿತ್ತು. ಆದರೂ ತನ್ನ ಬದುಕು ಕಿರಿದಾಗುತ್ತಿರುವುದನ್ನು ಕಾಣಲಾರದೆ, ನಾಲ್ವರ ಗೆಳೆತನ ಬೇಡುತ್ತಿದ್ದನು. ಜನಗಳಿಂದ ಪ್ರಶಂಸೆಯನ್ನೂ ಮನಸ್ಸು ಬೇಡುತ್ತದೆ. ಮಿಕ್ಕಾವ ಸಂಪತ್ತಿಲ್ಲದಾಗ, ನಾಲ್ಕು ಜನಗಳ ಒಳ್ಳೆಯ ಮಾತೇ, ಬದುಕಿಗೊಂದು ಸ್ಥೈರ್ಯ ಕೊಡಬೇಕು. ಜೀವನದಲ್ಲಿ ಬಿಡುವಿದ್ದವನಿಗೆ ಚಿಂತೆ-ಎಂದು ರುಕ್ಮಿಣಿ ತಿಳಿದಿದ್ದಾಳೆ. ಬಿಡುವು ಬಾರದಂತೆ ಅವಳು

ದುಡಿಯುತ್ತಾಳೆ. ಈಗ ಅದಕ್ಕೂ ತಿರುಗಿ ವಿರಾಮ ಬರತೊಡಗಿತು. ನವರಾತ್ರಿಯ ವೇಳೆ ಬರಲು ರುಕ್ಮಿಣಿ ತಿರುಗಿ ಅಶಕ್ತಳಾದಳು. ಅಚ್ಯುತ ಅವಳಿಗಾಗಿ ನಿತ್ಯ ವೈದ್ಯದಿಂದ ಮದ್ದು ತರಬೇಕಾಯಿತು. ಶ್ಯಾಮರಾಯರ ಹೇಳಿಕೆಯಂತೆ, ಕುಂದಾಪುರಕ್ಕೆ ಓಡಿ ಹೋಗಿ, ಏನೇನೋ ಮದ್ದಿನ ಸೀಸೆಗಳನ್ನೂ ಗುಳಿಗೆಗಳನ್ನೂ ತರಬೇಕಾಯಿತು. ಕಿಸೆಯ ಹಣ, ತಿಂಗಳಿನ ಮೊದಲ ವಾರದಲ್ಲೇ ಬರಿದಾಗತೊಡಗಿತು. ಮನೆಯ ವೆಚ್ಚಗಳಿಗೆ ತುಂಬ ಕಷ್ಟವಾಗುತ್ತ ಬಂದಿತು. ಅಲ್ಲಲ್ಲಿ "ಸಾಲ ಕೇಳುವ" ಎಂಬ ಹಂಬಲವಾಯಿತು. ಆದರೂ ತನ್ನ ನಾಲಿಗೆಯನ್ನು ಬಿಗಿಹಿಡಿದು ಕೆಲವು ದಿನ ದುಡಿದನು.

ನವರಾತ್ರಿ ಕಳೆದೊಂದು ತಿಂಗಳಲ್ಲಿ ರುಕ್ಮಿಣಿಯು ಮೂರನೆಯ ಗಂಡು ಮಗುವಿನ ತಾಯಿಯಾದಳು. ಅಚ್ಯುತ ತಮ್ಮ ಮನೆಗೆ ಯಾರನ್ನೋ ಬರಮಾಡಿಕೊಂಡು, ಆಕೆಯ ಸೇವೆಯನ್ನು ಸಾಗಿಸಬೇಕಾಯಿತು. ಮುಂದೆ ಮೇ ರಜೆ ಬರುವ ತನಕ, ಬಾಣಂತಿಯ ಚಾಕರಿಯ ಜತೆಗೆ, ಅಡುಗೆಯ ಕೆಲಸ, ಮಕ್ಕಳ ಆರೈಕೆ—ಇನನ್ನೂ ಆತ ನೋಡಿಕೊಳ್ಳಬೇಕಾಯಿತು. ಆದರೆ ಈ ಬಾರಿಯ ಬಾಣಂತಿತನವು ತೀರ ಮೊದಲಿನ ಬಾಣಂತಿತನದಷ್ಟೇ, ಅಶಕ್ತಿಗೆ ರುಕ್ಮಿಣಿಯನ್ನು ತಂದಿರಿಸಿತು. ಡಾಕ್ಟರರು ಹೇಳಿದ ಸಲಹೆಗಳನ್ನೆಲ್ಲ ನೆರವೇರಿಸಲು ಆತಗೆ ಶಕ್ತಿ ಸಾಲದು. ಆದರೆ ಆಕೆಯ ಆರೈಕೆ ಮಾಡದೆಹೋದರೆ, ತನ್ನ ಜೀವನದ ಒಂದೇ ಒಂದು ಸೊಬಗು ಮಾಯವಾಗುವುದೆಂಬುದನ್ನು ತಿಳಿದಿದ್ದಾನೆ. ಇತ್ತ ಆ ಯೋಚನೆಯ ಜತೆಯಲ್ಲಿ, ಮನೆಗೆಲಸದ ಯೋಚನೆಯೂ ಬರುತ್ತದೆ. 'ಮನೆಯ ಗತಿಯೇನು' ಎಂದು ಯಾವಳೋ ಒಬ್ಬ ಮುದುಕಿಯನ್ನು ಪರಿಚಾಕರಿಗೂ ಅಡುಗೆಗೂ ನೇಮಿಸಿಕೊಳ್ಳಬೇಕಾಯಿತು. ಅದೆಲ್ಲಸರಿಯೇ! ಆದರೆ ಇಷ್ಟೆಲ್ಲ ವೆಚ್ಚಕ್ಕೆ ದಾರಿಯೇನು? ಅಚ್ಯುತ ಅದನ್ನು ನೆನೆದು ಕೊರಗತೊಡಗಿದ. ಹಿಂದಿನ ವರ್ಷದ ಅವನ ಎಲ್ಲ ಉತ್ಸಾಹಗಳು ಈ ಬಾರಿ ಮಾಯವಾದುವು. ತಿರುಗಿ ಮೊದಲಿನ ರೀತಿಯೇ. ಕೊನೆಗೊಂದು ದಿನ ಆತ ದಾರಿಕಾಣದೆ "ರುಕ್ಮಿಣಿ ಇಷ್ಟೆಲ್ಲ ಮದ್ದಾಗಬೇಕಂತೆ. ನಾನೇನು ಮಾಡಲಿ. ಹಾಸುಗೆಗಿಂತ ಕಾಲು ಉದ್ದವಾಗಿದೆ. ಈಚೆ ಎಳೆದರೆ ಆಚೆ ಬಾರದು; ಆಚೆ ಎಳೆದರೆ ಈಚೆ ಬಾರದಲ್ಲ" ಎಂದ.

ರುಕ್ಮಿಣಿಯು ಅವನ ಮುಖವನ್ನು ಕಂಡಳು. "ನೀವು ಸುಮ್ಮನಿರಿ, ಎಷ್ಟು ನನಗಾಗಿ ದುಡ್ಡು ದಂಡಮಾಡುತ್ತೀರಿ. ದೇವರಿಗೆ ನನ್ನ ಹೆಣ ಕಾಣಬೇಕೆಂದಿದ್ದರೆ ಹಾಗೇ ಆಗಲಿ. ಹೀಗೆ ಮಲಗಿಕೊಂಡು ನಾನಿದ್ದರೇನು, ಇಲ್ಲವಾದರೇನು" ಎಂದಳು. ಅಚ್ಯುತನಿಗೆ ಬಲು ವ್ಯಸನವಾಯಿತು. ಕಣ್ಣಲ್ಲಿ ನೀರು ತುಂಬಿತು. ಆಕೆ ಈ ಮಾತನ್ನು ಆಡುವಾಗ ಕೃಷ್ಣ ಅಪ್ಪನ ಬೆನ್ನಿನ ಮೇಲೆ ಒರಗಿ ನಿಂತಿದ್ದ. "ಅಪ್ಪ, ಅಮ್ಮ ಸಾಯುತ್ತಾಳಂತೇನು? ಬೇಡೆನ್ನು" ಎಂದು ಆತ ಮುಖ ಸಣ್ಣದು ಮಾಡಿದ. ಮಗುವಿನ ಮೋರೆಯನ್ನು ಕಂಡ ರುಕ್ಮಿಣಿಗೆ, ತನ್ನ ಕೆಟ್ಟ ನಾಲಿಗೆಗಾಗಿ ದುಃಖವಾಯಿತು. ಆಗ ಅವಳೂ ಅತ್ತಳು. ಕೊನೆಗೇನು ತೋರಿತೋ ಏನೋ—"ಹೇಗೂ ದೇವರು ಹೆಣ್ಣು ಮಗುವನ್ನು ಕೊಡಲಿಲ್ಲ. ಇನ್ನು ನನ್ನ ಮೈಮೇಲಿನ ಚಿನ್ನದ ಆಸೆಯೇಕೆ? ಅದನ್ನು ಅಡವು ಇರಿಸಿ. ಪೂರ್ಣ, ಅಡವು ಇರಿಸುವುದು ಬೇಡ. ಇನ್ನೊಂದು ಆಪತ್ತಿಗೆ ಬಂದೀತು. ನಮ್ಮ ಋಣದಲ್ಲಿದ್ದರೆ, ಅದು ಹಿಂದೆ ಬರುತ್ತದೆ, ಇಲ್ಲವಾದರೆ ಇಲ್ಲ" ಎಂದಳು.

ಒಂದು ವಾರವನ್ನು ಅಚ್ಯುತ ಯೋಚನೆಯಲ್ಲಿ ಕಳೆದನು. ಆ ವಾರದೊಳಗಾಗಿಯೇ ಸಮನಾದ ಔಷಧ, ಅನುಪಾನವಿಲ್ಲದೆ ರುಕ್ಮಿಣಿ ಕಂಗಾಲಾದುದನ್ನು ಕಂಡು, "ಅವಳ ತಂದೆಯ ಮನೆಯ ಒಡವೆ ಬೇಡ. ತಾಯಿ ಕೊಟ್ಟ ಚಿನ್ನವನ್ನು ಒತ್ತೆಯಿರಿಸುತ್ತೇನೆ" ಎಂದು ಚಿನ್ನಾಭರಣದಲ್ಲೊಂದಂಶ ಹಿಡಿದುಕೊಂಡು, ಅವನು ಕುಂದಾಪುರಕ್ಕೆ ಓಡಿದ. ಚಿನ್ನವಿದ್ದರೆ ಬ್ಯಾಂಕು ಹಣ ಕೊಡದೆ ಉಂಟೇ? ಅಲ್ಲಿ ಯಾವುದೋ ಒಂದು ಬ್ಯಾಂಕಿನಿಂದ ನೂರು ರೂಪಾಯಿಯ ಸಾಲಮಾಡಿದ. ಅದರಲ್ಲಿ ಮೂವತ್ತು ರೂಪಾಯಿಗಳು ಮದ್ದಿಗೇನೆ ಹೋದುವು. ಹಾಗಿದ್ದರೆ ಅಷ್ಟು ರೂಪಾಯಿ ಸಾಲವನ್ನೇಕೆ ಮಾಡಿದೆನೆಂದು ತೋರದೆ, ಅನುಮಾನಿಸಿ, ಅನುಮಾನಿಸಿ ಉಳಿದುದನ್ನು ಮನೆಗೆ ಹಿಡಿದುಕೊಂಡು ಬಂದನು. ಈ ಬಾರಿ, ರುಕ್ಮಿಣಿ ಎರಡು ತಿಂಗಳ ಔಷಧೋಪಚಾರದಿಂದಲೂ ಚೇತನಗೊಳ್ಳಲಿಲ್ಲ. ಆರು ತಿಂಗಳ ಅನುಪಾನ ಬೇಕಾಯಿತು. ಬ್ಯಾಂಕಿನಿಂದ ತಂದ ಹಣ ಏನೂ ಹೊರೆಯಾಗಿ ಉಳಿಯಲಿಲ್ಲ. ಎಲ್ಲವೂ ಮುಗಿದು, ಜನವರಿ ತಿಂಗಳು ಬರಲು, ಊರಿನ ತೇರಿಗೆ, ಮಾಸ್ತರರ ಮಕ್ಕಳು ಚಿಂದಿ

ಅಂಗಿಯಲ್ಲಿಯೇ ಹೋಗುವುದಾಯಿತು. ಆದರೆ ಆನೋವು ಮನಸ್ಸಿಗೆ ಅನಿಸಲಿಲ್ಲ. ಕಾರಣ, ಆ ಊರಿನ ನೂರಾರು ಮಕ್ಕಳು ಇವರ ಮಕ್ಕಳಂತೆ ಉಡಿದಾರದ ಅಲಂಕಾರದಲ್ಲೇ ಜಾತ್ರೆಯನ್ನು ಮುಗಿಸಿ ಬಂದಿದ್ದರು. "ಎಲ್ಲರಂತೆಯೆ ನಾವು" ಎಂದುಕೊಂಡ ಅಚ್ಚುತ. ಈ ವಿಚಾರದಲ್ಲಿ ರುಕ್ಮಿಣಿಗೆ ಮಾತ್ರ ತುಂಬ ನೋವಾಗುತ್ತಿದೆ.

ಕಿರಿಯವು ಎರಡು ಸಣ್ಣವು; ಹಿರಿಯ ಕೃಷ್ಣನಿಗೆ ಏನೂ ಅರಿವೆ ಬೇಡವೇ? ನಾಲ್ಕು ವರ್ಷವಾಯಿತಲ್ಲ! ಅದಕ್ಕೆ ಅಂಗಿ ಕೊಟ್ಟರೂ ನಿಮಿಷದಲ್ಲಿ ಕೊಳೆಮಾಡುತ್ತವೆ. ಶ್ಯಾಮರಾಯರ ಹೆಂಡತಿ, ತಮ್ಮ ಮನೆಗೆ ಬಂದರೆ, ಬತ್ತಲೆ ಮಕ್ಕಳನ್ನು ತೋರಿಸಲು, ಅವಳ ಮನಸ್ಸಿಗೆ ನೋವಾಗುತ್ತದೆ. ಅದರಿಂದ "ಮಕ್ಕಳೇ, ದೇವಸ್ಥಾನದ ಸುತ್ತಿನಲ್ಲಿ ಆಡಿ ಬನ್ನಿ" ಎಂದು, ಅವರು ಬರುವ ಹೊತ್ತಿಗೆ ಅವನ್ನು ಕಳುಹಿಸಿ ಕೊಡುತ್ತಾಳೆ. "ಅಯ್ಯೋ ಅದೇನು ರುಕ್ಮಮ್ಮ, ಮಕ್ಕಳನ್ನು ಹೊರಗೇ ಬಿಡುತ್ತೀರಿ, ನಾನು ಬಂದಾಗಲೆಲ್ಲ ಅವನ್ನು ಕಾಣುವುದೇ ಕಷ್ಟವಾಗಿದೆ" ಎನ್ನುತ್ತಾಳೆ ಅವಳು. ಅಲ್ಲದೆ "ರುಕ್ಮಮ್ಮ, ನಾನೇ ನಿಮ್ಮ ಮನೆಗೆ ಬರುವುದೇ? ನೀವು ಮಕ್ಕಳನ್ನು ಕರೆದುಕೊಂಡು ನಮ್ಮಮನೆಗೆ ಬರಬಾರದೇ? ಈಗ ಹುಷಾರಾಗಿದ್ದೀರಿ; ಬನ್ನಿ" ಎಂದು ಬಲವಂತ ಮಾಡುತ್ತಾಳೆ ಅವಳು.

ಆಕೆಯು ಶ್ರೀಮಂತರ ಮಗಳು. ಅವಳ ಮೈತುಂಬ ಚಿನ್ನಗಳಿವೆ. ಅವಳು ರೇಶ್ಮೆಯ ಸೀರೆ ಉಟ್ಟು ಬರುತ್ತಾಳೆ. ಅವರ ಮನೆಗೆ ತಾನು ಹೋಗುವಾಗ, ರೇಶ್ಮೆಯಲ್ಲವಾದರೂ ಬರಿಯ, ತೂತಿಲ್ಲದ ಬಣ್ಣಗೆಡದ, ಅರಿವೆಯನ್ನಾದರೂ ಉಟ್ಟುಕೊಂಡು ಹೋಗಬೇಡವೇ? ಅನಂತರ ಮಕ್ಕಳು? ಅವಕ್ಕೆಲ್ಲಿಂದ ಅಂಗಿ ತರಲಿ? ಅಷ್ಟೇ ಅಲ್ಲ--ಅಲ್ಲಿ ಹೋದಾಗ "ರುಕ್ಮಮ್ಮ ಕೊರಳಿನ ಗೆಜ್ಜೆಟಿಕೆ ಕಾಣುವುದಿಲ್ಲವಲ್ಲ. ಸರವೂ ಇಲ್ಲ, ಬೋಳು ಕೈಯಲ್ಲಿ ಬಂದಿರಿ" ಎಂದು ಹೇಳಿದರೆ ಗತಿಯೇನು? 'ಗಂಡನು ಬ್ಯಾಂಕಿನಲ್ಲಿ ಅವನ್ನು ಅಡವಿರಿಸಿದ್ದಾರೆ ಎನ್ನಲೇ! ಅದನ್ನೆಲ್ಲ ಯೋಚಿಸಿಕೊಂಡು ಅವಳೆಷ್ಟೋ ಬಾರಿ, ಹೋಗದೇ ತಪ್ಪಿಸಿಕೊಂಡಳು. ಕೊನೆಗೊಂದು ದಿನ, ಗಂಡನೊಡನೆಯೂ ಅದನ್ನು ಹೇಳಿದಳು. "ಹೀಗೆ, ಅವರ ಮನೆಗೆ ಬರಲು ನಿತ್ಯ ಹಟವನ್ನು ಮಾಡುತ್ತಾರೆ. ಹೋಗದಿದ್ದರೆ ಏನು ತಿಳಿಯುತ್ತಾರೆಯೋ ಏನೋ. ಅವಳಿಗೆಷ್ಟು ಹೆಮ್ಮೆಯಪ್ಪ, ಎಂದು

ತಿಳಿದರೆ?" ಎಂದಳು.

"ನಾನೀಗ ಅಲ್ಲಿಗೆ ಹೋಗುವುದಿಲ್ಲವೇ? ಎಷ್ಟು ಒಳ್ಳೆಯವರು ಅವರು. ಹೋದಾಗ ಕಾಫಿ ಕೊಡದ ದಿನವಿಲ್ಲ."

"ನೀವದನ್ನು ಹೇಳುತ್ತೀರಿ. ಸರಿ, ಆದರೆ ಅವರು ಬಂದಾಗ ನಾವು ಕಷಾಯದ ನೀರನ್ನು ಅವರಿಗೆ ಕೊಡುವುದು ಕಷ್ಟವಾಗಿದೆ!"

"ಏನಾಯಿತು; ನಾವು ಬಡವರೆಂದು ಅವರಿಗೆ ಗೊತ್ತೇ ಇದೆ."

"ಎಷ್ಟು ಗೊತ್ತಿದ್ದರೂ, ಅಲ್ಲಿಗೆ ಹೋಗುವಾಗೊಂದು ಸಮನಾದ ಅರಿವೆ ಬೇಡವೇ, ಮಕ್ಕಳಿಗೂ, ನನಗೂ."

ಅಚ್ಯುತನಿಗೆ ನೆನಪಾಯಿತು–ತಾನು ಮನೆಗೆ ಹೊಸ ಅರಿವೆಗಳನ್ನು ತಾರದೆ ವರ್ಷ ಎರಡಾದುವೆಂದು. ಆತ ಮಾತನಾಡಲಿಲ್ಲ. ಕೊನೆಗೆ ಅದೇ ಶನಿವಾರ ಸೌಡಕ್ಕೆ ಹೋಗಿ ದೋಣಿಯಲ್ಲಿ ಕುಳಿತು ಕುಂದಾಪುರಕ್ಕೆ ಹೋಗಿ ಬಂದ. ಬರುವಾಗ ಹೆಂಡತಿಗೊಂದು ಸಿತ್ಯ ಸೀರೆ, ಒಂದು ತುಸು ಹೆಚ್ಚಿನ ಸೀರೆಯನ್ನು ತಂದನು. ತಾನು ಮಾತ್ರ ಹಾಗೆಯೇ ಬರುವಂತಾಯಿತು. ಅದನ್ನು ಕಂಡು "ನಿಮಗೆ?" ಎಂದಳು ರುಕ್ಮಿಣಿ. "ನನಗೆ ಇದಿಲ್ಲವೇ? ಇದು ಇನ್ನೂ ಒಂದು ವರ್ಷಕ್ಕೆ ಸಾಕು. ಜುಬ್ಬ ಹರಿದರೆ, ಹಳೆಯ ಕೋಟಿದೆ; ಮೇಲಿಂದ ಹಾಕಿಕೊಂಡರಾಯಿತು" ಎಂದ. ರುಕ್ಮಿಣಿಗೆ ಆ ದಿನ, ಹಿಗ್ಗಿನ ಬದಲು ವ್ಯಥೆಯೇ ಆಯಿತು. ಅವಳು ಮಕ್ಕಳನ್ನು ಕರೆದಳು—ಕೃಷ್ಣಗೆ ಹೊಸ ಅಂಗಿಯನ್ನು ತೊಡಿಸಿದಳು. ಅಂಗಿ ಬಂದ ಮರುಳಿಗೆ, ಆತ ಗೆಳೆಯರನ್ನು ಕರೆದುಕೊಂಡು, ದೇವಸ್ಥಾನ, ಅಗ್ರಹಾರಗಳನ್ನೆಲ್ಲ ಸುತ್ತಿ ಬರಲು ಹೊರಬಿದ್ದನು. ಸಂಜೆ ರಾಮರಾಯರ ಮನೆಗೆ, ಹೊಸ ಸೀರೆ ಉಟ್ಟುಕೊಂಡು ಹೊರಡುವೆನೆಂದು ರುಕ್ಮಿಣಿ ಮಾಡಿದ ಯೋಚನೆ ವ್ಯರ್ಥವಾಯಿತು. "ಮರುಳು ಮಾಣಿ, ಒಂದು ಗಳಿಗೆಯಲ್ಲಿ ಅಂಗಿಯನ್ನು ಹೊಲಸು ಮಾಡಿಕೊಂಡಿತಲ್ಲ!" ಎಂದು ಪಯಣವನ್ನು ನಿಲ್ಲಿಸಿ ಸುಮ್ಮನಿರಬೇಕಾಯಿತು.

ಆಕೆ ಅಂಗಿಯನ್ನು ಒಗೆದು ಹಾಕಿ, ಮರುದಿನ ಹೋಗುವೆನೆಂದುಕೊಂಡಳು. ಮರುದಿನ ಅಲ್ಲಿಗೆ ಹೋಗಿಯೂ ಹೋದಳು. ಆದರೆ, ಕೃಷ್ಣನ ಹೊಸ ಅಂಗಿಯ ಅರೆವಾಸಿ ಬಣ್ಣವನ್ನು, ಊರಿನ ಕೆರೆ ನೀರು ಕುಡಿದುಬಿಟ್ಟಿತ್ತು!

ಅಂತು ಎಷ್ಟೋ ಕಾಲದ ಬಳಿಕ, ಶ್ಯಾಮರಾಯರ ಮನೆಗೆ ರುಕ್ಮಿಣಿ ಹೋದುದಾಯಿತು. ಅವರ ಹೆಂಡತಿ ತುಂಗಾಬಾಯಿ, ರುಕ್ಮಿಣಿಯ ಚಿನ್ನಾಭರಣಗಳನ್ನು ಇಣಿಕಿ ನೋಡಲಿಲ್ಲ. ಬದಲು ತುಂಬ ಪ್ರೀತಿಯ ಮಾತುಗಳಿಂದ ಬರಮಾಡಿಕೊಂಡು ಉಪಚರಿಸಿದಳು. ಅವಳ ತಾಪದಲ್ಲಿ ತುಂಬ ಸಹಾನುಭೂತಿಯನ್ನು ತೋರುತ್ತ "ನಮ್ಮ ಯಜಮಾನರು ಹೇಳುತ್ತಿದ್ದರಪ್ಪ, 'ಅವಳು ಮೇಲೆ ಬಿದ್ದುದೇ ಕಷ್ಟ; ಪಾಪ! ಮದ್ದಿಗೆ ಕಡಿಮೆ ಕಡಿಮೆ ನೂರಿನ್ನೂರು ರೂಪಾಯಿ ಬೇಕಾಗಬಹುದು' ಎನ್ನುತ್ತಿದ್ದರು" ಎಂದಳು. ರುಕ್ಮಿಣಿ ಅವರ ಧರ್ಮಾರ್ಥ ಚಿಕಿತ್ಸೆಯ ಋಣವನ್ನು ಸ್ಮರಿಸಿಕೊಂಡಳು. "ನೋಡಿ ತುಂಗಮ್ಮ, ಒಂದು ಜೀವ ಬದುಕಿ, ಬೆಳಕಿಗೆ ಬರಬೇಕಾದರೆ, ಎಷ್ಟೋ ಜನರ ಋಣ ತಿಂದುಕೊಂಡಿರಬೇಕಲ್ಲವೆ" ಎಂದಳು. ಅವಳಿಗೆ, ತಾನು ಈ ಬಾರಿ ಬದುಕಿ ಉಳಿಯಲು, ಗಂಡನು ತನಗಾಗಿ ದಣಿದ ಯಾವತ್ತೂ ನೆನವರಿಕೆಗಳಾದುವು.

* * * * *

ಈ ಮಧ್ಯೆ ಲಕ್ಷ್ಮಮ್ಮ ಮಗನಿಗೆ ಎರಡು ಮೂರು ಬಾರಿ-"ಮಗು, ನಿನಗೆ ಈ ಕಡೆಯ ನೆನಪೇ ಹೋಯಿತೇ? ಒಮ್ಮೆಯಾದರೂ ಊರಿಗೆ ಬರಬಾರದೇ? ಹೋಗಿ ಎರಡೂವರೆ ವರ್ಷವಾದರೂ, ನಿಮ್ಮ ಮುಖ ಕಾಣುವ ಹಂಬಲವಾಗುವುದಿಲ್ಲವೇ? ಒಂದು ಸಾರಿ ಮನೆಗೆ ಬಂದು ಹೋಗಿ" ಎಂದು ಕಾಗದ ಬರೆಯಿಸಿದಳು. ಅಚ್ಯುತ ಇಲ್ಲಿನ ಯಾವೊಂದು ಕಷ್ಟಗಳನ್ನು ಕುರಿತು ತಾಯಿಗೆ ಬರೆದಿಲ್ಲ. ಹೆಂಡತಿ ಮೂರನೆಯ ಬಾರಿ ಹಡೆದುದನ್ನು ಬರೆದರೂ, ಅವಳ ಬೇನೆಯ ವಿಚಾರ ತಿಳಿಸಿರಲೇ ಇಲ್ಲ. ಈ ಪತ್ರಕ್ಕೆ ಉತ್ತರವಾಗಿ, "ಅಮ್ಮ, ಈ ಬೇಸಗೆಯ ರಜೆಗೆ ಶತಪ್ರಯತ್ನ ಮಾಡಿ ಬರುತ್ತೇವೆ" ಎಂದು ಬರೆದನು. ಎಲ್ಲರೂ ಹೊರಡುವುದಾದರೆ ಸಾಲದ ಶತಪ್ರಯತ್ನವೇ ಗತಿಯೆಂದು ಅವನೂ ಬಲ್ಲ. ರುಕ್ಮಿಣಿಯೂ ಬಲ್ಲಳು. "ಎಪ್ರಿಲು ತಿಂಗಳು ಬರಲು ಅಮ್ಮ ಊರಿಗೆ ಬರಲಿಕ್ಕೆ ಹೇಳಿದ್ದಾಳೆ. ಹೋಗದಿದ್ದರೆ ಬೇಸರವಾದೀತು. ನಿನಗೂ ನಿನ್ನ ತಂದೆಯನ್ನು ನೋಡಲು ಹಂಬಲವಾಗುವುದು ಸಹಜ. ಎಪ್ರಿಲು ಸಂಬಳ ಕೈಯಲ್ಲಿ ಉಳಿಯಲಿಲ್ಲ. ಮೇ ತಿಂಗಳಿನಲ್ಲಿ ಮಳೆಗಾಲದ ದಾಸ್ತಾನು ಆಗಬೇಕು; ಊರಿಗೆ ಹೋದರೆ ಅದಿಲ್ಲ. ಅದಿದ್ದರೆ ಇದಿಲ್ಲ" ಎಂದನು. ರುಕ್ಮಿಣಿಯ

ಬಲವಂತಕ್ಕೆ ಮೇ ತಿಂಗಳಿನ ಸಂಬಳ ಕೈಸೇರಿದ ಮರುದಿನವೇ, ಅವನೊಬ್ಬನೇ ಎಂಟು ದಿವಸಗಳ ಮಾತಿಗೆ ಊರಿಗೆ ಹೋಗಿ ಬರುವುದೆಂದು ನಿಶ್ಚಯಿಸಿದನು. ಕೊನೆಗೆ ಮನಸ್ಸು ಏನೂ ತಡೆಯದೆ, ಕೃಷ್ಣನನ್ನು ಎತ್ತಿಕೊಂಡು, ಅವನನ್ನು ಕಾಲ ಮೇಲಕ್ಕೆ ಕುಳ್ಳಿರಿಸಿಕೊಂಡರೆ ಟಿಕೇಟಿಲ್ಲ, ಎಂಬುವ ಭರವಸೆಯಿಂದ ಊರನ್ನು ಬಿಟ್ಟನು.

ಆತ ನೇರಾಗಿ ಹೋದುದು ಪಂಜಕ್ಕೆ. ಕಡಬಕ್ಕೆ ಹೋಗಲು ಮನಸ್ಸಾಗಿತ್ತು. ಆದರೆ ಯಾರಲ್ಲಿಗೆ ಹೋಗಲಿ? ಮಾವನ ಮನೆಗೆ ಹೋದಾಗ "ಅವಳನ್ನು ಕರೆತರಲಿಲ್ಲವೇಕೆ" ಎಂದು ತೀರ ಜೀರ್ಣರಾಗಿದ್ದ ಪುಟ್ಟಯ್ಯನವರು ಬೇಸರಿಸಿದರು. ಆದರೂ ಮೊಮ್ಮಗನ ದರ್ಶನದಿಂದ ಮುಖ ಉಬ್ಬಿತು. ಅವನ ಬಾಯಿಂದ ಅವರು, ಮಗಳ ಮನೆಯ ಹಲವು ಸುದ್ದಿಗಳನ್ನು ತಪ್ಪು, ಒಪ್ಪಾಗಿ ತಿಳಿಯುವಂತಾಯಿತು. ಈಗ ಅಚ್ಚುತಗೆ, ತಾಯಿ ಮನೆಯಲ್ಲೂ ಸುಖದೊರೆಯಲಿಲ್ಲ. ಅಲ್ಲಿ, ಮಗನ ಬರಕ್ಕಾಗಿ ಹಾತೊರೆಯುತ್ತಿದ್ದ ಲಕ್ಷ್ಮಮ್ಮ, ಮಗನನ್ನು ಕಂಡುದಾಯಿತು. ಲಕ್ಷ್ಮಮ್ಮ ದಣಿದು ಈಗಾಗಲೇ ವಯಸ್ಸಾದವನಂತೆ ತೋರುವ ಮಗನನ್ನು ಕಂಡು ಏನೇನೋ ಅಂದುಕೊಂಡಳು. "ಅಲ್ಲಿ, ಮನೆಯಲ್ಲಿ ಅಕ್ಕಿ ಇರುವಾಗ, ನಮ್ಮ ಅವಸ್ಥೆ ನೋಡಬಾರದಿತ್ತೇ? ಈಗ ದೂರದ ಪರವೂರಲ್ಲಿ ಪ್ರತಿಯೊಂದನ್ನು ಕ್ರಯಕ್ಕೆ ತೆಗೆದುಕೊಂಡು ಹೇಗೆ ದಿನ ಹೋಗುತ್ತದೆ" ಎಂದು ಆಕೆ ತುಂಬ ವ್ಯಥೆಗೊಂಡಳು.

ಬಂದ ದಿನವೆಲ್ಲಾ ಎಂಬಂತೆ, ರುಕ್ಮಿಣಿಯ ಗುಣವನ್ನು ಕೊಂಡಾಡಿದಳು ಅವಳ ಅತ್ತೆ. ಸೀತೆಯೂ ಅವಳೊಡನೆ ಸೇರಿದಳು, "ಅಯ್ಯೋ, ನಮ್ಮೆಲ್ಲರ ಗತಿಯೇ. ಎಲ್ಲೆಲ್ಲಿಗೆ ಸೇರಿ, ಏನೇನಾದೆವು?" ಎಂದಳು ಸೀತೆ. "ಮಗು, ಅಂಥ ಪಾಂಡವರಿಗೇ ವನವಾಸ ತಪ್ಪಲಿಲ್ಲ. ಶನಿ ಹಿಡಿದ ಕಾಲದಲ್ಲಿ ಹಾಗೇನೆ" ಎಂದಳು ತಾಯಿ. ಅಂತು ಅಚ್ಚುತನಿಗೆ 'ಇವರೇ ವಾಸಿ. ತಾಯಿ, ಮಗಳು ಸೇರಿ ಹೇಗೂ ಮನೆಯನ್ನು ಸಾಗಿಸಿಕೊಂಡು ಹೋಗುತ್ತಿದ್ದಾರೆ' ಎಂದು ತೋರಿತು..

ಅಚ್ಚುತ ತಾನು ಊರಿಗೆ ಬಂದ ವಿಚಾರವನ್ನು ಜಾನ್‌ಸನರಿಗೂ ಬರೆದಿದ್ದ. ಅವರ ನೆನಪನ್ನು ಮರೆಯಲಾರದೆ ತಾನೊಮ್ಮೆ ಕಡಬಕ್ಕೂ ಹೋದ. ತಡೆಯದ ಮನಸ್ಸಿನಿಂದ ಕೊಂಬಾರಿಗೂ ಹೋದ. ತಮ್ಮ

ಮನೆಯ ಕಡೆಗೆ ನುಗ್ಗಿದ. ಮನೆಯು ಆರೈಕೆ ಇಲ್ಲದೆ ಕುಸಿದಿತ್ತು. ಅದು ವಾಸಕ್ಕೇನೇ ವ್ಯರ್ಥವಾಗಿತ್ತು. ಅದನ್ನು ನೋಡಲು ಯಾಕೆ ಬಂದೆ--ಎನಿಸಿತು. "ಅಣ್ಣುವನ್ನು ಕಾಣುತ್ತೇನೆ" ಎಂದು ಅವನಲ್ಲಿಗೆ ಹೋದನು. ಅಲ್ಲಿ ಕಾಳನ ದರ್ಶನವಾಯಿತು. "ಮುದುಕ ಹೇಗಿದ್ದಾನೆ?" ಎಂದು ಆತನನ್ನು ಕೇಳಿದ.

"ಮಾವನೇ? ಮಾವ ಹೋಗಿ ವರ್ಷವಾಯಿತು" ಎಂಬ ಉತ್ತರ ಬಂದಿತು.

ಅಚ್ಯುತನ ಮನಸ್ಸು "ಅಯ್ಯೋ, ನಾನೇತಕ್ಕೆ ಬಂದೆ" ಎಂದಿತು. ಅಲ್ಲಿಂದಲೇ ಹಿಂದಿರುಗಿದ. ಹೋಗುವ ದಾರಿಯಲ್ಲಿ ಕಟ್ಟಿಗೆ ಸವರುತ್ತ ಸುಬ್ಬಿ ನಿಂತಿದ್ದಳು. ಅವಳ ಮೂರು ವರ್ಷದ ಕೂಸು, ನೆಲದಲ್ಲಿ ಆಡುತ್ತಿತ್ತು! ಸುಬ್ಬಿಗೆ ಅಯ್ಯನ ದರ್ಶನದಿಂದ ರೋಮಾಂಚವಾಯಿತು! "ಅಯ್ಯ" ಎಂದಳು.

ಅಚ್ಯುತ ಆಚೀಚೆ ನೋಡಿದ; 'ಸುಬ್ಬಿ!' ಆಕೆ ಮೊದಲಿನಂತಿರಲಿಲ್ಲ. ಅವಳ ಮುಖ ಬಾಡಿ ಸಣ್ಣಗಾಗಿತ್ತು, ನಿರುತ್ಸಾಹವಾಗಿತ್ತು, ಅವಳ ಚಹರೆಯೇ ಬದಲಾಗಿತ್ತು.

"ಹೇಗಿದ್ದೀ ಸುಬ್ಬಿ ನೀನು? ನಿಮ್ಮನ್ನೆಲ್ಲ ನೋಡಿ ಹೋಗುವ ಎಂದು ಬಂದೆ."

"ಇದ್ದೇವೆ. ಸಾಯದೆ, ಬದುಕದೆ."

"ನಿನ್ನಜ್ಜ ಹೋದನಂತೆ-ಪಾಪ! ಅದಿರಲಿ, ಈಗಿನ ನಿಮ್ಮ ಧನಿಯರು ಹೇಗಿದ್ದಾರೆ?"

"ನನಗೇನು ಗೊತ್ತು ಒಡೆಯ. ವರ್ಷ ವರ್ಷವೂ ಗಾಡಿ ಬರುತ್ತದೆ; ಗೇಣಿಯ ಅಕ್ಕಿ ಸಲ್ಲುತ್ತಾ ಇದೆ."

"ಹೋಗುತ್ತೇನೆ. ಪಂಜಕ್ಕೆ ಹೋಗಬೇಕು."

"ಹೋಗುತ್ತೀರಾ ಒಡೆಯ" ಎಂದಳಾಕೆ. ಆಕೆಯ ಕಣ್ಣಲ್ಲಿ ಹನಿಯುದುರಿತು. ಅಚ್ಯುತ ಅವಳನ್ನು ತಿರುಗಿ ನೋಡಲಾರದಾದ. ತನ್ನನ್ನು ಆ ದಿನ ಅವಳು ಬೀಳ್ಕೊಟ್ಟ ಚಿತ್ರವನ್ನು ನೆನೆದು, ಅವನು ತುಂಬ ನೋವುಗೊಂಡ. ತನ್ನ ಮೂರ್ಖತನವನ್ನು ನೆನೆದು ನಾಚಿದ. ತಾನು ಆಕೆಯ ಹಂಬಲವನ್ನು ಕಡಿಯಲು ಶಕ್ತನಾದೆ; ಆದರೆ ಆಕೆಯ ಬಾಳಿನ ಅತೃಪ್ತಿ

ಹಾಗೆಯೇ ಉಳಿದಿರಬೇಕೆಂದು-ಈಗ ಮನಗಂಡ. ಪ್ರಯತ್ನಪೂರ್ವಕ ವಾಗಿ ತನ್ನ ಹೆಜ್ಜೆಗಳನ್ನು ಅಲ್ಲಿಂದ ಓಡಿಸಿದ. ತಿರುಗಿ ಅವಳ ದರ್ಶನಕ್ಕೆ ಸ್ಥೈರ್ಯ ಉಳಿಯಲಿಲ್ಲ! ಅವಳು ಮರೆಯಾದ ಮೇಲೆ ತಿರುಗಿ ನೋಡಿದ; "ಪಾರಾದೆ" ಎಂದುಕೊಂಡ.

ಹತ್ತು ದಿನಗಳ ರಜೆಯನ್ನು ಹೇಳಿ ಬಂದಿದ್ದ ಅಚ್ಚುತ. ಶಂಕರ ನಾರಾಯಣದಲ್ಲಿ ಬೇಸಗೆಯಲ್ಲಿ ಜ್ವರದ ಉಲ್ಬಣವಿದೆ. ಮಕ್ಕಳಿಗೆ ಆಗಾಗ ಜ್ವರಬರುತ್ತದೆ. ತಾನು ಬಹಳ ದಿನ, ದೂರ ಇರಬಾರದೆಂದು ಯೋಚಿಸಿದ್ದ. ಅದರಿಂದಾಗಿ ಅವನು ತನ್ನ ಮಾವ, ಅಕ್ಕ, ತಾಯಂದಿರನ್ನು ವ್ಯರ್ಥೆಯಿಂದಲೇ ಬೀಳ್ಕೊಟ್ಟ. ಈ ಬಾರಿ ಕೃಷ್ಣ, ಎಂಟು ದಿನದ ಗೆಳೆತನದಿಂದ, ಅಜ್ಜಿಯ ಮಗ್ಗುಲನ್ನು ಬಿಡಲೊಲ್ಲೆನೆಂದನು. ಲಕ್ಷ್ಮಮ್ಮನಿಗೆ ಮಗನ ನೆನಪಿಗಾಗಿ, ಮೊಮ್ಮಗನಾದರೂ ಬಳಿಯಲ್ಲಿ ಇರಲೆಂದು ಅನಿಸಿತು. ಹಾಗಾಗಿ ಕೃಷ್ಣನನ್ನು ಅಲ್ಲಿ ಬಿಟ್ಟು ಹೋಗುವಂತಾಯಿತು. ಅಚ್ಚುತನ ಅರ್ಧವನ್ನೇ ಅಲ್ಲಿ ಬಿಟ್ಟಂತಾಯಿತು! ರುಕ್ಮಿಣಿ ಏನೆಂದಾಳೋ ಎಂಬ ಭೀತಿಯಾಯಿತು! ಆದರೆ "ಕಷ್ಣ ಯಾರು? ತಾನಾರು? ತಾನು ತನ್ನ ತಾಯ ಋಣ ಎಷ್ಟು ತೀರಿಸಿದ್ದೇನೆ? ಅವಳ ಪ್ರೇಮಕ್ಕೂ ಹಕ್ಕಿಲ್ಲವೇ?" ಎಂದು ಮೌನವಾಗಿ ಹಿಂದಿರುಗಿದ. ಮನೆಯನ್ನು ಸೇರುವ ತನಕ ಊರಿನ ನೆನಹುಗಳು ಅವನ ಬೆನ್ನುಹತ್ತಿ ಬಂದುವು. ಅವನ್ನೆಲ್ಲ ರುಕ್ಮಿಣಿಗೆ ವಿವರವಾಗಿ ತಿಳಿಸುವ ತನಕ ಹೊರೆಯಂತೆ ಹೊತ್ತಿದ್ದನು. ಆದರೆ ರುಕ್ಮಿಣಿಗೆ ಹೇಳಲಾರದ ಒಂದು ಹೊರೆ ಮಾತ್ರ ಅವನನ್ನು ಕಾಡುತಿತ್ತು. ಅದು ಸುಬ್ಬಿಯ ಪ್ರಣಯದ ಪ್ರಕರಣ. ಅಂತು ಅಚ್ಚುತ ಶಂಕರನಾರಾಯಣವನ್ನು ಸೇರಿದ. ಊರಿನ ವಾರ್ತೆಗಳನ್ನೆಲ್ಲ ನಾಲ್ಕು ದಿನಗಳ ತನಕ ಇನಿಯಳಿಗೆ ತಿಳಿಸುತ್ತಲೇ ಇದ್ದ.

* * * * *

ಅದೀಗ ಅವರು ಶಂಕರನಾರಾಯಣಕ್ಕೆ ಬಂದು, ನಾಲ್ಕನೆಯ ವರ್ಷವೇ ಕಾಲಿರಿಸಿದೆ. ಈ ಸಮಯದಲ್ಲಿ ರುಕ್ಮಿಣಿಯ ಆಭರಣಗಳೆಲ್ಲ ಒತ್ತೆಯಾಗಿದ್ದುವು. ಈಗ ಅದೂ ಹಳೆಯ ಪ್ರಪಂಚವೇ ಆಗಿದೆ; ಹೊಸತೆಂಬುದೇನಿಲ್ಲ. ಮನೆಯಲ್ಲಿ ಕೃಷ್ಣನೊಬ್ಬನು ಕಡಿಮೆ. ಶಾಲೆ ತೊಡಗಿದ ಒಂದೆರಡು ತಿಂಗಳಲ್ಲಿ ತಿರುಗಿ ಸಂತಾನಶ್ರೀಯು ಒಲಿಯುವ ಚಿಹ್ನೆ

ರುಕ್ಮಿಣಿಯಲ್ಲಿ ಕಾಣಿಸಿತು. ಮೊದಲಿನ ಆತುರಗಳು, ಭೀತಿಗಳು, ಬಡತನಗಳು ಅವರ ದಿಗಂತದಲ್ಲಿ ಉದಯಿಸಿದುವು. “ಇವೆಲ್ಲ ನಿತ್ಯ ಕಾಯಿಲೆಗಳು” ಎಂದು ಅಚ್ಯುತನಿಗೆ ಮೈಯ್ಯುಂಡು ಹೋಗಿದೆ. “ನಾವಿರುವುದೇ ನರಳುವುದಕ್ಕೆ” ಎಂಬ ಸಿದ್ಧಾಂತವನ್ನು ಅವನು ಎಂದೇನೆ ಮಾಡಿದ್ದ. ಶಾಲೆಯ ಕೆಲಸಗಳನ್ನು ತುಂಬ ಚೆಲುವಿನಿಂದಲೇ ನಡೆಯಿಸುತ್ತಿದ್ದ. ಆ ವರ್ಷ ಯಕ್ಷಗಾನ ಕಲೆಯ ಉದ್ಧಾರಕ್ಕಾಗಿ ತಿಂಗಳಿಗೊಮ್ಮೆ ಊರವರನ್ನು ಕಲೆಯ ಹಾಕಿ, ಒಂದು ಯಕ್ಷಗಾನ ಕೂಟ ಏರ್ಪಡಿಸಿದನು. ಅವನದೇ ವರ್ಚಸ್ಸಿನಿಂದ ಅವು ಸಾಧ್ಯವಾಗದೆ ಹೋದರೂ, ಶಾಮರಾಯರ ಬೆಂಬಲದಿಂದ, ಅಂಥ ತಾಳಮದ್ದಲೆ ಕೂಟಗಳ ಏರ್ಪಾಡಾಯಿತು. ಆ ಊರವರ ‘ಬಾಯಲ್ಲಿ ಅಚ್ಯುತರಾಯರ ಅರ್ಥ ಚಿಂತೆಯಿಲ್ಲಪ್ಪ’—ಎಂಬ ಗೌರವವೂ ಅವನಿಗೆ ದೊರಕಿತು.

ಇತ್ತ ಮನೆಯ ಕೊರಗು, ಹಿಂದಿನ ವರ್ಷಕ್ಕಿಂತ ಕಡಿಮೆಯಾಗಲಿಲ್ಲ. ಯಾರ ಹತ್ತಿರ ಹೇಳಬೇಕು? ಯಾರು ಅದನ್ನೆಲ್ಲ ಕೇಳಬೇಕು?

ಈ ವರ್ಷ ಒಂದು ಒಳ್ಳೆಯ ಘಟನೆಯಾಯಿತು. ಅದು ಅವರ ಶಾಲೆಗೆ ಹೊಸ ಇನ್ಸ್‌ಪೆಕ್ಟರರ ಸಂದರ್ಶಣೆಯಾದುದು. ಅವರು ಅಲ್ಲಿಗೆ ಹೊಸಬರು. ಅವರು ಶಾಲೆಗೆ ಬಂದಿಳಿದು ಅಚ್ಯುತರಾಯನ ಮೋರೆಯನ್ನು ಕಂಡು ಆಶ್ಚರ್ಯತಾಳಿದರು. ಅವರ ಕೆಲಸವನ್ನು ಮುಗಿಸಿದ ಬಳಿಕ, ಅಚ್ಯುತರಾಯನನ್ನು “ಕರೆದು ಏನು, ನಿಮಗೆ ಇಲ್ಲಿಗಾಗಿದೆಯೇ?” ಎಂದರು. ಅವರು ಅವನ ಪರಿಚಿತರೇ ಆದ ಸದಾನಂದರಾಯರು. “ಏನೋ ಸ್ವಾಮಿ, ವಿಧಿ ಕರೆದಲ್ಲಿಗೆ ಹೋಗುವುದು” ಎಂದು ಸಪ್ಪೆ ಮೋರೆ ಹಾಕಿ ಆತ ನುಡಿದ. “ಆಗಲಿ, ನಾನಿಲ್ಲಿಗೆ ಬಂದಿದ್ದೇನೆ. ಕೊನೆಗೆ ಏನಾಗದೆ ಹೋದರೂ, ನಿಮಗೆ ಕರಾವಳಿಯ ಯಾವ ಶಾಲೆಗಾದರೂ ವರ್ಗ ಮಾಡಿಸುವ. ನಿಮ್ಮ ಮನೆಯವರೆಲ್ಲ ಕ್ಷೇಮವೇ? ನಿಮ್ಮ ತಾಯಿ ಎಲ್ಲಿದ್ದಾರೆ ಈಗ”-ಎಂದೆಲ್ಲ ವಿಚಾರಿಸಿದರು. ಅವರಿಗೆ ತಾಯಿ ಮಕ್ಕಳ ಕತೆಗಳನ್ನೆಲ್ಲಾ ಹೇಳಬೇಕಾಯಿತು. ಅವರ ದರ್ಶನ, ಆ ವರ್ಷದಲ್ಲೇ ಅವನಿಗೆ ಆದೊಂದು ಅತಿ ಸಂತೋಷದ ಪ್ರಸಂಗವೆನಿಸಿತು. ಅವರು ಪಟ್ಟ ಕನಿಕರ, ಅವರು ತೋರಿದ ಸಹಾನುಭೂತಿ, ಆ ವರ್ಷದ ಬಡತನದ ವ್ಯಥೆಯಲ್ಲಿ ಅವನಿಗೆ ದೊರಕಿದ ಹಿರಿಯ ಸಮಾಧಾನವಾಗಿತ್ತು. ಅಲ್ಲದೆ

ಅವನ ಶಾಲೆಯ ದುಡಿತದ ಸಲುವಾಗಿಯೂ ಇನ್ಸ್‌ಪೆಕ್ಟರರಿಂದ ಹೆಚ್ಚಿನ ಪ್ರಶಂಸೆಯು ದೊರಕಿತು.

ಸದಾನಂದರಾಯರ ಕೃಪೆಯಿಂದ ದಶಂಬರ ರಜೆಬರುವುದರೊಳಗೇನೆ ಅಚ್ಯುತನಿಗೆ ವರ್ಗವಾಗುವಂತಿತ್ತು. ಆದರೆ ಅವನೇ ನಡುವೆ ಓಡಿಹೋಗಿ,ಸದಾನಂದರಾಯರ ದರ್ಶನ ಮಾಡಿಕೊಂಡು,ಅದನ್ನು ತಡೆಯಬೇಕಾಯಿತು. "ಹೆಂಡತಿ ಗರ್ಭಿಣಿ, ಈಗ ಮನೆ ಬಿಡಲು ಕಷ್ಟವಾಗಿದೆ. ಎಪ್ರಿಲಿನಲ್ಲಾದರೆ ಎಲ್ಲಿಗೆಬೇಕೊ ಅಲ್ಲಿಗೆ ಓಡುವೆನೆ"ಂದು ಹೇಳಿಕೊಂಡ. ಸದಾನಂದರಾಯರು ಒಮ್ಮೆಗೇ ಅಚ್ಯುತನನ್ನು ಅವನ ಊರಿಗೆ ಕಳುಹಲು ಶಕ್ತರಾಗಲಿಲ್ಲ. ಆದರೆ ತಮ್ಮ ಸ್ನೇಹದ ದೆಸೆಯಿಂದ, ಅವನನ್ನು ಕುರ್ಚಿಪಳ್ಳಕ್ಕೆ ವರ್ಗಮಾಡುವೆನೆಂದರು. ಕುರ್ಚಿಪಳ್ಳ,ಎನ್ನಲು ಅಚ್ಯುತನ ಕಿವಿ ನಿಮಿರಿತು! ಅದು ನಾರಾಯಣ ಮಾಸ್ತರರ ಶಾಲೆ! ಅದಲ್ಲದೆ ಕಡಲ ಕರಾವಳಿ. ಮಲೇರಿಯದ ಭೀತಿ ಇಲ್ಲದ ಊರು; ತನ್ನ ಊರಿಗೇನೆ ಹೋಗಿ ಆಗಬೇಕಾದುದೇನಿದೆ?

ಎಪ್ರಿಲಿನಲ್ಲಿ ಅವನಿಗೆ ವರ್ಗವೂ ಆಯಿತು. ಆಗ ಶಾಮರಾಯರನ್ನು ಬೀಳ್ಕೊಡುವುದು ತುಂಬ ಕಷ್ಟವಾಯಿತು. "ಆಗಲಿ, ದೇವರು ನಿಮಗೆ ಒಳ್ಳೆಯದನ್ನು ಮಾಡಲಿ. ನಿಮ್ಮ ತಾಪತ್ರಯಗಳನ್ನು ನೆನೆದರೆ ನನಗೇ ವ್ಯಥೆಯಾಗುತ್ತದೆ. ಆದರೆ ನೋಡಿ; ನಾನು ಹೇಳುತ್ತೇನೆಂದು ಬೇಸರಪಡಬಾರದು. ರುಕ್ಮಿಣಿಯ ಕಡೆಗೆ ನೀವು ಇನ್ನೂ ಹೆಚ್ಚಿನ ಜಾಗ್ರತೆ ವಹಿಸಬೇಕು. ವರ್ಷ ವರ್ಷ ಹಡೆಯುತ್ತಹೋದರೆ, ಅವಳ ಆರೋಗ್ಯ ಕ್ಷಯಕ್ಕೆ ತಿರುಗೀತು" ಎಂದು ಎಚ್ಚರಿಸಿದರು.

ಅವರನ್ನು ಬೀಳ್ಕೊಟ್ಟಾಯಿತು. ಅಲ್ಲಿಂದ ತಾಯ ದರ್ಶನಕ್ಕೆಂದು ಪಂಜವನ್ನು ಸೇರಿದ.ದಾರಿಯುದ್ದಕ್ಕೂ ಶಾಮರಾಯರು ಅಂದ ಮಾತುಗಳು ಅವನನ್ನು ಕೊರೆಯುತ್ತಿದ್ದುವು. ರುಕ್ಮಿಣಿ ಇನ್ನು ಹಡೆಯಬಾರದೆಂಬ ವಿಚಾರ ಅವನಿಗೂ ಕಾಣಿಸುತ್ತದೆ. ಆದರೆ ತಾನೇನು ಬೇರೆ ಲಗ್ನವಾಗಬೇಕೆ-ಎಂಬ ಪ್ರತಿ ಸಮಸ್ಯೆಯೂ ಮನಸ್ಸಿಗೆ ಬರುತ್ತದೆ. ರಜೆಯ ಸಮಯವನ್ನು ಅತ ಪಂಜದಲ್ಲಿ ಕಳೆದನು. ಅಲ್ಲಿ ತಿರುಗಿ ರುಕ್ಮಿಣಿ ಕೃಷ್ಣರು ಸೇರಿದರು. ಬಹು ಸಮಯದ ಬಳಿಕ, ತನ್ನವರ ಎಡೆಯಲ್ಲಿ ರುಕ್ಮಿಣಿ ಇಷ್ಟೊಂದು ದಿನಗಳ ಚಿಂತೆಗಳನ್ನು ಮರೆತು, ನಗುತ್ತ ಕಳೆದ

ದಿನಗಳೆಂದರೆ ಅವೇನೆ!

ಅಚ್ಯುತ, ಒಮ್ಮೆ ಉಪ್ಪಿನಂಗಡಿಗೂ ನಡೆದುಹೋದ; ಕಡಬವನ್ನೂ ಸಂದರ್ಶಿಸಿ ಬಂದ. ಅವನ ಮನಸ್ಸು ತಿರುಗಿ ಮನೆಯ ಕಡೆಗೆ ಎಳೆಯಿತು. "ಹ್ಯಾಗೂ ಇರಲು ಋಣವಿಲ್ಲ; ಆದರೂ ನೋಡಬಾರದೇಕೆ" ಎಂದು ಕೊಂಬಾರಿಗೂ ಹೋದ. ಅವರ ಮನೆ ಈ ಬಾರಿ ನೆಲಸಮವಾಗಿತ್ತು! "ಅಯ್ಯೋ" ಎಂದುಕೊಂಡ. ಅಲ್ಲಿಂದಲೇ ಹಿಂದಿರುಗಿದ. ಅಣ್ಣುವಿನ ಅಳಿಯನ ಮನೆಯನ್ನು ನೋಡಲು ಹಂಬಲವೂ ಆಗಲಿಲ್ಲ. ಆದರೆ ಕಾಳನ ದರ್ಶನ ದಾರಿಯಲ್ಲಿಯೇ ಆಯಿತು. ಜಾನುವಾರು ಮೇಯಿಸಿಕೊಂಡು ಆತ ನಿಂತಿದ್ದ. "ಹ್ಯಾಗಿದ್ದೀ, ಕಾಳಾ" ಎಂದು ಅವನನ್ನು ವಿಚಾರಿಸಿದ. ಕಾಳನ ಮುಖ ಸಣ್ಣಗಾಯಿತು. "ಯಾಕಿರುವುದು ಹೇಳಿ?" ಎಂದನು. "ಏನು?" ಎಂದು ಕೇಳಲು "ಮಾವ ಹಾಗೆ ಹೋದರು; ಇವಳು ಹೀಗೆ ಹೋದಳು" ಎಂದ.

"ಏನೇನು?" ಎಂದು ಅಚ್ಯುತ ಆಶ್ಚರ್ಯಪಟ್ಟು ಕೇಳಿದನು. "ಸುಬ್ಬಿ ನನ್ನನ್ನು ಬಿಟ್ಟು, ಓಡಿಯೇ ಹೋದಳು" ಎಂಬ ಹೊಸ ಸುದ್ದಿ ಕಾಳನ ಬಾಯಿಂದ ಹೊರಟಿತು; ಅಚ್ಯುತನ ಕಿವಿಯನ್ನು ಚಕಿತನನ್ನಾಗಿ ಮಾಡಿತು. "ಎಲ್ಲ ಋಣಾನುಬಂಧ" ಎಂದು ನುಡಿದು ಅಲ್ಲಿ ನಿಲ್ಲಲಾರದೆ ನೆಟ್ಟಗೆ ಸರಿದು ಹೋದ. ಹೋಗುವಾಗ ಅವನ ಮನದಲ್ಲಿ "ಇನ್ನು ನಾನೇತಕ್ಕೆ ಕೊಂಬಾರಿಗೆ ಬರುವುದು? ಮನೆಯೇ, ಕೆಳೆಯೇ, ಬದುಕೇ? ಎಲ್ಲ ಮಣ್ಣುಗೂಡಿದ ಮಸಣಕ್ಕೆ ಹೋಗುವುದೇಕೆ! ಇದ್ದ ದುಃಖವನ್ನು ಹೆಚ್ಚಿಸುವುದಕ್ಕೇನು?" ಎಂದು ಚಿಂತೆ ತುಂಬಿಕೊಂಡು ಕಡಬಕ್ಕೆ ಬಂದ. ಅಲ್ಲಿ ಹಳೆಯ ಮಿತ್ರ ಜಾನ್‌ಸನರ ಭೇಟಿಯಾಯಿತು.

ಜಾನ್‌ಸನರು ಆ ರಾತ್ರಿ ಬಲು ಹೊತ್ತು ಅವನೊಡನೆ ಹರಟಿದರು. ಹರಟೆಯ ಹಿಗ್ಗಿನಲ್ಲಿ, ಉತ್ಸಾಹದಿಂದ — ಊರಿನ ಯಕ್ಷಗಾನ ಕಚೇರಿಯಲ್ಲಿ ತಾನೊಂದು ದಿನ ಅರ್ಥ ಹೇಳಿದ ಕತೆ, ನಾಗರಾಜ ತನಗೆ ಎದುರಾಳಿಯಾದುದು, ಅಲ್ಲಿ ಅವನು ಮಾತಿನ ನಂಜನ್ನು ತನ್ನ ವಿಷಯದಲ್ಲಿ ಕಾರಲು ಯತ್ನಿಸಿದುದು, ತಾನು ಅರ್ಥವನ್ನು ನಿಲ್ಲಿಸಿ, "ನಿನ್ನಂಥ ಘಟಿಂಗನಿಗೆ ಬಾಯ ಅರ್ಥ ಹೇಳುವುದಲ್ಲ, ಕೈ ಅರ್ಥ ಬೇಕು" ಎಂದು ರೇಗಿ ಅವನಿಗೇಟೇಟನ್ನು ಹೊಡೆದ ಪ್ರಸಂಗಗಳನ್ನು ಹೃದಯಂಗಮವಾಗಿ

ಬಣ್ಣಿಸಿದರು. ಆ ದಿನ ಜಾನ್ ಸನರ ಗತಿಗೋತ್ರ ಏನಾಗುತ್ತದೆಯೋ-ಎಂದು ಊರವರು ಅಂಜುತ್ತಿದ್ದರಂತೆ. ಆದರೆ ಅವರು ನೆಟ್ಟಗೆ ನಾಗರಾಜನಲ್ಲಿಗೆ ಹೋಗಿ "ನಾಗರಾಜ, ಒಂದು ಸಾರಿ ನೀನು ನನ್ನನ್ನು ಮಾತಿನಲ್ಲಿ ಗೇಲಿಮಾಡಿದ ಬಗ್ಗೆ, ಕೈಯಿಂದ ಉತ್ತರಕೊಟ್ಟಿದ್ದೇನೆ. ಅಲ್ಲಿಗೇನೆ ನಿನ್ನ ಅಧಿಕ ಪ್ರಸಂಗ ಮುಗಿಯಬೇಕು. ಜಾನ್ ಸನನ ಸುದ್ದಿ ನೀನು ಎತ್ತಬಾರದು. ಮುಂದೆಯೂ ಈ ಸೇಡಿನ ಶಿಲ್ಕು ಉಳಿಯುವುದಾದರೆ, ಒಂದೂ ನಾನು, ಒಂದೂ ನೀನು--ಯಾರಾದರೊಬ್ಬರಿಗೆ ನೀರಿನ ಋಣ ಮುಗಿಯಿತೆಂದು ತಿಳಿ" ಎಂದು ಹೆದರಿಸಿಯೇ ಬಿಟ್ಟರಂತೆ. ಅಲ್ಲಿಂದ ಮುಂದೆ, ನಾಗರಾಜ ಯಾರ ಸುದ್ದಿ ಮಾತನಾಡಿದರೂ, ಜಾನ್ ಸನರ ವಿಷಯದಲ್ಲಿ ಉಸಿರೆತ್ತುತ್ತಿರಲಿಲ್ಲವಂತೆ-ಎಂದು ಬಣ್ಣವಾಗಿ ಹೇಳಿದರು.

ಅದಕ್ಕೆ ಅಚ್ಚುತ ಕಪ್ಪುವನ್ನು ಸಲ್ಲಿಸಿದ:-"ಧೀರರೆಂದರೆ ನೀವಪ್ಪ. ನಾವು ಅವನಿಗೆ ಹೆದರಿ, ಯಾವ್ಯಾವ ಊರನ್ನು ಸೇರಿದೆವು". ಅದಕ್ಕೆ ಮಾಸ್ತರರು ಹಿಗ್ಗಿನಿಂದ "ಏನು ಹೇಳಿ, ನಿಮಗೀಗ ಕಡಬಕ್ಕೆ ಬರುವ ಇಷ್ಟವಿದೆಯೇ?ನಾಗರಾಜನಿಂದಲೇ ಅಷ್ಟು ಕೆಲಸಮಾಡಿಸುವ ಧೈರ್ಯ ನನಗಿದೆ" ಎಂದರು. ಅಚ್ಚುತ ನಕ್ಕು ಬಿಟ್ಟ. ಆದರೆ ಹಳೆಯ 'ಪಾಣಿಪತ'ದ ನೆನಪು ಅವನಿಗೆ ಸಾಕಾಗಿ ಹೋಗಿತ್ತು.



## ೧೮ನೆಯ ಅಧ್ಯಾಯ

ಮೇ ತಿಂಗಳ ರಜೆ ಮುಗಿದು ಬಂತು. ಆಗಾಗ ಜ್ವರಕ್ಕೆ ತುತ್ತಾಗುತಿದ್ದ ಹೆಂಡತಿ ಮಕ್ಕಳೊಡನೆ ಅಚ್ಚುತರಾಯನ ಸವಾರಿ ಕುರ್ಚಿಪಳ್ಳಿಯನ್ನು ಸೇರಿತು. ಶಂಕರನಾರಾಯಣದಲ್ಲಿ ವಿಸರ್ಜಿಸಿದ ಸ್ವಂತ ಬಿಡಾರವನ್ನು ಅವನು ಇಲ್ಲಿ ಸ್ಥಾಪಿಸಬೇಕು. ಅಲ್ಲಿದ್ದ ಎಮ್ಮೆಯನ್ನು ಮಾರಿದ; ಇಲ್ಲೊಂದನ್ನು ಕೊಂಡುಕೊಳ್ಳಬೇಕು. ಅಲ್ಲಿನ ಕುಡಿಕೆ ಮಡಿಕೆಗಳನ್ನು ಬಿಟ್ಟು ಬಂದಿದ್ದ; ತಿರುಗಿ ಅವನ್ನು ಸಂಗ್ರಹಿಸಬೇಕು. ಮಳೆಗಾಲದ ಕಟ್ಟಿಗೆಯ ಸಲುವಾಗಿ ನಾರಾಯಣರಾಯರಿಗೆ ಮುಂಚಿತವಾಗಿ ಪತ್ರ ಬರೆದಿದ್ದ. ಅವರು ಇವನಿಗಾಗಿ, ತನ್ನ ಮನೆಯ ಬಳಿ ಒಂದು ಬಿಡಾರ

ವನ್ನು ಹುಡುಕಿಟ್ಟಿದ್ದರು. ಈತ ಅಲ್ಲಿಗೆ ಬರುವನೆಂದು ಕೇಳಿ ಅವರಿಗೆ ಉತ್ಸಾಹವಾಗಿತ್ತು. ಅಚ್ಯುತ, ಪಂಜದಿಂದ ಐವತ್ತು ಅರವತ್ತು ಮೈಲುಗಳ ಧೂಳಿನ ಯಾತ್ರೆ ಮಾಡಿ, ಅವರ ಊರನ್ನು ಸೇರಿದ್ದಾಯಿತು. ಅವನ ಬಿಡಾರ ಒಂದು ಗದ್ದೆಯ ಮಗ್ಗುಲಿನಲ್ಲಿತ್ತು. ನೀರಿಗೆ ಏನೂ ದೂರವಿಲ್ಲ; ಆದರೆ ಬಾವಿಯ ನೀರು ಕೊಳೆತ ಎಲೆಗಳಿಂದ ನಾರುತ್ತಿತ್ತು. ಅವರ ಮನೆಯು ಒಕ್ಕಲಿಲ್ಲದೆ, ಕೆಲವು ವರ್ಷಗಳಿಂದ ಖಾಲಿಬಿದ್ದ ಗುಡಿಸಲು. ಹಳ್ಳಿಯ ಮೂಲೆಯಲ್ಲಿ ಬಂದುಹೋಗುವವರಿಗೆಂದು ಯಾರು ಗುಡಿಗೋಪುರ ಕಟ್ಟಿಸುತ್ತಾರೆ? ಇದ್ದುದನ್ನೇ ಹುಡುಕಿ ಸರಿ ಮಾಡಿಕೊಳ್ಳಬೇಕು. ಆ ಕೆಲಸಕ್ಕೆ ನಾಲ್ಕೆಂಟು ದಿನ ಹಿಡಿದುವು. ಅವನ ಗುರುಗಳೂ, ಅವನೂ, ರುಕ್ಮಿಣಿಯೂ ಸೇರಿ, ಮನೆ ಬಾವಿಯನ್ನೊಮ್ಮೆ ಬರಿದು ಮಾಡಿದರು. ಕೆಸರು ಎತ್ತಿ, ಹೊತ್ತು, ಈಚೆಗೆ ಸುರುವಿ-ಕುಡಿಯುವ ನೀರನ್ನು ಒದಗಿಸಿಕೊಂಡರು. ಇನ್ನು ಜಾನುವಾರನ್ನು ಕೊಂಡರೆ ಅಲ್ಲಿ ಕಟ್ಟಲು ತಾವಿಲ್ಲ. ಅದಕ್ಕಾಗಿ ನಾಲ್ಕು ಮಂದಿಯ ಮನೆಯನ್ನು ಸುತ್ತಿ, ನಾರಾಯಣರಾಯರ ಸಹಾಯದಿಂದ ಅವರ ಗುರುತುಮಾಡಿಕೊಂಡು, ತಾನು ಕೊಳ್ಳಲಿರುವ ಹಸುವಿಗೋ, ಎಮ್ಮೆಗೋ ಆಗಿ ಒಂದು ಅರಮನೆಯನ್ನು ರಚಿಸಿದ. ಎಲ್ಲದಕ್ಕಿಂತ ಆ ಊರಿನಲ್ಲಿ, ಕಂಗಾಲಿಗೆ ಕಾರಣವಾದುದೆಂದರೆ ಕಟ್ಟಿಗೆ. ಅಲ್ಲಿನ ಸ್ಥಳವಂದಿಗರಾದರೂ ತಮ್ಮ ಹಾಡಿ ಹಕ್ಕಲುಗಳಿಂದ, ಏನಾದರೂ ತರಗೆಲೆ, ಕಡ್ಡಿಗಳನ್ನು ಕೂಡಿಡುತ್ತಾರೆ. ಇವರೇನು ಮಾಡಲಿ? ಕೊಳ್ಳುವುದೇ? ಈಗಂತು ಕೊಳ್ಳದೆ ಗತಿಯಿಲ್ಲ. ಮುಂದೆ ಬರುವುದು ಮಳೆಗಾಲವಷ್ಟೆ. ಕೊಳ್ಳುವುದೆಂದರೆ ಬೆಲೆಯೆಷ್ಟು? ಮಂಗಳೂರು ಸಮೀಪವಿರುವ ಆ ಊರಿನವರು ಅಲ್ಲಿಗೇನೆ ಕಟ್ಟಿಗೆಯನ್ನು ಒಯ್ದು ಮಾರುವರೇ ವಿನಾ, ಊರವರಿಗೆ ಮಾರುತ್ತಲೂ ಇದ್ದಿಲ್ಲ. ಅಂತು ಅತಿ ಪ್ರಯಾಸದಿಂದ ಒಂದು ಗಾಡಿ ಕಟ್ಟಿಗೆ ತರಿಸಿ, ರಸ್ತೆಯ ಬಳಿಯಲ್ಲಿ ಹಾಕಿಸಿ, ಅಲ್ಲಿಂದ ಇನ್ನೂರು ಗಜ ದೂರವಿರುವ ತಮ್ಮ ಮನೆಗೆ, ತಾವೇ ಹೊರೆಮಾಡಿಕೊಂಡು ಸಾಗಿಸಬೇಕಾಯಿತು. "ಕೂಲಿಕೊಟ್ಟು ಮಾಡಿಸಬಾರದೆ?" ಎಂದು ಆಚೀಚಿನವರು ಹೇಳುತಿದ್ದ ಟೀಕೆಯೂ ಅವನ ಕಿವಿಗೆ ಬಿತ್ತು. ಅಚ್ಯುತ ಮನಸ್ಸಿನಲ್ಲಿ "ಊರವರು ಶಾಲಾ ಮಾಸ್ತರರಿಗೆ, ಹಣ ಮೇಲಿಂದ ಸುರಿಯುತ್ತದೆ ಎಂದು ತಿಳಿದಿರ

ಬೇಕು. ನಮ್ಮ ಗೋಳನ್ನು ಶಿವನೇ ಬಲ್ಲ" ಎಂದುಕೊಂಡ. ಇವರು, ಮನೆ ಒಕ್ಕಲು ಮಾಡಿದ ವಾರದಲ್ಲಿ, ಮಳೆ ಊರೊಕ್ಕಲು ಮಾಡಿತು. ಅಲ್ಲಿಂದ ಬೇಸಾಯಕ್ಕಲ್ಲದೆ ಬೇರಾವ ಕೆಲಸಕ್ಕೂ ಆಳುಗಳು ಕಾಣಸಿಗ ಲಾರರು. ಯಾವತ್ತೂ ಕೆಲಸಗಳೂ ತಮ್ಮ ಸ್ವಂತ ಕೈ ಕಾಲುಗಳನ್ನು ನಂಬಿಯೇ ಆಗಬೇಕು.

ಚಿಲ್ಲರೆ ಒಡವೆಗಳಿಗೆ, ಕಾಳು, ಕಡಿ, ಬೆಂಕಿಪೆಟ್ಟಿಗೆ-ಏನೂ ಬೇಕಾದರೂ ಒಂದೆರಡು ಮೈಲು ನಡೆದು ಹೋಗಬೇಕು. ಸ್ವಲ್ಪ ಮಿತವಾದ ಬೆಲೆಯಲ್ಲಿ ಪಡೆಯುವ ಆಸೆಯಿದ್ದರೆ, ನೇರಾಗಿ ರೈಲಿನಲ್ಲಿ ಕುಳಿತು, ಹತ್ತು ಹದಿನಾಲ್ಕು ಮೈಲು ದೂರದಲ್ಲಿರುವ ಮಂಗಳೂರಿಗೆ ಹೋಗಿ ಬರುವುದು ಆ ಊರಿನ ವಾಡಿಕೆ. ಅಲ್ಲಿನ ಜನಗಳಿಗೆ, ರೈಲಿದ್ದುದರಿಂದ, ಮಂಗಳೂರು ಎಂಬುದು ನೆರೆಮನೆಯಾಗಿತ್ತು. ಆದರೆ ಅಚ್ಯುತನೇನು ಮಾಡಬೇಕು? ತಿಂಗಳು, ಎರಡು ತಿಂಗಳ ದವಸಗಳನ್ನು ಕೂಡಿಡಲು, ಅವನಲ್ಲಿ ಶಕ್ತಿಯೆಲ್ಲಿ? ಆದುದರಿಂದ ಉಪ್ಪು ಮೆಣಸುಗಳನ್ನೆಲ್ಲ ಚಿಲ್ಲರೆ ಚಿಲ್ಲರೆಯಾಗಿ ವಾರಕ್ಕೊಮ್ಮೆ ಕೊಳ್ಳುವ ಅಭ್ಯಾಸವನ್ನಿರಿಸಿಕೊಂಡ. ನಿತ್ಯದ ತಗಾದೆಗಳ ಜತೆಗೆ, ಅವನು ಈ ಊರನ್ನು ಸೇರಿದ ಒಂದು ವಾರದೊಳಗೆ ಕುಂದಾಪುರದ ಬೇಂಕಿನಲ್ಲಿ ಮಾಡಿದ ಸಾಲದ ಕರೆ ಬಂದಿತು. ಅಲ್ಲಿನ ಹಣ ಸಲ್ಲಿಸುವ ವೇಳೆಯಾಗಿತ್ತು. ಊರಿಗೆ ಬರುವ ಅವಸರದಲ್ಲಿ ತಾನು ಅಲ್ಲಿ ಆಭರಣಗಳ ಅಡವಿನಿಂದ ಸಾಲಮಾಡಿದುದು ಮರವೆಯಾಗಬೇಕೇ?

ಅವನಿಗೆ ಆ ನಿರ್ಜನ ಅರಣ್ಯದಲ್ಲಿ ನಾರಾಯಣರಾಯರೊಬ್ಬರೇ ಪರಿಚಿತರು; ಹಿತವಂದಿಗರು. ಅವರೂ ಕಷ್ಟದಲ್ಲಿ ನರಳುತ್ತಿದ್ದವರೇ! "ಅಚ್ಯುತ, ನೀನೇಕೆ ಹೆದರುತ್ತೀ? ನಾನಿಲ್ಲವೇ ಈಗ ಬದುಕಿ. ನಾನೀಗ ಏಳು ಮಕ್ಕಳ ತಂದೆಯಾಗಿ ಬದುಕಿದ್ದೇನಲ್ಲ" ಎಂದು ನಕ್ಕು ಹೇಳುತ್ತಿದ್ದಾರೆ. ಅಚ್ಯುತ ತನ್ನ ಯಾವ ಕೊರಗನ್ನು ನೆನೆದು ಹೇಳಿದರೂ, ಅವರದು ಅದೇನೆ ಉತ್ತರ. ಆದರೆ ನಾರಾಯಣರಾಯರು, ತಮ್ಮ ಮಾತಿನ ತೋರಿಕೆಯಂತೆ, ವಾಸ್ತವದಲ್ಲೂ ಸುಖಿಗಳೇ—ಎಂಬುದು ಮಾತ್ರ ಅನುಮಾನದ ಸಂಗತಿ.

ಕಡಬದಿಂದ ಅವರು ಈ ಊರಿಗೆ ಬಂದು, ಕೆಲವು ವರ್ಷಗಳೇ

ಸಂದಿವೆ. ಅಲ್ಲಿರುವಾಗ ಅವರಿಗೆ ನಾಲ್ಕು ಕೂಸುಗಳು; ಈಗ ಏಳು. ಅವುಗಳಲ್ಲಿ ಹಿರಿಯ ಹುಡುಗ ಕೇಶವನನ್ನು, ತನ್ನಂತೆ ಉಪಾಧ್ಯಾಯನನ್ನಾಗಿ ಮಾಡಿಬಿಡುತ್ತೇನೆ, ಎಂದು ಅವರು ಮಂಗಳೂರಿಗೆ ಓದಿಗೆ ಕಳುಹಿಸುತಿದ್ದಾರೆ. ಅವನ ಶಾಲೆ ರೈಲು ಚಾರ್ಜುಗಳೆಂದು ತಿಂಗಳಿಗೆ ಹದಿನೈದು ರೂಪಾಯಿಗಳು ಹೋಗುತ್ತಿವೆ. ಉಳಿದ ಇಪ್ಪತ್ತೈದು ರೂಪಾಯಿಗಳಲ್ಲಿ ಅವರೆಲ್ಲರ ಸಂಸಾರ ಸಾಗುತಿತ್ತು. ಶಾಲೆಯ ಕೆಲಸ ಮುಗಿದ ಮೇಲೆ, ನೆಟ್ಟಗೆ ಮನೆಗೆ ಬರುವುದು ಅವರ ರೂಢಿ. "ಮಾಸ್ತರರೇ, ಏನು ನಿಮ್ಮ ಶಾಲೆಯಲ್ಲಿ ಒಂದೂ Extra curricular activity ಇಲ್ಲವಲ್ಲ"-ಎಂದು ಅಚ್ಯುತನೇ, ತಾನು ಬಂದ ಪ್ರಾರಂಭದಲ್ಲಿ, ಅವರನ್ನು ಕೇಳಿದ್ದ. "ಕಡಬದಲ್ಲಿರುವಾಗಿದ್ದ ನಿಮ್ಮ ಉಮೇದು ಏನಾಯಿತು?" ಎಂದೂ ಕೇಳಿದ. "ಅಚ್ಯುತ, ನಿನಗಿನ್ನೂ ಜ್ಞಾನವಿಲ್ಲ. ಮನೆಯಲ್ಲಿರುವವಳು ಅವಳೊಬ್ಬಳು. ಎಲ್ಲ ನನ್ನ ಚಟುವಟಿಕೆ ಮನೆಯಲ್ಲೇ. ಜಾನುವಾರು ನೋಡಬೇಕು; ಎರಡು ದನ ಇವೆ. ಅದರಲ್ಲಿ ಒಂದು ಬರಡಾದರೂ, ಸಾಕಬೇಕಲ್ಲ. ಅಲ್ಲದೆ ಬರಿ ಗಂಜಿ ತಿನ್ನುವುದಕ್ಕಾಗುತ್ತದೆಯೇ? ಒಂದಿಷ್ಟು ತರಕಾರಿ ಬೆಳೆಯಿಸಬೇಕು. ಅವನ್ನು ನಡುವುದು, ನೀರೆರೆಯುವುದು, ಸಾರ ಹಾಕುವುದು. ಊರಿನ ಕಾಟು ದನಗಳ ಬಾಯಿಗೆ ಅವು ಬೀಳದಂತೆ ಬೇಲಿ ಹಾಕುವುದು, ಇವು ಸಣ್ಣ ಪುಟ್ಟ ಕೆಲಸಗಳೇ!" ಎಂದರು. ಅಚ್ಯುತನಿಗೂ ಸಂಸಾರದ ಸವಿ ತಿಳಿದಿದೆ. "ಹೂಂ--ನಿಜ" ಎಂದನು. "ಅಲ್ಲದೆ ನೋಡು, ನೀನು ಶಾಲೆಗಾಗಿ ಅಂತಲಾಗ ಹಾಕು, ನಿನ್ನ ಕೆಲಸವನ್ನು ಕಂಡು ಮೆಚ್ಚುವವರಿಲ್ಲ. ಬರಿದೆ, ಆಫೀಸರರು ಬಂದಾಗ, ಎರಡು ದಿನದ ಮಟ್ಟಿಗೆ ಥಳಕು ಮಾಡುವವರಿಗೇನೆ ಕಾಲ. ಹಾಗಿರಲು ನಮಗೇನು ಜೀವ ಭಾರವಾಗಿದೆಯೆಂದು ಕುಣಿಯುವುದೇ? ಮೇಲಿನವರಿಗೆ ಬೇಕಾದ ಚಟುವಟಿಕೆಗಳನ್ನು ಎಂಟು ದಿನಗಳಲ್ಲಿ ಮಾಡಿತೋರಿಸಬಹುದು. ಅದೂ ನಾಟಕವಾಗಿಬಿಟ್ಟಿದೆ" ಎಂದರು.

"ಎಲ್ಲರ ಜೀವನವೂ ಒಂದೇ ಎಂದುಕೊಂಡ" ಅಚ್ಯುತ. ಅವನೇ ಎಂಥೆಂಥ ಕನಸನ್ನು ಕಂಡಿರಲಿಲ್ಲ. ಗ್ರಾಮೋದ್ಧಾರವಾಯಿತು, ಕಲೆಯ ಕನಸಾಯಿತು, ಸಾಹಿತ್ಯದ ಕನಸಾಯಿತು-ಆದರೆ ಯಾವುದು ತಾನೇ ಗುರಿಯನ್ನು ಸೇರಿತು? ಬದುಕೇ ಉಸಿರುಕಟ್ಟಿದಾಗ, ನಿತ್ಯದ ಸಂಕಟ

ಕಣ್ಮುಂದೆ ಕುಳಿತಿರುವಾಗ, ಅವೆಲ್ಲ ಧ್ಯೇಯುಗಳು ಬರಿಯ ಪರಿಹಾಸ್ಯ ಗಳಾಗಿ ಕಾಣುತ್ತವೆ. ಅಚ್ಯುತನ ಮನೆಗೂ ಒಂದು ಒಣಕಲು ದನ ಬಂದಿದೆ. ಆತ ಅದನ್ನು ಪುಷ್ಟಿಮಾಡುವ ಉದ್ಯೋಗ ತೊಡಗಿದ್ದಾನೆ. ನಾರಾಯಣರಾಯರಂತೆ, ತಾನೂ ಒಂದು ತರಕಾರಿ ತೋಟ ಬೆಳೆಯದೆ ಹೋದರೆ ಗತಿಯಿಲ್ಲವೆಂದು ತಿಳಿದು,ಒದ್ದಾಡತೊಡಗಿದ. ಮಳೆಗಾಲದಲ್ಲಿ ನೀರನ್ನು ಎರೆಯುಬೇಕಿಲ್ಲ. ಆದರೆ—ಗಿಡಗಳ ಹುಳ ಹೆಕ್ಕುವುದರಿಂದ ಹಿಡಿದು, ಬೇಲಿ ಗೊಬ್ಬರಗಳ ತನಕ ದುಡಿಯತೊಡಗಲು, ಅವನಿಗೂ ಇದ್ದ ವಿರಾಮ ಕರಗಿತು. ಈ ಬಾರಿ ಬರುವಾಗ, ಆತ ಪಂಜದಿಂದ ಕೃಷ್ಣನನ್ನು ಕರೆದು ತಂದಿದ್ದ. ಅಜ್ಜಿಯ ಮನೆಯಲ್ಲಿ ಅವನಿಗೆ ಓದು ವಜಾ ಆಗಿತ್ತು. ಈಗಾಗಲೇ ಒಂದು ವರ್ಷ ಹಾಳಾಯಿತೆಂದು, ದಿನ ಕ್ಕೊಂದು ಅರೆತಾಸು—ಅವನಿಗೆ 'ಅ ಆ'ಹೇಳುವುದರಲ್ಲಿ ವೇಳೆ ಕಳೆ ಯಿತು. ಮಳೆಗಾಲಕ್ಕೆಂದು ಕೊಂಡ ಕಟ್ಟಿಗೆಯನ್ನು ಎಲ್ಲಕ್ಕೂ ಉರಿಸಿ ದರೆ, ತಿಂಗಳಲ್ಲೇ ಮುಗಿಯುವಂತೆ ಕಂಡಿತು. ಅದರಿಂದ, ವಿರಾಮ ದೊರೆತಾಗ, ಆಚೀಚೆ, ರಸ್ತೆಯ ಮಗ್ಗುಲಿನ ಸರಕಾರಿ ಮರಗಳಿಂದ ಉದುರಿದ ಗೆಲ್ಲುಗಳನ್ನು, ದರಗನ್ನು ಒಟ್ಟು ಮಾಡಬೇಕಾಯಿತು. ಈ ಕೆಲಸ ಬಹಿರಂಗವಾಗಿ ನಡೆಯುವುದಕ್ಕೆ ಸಾಧ್ಯವಿಲ್ಲ. ಶಾಲಾ ಮಾಸ್ತರ ರಲ್ಲವೇ! ಗೌರವ ಕಾಯ್ದು ಕೊಳ್ಳಬೇಕಲ್ಲ. ಅದರಿಂದ ರುಕ್ಮಿಣಿಯು—"ನನಗೇನು ಮಾಸ್ತರಿಕೆ ಕೊಟ್ಟವರಿಲ್ಲ" ಎಂದು ಆ ಕೆಲಸವನ್ನು ಮಾಡು ತ್ತಾಳೆ. ಮಳೆ ಹೊಳವಾದಾಗ, ಅವಳೇ ಮೈದಾನಿಗೆ ಹೋಗಿ ಒಂದು ತಾಸು, ಹಸುವನ್ನು ಮೇಯಿಸಿಕೊಂಡು ಬರುತ್ತಾಳೆ.

ಆಗಸ್ಟ್ ತಿಂಗಳು ಕಳೆಯಿತು. ಒಂದು ದಿನ ಅಚ್ಯುತ ಆವೇಶ ಭರಿತನಾಗಿ ಮನೆಗೆ ಬಂದುಬಿಟ್ಟ...ಅವನ ಮುಖವೆಲ್ಲ ವಿಚಿತ್ರ ಉತ್ಸಾಹ ದಿಂದಲೋ, ಆತುರದಿಂದಲೋ ಕುದಿಯುತ್ತಿತ್ತು;"ರುಕ್ಮಿಣಿ, ರುಕ್ಮಿಣಿ" ಎಂದ. ಅವಳು ಅಡುಗೆಯನ್ನು ಮುಗಿಸಿ, ಮೈತೊಳೆಯುತ್ತಿದ್ದಳು "ಏನು?" ಎಂದು ಅಲ್ಲಿಂದಲೇ ಕೇಳಿದಳು.

ಅಚ್ಯುತ "ಏನೋ ಜರ್ಮನಿಗೂ, ಇಂಗ್ಲಿಷರಿಗೂ, ಫ್ರೆಂಚರಿಗೂ ಯುದ್ಧ ಶುರುವಾಗಿದೆಯುಂತೆ. ಅದಕ್ಕೆ ನಮ್ಮ ದೇಶವೂ ಸೇರಿದೆಯುಂತೆ! ಕಳೆದ ಯುದ್ಧದಲ್ಲಿ ಏನೆಲ್ಲ ಅನಾಹುತವಾಗಿತ್ತು. ಈ ಸಾರಿ ಅದರ ಅಪ್ಪ

ನಂತಹ ಕೋಲಾಹಲ ಆಗುತ್ತದೆ. ಛೀ-ಈ ಊರಿಗೆ ಒಂದು ಸಮನಾದ ಪೇಪರೂ ಬಾರದೆಹೋಯಿತು. ಯುದ್ಧ ಶುರುವಾದದ್ದು ಹೌದಾದರೆ, ಶಾಲೆಯವರೆಲ್ಲರು ಸೇರಿ ಒಂದು ಇಂಗ್ಲಿಷ್ ಪೇಪರು ತರಿಸಬೇಕು" ಎಂದ.

"ಅದಕ್ಕೆ ಕೊಡುವ ದುಡ್ಡಿನಿಂದ ಒಂದು ಮುಡಿ ತೌಡನ್ನು ತರಿಸಿ ದನಕ್ಕೆ ಹಾಕಿದರೆ, ಎರಡು ಕುಡ್ತೆ ಹಾಲು ಹೆಚ್ಚಿಗೆ ಸಿಕ್ಕೀತು. ಮಕ್ಕಳಿಗಾದರೂ ಕೊಡಬಹುದು! ಯಾವ ಊರಲ್ಲಿ ಯುದ್ಧವಾದರೆ, ನಮಗೇನಂತೆ? ರಾಮನಿಗೆ ರಾಜ್ಯದ ಪಟ್ಟವಾದರೆ, ನಮಗೆ ರಾಗಿ ಬೀಸುವುದು ತಪ್ಪುತ್ತದೆಯೇ" ಎಂದಳು.

ರುಕ್ಮಿಣಿಯ ವಿಮರ್ಶೆಯನ್ನು ಕೇಳುವ ಮನಸ್ಸು ಅವನಿಗೆಲ್ಲಿ? ಅವಳು ಮಿಂದು ಬಂದೊಡನೆಯೇ "ಒಂದಿಷ್ಟು ಬಡಿಸು, ನೋಡುವ" ಎಂದು ಬಟ್ಟಲ ಮುಂದೆ ಕುಳಿತು ಬಕಬಕನೆ ಇಷ್ಟು ಅನ್ನ ತಿಂದು, ಶಾಲೆಗೋಡಿದ. ಅಲ್ಲಿಗೆ, ಯಾರಾದರೂ ಮಾಸ್ತರರು ಪೇಪರು ತರುವ ಸಂಭವವಿತ್ತು. ಅಚ್ಯುತನಿಗಿಂತ ಹೆಚ್ಚಿನ ಆತುರ ಆ ವಿಷಯದಲ್ಲಿ ನಾರಾಯಣರಾಯರಿಗಿತ್ತು. ಅವರದು ಆತುರಕ್ಕಿಂತ ಗಾಬರಿ ಹೆಚ್ಚು "ಹೂಂ, ಕಳೆದ ಸಾರಿ ಯುದ್ಧವೆಂದು ಹಸಿಮೆಣಸಿನ ಕಾಯಿಗೆ ನೂರಕ್ಕೆ ಆರಾಣೆಯಾಗಿತ್ತು. ಈ ಸಾರಿ ಮುಳಿ ಹುಲ್ಲಿಗೂ ದರ ಏರಲಿಕ್ಕಿದೆ" ಎಂದು ಭೀತರಾಗಿದ್ದರು ಅವರು. ಯುದ್ಧದ ಸುದ್ದಿಯನ್ನು ಕೇಳಿಯೇ ದಿಗಿಲುಗೊಂಡರು. ಅವರೇ ಎಲ್ಲೆಲ್ಲಿಗೂ ಹುಡುಗರನ್ನು ಕಳಿಸಿ, ಮಂಗಳೂರಿಂದ ಬಂದವರೊಬ್ಬರಿಂದ ಒಂದು ದಿನಪತ್ರಿಕೆ ತರಿಸಿಕೊಂಡರು!

ಶಾಲೆಯ ಮೇಜಿನ ಸುತ್ತು ನಾಲ್ವರು ಮಾಸ್ತರರು ನಿಂತಿದ್ದರು-ನಾರಾಯಣರಾಯರು, ಕಿವಿ ನಿಮಿರಿಸಿ ಸುದ್ದಿ ಕೇಳುತ್ತಿದ್ದರು. ಮಕ್ಕಳು "ಹುಯ್ಯೋ, ಹುಯ್ಯೋ," ಎಂದು ಕೂಗುತ್ತ, ಅಡ್ಡಾಡುತ್ತಿದ್ದುವು. ಎಟ್ಲಾಸನ್ನು ತರಿಸಿ, ಸಿಗ್‌ಫ್ರಿಡ್ ಲೈನುಗಳು, ಪೋಲೆಂಡು, ರಶ್ಯ-ಇವುಗಳನ್ನು ಹುಡುಕಿಯಾಯಿತು. "ಗ್ರಹಚಾರಕ್ಕೆ ಇದು ಯುರೋಪಿನಲ್ಲಾದುದಕ್ಕೆ ಆಯಿತು; ಇಲ್ಲಿಗೂ ಯುದ್ಧ ಬಂದರೆ! ಇಲ್ಲವಾದರೆ, ನಮ್ಮ ದೇಶವನ್ನು ಯಾಕೆ ಈ ಯುದ್ಧಕ್ಕೆ ಎಳೆದರು? ಹೂಂ, ಸಾಯಲಿಕ್ಕೆ ಅಗ್ಗದ ಜನಗಳು ಬೇಕಲ್ಲ" ಎಂದರು ಒಬ್ಬರು. ಅಂದೇ ಅವರ ಸಭೆ

ಯಲ್ಲಿ ಅಚ್ಯುತ "ಏನೇ ಆಗಲಿ, ಯುದ್ಧ ಮುಗಿಯುವ ವರೆಗೆ, ಇಂಗ್ಲಿಷ್ ಪೇಪರನ್ನು, 'ಹಿಂದೂ'ವನ್ನು ತರಿಸಿಬಿಡುವ. ಇಂತಹ ಸಮಯದಲ್ಲಿ ನಮ್ಮೂರಲ್ಲಿ ಒಂದು ಕ್ಲಬ್ಬು ಇದ್ದಿದ್ದರೆ, ಎಷ್ಟು ಒಳ್ಳೆಯದಾಗುತ್ತಿತ್ತು" ಎಂದನು. ಅವನ ಠರಾವು ಮಂಜೂರಾಯಿತು.

ಕೆಲವೇ ದಿನಗಳಲ್ಲಿ ದಿನೇ ದಿನೇ 'ಹಿಂದೂ' ಪೇಪರು ಬರ ತೊಡಗಿ, ಅವರ ಶಾಲೆ ಗ್ರಾಮಸ್ಥರ ಕೇಂದ್ರವೂ ಆಯಿತು. "ಯುದ್ಧ ಏನಾಯಿತಂತೆ?" ಎಂದು ಕೇಳಲು ಬರುವವರೇ ಎಲ್ಲರು. ಅದನ್ನು ಬಣ್ಣಿಸುವುದರಲ್ಲಿ ಅಚ್ಯುತರಾಯನಿಗಿರುವ ಬಾಯಿ ಚಪಲ ಇನ್ನಾರಿಗೂ ಇರಲಿಲ್ಲ. ದಿನಕ್ಕೆ ತಾಸೆರಡು ತಾಸುಗಳ ವೇಳೆಯನ್ನು ಬರಿಯ ಯುದ್ಧವೇ ನುಂಗಿತು. ಹಾಗೇನೆ ಮಳೆಗಾಲ ಮುಗಿಯಿತು. ತರಕಾರಿ ಗಿಡಗಳು ನೀರನ್ನು ಬೇಡುತ್ತಿದ್ದುವು. ಅದನ್ನು ರುಕ್ಮಿಣಿಯೇ ಒದ್ದಾಡಿ ಪೂರೈಸುವಂತಾಯಿತು, ಆದರೆ ಅವಳಿಗೂ, ಅದರಿಂದ ಪ್ರತಿಫಲ ದೊರೆ ಯಿತು. ಅಚ್ಯುತ ನಿತ್ಯ ಸಂಜೆ ಮನೆಗೆ ಬಂದು, "ಇನ್ನು ಒಂದು ವಾರ ದಲ್ಲಿ ಎಲ್ಲ ಮುಗಿಯುವಂತಿದೆ. ಏನು ಬ್ಲಿಟ್ಸ್ ಆ ಹಿಟ್ಲರನದ್ದು! ಮುಸ ಲೋನಿಯೂ ಸೇರಿದನಂತೆ. ಇಬ್ಬರೂ ತೋಳಗಳು. ಇನ್ನು ಎಂಟು ದಿನದಲ್ಲಿ ಫ್ರಾನ್ಸ್ ಹೋದ ಹಾಗೆಯೇ! ಆ ಮೇಲೆ ಇಂಗ್ಲೆಂಡು ಪುಡಿ ಯಾಗಲು ವಾರವೂ ಬೇಕಿಲ್ಲ" ಎಂದು ಆಯಾಯ ದಿನದ ವಾರ್ತೆಗಳ ಉಪಸಂಹಾರಮಾಡುತ್ತಿದ್ದನು.

"ಹಾಗಾದರೆ ಜರ್ಮನಿಯವನು ಇಲ್ಲಿಗೆ ಬಂದಾನೆನ್ನುತ್ತೀರಾ?" ಎಂದು ಆಸಕ್ತಿ ತೋರಿ ರುಕ್ಮಿಣಿ ಕೇಳಿದಳು.

"ಯಾರು ಬಂದರೂ, ನಮಗೆ ಈ ಗುಲಾಮಗಿರಿ ತಪ್ಪಿದ್ದಲ್ಲ" ಎಂದನು ಅಚ್ಯುತ.

ಹೀಗೆ ದಿನ ಬಿಟ್ಟು ದಿನ, ಯುದ್ಧ ವಾರ್ತೆಯ ಅಮಲು ತಲೆಗೇ ರಿತು. ಕ್ರಮೇಣ ಊರಿನ ಜನರಿಗೂ ಅವರ ಮನೆಗಳಿಗೂ ಅದರ ಉರಿ ತಗಲುತ್ತಿದೆಯೆಂಬ ಅನುಭವವೂ ಉಂಟಾಗುತ್ತ ಬಂದಿತು. "ಅಲ್ಲ. ಯುದ್ಧವಾದರೆ ಮುಕ್ಕಾಲಿನ ಬೆಂಕಿಪೆಟ್ಟಿಗೆಗೆ ಆರು ಪೈಯ್ಯಾಗಬೇಕೇ? ಚಿಮಿಣಿ ಎಣ್ಣೆ ಇಲ್ಲವೇ ಇಲ್ಲವೆನ್ನುತ್ತಾರೆ. ಕಬ್ಬಿಣಕ್ಕೆ ಮಣಕ್ಕೆ ಎಂಟು ರೂಪಾಯಿಯಂತೆ" ಎನ್ನತೊಡಗಿದರು ಎಲ್ಲ. ನಾರಾಯಣರಾಯರು

"ಅಚ್ಯುತ, ಕನಿಷ್ಠ ಒಂದು ವರ್ಷದ, ಮನೆಯ ಸಾಮಾನು ದಾಸ್ತಾನು ಇರಿಸಿಕೊಳ್ಳದಿದ್ದರೆ, ನಾವು ಪಡ್ಚವೇ ಸರಿ. ಸಹಕಾರಿ ಸಂಘದಲ್ಲಿ ಸಾಲ ಮಾಡಿಯಾದರೂ, ವರ್ಷದ ಅಕ್ಕಿ, ಬೇಳೆ, ಚಿಮಿಣಿ ಎಣ್ಣೆಗಳನ್ನು ತೆಗೆದಿರಿಸಬೇಕು. ಮಂಗಳೂರಲ್ಲಿ ಏಕದಂ ಬೆಲೆ ಏರಿಸುತ್ತಿದ್ದಾರೆ. ಯಾಕೂ ಬೇಡದ ನಾಲ್ಕಾಣೆ ಕೋರಾ ಅರಿವೆಗೆ ಎಂಟಾಣೆಯಂತೆ ಈಗ! ಹೀಗಾದರೆ ಉಡುವುದೇನು? ಮಾಡುವುದೇನು?" ಎಂದರು.

ಅವರೇನೋ ಧೈರ್ಯಮಾಡಿ, ನೂರು ರೂಪಾಯಿ ಸಾಲ ಎತ್ತಿದರು. ಅಚ್ಚುತನೂ ಆ ಮನಸ್ಸು ಮಾಡಿದನು. ಆದರೆ "ರುಕ್ಮಿಣಿಯು ಬೇಡವೇ ಬೇಡ, ಇದ್ದರೆ ಉಣ್ಣುವ; ಇಲ್ಲವಾದರೆ ಬೇಡ. ಸಾಲ ಮಾಡಕೂಡದು" ಎಂದಳು. ಆ ವೇಳೆಗೆ ಸರಿಯಾಗಿ, ಅವರ ಕುಂದಾಪುರ ಬ್ಯಾಂಕಿನಿಂದ ಅವರಿಗೆ ಐವತ್ತು ರೂಪಾಯಿ ಬಂದಿತ್ತು. ಅಲ್ಲಿನ ಅವರ ಚಿನ್ನವನ್ನು ಹರಾಜು ಮಾಡಿ, ಬ್ಯಾಂಕಿಗೆ ಬರುವ ಹಣವನ್ನು ಕಳೆದು, ಉಳಿದ ಹಣವನ್ನು ಹಿಂದೆ ಕಳುಹಿಸಿದ್ದರು. ಆ ದಿನ ಅಚ್ಚುತಗೆ, ರುಕ್ಮಿಣಿಗೆ ಮುಖ ತೋರಿಸುವ ಧೈರ್ಯವಾಗಲಿಲ್ಲ. ಅವಳೇ ಗಂಡನೊಡನೆ "ಅಕ್ಕಿಯ ದರ ಏರುವ ಹಾಗಿದೆ. ನಾಲ್ಕು ಮುಡಿ ಅಕ್ಕಿಯನ್ನಾದರೆ ತೆಗೆದಿರಿಸಿ" ಎಂದಳು.

"ಚಿಮಿಣಿ ಎಣ್ಣೆ ಒಂದು ಡಬ್ಬಿಯಾದರೂ ಇರಲಿ."

"ಡಬ್ಬಿಗೆ ಹತ್ತು ರೂಪಾಯಿ ಕೊಟ್ಟು ಕೊಂಡರೆ—ಮರುಳು ಎಂಬಾರು!"

ಅಚ್ಚುತನಿಗೆ ತನ್ನ ಮನೆಯಲ್ಲಿಯೂ ಯುದ್ಧ ಕಾಲಿರಿಸಿತು—ಎಂಬುದು ಎರಡು ವರ್ಷಗಳೊಳಗಾಗಿ ತಿಳಿಯಿತು. ಅದರೊಳಗೇನೆ, ರುಕ್ಮಿಣಿಯು ಮಾತೃಧರ್ಮ ಪಾಲನೆಗೆ ಇನ್ನೊಮ್ಮೆ ಸಿದ್ಧಳಾದಳು. ಈ ಬಾರಿ ಎಲ್ಲಿಲ್ಲದ ಅಶಕ್ತಿ ಸಂಕಟಗಳು ಅವಳಲ್ಲಿ ಕಾಣಿಸಿದುವು. ಅವಳಿಂದ ಮನೆಗೆಲಸವೂ ಆಗದು, ಯಾವುದೂ ಆಗದು. "ಒಂದೂ, ಮಕ್ಕಳನ್ನು ಪಂಜದಲ್ಲಿ ಬಿಟ್ಟು ಬರಬೇಕು. ಇಲ್ಲವಾದರೆ, ತಾಯನ್ನು ಪಂಜದಿಂದ ಬರಮಾಡಿಕೊಳ್ಳಬೇಕು" ಎಂದು ಅಚ್ಚುತನು ಎಣಿಸಿದನು. ಕೊನೆಗೆ ಕಡೆಯ ದಾರಿಯೇ, ಯೋಗ್ಯವೆಂದು ತೋರಿ, ಆರೆಂಟು ರೂಪಾಯಿಗಳನ್ನು ವ್ಯಯಿಸಿ, ತಾಯನ್ನು ಕರೆದುಕೊಂಡು ಬಂದ. ಆಗೇನೂ

ಬೇಸಾಯದ ಒತ್ತಡವಿರದಿದ್ದುದರಿಂದ ಅವಳೂ ಬಂದಳು. ಅವಳೂ ಪಂಜದಲ್ಲಿ ನಡೆಯುತ್ತಿರುವ, ಯುದ್ಧ ವಿಚಾರಗಳನ್ನು ಹೇಳಿದಳು. "ಚಿಮಿಣಿ ಎಣ್ಣೆ, ಅರಿವೆ, ಹಾರೆ-ಯಾವುದನ್ನೂ ಮುಟ್ಟುವ ಹಾಗಿಲ್ಲ. ಎಲ್ಲ ಬಿಟ್ಟು, ಬೆಲ್ಲಕ್ಕೆ ನಾಲ್ಕು ರೂಪಾಯಿಯಾದರೆ ಕೊಳ್ಳುವುದೆಂತು!" ಎಂದು ಹೇಳಿದಳು.

ಈಗ ಅಚ್ಯುತನ ಮನೆಯಲ್ಲಿ ಬೇರೊಂದು ಹೊಟ್ಟೆ ಸೇರಿಕೊಂಡಂತಾಯಿತು. ತಿಂಗಳಿನ ವೆಚ್ಚಗಳು ಕುಳಿತಲ್ಲಿಯೇ ಮುಮ್ಮಡಿಸಿದುವು. ಯುದ್ಧದ ನೆನಪು ಬಂದರೆ—"ಇದು ಇವರಿಗೆ ಮೈಸೊಕ್ಕಿ, ನಮ್ಮನ್ನು ಪುಡಿಮಾಡುವ ಯುದ್ಧವಾಗಬೇಕೇ? ಅದರಲ್ಲಿಯೂ ಇಂಗ್ಲಿಷರೆನ್ನುತ್ತಾರೆ-ಇನ್ನೂ ಮೂರು ವರ್ಷ ಕಾಲ ಯುದ್ಧ ನಡೆದೀತೆಂದು. ಅಷ್ಟರ ವರೆಗೆ ನಾವು ಬದುಕಬೇಕೇ ಸಾಯಬೇಕೇ?" ಎಂದು ಗೊಣಗಬೇಕಾಯಿತು.

ಅಚ್ಯುತನಿಗೆ ಈ ಬಾರಿ ರುಕ್ಮಿಣಿಯ ಸೇವೆಯು ಸಂಪೂರ್ಣ ಅಸಾಧ್ಯವಾಯಿತು. ಸಂಬಳ ಕೈಗೆ ಬರುವ ಮೊದಲೇ ಅದು ಮಾಯವಾಗುತಿತ್ತು. ಹೊಸ ಅರಿವೆಗಳನ್ನು ವರ್ಷದ ಈಚೆಗೆ ಕೊಂಡೇ ಇರಲಿಲ್ಲ. ಅಮವಾಸೆ, ಹುಣ್ಣಿಮೆಗೊಮ್ಮೆ ಕುಡಿಯುತ್ತಿದ್ದ ಕಷಾಯದ ನೀರು, ಈಗ ಸಂಪೂರ್ಣ ಶೂನ್ಯವಾಯಿತು. ಮನೆಯಲ್ಲಿ ಊರಿನ ಎಣ್ಣೆಯಿಂದ, ಒಂದೇ ಒಂದು ದೀಪ ಉರಿಸುವುದು ಕಷ್ಟವಾಯಿತು. ಇತ್ತ ರುಕ್ಮಿಣಿಯು ಮಲಗಿದಲ್ಲಿಂದ ಏಳಲಾರದ ಸ್ಥಿತಿಗೆ ಬಂದಳು. ಅದನ್ನು ಕಂಡು ನಾರಾಯಣರಾಯರೊಡನೆ-"ಏನು ಮಾಡಲಿ; ಪ್ರತಿ ಸಾರಿಯೂ ಹೀಗಾಗುತ್ತಿದೆ. ಶಂಕರನಾರಾಯಣದ ಡಾಕ್ಟರರು, ಶಾಮರಾಯರು ಕಳದಾವೃತ್ತಿ ಹೇಗೂ ಅವಳನ್ನು ಪಾರುಮಾಡಿದರು" ಎಂದ. ಅದಕ್ಕೆ "ನೀನು ಬೇರೆ ಲಗ್ನವಾಗಬೇಕಂತೇನು? ನನಗೀಗ ಏಳು ಮಕ್ಕಳಾದುವು. ಎಂಟನೆಯದೂ ಆಗುವ ಹೆದರಿಕೆ. ಈ ಕಾಲದಲ್ಲಿ ಎಂಟು ಬಾಯಿಗಳಿಗೆ ನನ್ನೊಬ್ಬನ ದುಡಿತ ಸಾಕೇ? ಹಿರಿಯವನಿಗೆ ಆನೆಯ ಫಾರ್ಮ್ ಸಾಕೆಂದು ಕಾಣುತ್ತದೆ. ಸಂಬಳಕ್ಕೂ ರೈಲಿಗೂ ಎಲ್ಲಿಂದ ಹಣ ತರಲಿ! ಆದರೆ ಮಕ್ಕಳಾದದ್ದು ಹೆಚ್ಚಾಯಿತು; ಆಗಬೇಡ-ಎಂದು ಯಾರ ಹತ್ತಿರ ಹೇಳಲಿ?" ಎಂದರು ನಾರಾಯಣರಾಯರು.

"ಅದೇನೋ, ಬರ್ಥ್ ಕಂಟ್ರೋಲ್ ಅಂತ ಉಂಟಲ್ಲ....ಅದರ ವಿಷಯ ನೀವೇನಾದರೂ ಓದಿದ್ದೀರೋ,"

"ನಾನು ಓದಿಯೂ ಇಲ್ಲ. ನನಗೆ ಅದೆಲ್ಲ ಆಗಿ ಹೋಗುವ ಬದುಕೆಂದೂ ಕಾಣುವುದೂ ಇಲ್ಲ. ಅಲ್ಲದೆ ಅದಕ್ಕೂ ರಾಶಿ ದುಡ್ಡು ಖರ್ಚುಂಟು. ಮಾಡಲಿಕ್ಕೆ ಬಂದರೆ, ನಮ್ಮ ಗಾಂಧಿಜೀಯವರು ಹೇಳುವ ಹಾಗೆ ಮಾಡಬೇಕು. ಆದರೆ ಗಾಂಧಿಯವರ ದಾರಿ ಉಪ್ಪುಕಾರ ಬಿಟ್ಟ ಜನರಿಗೇನೆ ಹೊರತು, ಅದನ್ನು ತಿನ್ನುವ ನಮಗಲ್ಲ."

"ಅದು ಸಮನೇ, ಆದರೆ ಈಗ ಅವಳ ಜೀವಕ್ಕೆ ಬಂತಲ್ಲ. ಇನ್ನು ಅವಳಿಗೇನಾದರೂ ಆದರೆ, ಅವಳನ್ನು ನಾನು ಕೊಂದ ಹಾಗೇ ಆಗಲಿಲ್ಲವೇ."

"ಅಚ್ಯುತ-ಈಗ ಆಗಿಹೋದ್ದು ಹೇಗೂ ಆಯಿತು. ಪರಿಹಾರಕ್ಕೆ ಏನಾದರೂ ಹಾದಿ ನೋಡು. ಮದ್ದು ಮಗದೊಂದು ಮಾಡು; ಹಿಂದಿನ ಸಾರಿ ಮಾಡಿದಂತೆ ಅನುಪಾನ ಚೆನ್ನಾಗಿ ಮಾಡು!"

"ಹಿಂದಿನ ಸಾರಿ ನೂರು ರೂಪಾಯಿ ಖರ್ಚು ಆಗಿತ್ತು; ಅದೂ ಡಾಕ್ಟರರು ಬಿಟ್ಟಿ ಸೇವೆ ಮಾಡಿ. ಈ ಸಾರಿ ನಾನು ಮದ್ದಿಗೆ ಮಂಗಳೂರಿಗೆ ಹೋಗಬೇಕು. ಈ ಊರಲ್ಲಿ ಯಾವ ಡಾಕ್ಟರುಗಳನ್ನು ತರಲಿ! ಹೋಗಿ ಮಾಡುವುದೇನು—ಕಾಸಿಲ್ಲದೆ ಯಾರಾವರೂ ಮದ್ದು ಕೊಡುತ್ತಾರೆಯೇ?"

"ಅಚ್ಯುತ-ಅದಕ್ಕೊಂದು ಕೆಲಸಮಾಡು. ಹಿಂದೆ ಕಡಬದಲ್ಲಿದ್ದ ಗಂಗಾಧರ ಡಾಕ್ಟರರು ಈಗ ಮಂಜೇಶ್ವರದಲ್ಲಿದ್ದಾರೆ. ಮೊದಲಿನ ಬಾರಿ ಅವಳಿಗೆ ಮದ್ದು ಕೊಟ್ಟವರು. ನಾನೂ ಬೇಕಾದರೆ ಜತೆಗೆ ಬರುತ್ತೇನೆ. ಆದರೆ ಅವರಿಗೂ ಈಗ ದುಡ್ಡಿನ ಗಿರ ಹಿಡಿದಿದೆ ಅನ್ನುತ್ತಾರೆ."

"ಹೌದು ದಿನಬಿಟ್ಟು ದಿನ, ಖರ್ಚು ಏರುತ್ತ ಹೋದರೆ, ಯಾರೇನು ಮಾಡಿಯಾರು. ಬಿಟ್ಟಿ ದುಡಿದ ಹಾಗೆ ದುಡಿಯಬೇಕು ನಾವು. ಊರಿಗೆಲ್ಲಾ ಯುದ್ಧ ಬಂದರೂ, ಬೋರ್ಡು ಶಾಲೆ ಮಾಸ್ತರರಿಗೆ ಸಂಬಳ ಕೊಡುವ ವಿಷಯದಲ್ಲಿ ಬೋರ್ಡಿಗೆ ಮಾತ್ರ ಯುದ್ಧ ಬರಲಿಲ್ಲ" ಎಂದ ತಿರಸ್ಕಾರದಿಂದ ಅಚ್ಯುತ.

"ಕಾಸೋ ತಾರವೋ ತುಟ್ಟಿ ಭತ್ತೆ ಕೊಡುತ್ತಾರಂತಲ್ಲ ಇನ್ನು"

ಅಂದರು ನಾರಾಯಣರಾಯರು.

ಮನಸ್ಸಿನ ಅಸಮಾಧಾನಕ್ಕೆ ಯಾರನ್ನು ಬೈದರೂ ಅಚ್ಯುತನ ಮನೆಯವಳ ಬೇನೆ ಗುಣವಾಗದಷ್ಟೆ. ಅದು ಅಶಕ್ತಿಯಿಂದ ಪ್ರಾಪ್ತವಾದದ್ದು. ಹಾಲು, ಹಣ್ಣು, ಟಾನಿಕ್-ತಿಂದು ಪರಿಹಾರವಾಗಬೇಕಾದ ಬೇನೆ. ಪ್ರಸವ ಕಾಲದಲ್ಲಿ ಜಾಗ್ರತೆಯಿಂದ ನೋಡಿಕೊಳ್ಳಬೇಕಾದ ಬೇನೆ. ಮಾತಿಂದ, ಕೋಪದಿಂದ ಗುಣವಾಗದಷ್ಟೆ. ಆ ಶನಿವಾರ ಬೆಳಗಿನ ರೈಲಿಗೇನೆ ಅಚ್ಯುತ ಮಂಜೇಶ್ವರಕ್ಕೆ ಹೋದನು. ಹಳೆಯ ವೈದ್ಯರನ್ನು ಕಂಡು ತನ್ನ ಗೋಳನ್ನು ಹೇಳಿಕೊಂಡನು.

"ಎಷ್ಟನೇದು ಇದು?" ಎಂದು ಕೇಳಿದರು.

"ಐದನೆಯದು," ಎಂದು ಮೋರೆ ತಗ್ಗಿಸಿ ನುಡಿದ.

"ಏನು? ಅವಳನ್ನು ಕೊಲ್ಲಬೇಕೆಂದು ಮಾಡಿದ್ದೀರೋ" ಎಂದು ಅವರು ಕೇಳಿದರು.

ಹಿಂದಿನಿಂದಲೂ ವೈದ್ಯರು ಹಾಗೆ ಹೇಳುತ್ತಿರಲು, ತಾನು ಇಷ್ಟು ತಿಳಿಗೇಡಿಯಾದೆನಲ್ಲಾ-ಎಂದು ತೋರಿತು ಅವನಿಗೆ. "ಅವಳನ್ನು ಇಲ್ಲಿಗೆ ಕರೆದು ತರಲು ಬಂದೀತೆ?" ಎಂದು ಕೇಳಿದರು. "ನೋಡುತ್ತೇನೆ" ಎಂದ ಅಚ್ಯುತ. "ಈಗ ತಿಂಗಳೆಷ್ಟಾಯಿತು?" ಎಂದು ಕೇಳಿದರು. "ಎಂಟಾಗಿರಬೇಕು" ಎಂದ. ಎಷ್ಟೆಂದರೂ, ಪರಿಚಿತರು ಎಂಬುದರಿಂದ ಆ ದಿನ ಸಂಜೆಯೇ ಅವರು ಅಚ್ಯುತನ ಜತೆಗೆ ಕುರ್ಚಿಪಳ್ಳಕ್ಕೆ ಬಂದರು. ಮನೆಯಲ್ಲಿ ತಮಗೆ ಸಂದರ್ಶನವಾದ ಮಕ್ಕಳ ಕಾಷ್ಠಪ್ರಾಯ ಶರೀರವನ್ನು ಕಂಡು, ಡಾಕ್ಟರರ ಮೋರೆಯೂ ಸಪ್ಪಗಾಯಿತು. ರುಕ್ಮಿಣಿಯ ಹಾಸಿಗೆಯ ಬಳಿಗೆ ಹೋದರು. ಅವಳು ತೀರ ಬರಿಯ ಎಲುಬು ಚರ್ಮವಾಗಿದ್ದಳು. ಮುಖ ತೀರ ಕಾಂತಿಹೀನವಾಗಿತ್ತು. ಅಚ್ಯುತ "ರುಕ್ಮಿಣಿ, ಇವರು ಮೊದಲು ಕಡಬದಲ್ಲಿದ್ದವರು" ಎಂದನು. ಅವರ ಮೋರೆ ನೋಡಿ ಗುರುತು ಸಿಕ್ಕಿತು. "ಡಾಕ್ಟರರೇ, ನಾನು ಬದುಕಿಯೇನೇ?" ಎಂದು ಆಕೆ ಕೇಳಿದಳು. "ಏನೂ ಗಾಬರಿ ಇಲ್ಲ ಅಮ್ಮ" ಎಂದರು ಡಾಕ್ಟರರು.

ಅವರು ಹೊರಗೆ ಬಂದು ರೈಲು ನಿಲ್ದಾಣಕ್ಕೆ ಹೊರಟರು. ದಾರಿಯುದ್ದಕ್ಕೂ ಸಂಗಡಿಗನಾಗಿ ಅಚ್ಯುತ ಹೋದನು. ಹೋಗುವಾಗ—

"ಏನೋ, ಮದ್ದು ಕೊಡುತ್ತೇನೆ. ಮುಖ್ಯ, ಅವಳಿಗೆ ಶಕ್ತಿವರ್ಧಕ ಆಹಾರ ಬೇಕು; ಹಾಲು ತುಂಬ ಕೊಡಬೇಕು" ಎಂದರು.

"ಹಾಲು ಕೊಡುತ್ತೇವೆ."

"ಎಷ್ಟು?"

"ದಿನಕ್ಕೆ ಒಂದು ಒಂದೂವರೆ ಕುಡ್ತೆ"

ಅವರು ನಕ್ಕರು. "ಯಾಕೆ ಬಂದೀತು--ಅಷ್ಟು ಸ್ವಲ್ಪ? ತುಂಬಾ ಹಾಲು ತಕ್ಕೊಳ್ಳಬೇಕು"

"ಎಲ್ಲಿಂದ ತರುವುದು?" ಎಂದ ಅಚ್ಯುತ. ಅವನ ಮುಖ ಮುದುರಿ ಹೋಗಿತ್ತು. ರೆಪ್ಪೆ ಮಡಚಿ ಹೋಗಿತ್ತು.

"ನೀವು ಬೆಳಗ್ಗೆ, ಮಂಜೇಶ್ವರಕ್ಕೆ ಎರಡು ಸೀಸೆ ತನ್ನಿ, ಹೇಳುತ್ತೇನೆ" ಎಂದರು. ಮರುದಿನ ಅಚ್ಯುತ ಅಲ್ಲಿಗೆ ಧಾವಿಸಿದನು. ಅವರು ಮದ್ದುಗಳನ್ನು ಬರಿದೆ ಕೊಟ್ಟರು; ಮೇಲೆ ಐದು ರೂಪಾಯಿಗಳನ್ನೂ ಕೊಟ್ಟು "ಎಲ್ಲಿಂದಾದರೂ ಸ್ವಲ್ಪ ಹಾಲನ್ನು ತರಿಸಿಕೊಡಿ ಹಸುವಿನ ಹಾಲು; ಹಣ ಕಡಿಮೆಯಾದರೆ ಕೊಡುತ್ತೇನೆ" ಎಂದರು. ಅಚ್ಯುತನಿಗೆ ಕಣ್ಣೀರು ಉಕ್ಕಿ ಬಂದಿತು. "ಬೇಡ" ಎಂದು ಆ ರೂಪಾಯಿಗಳನ್ನು ಹಿಂದಕ್ಕೆ ಕೊಡಲು ಹೋದ.

"ಯಾಕೆ--ಅವಳು ಸಾಯಬೇಕೆಂದು ನಿಮ್ಮ ಹಟವೇ?" ಎಂದು ಕೇಳಿದರು. ಅಚ್ಯುತ ಮಾತಿಲ್ಲದೆ ಮರಳಿದ. ಡಾಕ್ಟರರ ಕರುಣೆಯು ಅವನನ್ನು ಮೂಕನನ್ನಾಗಿ ಮಾಡಿತು.

ಇನ್ನೊಂದು ಬಾರಿ ಹೋದಾಗ "ಮೊದಲಿಗಿಂತ ವಾಸಿ ಅವಳು" ಎಂದನು. ವೈದ್ಯರು "ವಾಸಿಯಾಗುತ್ತಾಳೆ; ಆದರೆ ಹೆರಿಗೆಯ ಕಾಲ ಕಳೆಯಬೇಕು. ಈ ಸಾರಿ ಕೂಸು ಬದುಕುವುದೂ ಕಷ್ಟ."

"ತಾಯಿ ಬದುಕಿಯಾಳಲ್ಲ?" ಎಂದು ಆತ ಭೀತಿಯಿಂದ ಕೇಳಿದ.

"ದೇವರು ನಡೆಯಿಸಿದರೆ. ಆದರೆ ತಿಂಗಳೊಳಗೆ ನೋವುಗೀವು ಬಂದರೆ ಓಡಿ ಬನ್ನಿ. ಬರಿ ನಾಲ್ಕು ಮೈಲು ದೂರ ನಿಮ್ಮೂರು. ರೈಲಿಗೆ ಕಾಯಬೇಡಿ! ಉದಾಸೀನ ಮಾಡಬೇಡಿ" ಎಂದು ಎಚ್ಚರಿಸಿ ಅವನನ್ನು ಕಳುಹಿಸಿದರು.

ಮುಂದಲ ವಾರವೇ ಡಾ। ಗಂಗಾಧರರಾಯರಲ್ಲಿಗೆ ನಾರಾಯಣ

ರಾಯರು ಓಡಿ ಬಂದರು. ರೈಲಿನ ವೇಳೆ ಕಳೆದಿತ್ತು. ಸೈಕಲು ಸವಾರಿ ಮಾಡಿಕೊಂಡು ವೈದ್ಯರಲ್ಲಿಗೆ ಬಂದರು. ಡಾಕ್ಟರರು ಅವರ ಪೂರ್ವ ಪರಿಚಿತರು. ಕಡಬದಲ್ಲಿರುವಾಗ ತೀರ ಅನ್ಯೋನ್ಯವಾಗಿದ್ದರು. ಹೀಗಾಗಿ ತಡ ಮಾಡದೆ, ಸೂಲಗಿತ್ತಿಯನ್ನು ಕರೆದುಕೊಂಡೇನೆ ಧಾವಿಸಿದರು. ರಾತ್ರಿ ಬೆಳಗಾಗುವುದರಲ್ಲಿ ರುಕ್ಮಿಣಿಯು ಬಾಣಂತಿಯಾದಳು. ಡಾಕ್ಟರರ ಭವಿಷ್ಯದಂತೆಯೆ. ಮೃತ ಶಿಶುವಿನ ಜನನವಾಗಬೇಕೆ? ರಕ್ತಸ್ರಾವ ಸಾಕಷ್ಟು ಬಲವಾಗಿದ್ದುದರಿಂದ, ಡಾಕ್ಟರ ಗಂಗಾಧರರಿಗೂ ಆತುರವೇ. ಅಚ್ಯುತ ಎಲ್ಲ ಆಸೆಯನ್ನು ಬಿಟ್ಟು, ಮನೆಯ ಹಿಂದುಗಡೆ ಹೋಗಿ ಅಳುತ್ತ ನಿಂತಿದ್ದ. ಲಕ್ಷ್ಮಮ್ಮ ಗಳಿಗೆಗಳಿಗೆ ಡಾಕ್ಟರರನ್ನು ಕರೆದು "ಏನು ಮಾಡು ತ್ತೀರಿ ನನ್ನ ಸೊಸೆಯನ್ನು; ಉಳಿಸಿ ಕೊಡುವುದಿಲ್ಲವೇ" ಎಂದು ಮೊರೆ ಯಿಟ್ಟು ಕಂಬನಿಗರೆಯುತ್ತಿದ್ದಳು. ಅವರು ಮೆಲ್ಲಗೆ "ನಿಮಗೆಲ್ಲ ಋಣವಿದ್ದರೆ ಅವಳು ಬದುಕುತ್ತಾಳೆ; ಹೆದರಬೇಡಿ ಅಮ್ಮ" ಎಂದರು.

ನಿಜವಾಗಿಯೂ ರುಕ್ಮಿಣಿಗೆ ಬದುಕುವ ಋಣವಿತ್ತು. ಅವಳು ಬದುಕಿದಳು. ಆ ದಿನವೆಲ್ಲ ವೈದ್ಯರು ಅಲ್ಲಿ ಕಾವಲಿದ್ದರು. ಮಂಜೇ ಶ್ವರಕ್ಕೆ ಹೋಗಿ ಬರುವಷ್ಟು ಅನುಕೂಲವಿದ್ದಿಲ್ಲ. ಮುಂದೂ ನಾಲ್ಕಾರು ಬಾರಿ ಅವರು ಅಚ್ಯುತನ ಮನೆಗೆ ಬಂದುಹೋದರು. ಸೂಲಗಿತ್ತಿ ದಿನ ದಿನವೂ ಬಂದು ಅವಳ ಸೇವೆಮಾಡಿ ಹೋದಳು. ತೀರ ಕಠಿಣ ಸಂಧಿ ಯೊಂದು ನಿವಾರಣೆಯಾಯಿತು. "ರುಕ್ಮಿಣಿ ಇನ್ನು ಬದುಕಲು ಯಾವ ಭೀತಿಯೂ ಇಲ್ಲ. ಆದರೆ ಕನಿಷ್ಠ ಆರು ತಿಂಗಳ ಕಾಲ ವಿಶ್ರಾಂತಿ ಅವಳಿಗೆ ದೊರೆಯಬೇಕು" ಎಂದು ಡಾಕ್ಟರರು ಎಚ್ಚರವನ್ನು ಹೇಳಿಹೋದರು. ಆರು ತಿಂಗಳೆಂದರೆ, ಲಕ್ಷ್ಮಮ್ಮಗೆ ದಿಗಿಲು ಹಾರುವಂತಾಯಿತು. ಅವಳ ಒಂದು ಜೀವ, ಮಗಳ ಮನೆಯಲ್ಲಿತ್ತು. ತಾನಿಲ್ಲದೆ ಅಲ್ಲಿನ ಜೀವನ ಹೇಗಾದೀತೋ ಎಂಬ ಆತುರ ಅವಳಿಗೆ. ಈಗ ಬೇಸಾಯ ನಡೆದಿರ ಬೇಕು, ಕೊಯ್ಲಿನ ವೇಳೆಗಾದರೂ ಊರನ್ನು ಸೇರಬೇಡವೇ-ಎಂಬ ಯೋಚನೆ ಅವಳಿಗೆ. ಇತ್ತ ಮಗನ ಮನೆಯ ಸ್ಥಿತಿಯನ್ನು ಕಂಡು ತೀರ ಮರುಗಿದಳು. ಬರಿಯ ಎರಡು ಹೊತ್ತಿನ ಗಂಜಿಯಿಂದಲೇ ಅವರ ಕುಟುಂಬದ ಜೀವನ ಸಾಗುತ್ತಿತ್ತು. ಹಾಸುಗೆ ಹಿಡಿದವಳ ಮಟ್ಟಿಗೆ ಇಷ್ಟು ಹಾಲು ನೀರನ್ನು ತೋರಿಸುತ್ತಾರೆ; ಅದೂ ಹಾಲನ್ನು ಬೆಲೆಗೆ

ಕೊಂಡು. ಮನೆಯ ದನಗಳೆರಡೂ ಬರಡಾಗಿದ್ದುವು. ಅವನ್ನು ಸಾಕಿ ಕೊಂಡಿರುವುದು ಅಸಾಧ್ಯ. ತಾವು ಉಣ್ಣುವುದೇ? ಜಾನುವಾರುಗಳಿಗೆ ಮೇವನ್ನು ಕೊಂಡು, ಕೊಟ್ಟು, ನಾಳೆ ಹಾಲು ಸಿಕ್ಕೀತೆಂದು ಆಸೆಪಡುವುದೇ? ಆದುದರಿಂದ ಅವನ್ನು ಮಾರಾಟ ಮಾಡಿದರು. ಬರಡು ದನಕ್ಕೆ ಬೆಲೆಯೇನು ಬಂದೀತು? ಕೊಳ್ಳುವಾಗಿನ ಕಾಲುವಾಸಿ ಬೆಲೆಗೆ ಮಾರಿದ್ದಾಯಿತು. ಮಾರದೆ ಇರಿಸಿಕೊಂಡರೆ ಅದರ ಇಮ್ಮಡಿ ದಂಡವಾಗುತ್ತದೆ ಎಂಬ ಭೀತಿ.

ರುಕ್ಮಿಣಿ ಚೇತರಿಸಿ, ಒಲೆಯನ್ನು 'ಉರುಪಲು' ಸಾಕಷ್ಟು ಶಕ್ತಿವಂತಳಾಗಲು, ನಾಲ್ಕು ತಿಂಗಳ ಕಾಲವೇ ಹಿಡಿಯಿತು. ಮನೆಯವರು ಮಾಡಿದ ಉಪಚಾರದಿಂದಲ್ಲ. ಕಡಲುತೀರದ ಹವೆಯಿಂದಿರಬಹುದು. ಆದರೂ ಮುಖ್ಯ ಕೆಲಸಗಳ ಹೊರೆಯನ್ನು ಇತರರು ಹೊತ್ತರೆ, ಅವಳು ಮನೆ ನೋಡಿಕೊಳ್ಳಬಲ್ಲಳು. ಲಕ್ಷ್ಮಮ್ಮ ಅಲ್ಲಿಗೆ ಬಂದು ಆರು ತಿಂಗಳಾದುವು. ದೀವಳಿಗೆ ಕಳೆದು, ಅವಳು ಊರಿಗೆ ಹೊರಟಳು. ಇಲ್ಲಿಯೇ ಕುಳಿತಿರುವುದು ಅನ್ಯಾಯವೆಂದು ಕಂಡಿತು. ಆ ಬೆಲೆಯ ಅಕ್ಕಿ ಬೆಲ್ಲ ಮೊದಲಾದುವನ್ನು ಕೊಂಡು ತನ್ನ ಮಗ ಯಾರನ್ನು ಸಾಕಬಹುದು; ಯಾರನ್ನು ಬಿಡಬಹುದು? ಆ ನೂರು ಒಣಕು ಕೂಸುಗಳಿಗೆ,ಹೆಸರಿಗಾದರೂ ಇಷ್ಟು ಮಜ್ಜಿಗೆ ನೀರು ಕೊಡದೆ ಹೋದರೆ, ಅವೂ ಇಂದೋ ನಾಳೆಯೋ! ಹಾಸಿಗೆಗಳಲ್ಲಿ ಬರಿಯ ಚಾಪೆಗಳಷ್ಟೇ ಉಳಿದಿವೆ. ಬಾಜಾರದಲ್ಲಿ ಅರಿವೆ, ಸೀರೆ, ಪಂಚೆಗಳ ಧಾರಣೆಗಳು ವಾಯುವೇಗದಿಂದ ಯುದ್ಧ ಮಾಡಿ, ಸೇಕಡಾ ಮುನ್ನೂರರ ಏರಿಕೆಯಲ್ಲಿ ನಿಂತಿವೆ. ಮರ್ಯಾದೆಯನ್ನು ಉಳಿಸಲು ಅಚ್ಚುತನಿಗೊಂದು, ಜುಬ್ಬ ಮಾಡಿಸಲು ನಾಲ್ಕೇ ನಾಲ್ಕು ರೂಪಾಯಿ ಹಿಡಿಯಿತು. ರುಕ್ಮಿಣಿಗೆ ಬೇಕೆಂದು ಕಂಡ, ಎರಡು ಸೀರೆಗಳಿಗೇನೆ ಹದಿನೆಂಟು ರೂಪಾಯಿ ಬೆಲೆ ಹೇಳಿದರು. ಹಾಗಾಗಿ 'ಮುಂದಿನ ತಿಂಗಳು' ಎಂದು ಬರಬೇಕಾಯಿತು. ಇದನ್ನೆಲ್ಲ ಕಾಣಲಾರದೆ, ಲಕ್ಷ್ಮಮ್ಮ ಪಂಜಕ್ಕೆ ಹೊರಡಲು ಅಣಿಯಾದಳು. ಜತೆಗೆ ಹಿರಿಯ ಮಗುವನ್ನು ಕರೆದೊಯ್ಯಲು ನಿಶ್ಚಯಿಸಿದಳು. ಆದರೆ ಅವನ ಶಾಲೆ ತಪ್ಪುವುದೆಂದು, ಮೂರನೆಯ ಮಗು ಬಾಲಕೃಷ್ಣನನ್ನು ಜತೆಗೆ ಕರೆದೊಯ್ದಳು.

ಬರಗಾಲದ ವೇಳೆಯಾದರೂ, ಅಚ್ಯುತರಾಯ ಮಕ್ಕಳ ಹೆಸರಿಗೆ ಬರಗಾಲ ತಂದಿರಲಿಲ್ಲ. ಮೊದಲಿನ ಏಳು ವರ್ಷದ ಕೂಸು—ಕೃಷ್ಣ. ಎರಡನೆಯವ ಗೋಪಾಲಕೃಷ್ಣ, ಮೂರನೆಯವ ಬಾಲಕೃಷ್ಣ, ನಾಲ್ಕನೆಯವ ಅನಂತಕೃಷ್ಣ. ಸಂತಾನವು ಅಮಿತವಾದೀತೆಂದು ಬೆದರಿ ಇಟ್ಟ ಹೆಸರು ಕೊನೆಯದು. ಆದರೂ ಮತ್ತೊಬ್ಬ ಶಾಂತಕೃಷ್ಣನು ಉದಿಸಿ, ಪ್ರಕಾಶಿಸುವ ಮೊದಲೇ ಮಾಯವಾದನು. ತಾಯಿ, ಮಗನ ಪಾಡನ್ನು ನೆನೆದು ಪಂಜಕ್ಕೆ ಮರಳಿದಳು. ಅಲ್ಲೂ ಅವಳಿಗೆ ಸುಖವಿದ್ದೀತೇ?

ಆ ವರ್ಷ—ನಡುವಾಗ, ಬಿತ್ತುವಾಗ, ಊರಲ್ಲಿ ಅವಳಿರಲಿಲ್ಲ. ಗಂಡುಸರಿಲ್ಲದೆ ಓಡಾಟಕ್ಕೆ, ಆಳುಗಳು ಯಾವ ಕೆಲಸಕ್ಕೂ ಸರಿಯಾಗಿ ಒದಗಲಿಲ್ಲ. ಕೈತುಂಬ ಕೂಲಿ ಕೊಡುವವರ ಮನೆಗೆ ಅವರು ಓಡಿದರು. ಹೀಗಾಗಿ ಆ ವರ್ಷದ ಬೆಳೆ ಹತ್ತಕ್ಕೆ, ಐದಾಯಿತು. ಇನ್ನೊಂದು ಚೂರು ಸುಗ್ಗಿಯ ಬೆಳೆಯಿದೆ. ಅದು ಸಾರ್ಥಕವಾದರೆ—ಆ ವರ್ಷ ಉಣ್ಣಲು ಅಕ್ಕಿಗೆ ಕೊರತೆಯಾಗದು. ಇತರ ವರ್ಷಗಳಂತೆ ಮಿಕ್ಕಿದ್ದನ್ನು ಮಾರಿ, ಏನನ್ನೂ ಕೊಂಡುಕೊಳ್ಳುವ ಹಾಗಿರಲಿಲ್ಲ. ಅದರಿಂದ ಲಕ್ಷ್ಮಮ್ಮ ಊರಿಗೆ ಬಂದವಳೇ-ಕಾಡಿನ ಸೀಗೆ, ಕಾಡಿನ ಉಂಡೆ ಹುಳಿ ಎಂದು ಏನೇನು ವನ್ಯ ವಸ್ತುಗಳನ್ನು ಸಂಗ್ರಹಿಸಬಹುದೋ ಅವನ್ನು ಒಟ್ಟುಗೂಡಿಸಿದಳು. ದೀಪದ ಎಣ್ಣೆ ಬೇಕಾಯಿತು, ಊಟಕ್ಕೆ ಮೆಣಸು ಬೇಕಾಯಿತು--ಯಾವುದನ್ನೂ ಅವರು ಕೊಂಡುಕೊಳ್ಳುವಂತಿರಲಿಲ್ಲ. ದನಕರುಗಳ ಬಾಯಿಯಿಂದ ಹಿಂಡಿ, ಹತ್ತಿಕಾಳುಗಳು ಮಾಯವಾದುವು. ದೇವರ ದಯೆಯಿಂದ ಅವರ ಊರಲ್ಲಿ ಹುಲ್ಲಿಗೂ, ಸೊಪ್ಪಿಗೂ ಬರಗಾಲವಿದ್ದಿರಲಿಲ್ಲ. ಅದರಿಂದ ಅವು ಬದುಕಿಕೊಂಡುವು.

ಸರಸ್ವತಿಯ ತಂಗಿ ಮೂಕಾಂಬಿಕೆ ಈಗ ಬಲಿತಿದ್ದಾಳೆ. ಆದರೆ ಅವಳಿಗೆ ಗಂಡನನ್ನು ಹುಡುಕುವವರು ಯಾರು? ಈ ಸಮಯದಲ್ಲಿ ಏನೆಂದು ಮದುವೆಗೆ ಸಿದ್ಧಗೊಳಿಸಲಿ? ಸೀತೆ--ತನ್ನ ಹಿರಿಯ ಮಕ್ಕಳು ಮನೆಗೆ ಬಂದಾಗಲೆಲ್ಲ "ಮಗು, ನಿಮ್ಮ ಮನೆಯವರನ್ನಾದರೂ ಕೇಳಿ, ಒಂದು ಗಂಡನನ್ನು ಹುಡುಕಲು ಹೇಳಿ. ಮೂಕಿ ದೊಡ್ಡವಳಾದಳಲ್ಲ" ಎಂದು ಅಂಗಲಾಚುತ್ತಿದ್ದಳು. ಆದರೆ ಅವರೇನು ಮನೆಯ ಯಜಮಾನರೇ? ಮಹಾಲಕ್ಷ್ಮಿಗೆ ಇನ್ನೂ ಅತ್ತೆಯಿದ್ದಳು. ಮೂರು ಮಕ್ಕಳ

ತಾಯೆನಿಸಿದ ಮೇಲೆಯೂ, ಅವಳಿಗೆ ಅತ್ತೆಯ ಬಾಯಿಂದ ನಿತ್ಯವೂ ಮಂಗಳಾರತಿ ನಡೆಯುತ್ತಲೇ ಇತ್ತು. ಸರಸ್ವತಿಯ ಅತ್ತೆ, ಆಕೆ ಮದುವೆಯಾದ ವರ್ಷವೇ ತೀರಿಕೊಂಡಳು. ಅವಳೇ ಮನೆಯೊಡತಿ ನಿಜ; ಆದರೆ ಮನೆಯ ಪಾರುಪತ್ಯಕ್ಕೆ ಗಂಡನಿದ್ದಾನೆ; ಅವನ ತಂದೆಯಿದ್ದಾರೆ. ಅವರಿಗೆ ಹೊರುವೆನೆಂಬಷ್ಟು ತಾಪತ್ರಯಗಳೂ ಇವೆ. ಹೀಗಾಗಿ "ನನ್ನ ಗೋಳನ್ನು ಯಾರೂ ಕಿವಿಯ ಮೇಲೆ ಹಾಕಿಕೊಳ್ಳುವುದಿಲ್ಲ" ಎಂದು ಸೀತೆ ಮರುಗುವಂತಾಯಿತು. ಲಕ್ಷ್ಮಮ್ಮಗೆ ಮಗಳಿಗೆ ಸಮಾಧಾನ ಹೇಳುವುದೇ ಕೆಲಸ—"ಸೀತೆ, ನಿನಗೆ ಮರುಳು. ಮದುವೆ ಎಂಬುದು ಋಣಾನುಬಂಧದ್ದು; ಬ್ರಹ್ಮ ಬರೆದ ಗಳಿಗೆ ಬರುವಾಗ, ಎಲ್ಲ ಕೂಡಿ ಬಂದೀತೇ ವಿನಾ, ನಾವು 'ಬರಲಿ' ಎಂದರೆ ಬರಲಿಕ್ಕೆ ಅದು ಅಂಗಡಿ ಸಾಮಾನೇ?" ಎನ್ನುತ್ತಿದ್ದಳು. ಒಂದು ದಿನ ತಾಯಿ, ಮಗಳು ಜಗುಲಿಯಲ್ಲಿ ಕುಳಿತು ಇದೇ ವಿಷಯ ಜಪಿಸುತ್ತಿದ್ದರು. ಕೈಯಿಂದ ಉಂಡೆ ಹುಳಿ ಕತ್ತರಿಸುತ್ತ, ಒಣಗಿಸುವ ಕೆಲಸ ನಡೆದಿತ್ತು. ಬೇಸಗೆ ತೊಡಗಿತ್ತಷ್ಟೆ; ಹೊತ್ತು ತಿರುಗಿಯಾಗಿತ್ತು. ಅವರ ಮುಂಗಡೆಯಲ್ಲಿ ಯಾವಳೋ ಒಬ್ಬ ಹೆಂಗಸು ಬಂದು ನಿಂತಳು. ಸೀತೆ ನೋಡಿದಳು; ಕಂಡ ನೆನಪಾಗಲಿಲ್ಲ. "ಹೂಂ-ಯಾರೋ ದಾರಿಗರು ಬಂದಿರಬೇಕು. ನೀರಿಗೆ" ಎಂದು ಎದ್ದಳು. "ಏನು, ನೀರು ಬೇಕೇ?" ಎಂದು ಕೇಳಿದಳು. "ನೀರು ಬೇಕು" ಎಂಬ ಉತ್ತರ ಬಂದಿತು.

ಸೀತೆ ನೀರು ತರಲು ಹೋದಾಗ, ಲಕ್ಷ್ಮಮ್ಮ ಕೆಲಸ ಮಾಡುತ್ತಿದ್ದಳು. ಅವಳಿಗೂ ಎದುರು ನಿಂತವಳಾರೆಂದು ತಿಳಿಯಲಿಲ್ಲ. ಹೊರಗಿನ ಬಿಸಿಲಿನ ಜಳಕ್ಕೆ ಕಣ್ಣು ದಣಿದಿತ್ತು. ಆದರೆ ಬಂದಾಕೆ ತಾನಾಗಿ "ಒಡತಿ, ನಿಮಗೆ ನನ್ನ ಗುರುತೇ ಮರೆತು ಹೋಯಿತಲ್ಲ" ಎಂದಳು.

ಲಕ್ಷ್ಮಮ್ಮ ಮುಖವನ್ನು ನೋಡಿದಳು. ನಿಜಕ್ಕೂ ಗುರುತಾಗದು; ಮುಖವೂ ದಣಿದಿತ್ತು, ಬಾಡಿತ್ತು, ರೂಪುಗೆಟ್ಟಿತ್ತು. "ಆದರೆ ಪರಿಚಿತ ಸ್ವರವಾಗಿದೆಯಲ್ಲ" ಎಂದುಕೊಂಡಳು.

"ಯಾರು ನೀನು? ನೆನಪಿಗೆ ಬರಲೊಲ್ಲದು" ಎಂದಳು. ಸೀತೆ ನೀರನ್ನು ತಂದು ಕೊಟ್ಟಳು. ಆಕೆ ತೀರ ದಣಿದು ಬಂದವಳಾದುದರಿಂದ ನೀರನ್ನು ಗಟಗಟನೆ ಕುಡಿದು, ತಿರುಗೊಂದು ಬಿಂದಿಗೆ ನೀರನ್ನು ಕೇಳಿ

ದಳು. ಸೀತೆ ಅದನ್ನು ತರಲು ಹೋಗುತ್ತಲೆ "ನಾನು ನಿಮ್ಮ ಒಕ್ಕಲು ಅಣ್ಣು ವೊಮ್ಮಗಳಲ್ಲವೇ" ಎಂದಳು.

ಲಕ್ಷ್ಮಮ್ಮನಿಗೆ ತುಂಬ ಸೋಜಿಗವೆನಿಸಿತು; 'ತನ್ನ ನೆನಪೇ!' ಎಂದು ಹಳಿದುಕೊಂಡಳು. "ಅಯ್ಯೋ ಸುಬ್ಬಿ, ನನಗೆ ಎಂಥಾ ಮರವೆ!" ಎಂದಳು.

"ವರ್ಷ ಈಗ ಆರೇಳಾಗಲಿಲ್ಲವೇ ಒಡತಿ, ನೀವು ನಮ್ಮೂರು ಬಿಟ್ಟು ಬಂದು. ಅಯ್ಯನಾದರೂ ಒಂದು ವರ್ಷ ಊರಿಗೆ ಬಂದಿದ್ದರು... ಅಯ್ಯ ಈಗ ಎಲ್ಲಿ?" ಎಂದು ಕೇಳಿದಳು.

"ಅಯ್ಯನೇ... ಅಯ್ಯ-ಅಲ್ಲೆಲ್ಲೋ, ಮಂಗಳೂರಿನ ಬದಿಯಲ್ಲಿದ್ದಾನೆ" ಎಂದಳು ಲಕ್ಷ್ಮಮ್ಮ.

"ಅಯ್ಯ-ಅಮ್ಮ-ಎಲ್ಲರು ಹ್ಯಾಗಿದ್ದಾರೆ? ಮಕ್ಕಳೆಷ್ಟು ಅವರಿಗೆ?" ಎಂದು ಕೇಳಿದಳು.

ಲಕ್ಷ್ಮಮ್ಮ ಎಲ್ಲವನ್ನೂ ಹೇಳಿದಳು. ಅಲ್ಲಿಗೆ ಬಂದ ಬಾಲಕೃಷ್ಣನನ್ನು ತೋರಿಸಿ "ಇದು ನಮ್ಮ ರುಕ್ಮಿಣಿಯ ಮೂರನೆಯ ಮಗು; ಮೊನ್ನೆ ಒಂದು ಹಡೆದು, ಸತ್ತುಹೋಯಿತು-ಅವಳು ಬದುಕಿದ್ದೇ ದೊಡ್ಡದು" ಎಂದು ಐದನೆಯ ಬಾಣಂತಿತನದ ಕತೆ ಹೇಳಿದಳು.

"ಹೌದು ಒಡತಿ. ಅದೇನೋ ಅವರ ಗ್ರಹಚಾರ. ಅವರ ಮೊದಲಿನ ಎರಡು ಹೆರಿಗೆಗಳಲ್ಲೂ ಹಾಗೇನೆ ತುಂಬ ಕಷ್ಟ ಆಗಿತ್ತಲ್ಲ."

ಲಕ್ಷ್ಮಿಯು ಸುಬ್ಬಿಯನ್ನು ಕುರಿತು ಮಾತನಾಡಿಸಿದಳು. "ಸುಬ್ಬಿ, ಈಗಲೂ ನೀನು ಕೊಂಬಾರಲ್ಲೇ ಇದ್ದೀಯಿಲ್ಲ—ಅದೇ ಜಾಗದಲ್ಲಿ. ನಮಗೆ ಖುಣವಿಲ್ಲ. ನಿನ್ನ ಗಂಡ ಹ್ಯಾಗಿದ್ದಾನೆ? ನಿನಗೆ ಮಕ್ಕಳೆಷ್ಟು? ನಾವು ಬರುವಾಗ ಒಂದು ಗಂಡಿತ್ತಲ್ಲವೇ-ನಿನಗೆ" ಎಂದು ವಿಚಾರಿಸಿದಳು.

ಸುಬ್ಬಿ "ಇದ್ದೇನೆ ಒಡತಿ ಹೀಗೆ, ಸಾಯದೆ ಬದುಕದೆ. ಎಲ್ಲಂತಿಲ್ಲ, ಹೇಗಂತಿಲ್ಲ! ಸಾವು ಬಾರದೆ ಇದ್ದುದಕ್ಕೆ ಬದುಕುವುದು" ಎಂದಳು.

"ಕಾಳ ಹ್ಯಾಗಿದ್ದಾನೆ?"-ಎಂದಳು ಲಕ್ಷ್ಮಿ.

"ಅವರಿಗೇನು? ಇರಬೇಕು--ನಿಮ್ಮ ಕೊಂಬಾರಿನಲ್ಲಿಯೆ. ನನಗೆ ಅವರ ಹತ್ತಿರ ದಿನ ಕಳೆಯಲಿಕ್ಕಾಗದೆ, ಹೊರಟು, ವರ್ಷ ಐದಕ್ಕೆ ಹತ್ತಿರವಾಯಿತು. ಅದೂ-ಏನು ಕುಡಿತ, ಬಡಿತ! ಅಜ್ಜ ಸತ್ತರು. ನನ್ನ

ಕೊರಳಿಗೆ ಎಂಥವನನ್ನು ಹುಡುಕಿ ಹುಡುಕಿ ತಂದು ಕಟ್ಟಿದರು ಹೇಳಿ!"

"ಹಾಗಾದರೆ ಮತ್ತೇನು ಮಾಡಿಕೊಂಡಿದ್ದೀ?"

"ಏನೂ ಇಲ್ಲ ಒಡತಿ,-ಈ ನಾಲ್ಕು ವರ್ಷ, ಕುಲದವರು, ಬಳಿಯವರು ಎಂದು ನೆನಪಾದಲ್ಲೆಲ್ಲ ಹೋಗಿ, ಯಾರಾರ ಚಾಕರಿಮಾಡಿ ದಿನ ತೆಗೆದೆ! ಈಗ ನನ್ನ ಚಾಕರಿ ಯಾರಿಗೂ ಬೇಡಾಗಿದೆ. ಉಣ್ಣಲು ಇಷ್ಟು ಗಂಜಿ ನೀರು, ವರ್ಷಕ್ಕೊಂದು ಅರಿವೆ ಚೂರು ಕಾಣಿಸಿದರೆ ಸಾಕು— ಎಂದು ಕಂಡವರನ್ನು ಬೇಡಿದೆ. ಅವರಿಗೆ ಸಿಕ್ಕಿದ ಮೇಲೆ ನನಗಲ್ಲವೇ! ಹೀಗೆ ಪರದೇಶಿಯಾಗಿ ತಿರುಗಿ ಸಾಕಾಯಿತು. ಅಮ್ಮನ ನೆನಪಾಯಿತು. ಇಲ್ಲೇ ಬೇಡಿಕೊಂಡು ಬಿದ್ದರೆ,ಇರಲಿಕ್ಕೆಒಂದು ಚೂರು ಜಾಗ ಸಿಕ್ಕೀತು! ಹೇಳಿದ ಕೆಲಸ ಮಾಡಿ ದಿನ ತೆಗೆದೇನು" ಎಂದು ತನ್ನ ಪುರಾಣವನ್ನು ಬಿಡಿಸಿದಳು.

ಅವಳ ಜೀವನದ ದಾರುಣ ಕತೆಯನ್ನು ಅದೊಂದೇ ದಿನಕ್ಕೆ ಅವಳು ಮುಗಿಸಲಿಲ್ಲ; ಮರುದಿನವೂ ಹೇಳಿ ಕಣ್ಣೀರು ಕರೆದಳು. ಅವಳ ಹೊಟ್ಟೆಯ ಕತೆಯನ್ನು ಹೇಳುವುದೇ ಅವಳಿಗೆ ಸಾಹಸವಾಯಿತು. ಜತೆಗೆ ಪ್ರಣಯದ ಕತೆಯನ್ನು ಮಾತ್ರ ಹೇಳಹೋಗಲಿಲ್ಲ. ಅದು ಮಾನಕ್ಕೆ ಸಂಬಂಧಿಸಿದ ಕತೆಯಲ್ಲವೇ? ಮಾನ ಬೇಡವಾದವರಾರುಂಟು!

ಆ ಮನೆಯಲ್ಲಿ ಲಕ್ಷ್ಮಮ್ಮನಿರುವ ತನಕ, ತನಗೆ ಆಸರೆ ನಿರಾಕರಿಸಲ್ಪಡದು-ಎಂದು ಅವಳು ತಿಳಿದಿದ್ದಳು; ಹಾಗೆಯೇ ಆಯಿತು. ಅವರಿಗೂ ಆಳುಗಳ ಬೆಂಬಲ ಕಡಿಮೆಯಾಗಿತ್ತು. ಸುಬ್ಬಿ ದುಡಿದಾಳು; ಮನೆಗೆಲಸಕ್ಕೆ ನೆರವಾದಾಳು ಎಂಬ ನಂಬಿಕೆಯಿತ್ತು. "ಸುಬ್ಬಿ ಇಲ್ಲೇ ಇರು; ನಮಗಿದ್ದ ಗಂಜಿ ನೀರಲ್ಲಿ ನಿನಗಿಷ್ಟು ಕೊಡುತ್ತೇವೆ. ದನ, ಗದ್ದೆ, ಹಿತ್ತಲು ಮಗದೊಂದು ಎಂದು ನೋಡಿಕೋ. ನಮಗೂ ಆಳು ಇಲ್ಲದೆ ಒದ್ದಾಟ. ಇದ್ದವರೆಲ್ಲ ಈಗೀಗ ಘಟ್ಟಕ್ಕೆ ಓಡುತಿದ್ದಾರೆ. ಅಲ್ಲಿ ಅಕ್ಕಿಗೆ ಈ ಪಾಟಿ ದರವಿಲ್ಲವಂತೆ, ಕೈತುಂಬ ಸಂಬಳವಂತೆ. ನೀನು ಇಲ್ಲಿ ನಿಲ್ಲು" ಎಂದಳು ಲಕ್ಷ್ಮಮ್ಮ. "ಎಷ್ಟು ದಿನ ಎಂದು ಹೇಳುವುದಿಲ್ಲ. ಋಣ ಇದ್ದಷ್ಟು ದಿನ ಇರಿಸಿಕೊಳ್ಳುತ್ತೇವೆ. ನೀನು ಇರು. ಆದರೆ, ಹೋದರೆ, ನಿನಗೆ ಹೊಂದಿಬಂದರೆ"....ಎಂದು ಹೇಳಿದಳು.

ಸುಬ್ಬಿ ಅದಕ್ಕೆ "ದೇವರೇ ನಿಮಗೆ ಬುದ್ಧಿಯನ್ನು ಕೊಟ್ಟು ಈ ಒಕ್ಕಲು ಮಗಳನ್ನು ಕಾಪಾಡುವಂತೆ ಮಾಡಿದ್ದು" ಎಂದಳು. ಅವಳಿಗೆ ಗಂಜಿ ಇಲ್ಲದೆ ಮೂರು ದಿನಗಳಾಗಿದ್ದುವು. ಈಗ ಒಂದು ನೆರವನ್ನು ಕಂಡುಕೊಂಡಳು. ಸೀತೆಗೆ ಒಮ್ಮೆ "ಈ ಅಮ್ಮ, ನಮ್ಮದೇ ದಿನ ಹೋಗುವುದು ಕಷ್ಟವಾದಾಗ, ಇನ್ನೊಂದು ಜೀವದ ಉಪಕಾರಕ್ಕೆ ಯಾಕೆ ಹೊರಟಳು?" ಎಂದೂ ಅನಿಸಿತ್ತು. ತುಸು ಅಸಮಾಧಾನವಾಯಿತು. ಆದರೆ ಮರುದಿನದಿಂದ ಆ ಅಸಮಾಧಾನಕ್ಕೆ ಎಡೆಯಿಲ್ಲದಾಯಿತು. ಇವರಿಂದ ಎಣಿಸಲಾರದ ಕೆಲಸದ ಹೊರೆಗಳನ್ನು ಸುಬ್ಬಿ ವಹಿಸಿಕೊಂಡಳು. ಒಂದು ವಾರದಲ್ಲಿ ಅವಳು ಎಂಥ ಕೆಲಸಗಾರ್ತಿಯೆಂದು ಅವರಿಗೂ ಮಂದಟ್ಟಾಯಿತು. "ಸುಬ್ಬಿ ನೀನು ಒಂದು ತಿಂಗಳ ಮೊದಲು ಬಂದಿದ್ದರೆ, ಕೊಳಕೆ ಬೀಜವನ್ನು ಬಿತ್ತಿ ಬಿಡುತ್ತಿದ್ದೆ" ಎಂದಳು ಸೀತೆ.

* * * * *

ಕುರ್ಚಿಪಳ್ಳ ಶಾಲೆಯ ಉಪಾಧ್ಯಾಯರ ಕ್ಲಬ್ಬು ನಡೆನಡೆದು ದಣಿಯಿತು. ಮೂರು ವರ್ಷಗಳಾದರೂ ಯುದ್ಧ ನಿಲ್ಲಬಾರದೇ? ಜಪಾನು ಯುದ್ಧಕ್ಕೆ ಸೇರಿ ಆ ಊರಿಗೂ ಮದ್ರಾಸು ಮುಂಬಯಿಗಳಿಂದ ಗಾಬರಿಗೊಂಡ ಜನರು ಬಂದರು. ಅಲ್ಲಿನ ಆರು ಕಾಸಿನ ಹಾಲಿಗೆ ಮೂರು ಮುಕ್ಕಾಲು ಬೆಲೆಯಾಯಿತು. ಕಟ್ಟಿಗೆ ಚಿನ್ನವಾಯಿತು; ಬಡವರ ಬದುಕು ಅಸಾಧ್ಯವಾಯಿತು. ಒಂದು ಮುಡಿ ಅಕ್ಕಿಗೆ ಹತ್ತು ರೂಪಾಯಿ ಬೆಲೆ ಕೊಡಬೇಕಾಯಿತು. ಅದೂ ಬಹಿರಂಗವಾಗಿ ದೊರೆಯದು; ಯಾವನಾದರೂ ಶ್ರೀಮಂತನ ಆಶ್ರಯ ಮಾಡಿ, "ನೀನೇ ಧರ್ಮರಾಯ" ಎಂದು ಹೊಗಳಿ, ಹತ್ತು ರೂಪಾಯಿ ತೋರಿಸಿಯೇ ಅದನ್ನು ಪಡೆಯಬೇಕು. ಥಟ್ಟನೆ ಬೇಕೆಂದರೆ, ಒಂದು ಸೇರಕ್ಕಿಯೂ ಕಾಣದ ದಿನ ಬಂತು-ಉಪಾಧ್ಯಾಯರಿಗೆ! ಅವರ ಗೋಳನ್ನು ಕಂಡು, ಉದಾರವಾದ, ಒಂದೆರಡು ರೂಪಾಯಿಗಳ ಯುದ್ಧ ಭತ್ತೆಯೇನೂ ಮಾಸ್ತರರಿಗೆ ದೊರೆಯಿತು. ಅದು ದೊರೆತ ದಿವಸ ನಾರಾಯಣರಾಯರು "ನಮ್ಮಲ್ಲಿಗೆ ಇವರು ಬೇಡಲು ಬಂದರೆ, ನಾವೇ ಅಷ್ಟು ಕೊಡಬಹುದಲ್ಲ" ಎಂದು ರೇಗಿ ನುಡಿದರು. ಮಾಲುಗಳ ಬೆಲೆ ನಾಲ್ಕುಪಾಲು ಏರಿದರೂ, ಈ ಆಳುವವರಿಗೆ ಕರುಣೆಬಾರದೇ-ಎಂದು ಎಲ್ಲರ ಮನಸ್ಸಿಗೂ ತೋರಿತು. ಅವರಲ್ಲಿ ಎರ

ಡಾಣೆ ಕೊಟ್ಟು ಒಂದು ಸಂಚಿಕೆ 'ಹಿಂದೂ' ಪತ್ರಿಕೆಯನ್ನು ಹೇಗೆ ಕೊಂಡಾರು? ಅವರಂಥ ಬಡಪಾಯಿಗಳು, ಅರಿವೆಗೆ ಸಾಬೂನಿಲ್ಲದೆ, ಸಾಬೂನಿಗೆ ಅರಿವೆಯಿಲ್ಲದೆ ಅಲೆಯುತ್ತಿದ್ದಾರೆ. ಅವರ ಮುಂದೆ ನಿನ್ನೆ ಫಕೀರರಾಗಿದ್ದ ಹಲವರು, ನೋಟುಗಳ ಕಟ್ಟನ್ನು ಚೆಲ್ಲುವುದೂ ಕಾಣ ತೊಡಗಿತು.

ನಾರಾಯಣರಾಯರ ಸಂಸಾರದಲ್ಲಿ ಈಗ ಎಂಟು ಮಕ್ಕಳು; ಗಂಡ ಹೆಂಡಿರು; ಹೀಗೆ ಹತ್ತು ಮಂದಿಯ ಜೀವನ ನಿರ್ವಹಣ ಸಾಗ ಬೇಕಿತ್ತು. ಅವರ ಮನಸ್ಸಿನಲ್ಲಿ "ಈ ಪ್ರಾಂತ ತಪ್ಪಿ, ತಿರುಗಿ ಮೂಡು ಪ್ರಾಂತ ತನಗೆ ಸಿಕ್ಕಿದರೆ, ಕಟ್ಟಿಗೆಗಾದರೂ ಕಾಸು ಕೊಡುವುದು ತಪ್ಪು ತ್ತಿತ್ತು. ಅಕ್ಕಿಯಾದರೂ ಗುರುತಿನವರಿಂದ ಬೇಡಿ ತರಬಹುದು" ಎಂದು ತೋರುತ್ತಿತ್ತು. ಅಚ್ಯುತ ಅವರಿಗಿಂತಲೂ ಕಂಗಾಲಾಗಿದ್ದ. ಅವನಿಗೆ ಇರುವ ವೇತನ ಇನ್ನಷ್ಟು ಕಡಿಮೆ. ಸಾಲದ್ದಕ್ಕೆ ಆರೋಗ್ಯವೂ ಕಡಿಮೆ. ಮೂರು ವರ್ಷದ ಯುದ್ಧದ ಛಾಯೆ ಅವನ ತಲೆಗೂದಲುಗಳಲ್ಲಿ ತುಂಬ ಕಾಣಿಸಿದೆ. ಅದು ಸಂಪೂರ್ಣ ನೆರತೇ ಬಿಟ್ಟಿದೆ. ಕೆನ್ನೆಯಲ್ಲಿ ಸುಕ್ಕು ಮೂಡಿದೆ. ಆದರೂ ಆತನನ್ನು, ರುಕ್ಮಿಣಿ "ಏನು ಯೋಚನೆಯೇ?" ಎಂದು ಕೇಳುವಾಗಲೆಲ್ಲ-"ಹೂಂ-ಯೋಚನೆ ಮಾಡಿ ಆಗುವುದೇನು?" ಎನ್ನುತ್ತಲಿದ್ದ.

ಅವನ ಯೋಚನೆಗಳು ಈಗ ಬಹುಮುಖವಾದುವು. ಅವನೂ -ಕರಾವಳಿಗೆ ದೂರವಾದ, ಅಕ್ಕಿಗಾದರೂ ಸಮೀಪವಾದ ಹಳ್ಳಿಯನ್ನು ಸೇರಲು ಹಂಬಲಿಸುತ್ತಿದ್ದ. ನಾರಾಯಣರಾಯರು ಬಳಿಯಿದ್ದುದ ರಿಂದೇನೊ ತನ್ನ ಜೀವ ಹೀಗಾದರೂ ಉಳಿದಿದೆ. ಆತ್ಮಹತ್ಯೆಗೊಂದು ಮನಸ್ಸಾಗಲಿಲ್ಲ. ತಾನು ಒಂಟಿಯಾಗಿದ್ದರೆ, ತನಗೆ ಮರುಳೇ ಹಿಡಿಯು ತ್ತಿತ್ತು-ಎಂದು ತಿಳಿಯುತ್ತಿದ್ದ.

ಸಮನಾದ ಆಹಾರವಿಲ್ಲದೆ, ಅವನ ಮೂರು ಮಕ್ಕಳೂ ಕಜ್ಜಿಯ ತವರುಮನೆಯಾಗಿದ್ದರು. ಅವನಿಗೆ, ನಿತ್ಯವೂ ಅವರನ್ನು ಉಪ್ಪುನೀರಲ್ಲಿ ಅದ್ದಿ ತರುವುದೊಂದು ಉದ್ಯೋಗವಾಯಿತು.

ಈ ಎಲ್ಲ ತಾಪತ್ರಯಗಳ ಎಡೆಯಲ್ಲಿ ಅವರ ಶಾಲೆಯವರಿಗೇನೆ, ಮೇಲಿನ ಒದೆಯೊಂದು ಬಿದ್ದಿತು. "ಯಾವ ಉಪಾಧ್ಯಾಯರೂ ಯುದ್ಧ

ವಿಚಾರದಲ್ಲಿ ಸಾಕಷ್ಟು ಸಹಕರಿಸುತ್ತಲಿಲ್ಲ" ಎಂದು ಅವರ ಮೇಲೆ ಟೀಕೆ ಬಂದಿತು. ಯುದ್ಧ ಪ್ರಚಾರಕ್ಕೆ, ಉಪಾಧ್ಯಾಯರು ತಪ್ಪದೆ ಬೆಂಬಲ ಕೊಡಬೇಕೆಂದೂ, ಆರ್ಡರು ಬಂದಿತು! ಬಲು ದಿನ ಈ ಆರ್ಡರನ್ನು ಮೂಲೆಗಿರಿಸಿ, ಕೊನೆಗೆ ಉಪಾಯಗಾಣದೆ, ಯುದ್ಧಕ್ಕೆ ಬೆಂಬಲವಾಗುವಂತೆ, ಒಂದು ನಾಟಕವನ್ನು ಶಾಲೆಯ ವತಿಯಿಂದ ಅವರು ಆಡಿ ತೋರಿಸಬೇಕಾಯಿತು. ಉಪಾಧ್ಯಾಯರು-"ನಮ್ಮ ಜೀವನವೇ ನಾಟಕವಾಗಿದೆ; ಅದರ ಮೇಲೆ ಇದೊಂದು ನಾಟಕ" ಎಂದುಕೊಳ್ಳುವಂತಾಯಿತು. ಆ ನಾಟಕವೂ ಕಳೆಯಿತು. ಆಗಲೂ ದೂರು ತಪ್ಪಲಿಲ್ಲ. "ಉಪಾಧ್ಯಾಯರು ಮೆಹನತ್ತು ವಹಿಸಿ ಟಿಕೇಟುಗಳನ್ನು ಮಾರಲಿಲ್ಲ" ಎಂದು ಮೇಲಿನವರಿಂದ ಬಿರುದು ಬಂದಿತು. ಅವರು ಮಾರಿದ ಟಿಕೇಟುಗಳಿಗಾಗಿ ಖಾಸಗಿಯಿಂದ ಎಷ್ಟು ದಂಡ ತೆತ್ತರೆಂದು ಬಲ್ಲವರಾರು?

ಅವರ ಈ ಒದ್ದಾಟಗಳ ಸಮಯದಲ್ಲೇ 'ಆಗಸ್ಟು' ಅವಾಂತರಗಳು ಎಲ್ಲೆಲ್ಲಿಯೂ ತಲೆದೋರಿದುವು. ಎಲ್ಲೆಲ್ಲಿಯೂ ಕಾಂಗ್ರೆಸಿನ ಹೆಸರಿನಲ್ಲಿ ಪುಂಡಾಟಿಕೆಗಳು ಹೆಚ್ಚತೊಡಗಿದುವು. ಸರಕಾರದವರು ಶಾಲೆಗೋಡೆಗಳಿಗೆಲ್ಲ "ಪುಂಡರನ್ನು ಹಿಡಿಯಿರಿ" ಎಂದು ನೋಟೀಸು ಅಂಟಿಸಿದರು. "ಶಾಲೆಯ ಮಾಸ್ತರರೂ ಇವರಿಗೆ ಪುಂಡರೆಂಬ ಗುಮಾನಿ" ಯಾದಂತೆ ಕಾಣಿಸಿತು. ಅದಕ್ಕೆ ಸಮನಾಗಿ, ಅವರ ಊರಲ್ಲೂ ಕೆಲವು ತಂತಿಕಂಬಗಳು ಉರುಳಿಬಿದ್ದುವು. ಊರವರ ಈ ಪಿಕಲಾಟ ತಮಗೆಲ್ಲಿ ಬಂದಿತೋ, ಎಂದು ಬಡ ಉಪಾಧ್ಯಾಯರು ಮತ್ತಷ್ಟು ಚಿಕ್ಕ ಇಲಿಗಳಾಗಬೇಕಾಯಿತು.

ಆದರೆ ಈ ಎಲ್ಲ ಯುದ್ಧಕ್ಕಿಂತ, ಯುದ್ಧಜನ್ಯ ಪ್ರಸಂಗಗಳಿಗಿಂತ, ಭೀಕರವಾದ ಇನ್ನೊಂದು ಕದನವು ಅಚ್ಯುತನ ಮನಸ್ಸಿನಲ್ಲಿ ನಡೆಯುತ್ತಿತ್ತು! ಅದು ತನ್ನ ಮತ್ತು ರುಕ್ಮಿಣಿಯ ಸಂಬಂಧವಾದ ಕದನ. ತಾನು ಮೆಚ್ಚಿ, ಒಲಿದು ಮದುವೆಯಾದ ಕನ್ಯೆಯನ್ನು ಸಾವಿನಿಂದ ತಪ್ಪಿಸಬೇಕಾದ ಕದನ! ಡಾಕ್ಟರರು ಕೊಟ್ಟ ಎಚ್ಚರಿಕೆಯಿಂದ ಆತ, ತಾನೇನು ಮಾಡಲೆಂದು-ಮನಗಾಣದಾಗಿದ್ದ. ಒಂದು ವರ್ಷದಿಂದ, ಹಟವಾದಿಯಂತೆ, ರುಕ್ಮಿಣಿಯಿಂದ ಬೇರೆಯೇ ಮಲಗುತ್ತಿದ್ದನು. ರುಕ್ಮಿಣಿಯ ಆರೋಗ್ಯವೂ ಸುಧಾರಿಸಿತು. ಆ ಬರಗಾಲದ ದಿನದಲ್ಲೂ ಬರಿಯ ಹವೆ

ಯುನ್ನಷ್ಟೆ, ಉಂಡು, ಅವಳು ಚೇತನಗೊಳ್ಳುವಂತಿತ್ತು. ಅವಳ ಮುಖ ದಲ್ಲಿ ರಕ್ತದ ಛಾಯೆ ತಿರುಗಿ ಮೂಡಿದೆ. ಕಣ್ಣು ನಿಸ್ತೇಜವಾಗಿಲ್ಲ. ಮನೆ ಕೆಲಸಗಳನ್ನು ಅವಳಾಗಿಯೇ ನೋಡಿಕೊಳ್ಳುತ್ತಿದ್ದಾಳೆ! ಮಕ್ಕಳೊ ಡನೆ ಸರಸವಾಡುತ್ತಾಳೆ; ಬಡತನದ ಭೂತವನ್ನು ಗಂಡನ ಜತೆಗೆ ಇದಿರಿ ಸಲು ನೆರವಾಗುತ್ತಿದ್ದಾಳೆ. ಆಗಾಗ, ನಷ್ಟ ಚೇತನವನ್ನು ಅವನಲ್ಲಿ ತುಂಬಿಸುತ್ತಲೂ ಇದ್ದಾಳೆ. "ಯಾಕೆ ಅಂಜುತ್ತೀರಿ; ಯುದ್ಧ ಶಾಶ್ವ ತವೇ?-ಇಂದಲ್ಲ ನಾಳೆ ಮುಗಿದೀತು" ಎಂದು ಅನ್ನುತ್ತಿದ್ದಾಳೆ. ಅವಳ ಬಗೆಯನ್ನು ನೋಡಿ, ಅಚ್ಯುತಗೆ ಅವಳ ಮೇಲಿನ ಪ್ರೀತಿ ಉಕ್ಕುತ್ತದೆ; ಅದು ಪ್ರಣಯ ರೂಪವನ್ನು ತಾಳುತ್ತದೆ; ಆ ಗಳಿಗೆಯಿಂದಲೇ ತಾನು ಅವಳ ವೈರಿಯಾಗುತ್ತಿದ್ದೇನಲ್ಲ-ಎಂಬ ಭಾವನೆಯೂ ಹೊಳೆಯುತ್ತದೆ!

ತನ್ನ ಪಾಡೇನು? ತನಗೆ ಬೇರೆಯ ಲಗ್ನವೇ? ಇನ್ನೊಂದು ಸಂಸಾ ರವೇ? ವೈದ್ಯರೆನ್ನುವ ಸಂತತಿ ಸಂಯಮವೇ! ಕೊನೆಯದರ ವಿಷಯ ದಲ್ಲಿ ಬಲುವಾಗಿ ಜಿಗುಪ್ಸೆಗೊಂಡಿದ್ದನವನು. ಆದರೆ ಈಗ ಏಕೋ ಅಂಥದೇನಾದರೂ ದಾರಿ ಹಿಡಿಯದೆ ಗತಿಯುಂಟೇ—ಎಂದೆನಿಸಿತು. ನೇರಾಗಿ ವೈದ್ಯರಲ್ಲಿಗೆ ಹೋಗಿ, ಅದು ಹೇಗೆ ಸಾಧ್ಯ, ಎಂದು ಕೇಳಲು ಸಾಹಸವಿಲ್ಲ. ಆ ವೇಳೆಯಲ್ಲೇ ಹಳೆಯ ಕಾಲದ ನೆನಹು ಉಂಟಾಗು ತ್ತಿತ್ತು. ಸುಬ್ಬಿಯ ಚಿತ್ರ ಮನಸ್ಸಿನ ಮುಂದೆ ಹೊಳೆಯುತ್ತದೆ. ಅವಳು ತನ್ನಿಂದಲೇ ಎಂಬಂತೆ, ಹಾದಿಗೆಟ್ಟ ಚಿತ್ರವೂ ಕಾಣಿಸುತ್ತದೆ. ಅಲ್ಲಿಂದ ಮುಂದೆ, ನಾಚುಗೆಯಿಂದ ಮನಸ್ಸು ತಬ್ಬಿಬ್ಬಾಗುತ್ತದೆ.

ಅನ್ನದ ತುತ್ತು ಮುಂದಿದೆ; ತುಂಬ ಹಸಿವೆಯಾಗಿದೆ. ಆದರೆ ತಿನ್ನ ಬೇಡೆಂದು ಅಂಕೆ ಮಾಡುತ್ತಿದ್ದಾರೆ ಬಲ್ಲವರು!



## ೧೯ನೆಯ ಅಧ್ಯಾಯ

ಅಚ್ಯುತ ಆ ಕುರ್ಚಿಪಳ್ಳಕ್ಕೆ ಬಂದು ಈಗ ಅದು ಹಳಸಿಯೂ ಆಯಿತು. ತನ್ನವರೆಂಬವರಾರೂ ಆ ಊರೊಳಗಿಲ್ಲ. ನನ್ನಂತೆ ಇರುವ, ನಾರಾಯಣರಾಯರೂ ಯುದ್ಧ ಪರಿಸ್ಥಿತಿಗೆ ಬಲಿಯಾಗಿದ್ದಾರೆ. ಜೀವ

ನದ ಯಾವೊಂದು ಒಡವೆಯನ್ನು ಕೊಳ್ಳಹೋದರೂ ಬೆಲೆ ಅಡ್ಡಬರು ತ್ತದೆ. ಬರಿಯ ಅಕ್ಕಿಬೇಳೆಗಳೂ, ಅವರ ಆಯವನ್ನು ದಾಟಿವೆ. ಬಟ್ಟೆ ಬರೆಗಳನ್ನು ಮುಟ್ಟುವಂತೆ ಇರಲಿಲ್ಲ. ಕಣ್ಣೆದುರು ಕಾಣಿಸುವವರು, ತಮ್ಮಂತೆ ನರಳುತ್ತಿರುವ, ಅಕ್ಷರ ಬಡಕರು. ಊರಿನ ಕೆಲವೊಂದು ಮಂದಿ ಇವರ ಕಣ್ಮುಂದೆ ದುಡ್ಡಿಗೆ ಬೆಲೆಯಿಲ್ಲದಂತೆ ವರ್ತಿಸುವಾಗ-- ಇವರ ಅಸೂಯೆ ಕೆರಳುತ್ತದೆ; ತಮ್ಮ ಯಜಮಾನರುಗಳ ಮೇಲೆ ಕೋಪ ಉಕ್ಕುತ್ತದೆ. "ಯಾರು ನಮ್ಮ ಅವಸ್ಥೆಯನ್ನು ಕಾಣುವವರಿದ್ದಾರೆ? ರಿಜಿಸ್ಟ್ರಿ ಸಮನಾಗಿದೆಯೇ, ಉಕ್ತಲೇಖನ ಚೆನ್ನಾಗಿದೆಯೇ— ಎಂದು ಹುಳುಕು ಹುಡುಕುವ ಅಧಿಕಾರಿಗಳಿಗೆ ಬರಗಾಲವಿಲ್ಲ. ಇವರಿಗೆ ಊಟ ದೊರೆಯುತ್ತಿದೆಯೇ, ಎಣ್ಣೆ ಸಿಗುತ್ತದೆಯೇ, ಇವರ ಸಂತಾನ ದಿನಕ್ಕೊಂದು ಕೂಳನ್ನಾದರೂ ಸಮನಾಗಿ ಉಣ್ಣುತ್ತಿದೆಯೇ— ಎಂದು ವಿಚಾರಿಸುವವರಿದ್ದಾರೆಯೇ?" ಅನಿಸುತ್ತದೆ. ಮಗನಿಗೆ "ಮೆಟ್ರಿಕ್ ಪರೀಕ್ಷೆಗೆ ಹಣಕಟ್ಟಲು ಏನು ಮಾಡಲಿ" ಎಂದು ನಾರಾಯಣರಾಯರು ಚಿಂತಿಸುತ್ತ ಕುಳಿತಿದ್ದಾಗ, ಉಪಾಧ್ಯಕ್ಷರು ಅವರ ಶಾಲೆಗೆ ಬಂದರಂತೆ! ಯಾರೆಂದು ತಿಳಿಯದೆ, ನಾರಾಯಣರಾಯರು ಎದ್ದು ನಿಲ್ಲದೆ ಉದಾಸೀನರಾಗಿದ್ದರು. ತಮ್ಮ ಕೆಲಸವನ್ನು ಜರಗಿಸುತ್ತಿದ್ದರು. ಅವರಾರೆಂದು ತಿಳಿದ ಮೇಲೆ, ಅವರು ಎತ್ತಿದ ಕೈ ಸಾಕಷ್ಟು ಮೇಲೆ ಬರಲಿಲ್ಲ ಎಂದೋ, ಉಪಾಧ್ಯಕ್ಷರಿಗೆ ಅದು ಕಾಣಿಸಲಿಲ್ಲ ಎಂದೋ-ಮರುದಿನವೇ, ಆಫೀಸಿನಿಂದ "ಅವಿಧೇಯತೆಗಾಗಿ ಕಾರಣಕೊಡಿರಿ" ಎಂಬ ಒದೆ ಬಂದಿತು! ಅದನ್ನು ಕಂಡು, "ನನಗೂ ವಾರ್ ಸರ್ವಿಸಿನಲ್ಲಿ ಕೆಲಸ ಒಂದು ಸಿಗಬಾರದೇ" ಎಂದುಕೊಂಡರು ಅವರು.

ಬೇಸಗೆ ಸಮೀಪಿಸಿತು. ಅಚ್ಚುತ ಆ ಊರಿಗೆ ಬಂದ ಮೂರನೆಯ ವರ್ಷದ ಬೇಸಗೆ ಅದು. ಅವನು ಅಲ್ಲಿಗೆ ಬಂದವ, ತಿರುಗಿ ಊರಿಗೆ ಹೋಗಿರಲಿಲ್ಲ. ಹೇಗೂ ತಾಯಿ ಅಲ್ಲಿಂದ ಮೊನ್ನೆ ತಾನೇ ಹೋದದ್ದಲ್ಲವೇ? "ಈ ಬೇಸಗೆಗೆ ಏನು ಮಾಡಲಿ? ಮೋಟರುಗಳು ಸಂಚಾರಕ್ಕೆ ಈಗ ಅನುಕೂಲವಾಗಿಲ್ಲವಂತೆ. ಹೊರಡಬೇಕೆಂದರೂ ಹಣದ ಅನುಕೂಲತೆಯೂ ಇಲ್ಲ" ಎಂದು ಅಚ್ಚುತ ಯೋಚಿಸುತ್ತಿದ್ದ. ಎಲ್ಲದಕ್ಕೂ ಮಿಗಿಲಾಗಿ, ಆತಗೆ ಗಜಾದಿನಗಳಲ್ಲಿ, ರುಕ್ಮಿಣಿಯಿಂದ, ದೂರವಾಗಿರಬೇ

ಕೆಂಬ ಹಂಬಲವಿತ್ತು. ಅವಳಿಲ್ಲದೆ ಮನವು ಬರಡಾಗುವುದೆಂದು ಬಲ್ಲ. ಆದರೆ ತಾನು ಅವಳಿಗೆ ಮೃತ್ಯುವಾಗುವೆನಲ್ಲಾ--ಎಂಬ ಭೀತಿಯುಂಟಾಗಿತ್ತು. ಅವಳು ತಮ್ಮ ಸ್ಥಿತಿಯನ್ನು ಅರಿತವಳು. "ಊರಿಗೆ ಹೋಗಬೇಕು. ತಂದೆಯನ್ನು ಕಾಣದೆ ವರ್ಷ ಮೂರಾದುವು" ಎಂದು ಹಂಬಲಿಸಲೂ ಇಲ್ಲ. ಆದರೆ ಆ ಸಮಯಕ್ಕೆ ಸರಿಯಾಗಿ, ಪಂಜದ ಭಾವಂದಿರಿಂದ "ನಿಮ್ಮ ಮಾವನಿಗೆ ಕಾಯಿಲೆ. ರುಕ್ಮಿಣಿ ಸಹಿತ ಕೂಡಲೇ ಬಂದುಬಿಡಿ" ಎಂದು ಕಾಗದ ಬಂದಿತು. ಇನ್ನು ಹೊರಡಬೇಕು. ಅವನ ಮಾವನಿಗೆ ಪ್ರಾಯವೂ ಆಗಿತ್ತು. 'ಅವರ ದರ್ಶನ ತಿರುಗಿ ಆಗದೆ ಹೋದೀತು' ಎಂಬ ಕಳವಳವೂ ಇತ್ತು. ಹೊರಡಲು, ಹಣಕ್ಕೆ ಸಾಲವಲ್ಲದೆ ಬೇರೆ ಗತಿಯಿರಲಿಲ್ಲ. ಯಾರಲ್ಲಿ ಸಾಲ ಬೇಡಲಿ? ನಾರಾಯಣರಾಯರಿಂದಲೇ? ಅವರು ಮಗನ ಪರೀಕ್ಷೆಯ ಹದಿನೆರಡು ಹರೂಪಾಯಿಗಾಗಿ ಏನೆಲ್ಲ ಒದ್ದಾಟವಾಡಿದರೆಂದು, ಅವನಿಗೆ ಗೊತ್ತು. ಕೊನೆಗೆ, ಊರಿನ ಯಾವನೋ ಒಬ್ಬನಿಗೆ ಸಲಾಮುಹಾಕಿ, ರುಕ್ಮಿಣಿಯ ಬಳೆಗಳಲ್ಲೊಂದನ್ನು ಅಡವಿರಿಸಿ, ಇಪ್ಪತ್ತೈದು ರೂಪಾಯಿ ಕೊಂಡುಹೊರಟ.

ಹೊರಡುವ ಮೊದಲು, ನಾರಾಯಣರಾಯರ ದರ್ಶನ ಮಾಡಿಕೊಂಡು ಬರಲು ಹೋದನು. ಅವನು "ಅಚ್ಯುತ, ನನ್ನನ್ನು ಇಲ್ಲಿಂದ ಅವರಾಗಿಯೇ ಗಡಿಪಾರು ಮಾಡಿಸಬಹುದು. ಅಲ್ಲವಾದರೂ, ನನಗೆ ಈ ಜನರಿರುವ ಅರಣ್ಯ ಬೇಡಾಗಿದೆ. ನೀನೇನು ಮಾಡುತ್ತೀ? ಇನ್ನಿನ್ನು ನಿನಗೂ ಇಲ್ಲಿರಲು ಕಷ್ಟವಾಗಬಹುದು. ಅಕ್ಕಿಗೆ ಈಗಲೇ ಮುಡಿಗೆ ಹದಿನಾರು ಅನ್ನುತ್ತಿದ್ದಾರೆ. ಮಳೆಗಾಲದಲ್ಲಿ ಇಪ್ಪತ್ತು, ಇಪ್ಪತ್ತೈದು ಅಂದಾರು. ಯಾರಿಗೆ ಯಾರ ಕನಿಕರವಿದೆ? ಈ ಸಮಯ ಪೇಟೆಗಳೇ ವಾಸಿ. ಅಲ್ಲಿ ರೇಶನಿಂಗ್ ಹೆಸರಿಗಾದರೂ ಬಂದೀತು" ಎಂದರು, "ಆದರೆ ನೋಡು ಅಚ್ಯುತ, ಮಂಗಳೂರಿಗೆ ಹೋಗಿ, ಏನಾದರೂ ಪ್ರಯತ್ನ ಮಾಡುವ ಎಂದರೆ, ಇಲ್ಲಿ ಮೂರು ದಿವಸದಿಂದ ಮಕ್ಕಳಿಗೆ ಜ್ವರ; ಎಂಥ ಜ್ವರವೆಂದು ತಿಳಿಯುವುದಿಲ್ಲ" ಎಂದರು. ಅಚ್ಯುತ ಒಳಕ್ಕೆ ಹೋದನು. ಅವರ ಮೂವರು ಹಿರಿಯ ಮಕ್ಕಳು, ಹಾಸುಗೆ ಹಿಡಿದು ಮಲಗಿದ್ದರು. ಜ್ವರ ವಿಪರೀತವಾಗಿಲ್ಲವಾದರೂ, ಬಂದ ಜ್ವರ ಬಿಡುತ್ತಿರಲಿಲ್ಲ. ಅದರಿಂದ ಅಚ್ಯುತ "ನೀವು ಒಮ್ಮೆ ಮಂಜೇಶ್ವರಕ್ಕೆ ಡಾಕ್ಟರರ

ಲ್ಲಿಗೆ ಹೋಗಿಬನ್ನಿ" ಎಂದನು.

"ಅವರು ಗುರುತಿನವರು ನಿಜ. ಆದರೆ ಅವರಿಂದ ಎಷ್ಟು ಬಿಟ್ಟಿ ಮಾಡಿಸಲಿ! ಅವರಿಗೆ ಬಂದು ಹೋದುದಕ್ಕೆ ಕೊಡಲು ನನ್ನಲ್ಲಿ ಕಾಸಿದೆಯೇ? ಹೇಳು; ಆಯುಃಷ್ಯವಿದ್ದರೆ ಉಳಿಯುತ್ತಾವೆ. ನಾನೇನು ಮಾಡಲಿ" ಎಂದರು ನಿರಾಶೆಯಿಂದ. ಆದರೆ ಕೊನೆಗೆ ಅಚ್ಯುತನ ಬಲವಂತಕ್ಕೆ ಹೋಗಲೊಪ್ಪಿದರು. ಆ ದಿನವೇ ಅಚ್ಯುತನೂ ಮಂಗಳೂರಿಗೆ ಹೋಗುವವನು. ಅವನು ತನ್ನ ಸಂಸಾರ ಸಹಿತನಾಗಿ ಹೊರಟ. ಇವರು ಒಟ್ಟಿಗೆ ಸೇರಿ ಬಂಡಿಯಲ್ಲಿ ಕುಳಿತರು. ನಾಲ್ಕು ಮೈಲು ದೂರ ಬರುವುದರಲ್ಲಿ ಬಂಡಿ ನಿಂತಿತು. ಅಚ್ಯುತ "ಮಾಸ್ತ್ರೆ, ನಾನು ಓಡಾಟಕ್ಕೆ ನಿಮಗೆ ಬೇಕಾದರೆ, ಕೂಡಲೇ ಕಾಗದ ಹಾಕಿ; ಬಂದುಬಿಡುತ್ತೇನೆ. ಒಮ್ಮೆ ಹೋಗಿ ಮುಖತೋರಿಸಿ ಬರಬೇಕಲ್ಲ. ರುಕ್ಮಿಣಿಯನ್ನೂ ಮಕ್ಕಳನ್ನೂ ಅಲ್ಲಿಯೇ ಬಿಟ್ಟು ಬಂದರೂ ಬಂದೆ. ರಜೆಯಲ್ಲಿ ನನಗೆ ಬೇರೆ ಕೆಲಸವೇನಂತೆ?" ಎನ್ನುವಷ್ಟರಲ್ಲಿ ಬಂಡಿಯೂ ಹೊರಟಿತು.

ಮರುದಿನವಲ್ಲ ಅದರ ಮರುದಿನ, ಮೋಟಾರು ಯಾತ್ರೆ, ಗಾಡಿ ಸವಾರಿ ಮುಗಿಸಿಕೊಂಡು, ಹೊತ್ತು ಮೂಡಿದ ಒಂದೆರಡು ಗಳಿಗೆಯಲ್ಲಿ ಅವರು ಪಂಜದ ಊರನ್ನು ಸೇರಿದರು. "ನೆಟ್ಟಗೆ ನಿಮ್ಮ ಮನೆಗೇ ಅಲ್ಲವೇ?"-ಎಂದು ರುಕ್ಮಿಣಿಯನ್ನು ಕೇಳಿದ. "ಈಗ ಅಲ್ಲಿಗೇನೆ ಹೋಗುವ. ಅಲ್ಲಿ ಸಮನಾಗದಿದ್ದರೆ ಅತ್ತಿಗೆಯ ಮನೆ ಉಂಟಲ್ಲ" ಎಂದಳು. ಎಲ್ಲರೂ ಅಲ್ಲಿಗೇನೆ ಸಾಗಿದರು.

ಹಾಸುಗೆಯಲ್ಲಿ ಮಲಗಿದ ಪುಟ್ಟಯ್ಯನವರು, ಇಂದೋ ನಾಳೆಯೋ ಎಂದು ದಿನವನ್ನು ಕಾಯುತ್ತಿದ್ದರು. ಯಾರೂ ಅವರ ಆಸೆಯನ್ನು ಇರಿಸಿಕೊಂಡಿರಲಿಲ್ಲ. ವಯಸ್ಸೂ ಆಗಿತ್ತು. ಮಗಳು, ಅಳಿಯ, ಮೊಮ್ಮಕ್ಕಳು ಬಂದುದನ್ನು ಕಂಡು, ಇದ್ದುದರಲ್ಲೇ ತುಂಬ ಸಂತೋಷವಾಯಿತು. "ಹೇಗಿದ್ದೀ?" ಎಂದು ಅಚ್ಯುತನನ್ನು ಕೇಳಿದರು ಪುಟ್ಟಯ್ಯನವರು. "ಇದ್ದೇನೆ" ಎಂಬ ಉತ್ತರ ಬಂದಿತು. ಅಚ್ಯುತ ಅಲ್ಲಿಂದ ಮಕ್ಕಳನ್ನು ಕರೆದುಕೊಂಡು, ಸೀತೆಯ ಮನೆಗೆ ತಂದುಬಿಟ್ಟ. ಅನಂತರ ಮಾವನಬಳಿಯಲ್ಲಿ ಕುಳಿತು ಆತ ಕಾವಲಿಟ್ಟನು. ರುಕ್ಮಿಣಿ, ತಂದೆಯ ಹಾಸುಗೆಯನ್ನು ಬಿಟ್ಟು ಕದಲುತ್ತಿರಲಿಲ್ಲ. ಇಷ್ಟು ಕಾಲ ಅವರಿಂದ ದೂರಾದ ಸಲುವಾಗಿ

ಈಗ ಅವರ ಎಲ್ಲ ಸೇವೆಗಳಲ್ಲೂ ನಿರತಳಾದಳು. ಮನೆಯ ಸೊಸೆಯರಿಗೂ ರಾತ್ರಿ, ಹಗಲು ಕಾವಲು ಹಾಕಿ, ನಿದ್ದೆ ಕಜಗೆಟ್ಟಿತ್ತು. ರುಕ್ಮಿಣಿ ಬಂದುದು ಅವರಿಗೂ ಸಂತೋಷವಾಯಿತು.

ಅಚ್ಯುತ ಇಲ್ಲಿಗೆ ಬಂದ ಬಳಿಕ, ಅವನ ಮನಸ್ಸು ಇಲ್ಲೂ ಅಲ್ಲೂ ಓಡಾಡುತ್ತಿದೆ. "ನಾರಾಯಣರಾಯರ ಮಕ್ಕಳು ಹೇಗಿದ್ದಾರೆಯೋ" ಎಂದು ಅವನು ಚಿಂತಿಸುತ್ತಿದ್ದ. ರುಕ್ಮಿಣಿಗೂ ಅದೇ ಆತುರ. ಅದರಿಂದ ಗಳಿಗೆ ಗಳಿಗೆಗೂ ಅಲ್ಲಿಂದ ಪತ್ರ ನಿರೀಕ್ಷಣೆಯನ್ನು ಮಾಡುತ್ತಿದ್ದರು.

ಅಚ್ಯುತಗೆ ಬೇಸರಾದರೆ ಮಾವನ ಮನೆಯಿಂದ ಬಂದು, ತಾಯಿಯ ಬಳಿಯಲ್ಲಿ ಕುಳಿತುಕೊಳ್ಳುತ್ತಾನೆ. "ಈ ವರ್ಷ ಎಲ್ಲಾದರೂ ನಮಗೆ ಹತ್ತಿರವಾಗುವ ಹಾಗೆ ವರ್ಗಾವರ್ಗಿಗೆ ಪ್ರಯತ್ನ ಮಾಡುವುದೊಳಿತಲ್ಲವೇ" ಎಂದು ತಾಯನ್ನು ಕೇಳುತ್ತಾನೆ. ಮನೆಯಲ್ಲಿ ಲಕ್ಷ್ಮಮ್ಮನೊಡನೆ ಬಂದು ಸೇರಿದ ಬಾಲಕೃಷ್ಣನೊಡನೆ ಆಡುತ್ತಾನೆ. ಅವನ ಮೈಯನ್ನು ಕಂಡು, "ಈ ಮಗುವೇ ವಾಸಿ" ಎನ್ನುತ್ತಾನೆ. ಕಾರಣವಿಷ್ಟೆ — ಕುರ್ಚಿಪಳ್ಳದಿಂದ ಬಂದ ಮೇಲೆ ಆತನಿಗೆ ಎರಡೂ ಹೊತ್ತಿನ ಗಂಜಿ ಊಟ ತಪ್ಪಿತ್ತು. ಮೂರು ಹೊತ್ತು ಆಹಾರ ಸೇವನೆಗೆ ತೊಂದರೆಯಿದ್ದಿಲ್ಲ. ಹೆಸರಿಗಾದರೂ ಇಲ್ಲಿಷ್ಟು ಹಾಲು ಮಜ್ಜಿಗೆಗಳಿವೆ. ಅಲ್ಲಿ ಮಕ್ಕಳಿಗೆ ಎರಡು ಹೊತ್ತಿನ, ಉಣಿಸನ್ನು ಕೊಡುವುದಕ್ಕೂ ಅಚ್ಯುತ ರುಕ್ಮಿಣಿಯರು ಬರಿಯ ಒಪ್ಪೊತ್ತಿನ ಊಟದಿಂದ ತೃಪ್ತರಾಗಬೇಕಿತ್ತು. ಅವರಿಗೆ, ಆಗಾಗ ಹಿರಿಯ ಮಗು ಕೃಷ್ಣನ ನೆನಪಾಗುತ್ತದೆ. ಪಾಪ ಈ ಹುಡುಗನಿಗೆ ಎಂಟು ವರ್ಷವಾಗಿದೆ. ಆದರೆ ನೋಡಲು ಐದು ವರ್ಷ ತುಂಬಿದವನಂತೆಯೂ ಇಲ್ಲ. ಬರಿಯ ಜೀವಚ್ಛವದಂತಿದ್ದಾನೆ. ತನ್ನಂತಹ ತಂದೆಯಿದ್ದು ಮಕ್ಕಳಿಗೇನು ಬಂತು ಎನ್ನುವ ಪ್ರಶ್ನೆಯೇ ಅವನನ್ನು ಕೆಣಕುತ್ತದೆ. ಈ ತಳಮಳ ಕೊರೆಯುವಾಗ, "ಅಲ್ಲೇನಾಯಿತೋ ಇಷ್ಟರಲ್ಲೇ ಮಾವನ ವ್ಯಾಪಾರ" ಎಂದು ಅಕ್ಕನ ಮನೆಯನ್ನು ಬಿಟ್ಟು ತಿರುಗೊಮ್ಮೆ ಮಾವನ ಮನೆಗೆ ಹೋಗಿ ನೋಡಿಕೊಂಡು ಬರುತ್ತಾನೆ.

ಪುಟ್ಟಯ್ಯನವರು ಭಾಗ್ಯಶಾಲಿಗಳು—ಮಗಳು, ಮಗಂದಿರು, ಅಳಿಯ, ಸೊಸೆಯಂದಿರು, ಮೊಮ್ಮಕ್ಕಳು ಇವರನ್ನೆಲ್ಲರನ್ನು, ಮತ್ತಿತರ ಬಂಧುಗಳನ್ನು ಸುತ್ತಲೂ ಕುಳ್ಳಿರಿಸಿಕೊಂಡೇ "ರಾಮ ರಾಮ" ಎಂದರು.

ಜೀವನ ನಿರ್ವಹಣ ಮಾಡಲು ಶಕ್ತರಾದ ಸಂಸಾರಿಗರನ್ನು ಬಿಟ್ಟು ತೆರಳಿದರು. ಆದರೆ ಅವರ ಒಂದು ಮರುಕವು ಮಾತ್ರ, ರುಕ್ಮಿಣಿಗಲ್ಲದೆ ಇನ್ನಾರಿಗೂ ತಿಳಿದಿರಲಿಲ್ಲ. ರುಕ್ಮಿಣಿಯು ಅವರ ಬಳಿಗೆ ಬಂದಾಗಲೆಲ್ಲ- "ಏನು ಮಾಡುವುದು, ನಿನಗಿಷ್ಟು ಅನುಕೂಲ ಮಾಡಿಕೊಡಲು ನನಗಾಗಲಿಲ್ಲ ಅಲ್ಲವೇ?" ಎನ್ನುತ್ತಿದ್ದರು. "ನಮಗೇನಾಗಿದೆ ಈಗ? ದೇವರು ಚೆನ್ನಾಗಿರಿಸಿದ್ದಾನೆಂದು" ತನ್ನ ಜೀವನದ ಕಹಿಯನ್ನುಆಕೆ, ಮರೆಮಾಜಿ, ತನ್ನ ತಂದೆಯನ್ನು ಸಮಾಧಾನಪಡಿಸುತ್ತಿದ್ದಳು. ದಿನದಿನವೂ ಅವಳು ಈ ಮುಚ್ಚುಮರೆಯನ್ನು ತೋರಿಸಿದಳು. ಸಾಯುವ ದಿನ ಅವರು "ಆಗಲಿ, ರುಕ್ಮಿಣಿ ನೀನು ಸಂತೋಷವಾಗಿದ್ದೀ ಎಂದು ಕೇಳಿ ಸಾಯುತ್ತೇನೆ" ಎನ್ನುವಂತೆ,ರುಕ್ಮಿಣಿ ಸೋಗು ಧರಿಸಿದಳು. ಹಾಗೆನ್ನುವಾಗ ಅವರಿಗೂ ಕಣ್ಣೀರು ದಳದಳ ಬಂದಿತು. ಅವರ ಆಸೆಯಂತೆ ಎಲ್ಲ ಮೊಮ್ಮಕ್ಕಳೂ ಅವರ ಸುತ್ತಲಿದ್ದರು. ಪರಿಸ್ಥಿತಿಯರಿತ ಕೃಷ್ಣನಂಥವರು, ಹಾಸುಗೆಯ ಬಳಿ, ಮುಖ ಸಪ್ಪಗೆಮಾಡಿ ಅಜ್ಜಗೆ ಏನೋ ಆಗುತ್ತಿದೆ ಎಂದು ಕಾದು ನಿಂತರು. ಜಗತ್ತನ್ನರಿಯದ ಕೂಸುಗಳು ಅಲ್ಲಿಯೇ ಗದ್ದಲ, ಕಾದಾಟವಾಡುತ್ತಿದ್ದುವು. ಹಿರಿಯರು "ಓ ಮಕ್ಕಳೇ ಏನು ನಿಮಗೆ? ಹೋಗಿ ಇಲ್ಲಿಂದ" ಎಂದು ಗದರಿಸಿದರೆ, ಪುಟ್ಟಯ್ಯನವರು "ಯಾಕೆ ಅವನ್ನು ಗದರಿಸುತ್ತೀರಿ, ಅವನ್ನು ಯಾಕೆ ಓಡಿಸುತ್ತೀರಿ? ಅವು ಇಲ್ಲೇ ಆಡಲಿ. ಸಂಸಾರ ಎಂದರೆ ಅದೆಲ್ಲ ಇದ್ದರೇನೆ ಸಂಸಾರ. ಸುಖ, ದುಃಖ, ಅಳು, ಗದ್ದಲ ಎಲ್ಲವೂ ಸೇರಿದರೆ ಸಂಸಾರ" ಎಂದರು. ಮತ್ತೊಂದು ತಾಸಿನೊಳಗೆ ಅವರು ಯಾವುದೋ ವಿಶಾಲವಾದ ಬದುಕಿಗೆ ಸಂದರು.

ಒಂದು ಕ್ಷಣದ ಹಿಂದೆ, ಮೌನವಾಗಿದ್ದ ಮನೆಯು, ಗೋಳಿನ ಗೊಂದಲದಿಂದ ತುಂಬಿತು. ಅಲ್ಲಿ ಯಾರು ಯಾರಿಗೆ ಸಮಾಧಾನ ಹೇಳಬೇಕು?

ಸಂಜೆ ಕಳೆಯುವುದರಲ್ಲಿ ಅವರ ಶವವನ್ನು ಅಗ್ನಿಗೆ ಸಮರ್ಪಿಸಿಯೂ ಆಗಿತ್ತು. ರುಕ್ಮಿಣಿಗೆ ತಂದೆಯಿಲ್ಲದ-ತಂದೆಮನೆಯಲ್ಲಿ ನಿಲ್ಲಲು ಸಾಧ್ಯವಾಗಲಿಲ್ಲ. ಆಕೆ ನೇರಾಗಿ ಅತ್ತೆಯಿರುವಲ್ಲಿಗೆ ಹೋದಳು. ಅತ್ತೆಯೊಡನೆ, "ಈ ನನ್ನ ಮಕ್ಕಳ ನೆಣವಿಲ್ಲದ ಜೀವ ಕಂಡು, ಅವರು ಎಷ್ಟು ನೊಂದರೋ ಏನೋ. ನಿನಗೇನು ಮಾಡಲಾರದೆ ಸತ್ತೆನೆ,ಎಂದು ನೆನೆದೇ

ಸತ್ತರು"--ಎಂದು ರುಕ್ಮಿಣಿ ತಂದೆಯ ಮಮತೆ, ಪ್ರೀತಿಗಳನ್ನು ನೆನೆದು ಮರುಗಿದಳು.

ದಿನಗಳು ಒಂದು-ಎರಡು-ಮೂರು-ಎಂದು ಸರಿದುವು. ಅಚ್ಚುತಗೆ ಇನ್ನೂ ನಾರಾಯಣರಾಯರಿಂದ ಕಾಗದವಿಲ್ಲ. "ಹೂಂ, ಏನೋ ಈ ಬಾರಿ ಬಚಾಯಿಸಿರಬೇಕು. ಶೀತಜ್ವರವೋ, ಇನ್‌ಫ್ಲುಯೆಂಜಾವೋ ಇದ್ದಿರಬೇಕು. ಮಕ್ಕಳಿಗೆ ತೀರ ಕಠಿಣವಾಗಿದ್ದರೆ ಬರೆಯುತ್ತಿದ್ದರು" ಎಂದು ಆತ ಸುಮ್ಮಗಾದ. ತನ್ನ ಮಾವನು ತೀರಿಕೊಂಡ ವಿಷಯವಾಗಿ, ಅವರಿಗೊಂದು ಕಾಗದ ಬರೆದನು. ಅವರ ವರ್ಗಾವರ್ಗಿಯ ವಿಷಯವನ್ನು ವಿಚಾರಿಸಿದನು.

ಇತ್ತ ಅಚ್ಚುತಗೆ ಆ ಮನೆಯ ಆವರಣದಲ್ಲಿ ನಲಿದಾಡುತ್ತಿದ್ದಾಗ, ಹಳೆಯ ನೆನಹಿನ ಸುಬ್ಬಿ ಒಂದೆರಡು ಬಾರಿ ಕಾಣಿಸಿದಳು. ಆದರೆ ಈತ ಚಿಂತೆ ಹೊತ್ತು ಅಲೆದಾಡುತಿದ್ದಾಗ, ಅಂದಗೆಟ್ಟ ಅವಳ ರೂಪ ನೆನಪಿಗೇನೆ ಬರಲಿಲ್ಲ. ಅವನ ಮನಸ್ಸೆಲ್ಲ ಸ್ತಬ್ಧವಾಗಿದೆ. ಒಂದೆರಡುಬಾರಿ ದೂರದಲ್ಲಿ, ಆಕೆ ತನ್ನ ಕೆಲಸ ನಿಲ್ಲಿಸಿ, ಇವನನ್ನೇ ನೋಡುತ್ತಿದ್ದ ಅವಳನ್ನು ಕಂಡು, "ಯಾರಪ್ಪಾ........ಇವಳು" ಎಂದು ಯೋಚಿಸಿದ್ದುಂಟು. ಈಗಲೂ, ಅವನ ವಿರಹ ಜೀವನದ ಹೋರಾಟವು ಅಂತರಂಗದಲ್ಲಿ ಕ್ಷೀಣವಾಗಿ ನೆಲಸಿಕೊಂಡೇ ಇದೆ. ಮನಸ್ಸು, ತನ್ನನ್ನು ಸೆಳೆದವರ ಕಡೆಗೆ ಓಡುವ ಪರಿಸ್ಥಿತಿಯಲ್ಲಿದೆ. ಆ ಬಂಧುಬಳಗ ತುಂಬಿದ ಆವರಣ ಒಂದೇನೆ, ಅವನನ್ನು ಅಂಥ ಸಾಹಸಗಳಿಂದ ಹಿಮ್ಮೆಟ್ಟಿಸುವ ಶಕ್ತಿಯಾಗಿತ್ತು.

ಒಂದು ದಿನ ಸಂಜೆ, ಅಚ್ಚುತ ಕಾಗದವೊಂದನ್ನು ಟಪ್ಪಾಲಿಗೆ ಹಾಕಲು ಪಂಜಕ್ಕೆ ಹೊರಟಿದ್ದನು. ದಾರಿಯಲ್ಲಿ, ಗೆಣಸಿನ ಬೀಳಲುಗಳ ಹೊರೆಯನ್ನು ಹೊತ್ತುಕೊಂಡು, ಸುಬ್ಬಿಯು ಬರುತ್ತಿದ್ದಳು. ಅವಳ ಮುಖವು ಬೀಳಲುಗಳಿಂದ ಅರ್ಧಮರ್ಧ ಮರೆಯಾಗಿತ್ತು. ಅಚ್ಚುತ ಅವಸರವಾಗಿ, ತನ್ನ ದಾರಿ ಸರಿಯುತ್ತಿದ್ದ. ಇಬ್ಬರೂ ಇದಿರಾದರು. ಅಚ್ಚುತ ತನ್ನನ್ನು ಹಾಯ್ದು ಮೇಲೆ, ಆಕೆ ನಿಂತಳು. "ಬಡವರ ಗುರುತೇ ಇಲ್ಲ, ಒಡೆಯರಿಗೆ" ಎಂದಳು ಆಕೆ. ಅಚ್ಚುತ ಪಕ್ಕನೆ ನಿಂತ; ಧ್ವನಿಯ ನೆನಪಾಯಿತು. ಹಿಂತಿರುಗಿ ನೋಡಿದ. ಮಗ್ಗುಲ ನೋಟದಲ್ಲಿ, ಸುಬ್ಬಿಯ

ಕಂಗೆಟ್ಟಿದ್ದ ರೂಪು ಕಾಣಿಸಿತು; ಗುರುತೂ ಸಿಕ್ಕಿತು. ಅವಳೊಂದು ಕುಡಿ ನಗು ನಕ್ಕಳು! ಅಚ್ಯುತನ ಮನಸ್ಸು ಅರಳಿತು! ಅವನೂ ನಕ್ಕ! ಆದರೆ ಕಾಲುಗಳು ಅಲ್ಲಿ ನಿಂದಿರಲು ಸಾಹಸ ಪಡಲಿಲ್ಲ; ಮುಂದುವರಿದುವು. ಸುಬ್ಬಿ ಮೇಲಿಂದ ಮೇಲೆ ಹಿಂದಿರುಗಿ ನೋಡುತ್ತ, ಹಾದಿ ತಿರುಗುವ ತನಕವೂ ತನ್ನ ಬಯಕೆಯನ್ನು ಪ್ರಕಟಿಸಿದಳು. ಅವಳು ಈ ಗಳಿಗೆಯನ್ನು ಕಾಯುವುದಕ್ಕೇನೆ, ತನ್ನ ಒಡೆಯನನ್ನು ಅರಸಿ ಬಂದಿರಬೇಕು. ಎಂಬಂತಿತ್ತು. ಹಾಗಿರದು. ಕಾರಣ: ಸುಬ್ಬಿಯ ಹಂಬಲಗಳು ನಾಲ್ಕಾರು ವರ್ಷಗಳ ಅವಧಿಯಲ್ಲಿ, ಅನೇಕ ಬಗೆಯ ಇಳಿತ, ನೋವು, ಕೊರಗುಗಳನ್ನು ಸಹಿಸಿ, ಮಣ್ಣುಗೂಡಿದ್ದವು! ಮನೆಗೆ ಬಂದಿರುವ ಧನಿಯನ್ನು ಕಾಣಲು ಅವಳ ಮನಸ್ಸು ಹಾತೊರೆಯುತ್ತಿತ್ತು ನಿಜ. ಆದರೆ, 'ಈಗ ತಾಸಾರೂ ಅಲ್ಲ; ತೀರ ಕಂಗೆಟ್ಟ ಬಡಪಾಯಿ' ಎಂಬ ಅರಿವು ಅವಳಿಗೆ ಉಂಟಾಗಿತ್ತು. ತಾನಿನ್ನು, ಕೊನೆಯ ಬದುಕಿನ ಆಸರೆಯೊಂದನ್ನು ಕೆಡಿಸಿಕೊಳ್ಳಬಾರದೆಂಬ, ಭೀತಿಯೂ ಇತ್ತು.

ಆದರೆ ಅಚ್ಯುತನ ಮನಸ್ಸಿನ ಮೇಲೆ ಹಾವಿನ ವಿಷದಂತೆ, ಅವಳ ಕುಡಿ ನೋಟ, ನಗು, ವಿನಯದ ಬೇಡಿಕೆ, "ಬಡವರ ಗುರತೇ ಇಲ್ಲ" ಎಂಬ ಮಾತುಗಳು ನಟ್ಟುಹೋದುವು. ತಾನು ರುಕ್ಮಿಣಿಗೆ ವ್ಯತ್ಯವಾಗದಿರಬೇಕಾದರೆ, ಸುಬ್ಬಿಯೊಬ್ಬಳೇ ದಾರಿ--ಎಂಬ ಹಂಬಲವು ಅವನಲ್ಲಿ ತಿರುಗಿ ಮೂಡಿತು. ಅದರಿಂದ ಉದಯಿಸಬಹುದಾದ, ಹೊಸ ಪ್ರಶ್ನೆಗಳು ಅವನಿಗೆ ಕಾಣಿಸದಾದುವು. ತಿರುತಿರುಗಿ ಅವಳ ನಗು, ಕುಡಿನೋಟಗಳಿಗಾಗಿ, ಬಹುಕಾಲ ಬರಿಯ ಮಾಂಸಕ್ಕಾಗಿ ಕಾದಿದ್ದ ಅವನ ಮನಸ್ಸು, ಬಾಯಾರಿತು.

ಅಚ್ಯುತ ನೆಟ್ಟಗೆ ಅಂಚೆಮನೆಗೆ ಹೋಗಿ ನಾರಾಯಣರಾಯರಿಗೆ ಬರೆದಿದ್ದ ಕಾರ್ಡನ್ನು ಅಂಚೆ ಪೆಟ್ಟಿಗೆಯಲ್ಲಿ ಹಾಕಿದನು. ಅಂಚೆ ಕಚೇರಿಯಲ್ಲಿ ಅವನಿಗೊಂದು ಕಾಗದವೂ ಬಂದಿತ್ತು. ಅದು ಅವರು ಇವನಿಗೆ ಬರೆದಿದ್ದ ಪತ್ರ. ಎರಡಾಣೆ ಚೀಟಿ ಅಂಟಿಸಿದ್ದರು! ಕಾಗದ ಅಷ್ಟು ಭಾರವಾಗಿತ್ತು. ಆತುರವಾಗಿ ಬಿಡಿಸಿದನು. ಕತ್ತಲಾಗುವುದರ ಒಳಗೆ ಮನೆಗೆ ಸೇರುವ ಹಂಬಲದಿಂದ ಅದನ್ನು ದಾರಿಯಲ್ಲಿ ಬಿಡಿಸಿದನು; ದಾರಿಯುದ್ದಕ್ಕೂ ಅದನ್ನು ಓದುತ್ತ ಬಂದನು. ಹಾಗೆ ಓದುವುದು ಆಗಲಿಲ್ಲ.

ಎಂಟು ದೀರ್ಘ ಪುಟಗಳ ಕಾಗದ! ಅಲ್ಲಿಯೇ ಹಾದಿಯ ಬಳಿ ನಿಂತು, ಹಾಳೆಗಳನ್ನು ಮಗುಚಿದನು. ತಿರುಗಿ ಕುಳಿತು, ಓದತೊಡಗಿದನು. ಅಂತು-ಎವೆಗಳನ್ನು ಕೀಳದೆ ಆ ದೀರ್ಘವಾದ ಪತ್ರವನ್ನು ಮುಗಿಸಿದ; ತಿರುಗಿ ನಿಂತು ಓದತೊಡಗಿದನು. ಅದನ್ನು ಸಂಪೂರ್ಣವಾಗಿ ಮುಗಿಸುವಾಗ, ಅಚ್ಯುತನ ಮುಖ ಮೊನಚಾಗಿತ್ತು; ಕಣ್ಣು ಉಬ್ಬಿತ್ತು; ತುಟಿಗಳು ನಡುಗುತ್ತಿದ್ದುವು. ಕಾಗದ ಹಿಡಿದ ಅವನ ಕೈಯೂ ನಡುಗುತ್ತಿತ್ತು. ಅದನ್ನು ಮಡಿಸಿ, ಕಿಸೆಗೆ ತುರುಕಿಸಿಕೊಂಡನು. ಅಲ್ಲಿಂದಲೇ ಬೀಸನೆ ಹೆಜ್ಜೆ ಹಾಕುತ್ತ ಮನೆಗೋಡಿದನು.

"ರುಕ್ಮಿಣೀ" ಎಂದು ಕರೆದನು.

ಸ್ವರ ತುಸು ಗಾಬರಿಯಿಂದ ಕೂಡಿದುದರಿಂದ, ಏನೆಂದು ಆತುರಗೊಂಡು ಆಕೆ ಧಾವಿಸಿ ಬಂದಳು.

"ನಾನು ನಾಳೆಯೇ ಕುರ್ಚಿಪಳ್ಳಕ್ಕೆ ಹೋಗಬೇಕು. ಇವತ್ತು ರಾತ್ರಿಯೇ ಇಲ್ಲಿಂದ ಹೊರಡುವ ಗಾಡಿಯಿದೆಯೇ ಎಂದು ನೋಡಿಬರುತ್ತೇನೆ"-ಎಂದನು.

"ಏನು ಮಗು!" ಎಂದು ತಾಯಿ ಪ್ರಶ್ನಿಸಿದಳು.

"ಅಮ್ಮ, ನಾರಾಯಣಮಾಸ್ತರರ ಹಿರಿಮಗು, ಮೆಟ್ರಿಕ್ಕಿನಲ್ಲಿದ್ದವ, ಪ್ರಾಯ ತುಂಬಿದ ಮಗು, ಕೇಶವ, ಹೋದನಂತೆ ವಿಷಮಜ್ವರದಿಂದ. ನಾನು ಬರುವಾಗಲೇ ನನಗೆ ಅನುಮಾನವಿತ್ತು. ಅವರ ಇನ್ನೆರಡು ಮಕ್ಕಳು ಇನ್ನೂ ಮಲಗಿವೆ. ಏನಾಗುತ್ತದೋ ಏನೊ-ಬರಲಿಕ್ಕಾದೀತೇ, ಎಂದು ಬರೆದಿದ್ದಾರೆ" ಎಂದ.

ಯಾರ ಮಾತನ್ನೂ ಕೇಳದಷ್ಟು ಅವನ ಮನಸ್ಸು ಮಂಕಾಗಿತ್ತು. "ಒಳ್ಳೆ ವೇಳೆಯಲ್ಲಿ, ನಾರಾಯಣರಾಯರ ತಲೆಗೆ ಕೊಡಲಿ ಏಟೇ ಬಿದ್ದಿತಲ್ಲ" ಎಂದುಕೊಂಡ. ಅವಸರವಾಗಿ ತನ್ನ ಊಟ ಮುಗಿಸಿ ಪಂಜದ ಪೇಟೆಗೆ ತಿರುಗಿ ಓಡಿದನು. ಅಲ್ಲಿಂದ ಪುತ್ತೂರಿಗೆ ಹೋಗುವ ಬತ್ತದ ಗಾಡಿಯೊಂದರಲ್ಲಿ ಸೇರಿಕೊಂಡು ಧಾವಿಸಿದನು.

ರುಕ್ಮಿಣಿಗೆ ತನ್ನ ಮಗು ತೀರಿಕೊಂಡಷ್ಟೆ ವ್ಯಥೆ ಆ ದಿನದ ವಾರ್ತೆಯನ್ನು ಕೇಳಿಯಾಯಿತು. ಆ ಗಂಡ ಹೆಂಡಿರು, ಅವರ ಮಕ್ಕಳು, ತಮ್ಮ ದರಿದ್ರ ಜೀವನದಲ್ಲಿ ಹೇಗೆ ತಮಗೆ ಧೈರ್ಯ ಕೊಟ್ಟರು; ಬದುಕು ಸಹನೆ

ಯಾಗುವಂತೆ ಮಾಡಿದರು! ತಾನೇ ಹಾಸುಗೆಯನ್ನು ಹಿಡಿದಾಗ, ಎಷ್ಟು ಶುಶ್ರೂಷೆಮಾಡಿದ್ದರು ಎಂಬುದನ್ನೆಲ್ಲ ನೆನೆನೆನೆದು ಅತ್ತಳು. ಆ"ದರೆ ಯಾರು ಹೋಗಿ ಏನು ಮಾಡಬಲ್ಲರು?ಹೋದ ಕೇಶವನನ್ನುಕರೆಯಲು ಬಂದೀತೇ" ಎಂದುಕೊಂಡಳು. ತಂದೆಯ ಸಾವಿನ ಜತೆಗೆ, ಗೆಳೆಯರ ಮನೆಯ ಈ ವಿಪತ್ತು ಅವಳನ್ನು ನಡುಗಿಸಿತು.

ಅಂದು ಊಟವಾಗುವಾಗ—ತುತ್ತು ತುತ್ತಿಗೂ ನಾರಾಯಣ ರಾಯರ ಮನೆಯ ನೆನಹು! ಅವಳಿಗೆ ಅವರ ಉಪಕಾರಗಳ ನೆನಹು! ಈ ಬರಗಾಲದಲ್ಲಿ ಅವರು ಮಕ್ಕಳಿಗೊಂದು ತುತ್ತನ್ನಕ್ಕಾಗಿ, ಪಡುತ್ತಿದ್ದ ಶ್ರಮದ ನೆನಹು! ತರಕಾರಿ, ನಟ್ಟು ಮಾರಾಟಮಾಡಿ, ಮಕ್ಕಳಿಗೊಂದಿಷ್ಟು. ಹಾಲು ಅನ್ನ ಕೊಡಲು ಯತ್ನಿಸುತ್ತಿದ್ದ ಅವರ ಸಾಹಸ! ಒಂದು ದಿವಸ ಊರಲ್ಲಿ ಅಕ್ಕಿ ದೊರೆಯದೆ ತಾವು ಉಪವಾಸವಿದ್ದಿರಬೇಕಾದಾಗ, ಮಕ್ಕಳಿಗೆ ಗೆಣಸನ್ನು ಬೇಯಿಸಿಕೊಟ್ಟು, ತಾವು ಅದನ್ನೂ ತಿನ್ನದೆ-"ಆಗಾಗ ಏಕಾದಶಿ ಮಾಡಿದರೆ, ಆರೋಗ್ಯಕ್ಕೆ ಒಳ್ಳೆಯದೆಂದು, ಶಾಸ್ತ್ರವೇ ಇದೆಯಲ್ಲ" ಎಂದು ಆಡಿದ ಅವರ ಮಾತುಗಳು, ಅವಳ ನೆನಪನ್ನು ಕದಲಿಸಿದುವು.

"ಅಯ್ಯೋ,ಹಿರಿಯ ಮಗು,ನಾಳೆ ಒಂದು ಕೆಲಸ ಸಿಕ್ಕಿದರೆ,ತಂದೆಗೆ ಎರಡು ಕಾಸು ಕಳುಹಿಸಿ, ಸಹಾಯಮಾಡುವ ಕೈ.... ಅದಕ್ಕೇ ಹೀಗಾಗಬೇಕೆ!" ಎಂದು ಯೋಚಿಸಿದಳು.

ಮರುದಿನವೆಲ್ಲ, ಅದರ ಮರುದಿನವೆಲ್ಲ, ಆ ವಾರಕ್ಕೆ ವಾರವೇ ಎಲ್ಲ, ತನಗೆ ತನ್ನ ಗಂಡನ ಕಾಗದ ಬರುವ ತನಕವೆಲ್ಲ—ರುಕ್ಮಿಣಿಗೆ, 'ಕೇಶವ'ನ ಧ್ಯಾನ. ಆ 'ಹುಡುಗ ಎಷ್ಟು ಚುರುಕು, ಏನು ಬುದ್ಧಿ ಅವನದು' ಎಂದು ನೆನೆದು ಕೊರಗುವುದೇ ಕೆಲಸ.

ಅಚ್ಯುತ ಆ ಊರನ್ನು ಸೇರಿದ ಒಂದೆರಡು ದಿವಸಗಳಲ್ಲಿ ತನ್ನ ಮನೆಗೆ ಕಾಗದ ಬರೆದಿದ್ದನು. "ಇನ್ನೂ ಎರಡು ಮಕ್ಕಳು ಹೋದುವು ವಿಷಮಜ್ವರದಿಂದ. ಈಗ ನಾರಾಯಣರಾಯರಿಗೆ ಹುಚ್ಚುಹಿಡಿದಂತಾಗಿದೆ. ತಾಯಿತಂದೆಗಳಿಬ್ಬರೂ ಮಾತನಾಡುವುದೂ ಇಲ್ಲ; ಕುಳಿತಲ್ಲಿಂದ ಅಲುಗಾಡುವುದೂ ಇಲ್ಲ! 'ಆಯಿತು ಇನ್ನು ನಮ್ಮ ಕಥೆ' ಎಂದು ಗೋಳಿಡುತ್ತಿದ್ದಾರೆ. ಹೀಗಾಗಿ ನಾನು ಇಲ್ಲಿ ನಾಲ್ಕು ದಿವಸ ಇದ್ದು ಮಕ್ಕಳು

ಮರೆಯುವುದನ್ನು ನೋಡಬೇಕು. ಇಲ್ಲಿಂದ ವರ್ಗವಾಗಿ ಅವರು ಊರು ಬಿಟ್ಟು ಹೊರತು ಅವರಿಗೆ ಸಮಾಧಾನವಾಗದು. ಪ್ರತಿಕ್ಷಣಕ್ಕೂ, ಕಣ್ಣೆದುರು ಸತ್ತ ಮಕ್ಕಳೇ ಬಂದು ಕುಣಿಯುತ್ತವೆ" ಎಂದು ತಿಳಿಸಿದ್ದ.

"ನಾನು ಡಾಕ್ಟರರನ್ನು ಕೇಳಿದೆ-ಏಕೆ ಹೀಗಾಯಿತು ಎಂದೆ. ಅವರೆಂದರು, ಹೌದು ಮಾಸ್ತರರೇ, ಈ ಮಕ್ಕಳಲ್ಲಿ ಏನು ತ್ರಾಣವಿತ್ತು! ಜ್ವರವಿಲ್ಲದೆಯೂ ಸಾಯುವಂತಿದ್ದುವು ಅವು. ಅಲ್ಲದೆ ಮಕ್ಕಳಿಗೆ ನಡುವಯಸ್ಸಿನಲ್ಲಿ ವಿಷಮಜ್ವರ, ವಿಷಮವೇ! ವಿಷಮಜ್ವರಕ್ಕೆ ಎಂಥ ಗಟ್ಟಿ ಮುಟ್ಟಾದ ತರುಣರೂ ಬಲಿಯಾಗುವ ಪ್ರಾಯ ಅದು' ಎಂದರು. ಅವರು-'ನೀವು ಅವರನ್ನು ಇಲ್ಲಿಂದೆಲ್ಲಿಗಾದರೂ ಕರೆದುಕೊಂಡು ಹೋಗಿ; ಅವರು ಈ ಸ್ಥಳವನ್ನು ಮರೆಯಬೇಕು' ಎಂದಿದ್ದಾರೆ. 'ನಾಲ್ಕು ದಿವಸ ಕಳೆದು ಬೋರ್ಡು ಆಫೀಸಿಗೆ ಹೋಗಿ, ಅವರ ಬಗ್ಗೆ ಒಂದು ಅರ್ಜಿ ಹಾಕಿದರೂ ಚಿಂತೆಯಿಲ್ಲ' ಎಂದಿದ್ದಾರೆ. ನಮಗೂ ಈ ಊರಿಂದ ಎಲ್ಲಿಗಾದರೂ ವರ್ಗವಾದೀತೇ ಎಂದು ನೋಡಬೇಕು" ಎಂದು ರುಕ್ಮಿಣಿಗೆ ಪತ್ರ ಬರೆದಿದ್ದನು.

ರಜೆಯ ವೇಳೆ ಅತ್ತೆ, ಅತ್ತಿಗೆಯರ ಸಮ್ಮುಖದಲ್ಲಿ ತುಸುವಾದರೂ ವಿರಾಮ ದೊರೆತೀತು-ಎಂದು ಅವಳು ತಿಳಿದು ಬಂದರೆ, ಸಾವಿನದ್ದೇ ವಾರ್ತೆ ಕೇಳಿ, ಕೇಳಿ ಮನಸ್ಸು ಭ್ರಾಂತವಾಗಬೇಕೇ? "ಇಂದು ಅವರ ಮಕ್ಕಳು, ನಾಳೆ ನನ್ನವು" ಎಂಬ ಯೋಚನೆ ರುಕ್ಮಿಣಿಗೆ ಬರುತ್ತದೆ. "ಅಬ್ಬಾ, ಹಾಗಾಗುವ ಮೊದಲು ನಾವೇ ಸತ್ತರೆ ಒಳ್ಳೆಯದಲ್ಲವೇ" ಎಂಬ ಭೀತಿಜನ್ಯ ಉಪಾಯ ಬೇರೆ ಸೂಚನೆಯಾಗುತ್ತದೆ. ಕೊನೆಗೆ "ಅನುಭವಿಸುವ ಕಾಲ ಬಂದರೆ, ಹರಿಹರಾದಿಗಳು ಬಂದರೂ ತಪ್ಪಿಸಲಾರರು" ಎಂಬ ತಲೆಮಾರಿಂದ ಬಂದ ಶಾಂತಿವಚನಗಳನ್ನು ನೆನೆದು, ತೃಪ್ತಿ ಹೊಂದುತ್ತಾಳೆ – ಆಕೆ! ಅವಳ ಪಾಲಿಗೆ ನಾರಾಯಣರಾಯರ ಮೂರು ಮಕ್ಕಳ ಮರಣವು, ತನ್ನ ತಂದೆಯ ಮರಣವನ್ನು ಸಂಪೂರ್ಣವಾಗಿ ಮರೆಯಿಸುವಷ್ಟು ಕಾರ್ಮುಗಿಲನ್ನು, ಮನಸ್ಸಿನಲ್ಲಿ ಕವಿದು ಬಿಟ್ಟಿತು.

ಒಂದು ಕಡೆಯಲ್ಲಿ, ಅಚ್ಯುತ, ಅವನ ಬಳಗ, ಅವನ ಮಿತ್ರರ ಬಳಗಗಳು ಯುದ್ಧ, ದಾರಿದ್ರ್ಯ, ಸಂಕಟಗಳ ಹಾನಿಯನ್ನು ಅನುಭವಿಸಿ

ದಂತೆ, ಉಳಿದೆಲ್ಲ ಎಡೆಗಳಲ್ಲೂ ಸುಖದ ಛಾಯೆ ಸುಳಿದಿರಲಿಲ್ಲ, ಅದರಲ್ಲೂ ಆ ಉಪಾಧ್ಯಾಯರ ಪ್ರಪಂಚದಲ್ಲಿ, ಎಲ್ಲೆಲ್ಲೂ ಒಂದೇ ತೆರನಾದ ನಿರಾಶೆ ಕವಿದಿತ್ತು.

ಅಚ್ಚುತನ ಪಳೆಯ ವಿಹಾರ ರಾಜ್ಯವಾದ ಕಡಬದಲ್ಲಿಯೂ—ಯುದ್ಧವು ಅನೇಕ ವಿಚಿತ್ರ ಕೆಲಸಗಳನ್ನು ನಡೆಯಿಸಿಬಿಟ್ಟಿತು. ಊರಿನ ಹತ್ತೆಂಟು ಮಂದಿ ಮಾತ್ರ ತುಂಬಾ ಉತ್ಸಾಹಿಗಳಾಗಿದ್ದಾರೆ. ರೈತರೂ ಒಬ್ಬೊಬ್ಬರಾಗಿ ಈಗಷ್ಟೆ ತಲೆಯನ್ನೆತ್ತುತ್ತಿದ್ದಾರೆ. ಅವರ ಎಡೆಯಲ್ಲಿ, ಐತುಮೂಲ್ಯರಂತವರು ನಿರಾಶೆಯ ಕಣ್ಣೀರನ್ನು ಕರೆಯುತ್ತಿದ್ದಾರೆ. ಐತು ಮೂಲ್ಯ ಮಾಸ್ತರರನ್ನು ವಿಚಾರಿಸಿದರೆ ಹೇಳುತ್ತಾರೆ: "ಬಂಗಾಲಾ ಅಲ್ಲೇ ಇದೆಯಂತೇನು? ಮಲಬಾರಿನಲ್ಲಿ ಮಾತ್ರ ಕ್ಷಾಮವೇನು?" ಅನ್ನುತ್ತಾರೆ ಅವರು. ಯುದ್ಧ ತೊಡಗಿದ ಮರುದಿನವೇ ಅವರ ಮನೆಯ ಒಲೆಯಲ್ಲಿ ಕ್ಷಾಮ ಕಾಣಿಸಿತ್ತು. ನಿತ್ಯವೂ, ಹಿಂದಿನ ದಿನ ಕಳೆದುದು ಹೇಗೆಂದು, ಅವರು ಆಶ್ಚರ್ಯಪಡುವುದಾಗಿದೆ. "ಯಾವುದಾದರೂ ಭೂಮಿ ಕಾಣಿಕೆಯಿಲ್ಲದೆ, ಬರಿಯ ಮಾಸ್ತರಿಕೆಯನ್ನೇ ನಂಬಿಕೊಂಡವನು ಮಣ್ಣು ತಿಂದ ಹಾಗೆಯೇ ಸರಿ" ಎಂದು ದುಃಖಿಸುತ್ತಾರೆ. ಆದರೆ, ಅವರ ಎಡೆಯಲ್ಲೆಲ್ಲ, ಆಸ್ತಿ ಮನೆಗಳಿದ್ದ ಅಚ್ಚುತನ ನೆನಪು ಅವರಿಗೆ ಬಾರದೆ ಇರುವುದಿಲ್ಲ. "ಹಿಂದೆ ಆಸ್ತಿಯಿದ್ದಾಗೂ ಉಪಯೋಗವಿಲ್ಲ; ಸಾಲದ ತಗಾದೆಯಿಲ್ಲದೆ, ಈಗ ಆಸ್ತಿಯಿದ್ದವರು ಮಾತ್ರ ಗಟ್ಟಿ" ಎನ್ನುತ್ತಾರೆ. ಅವರ ಶಾಲೆಯ ಮುಖ್ಯೋಪಾಧ್ಯಾಯರು ಇನ್ನೂ ಮಹಾಲಿಂಗಯ್ಯನವರೇ. ಅವರು "ಪುತ್ತೂರಲ್ಲಿ, ಅಕ್ಕಿಯನ್ನು ರೇಶನಿಂಗ್ ಮಾಡುತ್ತಾರಂತೆ; ಅಲ್ಲಿಗಾದರೂ ಹೋಗಿ ಸೇರುವ. ಊರ ಮನೆಯಲ್ಲಿ ಉಪವಾಸ ಬಿದ್ದರೂ ಚಿಂತೆಯಿಲ್ಲ. ಇಲ್ಲಿ ಸತ್ತರೆ-ನಮ್ಮ ಹೆಣ ತೆಗೆಯುವವರೂ ಇರಲಾರರು" ಎನ್ನುವ ಸ್ಥಿತಿಗೆ ಬಂದರು. ಮುಖ್ಯವಾಗಿ, ಮಾಸ್ತರರ ಜಾತಿಯನ್ನೇ ಅಟ್ಟಲು ಈ ಯುದ್ಧ ಬಂದಿರಬೇಕೆಂದು ಅವರೆಲ್ಲರ ತಿಳಿವು.

ಮಹಾಲಿಂಗಯ್ಯನಿಗೆ ನಾಗರಾಜನಂಥ ಗೆಳೆಯರಿಲ್ಲವೇ-ಎಂದು ಕೇಳಬಹುದು ನೀವು. ಗೆಳೆಯರು ಯಾರಿಗಿಲ್ಲ? ಹಣದ ವಹಿವಾಟು ನಡುವೆ ಹರಿಯುವಾಗ, ಕೆಳೆತನಕ್ಕೆ ಕೊರತೆಯಿರುವುದಿಲ್ಲ. ಆಗ ನಾಗ

ರಾಜ, ಮಹಾಲಿಂಗಯ್ಯ ತನ್ನನ್ನು ಕಾಣಲು ಬರುತ್ತಿರುವಾಗಲೇ "ಹೂಂ-ಯಾಕೋ ಬಂದರು ಮಾಸ್ತರರು. ಹತ್ತು ರೂಪಾಯಿ ಸಾಲ ಕ್ಕಿರಬೇಕು; ಅಥವಾ-'ತೀರ ಹರಕತ್ತಾಗಿದೆ ಒಂದು ಮುಡಿ ಅಕ್ಕಿ ಕೊಡಿ' —ಎನ್ನಲಿಕ್ಕಿರಬಹುದು" ಎನ್ನುತ್ತಾನೆ. ಈ ಸಮಯದಲ್ಲಿ, ಇದ್ದ ಅಕ್ಕಿ ಯನ್ನು ಉಳಿಸಿಕೊಂಡು, ಊರಿಂದೊಮ್ಮೆ ಹೊರಕ್ಕೆ ಸಾಗಿಸುವ ತನಕ, ಊರಿನ ಕಣ್ಣೇ ತನ್ನ ಮೇಲೆ ಇರುತ್ತದೆ ಎಂದು ಆತ ತಿಳಿದಿದ್ದಾನೆ. ಮುಂದಿನ ವರ್ಷ ಅಕ್ಕಿಯನ್ನೆಲ್ಲ ಸರಕಾರವೇ ಸ್ವಾಧೀನಪಡಿಸಿ ಕೊಳ್ಳು ತ್ತದೆಯೆಂದು ಆಗಲೇ ಗಲಭೆ ಹುಟ್ಟಿದೆ; ಈ ವರ್ಷವೂ ಅಕ್ಕಿಯ ಪರ ಮಾವಧಿ ಬೆಲೆ ನಿಶ್ಕರ್ಷೆ ಮಾಡಬೇಕೆಂದು, ಸರಕಾರದ ಯೋಚನೆ ಯಂತೆ" ಎಂದು ಅಸಂತುಷ್ಟಿ ತಾಳುತ್ತಾನೆ. "ಹಿಂದೆ ರೈತರು, ಮುಡಿಗೆ ನಾಲ್ಕು ಮೂರು ರೂಪಾಯಿಗಳಂತೆ ಅಕ್ಕಿ ಮಾರಾಟಮಾಡಿ ನಷ್ಟಗೊಂ ಡಾಗ ಅವರನ್ನು ಯಾರು ಕೇಳಿದರು? ಅಡಿಕೆ ಖಂಡಿಗೆ ಎಂಬತ್ತು, ನೂರೂ ಬಾರದಿದ್ದಾಗ ಸರಕಾರ ಅವರಿಗೆ ಯಾವ ತೆರನ ಉಪಕಾರ ಮಾಡಿತು? ಈಗ ನಮ್ಮ ಕೈಗೆ ಒಂದೆರಡು ಕಾಸು ಬಂದರೆ, ಅವರಿಗೆ ಕಣ್ಣು ಕೆಂಪಾಗುತ್ತದೆ; ಊರಿಗೂ ಹೊಟ್ಟೆಕಿಚ್ಚಾಗುತ್ತದೆ. 'ಹೂಂ— ನಿಮಗೆ ಇಷ್ಟು ಅಕ್ಕಿಯಿದೆ, ಇಷ್ಟು ಅಡಿಕೆಯಿದೆ-ಯುದ್ಧ ಫಂಡಿಗೆ ಇಷ್ಟು ವಂತಿಗೆ ಕೊಡಿ'ಅನ್ನುತ್ತಾರೆ-ಎಂದು ಬಂದು ಪೀಡಿಸುತ್ತಾರೆ. ಕೊಟ್ಟರೂ ಕೆಟ್ಟೆವು, ಕೊಡದಿದ್ದರೂ ಕೆಟ್ಟೆವು" ಎನ್ನುತ್ತಾನೆ ನಾಗರಾಜ.

ಅವನೇ ಏನು, ಅವನ ಬಂಧುಬಳಗವೆಲ್ಲ ಅಂತೇ ಇದೆ. ಅಕ್ಕಿಗೆ ಹದಿನೆರಡೂವರೆಯಂತೆ ಈಗ ದರ ಬಂದರೆ ಕೊಡಬಹುದು; ಅಡಗಿಸಿ ಇಟ್ಟರೆ, ಮಳೆಗಾಲದ ತನಕ ಅದನ್ನು ಕೊಡದೆ ಉಳಿಸಿದರೆ, ಹದಿನಾರು, ಹದಿನೆಂಟು, ಇಪ್ಪತ್ತು ಸಿಗುವ ಆಸೆಯಿದೆ. ಹೀಗಿರಲು ಐತುಮೂಲ್ಯ ರಾಗಲೀ, ಮಹಾಲಿಂಗಯ್ಯನಾಗಲಿ "ನಾಗರಾಜಯ್ಯ, ಮರ್ಯಾದೆ ಉಳಿಸಿ; ಒಂದು ಮುಡಿ ಅಕ್ಕಿಕೊಡಿ! ಹತ್ತು ರೂಪಾಯಿ ನಗದಿ ಕೊಡು ತ್ತೇವೆ" ಎಂದು ಬೇಡಿದರೆ, ಹೇಗೆ ವಿಕ್ರಯಿಸಲು ಮನಸ್ಸು ಬಂದೀತು?

"ಮಾಸ್ತರರೇ,ನಿಮ್ಮ ಕೊರಳಾಣೆ. ನಾನು ಮನೆಯ ಖರ್ಚಿಗಿಂತ ಮಿಕ್ಕಿ ಒಂದೇ ಒಂದು ಮುಡಿಯನ್ನೂ ಇರಿಸಿಕೊಂಡಿಲ್ಲ. ಹಣದ ಗರ್ಜಿ ಗೆಂದು ಎಲ್ಲವನ್ನು ಉಪ್ಪಿನಂಗಡಿಯವರಿಗೆ ಹೆಡ್ಡನ ಹಾಗೆ ಒಂಬತ್ತು

ರೂಪಾಯಿಗೆ ಮಾರಿಬಿಡಬೇಕೆ?" ಎಂದು ಆತ ನಕಾರ ಹಾಕುವ. ನಾಗ ರಾಜಯ್ಯನನ್ನು ಬಿಟ್ಟು ಲಕ್ಕಣ್ಣ ಸೆಟ್ಟರಲ್ಲಿಗೋ, ಸಾಹುಕಾರ ನಾಗೇಶ ಕಮ್ತಿಯರಲ್ಲಿಗೋ, ವರ್ಗದಾರ ದೂಜೆ ಸೋಜರಲ್ಲಿಗೋ ಹೋದರೆ, ಅವರೂ ಇದೇ ಹಾಡನ್ನು ಹೇಳುತ್ತಾರೆ... ಕೊನೆಗೆ, ಕೊಟ್ಟರೆ ನಾಗೇಶ ಕಮ್ತಿಯವರೇ ಕೊಡಬೇಕು. "ನಾವು ಅಂಗಡಿ ಇಟ್ಟಾಯಿತು. ಬಂದ ವರಿಗೆ ಇಲ್ಲವೆನ್ನಬಾರದೆಂದು; ನಿಮಗೆ ಎಂದುದಕ್ಕೆ, ಬರಿಯ ಒಂದು ಕಳಸೆ ಅಕ್ಕಿ ಕೊಡುವ. ನಾನು ಹದಿನಾಲ್ಕರಲ್ಲಿ ಕೊಂಡದ್ದು; ನಿಮಗೆ ಹದಿನೈದಕ್ಕೆ ಕೊಡಬಹುದು' ಎಂದು ತುಂಬ ನಷ್ಟಮಾಡಿ ಕೊಂಡವ ರಂತೆ, ಒಂದು ಕಳಸೆ ಅಕ್ಕಿಯನ್ನು ಐದು ರೂಪಾಯಿಗೆ ಕೊಡುತ್ತಾರೆ. ತಿರುಗಿ ಹತ್ತು ದಿನಗಳಲ್ಲಿ, ಅವರಲ್ಲಿಗೆ ಹೋಗಿ, 'ನೀವು ದಾನಶೂರ ಕರ್ಣ" ರೆಂದು ಹೊಗಳಬೇಕು. ಆಗ ಸೇರು ಒಂದಕ್ಕೆ ಎಂಟಾಣೆಯಲ್ಲಿ ಕೊಂಡ ಬೇಳೆಯನ್ನು ನಿಮಗೆ ಹದಿನೆರಡು ಹದಿನಾಲ್ಕು ಆಣೆಯಲ್ಲಿ ಕೊಟ್ಟಾರು. ಅರ್ಧಾಣೆಯ ಬೆಂಕಿಪೆಟ್ಟಿಗೆ ಬೇಕಾದರೂ 'ಅದು ಇಲ್ಲವೇ ಇಲ್ಲ'ವೆಂದು ನಟಿಸಿ, ಕೊನೆಗೆ ಒಂದಾಣೆಗೆ ಒಂದು ಪೆಟ್ಟಿಗೆ ವಿಕ್ರಯಿಸಬಹುದು. ಇದರ ಎಡೆಯಲ್ಲಿ ಉಪಾಧ್ಯಾಯರಿಗೆ ಸಾಲ ಕೊಟ್ಟರೆ, ಅದು ಮರಳಿ ಬಂದೀತೆಂಬ ನಂಬುಗೆ ಯಾರಿಗೂ ಇಲ್ಲ. ಇವರೂ ಸಾಲ ಕೊಳ್ಳಲಾರರು. ಹಾಗಾಗಿ, 'ಇದ್ದರೆ ಒಂದಿಷ್ಟು ಉಣ್ಣುವ, ಇಲ್ಲವಾದರೆ ಬೇಡ' ಎಂಬುದು ಅವರ ಪಾಡಾಗಿದೆ.

ಸ್ವಲ್ಪ ಸಮಯದ ಮೊದಲು ಕಡಬದಲ್ಲಿ ದೊಡ್ಡ ಕತೆಯೇ ನಡೆಯಿತು. ಮಹಾಲಿಂಗಯ್ಯ ಮಾಸ್ತರರ ಮನೆಯಲ್ಲಿ ಒಂದೆರಡು ದಿನ ಅಕ್ಕಿಯೇ ಇರಲಿಲ್ಲ ಊಟಕ್ಕೆ. ಸಂಕಟದಲ್ಲಿ ಎಲ್ಲರೂ ಬಂಧುಗಳೇ ಎಂಬಂತೆ, ಅವರು ತಮ್ಮ ಗೋಳನ್ನು ಹಳೆಯ ವೈರಿಗಳಾದ ಜಾನ್‌ಸನ ರಲ್ಲಿ ಹೇಳಿದರು. ಜಾನ್‌ಸನರು "ಮಹಾಲಿಂಗಯ್ಯ, ನೀವು ಹಾಗೆಂದರೆ ಹೇಗೆ! ಐನೂರು ಮುಡಿ ಉಳಿತಾಯವಿರುವ ನಾಗರಾಜ ನಿಮ್ಮ ಮಿತ್ರ. ಹೋಗಿ ಅವನನ್ನು ಕೇಳಿ; ಹತ್ತು ರೂಪಾಯಿಗೇ ಕೊಟ್ಟಾನಲ್ಲ" ಎಂದರು.

"ಅವನಲ್ಲಿ ಊಟಕ್ಕೆ ಇಟ್ಟುಕೊಂಡದ್ದು ಹೊರತು ಹೆಚ್ಚಿಗೆ ಚೂರೂ ಇಲ್ಲವಂತೆ!

"ಅಯ್ಯೋ ಪಾಪವೇ! ಈ ವರ್ಷವೇ, ಅಡಿಕೆಯಿಂದ ಸಿಕ್ಕಿದ

ಧರ್ಮಾದ ದುಡ್ಡಿಗೆ, ಪಂಜದ ಊರಲ್ಲಿ ಆತ ಸಾವಿರ ರೂಪಾಯಿಗೆ ಆರು ಮುಡಿಯಂತೆ,ಭೂಮಿಯನ್ನು ಕ್ರಯಕ್ಕೆ ಕೊಂಡಿದ್ದಾನೆ. ಐವತ್ತು ಮುಡಿ ಬರುವ ಆಸ್ತಿಯನ್ನು ಕೊಂಡಿದ್ದಾನೆ. ಅದರ ಗೇಣಿಯೂ ಬರುವುದಿದೆ. ನೀವು ಅವನಲ್ಲಿಗೆ ಹೋಗಿ. 'ಚೀಟು ಕೊಟ್ಟರೆ, ಪಂಜದಿಂದ ಹೊತ್ತಾದರೂ ಅಕ್ಕಿಯನ್ನು ತರುತ್ತೇನೆ ಅನ್ನಿ!'. ಎಂದರು.

ಮಹಾಲಿಂಗಯ್ಯನವರು ರೇಗಿದರು. "ನೀವು ಆ ನೀಚನ ಸುದ್ದಿ ಹೇಳಬೇಡಿ. ನನಗೆ ಇಷ್ಟು ವರ್ಷ ಗೊತ್ತಾಗದಿದ್ದರೂ ಈಗ ಅವನ ಕಥೆ ಚೆನ್ನಾಗಿ ಗೊತ್ತಾಗಿದೆ. ಆಪತ್ತಿನ ಕಾಲದಲ್ಲಿ, ಒಂದು ಮುಡಿ ಅಕ್ಕಿಯನ್ನು ಕೊಡಲಾರದವ ಅವನು, ಅದೂ ಧರ್ಮಕ್ಕಲ್ಲ. ಕ್ರಯಕ್ಕೆ. ಅವನನ್ನು ಸುಡಿರಿ." ಎಂದರು ಕೋಪದಿಂದ.

"ಹಾಗಾದರೆ ಮಾಸ್ತರರೇ, ನಾಗರಾಜನಲ್ಲಿ ಈಗ ಇರುವ ಅಕ್ಕಿ ಕಡಿಷ್ಟು ಇನ್ನೂರು ಮುಡಿಗಳಿಗೆ ಕಡಿಮೆಯಾಗದು. ಅದೆಲ್ಲ ಮಳೆಗಾಲಕ್ಕೆ ಮಾರಲಿಕ್ಕೆ; ಕಳೆದ ವರ್ಷ, ಊರಲ್ಲಿ ಅಕ್ಕಿಯ ಧಾರಣೆ ಹತ್ತು ರೂಪಾಯಿ ಇರುವಾಗ,ಒಕ್ಕಲುಗಳಿಗೆ ಹನ್ನೆರಡರಂತೆ ಆತ ಮಾರಿದ್ದಾನೆ. ಈ ವರ್ಷ ಅದನ್ನು ಹದಿನೆಂಟಕ್ಕೆ ಮಾರಾಟಮಾಡಬೇಡವೇ?" ಎಂದರು ಜಾನ್‌ಸನರು.

"ನಿಜಕ್ಕೂ ಉಂಟೆನ್ನುತ್ತೀರಾ? ಇದ್ದು ಹೀಗೆ ಮಾಡುತ್ತಾನೆಂದು ತಿಳಿಯುತ್ತೀರಾ?" ಎಂದು ನಂಬಲಾರದೆ ಹೋದರು ಮಾಲಿಂಗಯ್ಯನವರು.

"ಹಾಗಾದರೆ ಮಾಸ್ತರರೇ, ನಿಮಗೆ ಧೈರ್ಯವಿದೆಯೇ, ಒಂದು ಕೆಲಸ ಮಾಡಿ. ಇವತ್ತು ರಾತ್ರೆಗೆ ನಮ್ಮ ಮನೆಯ ಹತ್ತಿರ ಬನ್ನಿ. ಅವನ ಮನೆಯಿಂದ ಅಕ್ಕಿ ಕತ್ತಲಲ್ಲಿ ಉಪ್ಪಿನಂಗಡಿಗೆ ಹೋಗುವುದನ್ನು ನಾನು ತೋರಿಸಿಕೊಡುತ್ತೇನೆ. ಪ್ರತಿ ದಿನ ಎರಡು, ಎರಡು ಗಾಡಿಗಳೇ ಹೋಗುತ್ತಿದ್ದಾವೆ. ಅಕ್ಕಿ ಇಲ್ಲದೆ ಗಾಡಿ ಹೋಗುವುದು ಹೇಗೆ ಹೇಳಿ."

ಮಹಾಲಿಂಗಯ್ಯನವರ ಮುಖ ಉರಿಯಿತು. "ಹಾಗಾದರೆ ಇನ್ನೊಮ್ಮೆ ಹೋಗಿ ಕೇಳುತ್ತೇನೆ-" ಎಂದುಕೊಂಡರು. ನೇರಾಗಿ ಅವರು ಆ ಸಂಜೆಯೇ ನಾಗರಾಜನ ಮನೆಗೆ ಹೋದರು. ಮನೆಯ ಮುಂಗಡೆ ಎರಡು ಗಾಡಿಗಳಲ್ಲಿ ಅಕ್ಕಿ ತುಂಬಿಸಿ ನಿಲ್ಲಿಸಿದ್ದರು; ಆ ರಾತ್ರಿಯೇ ಅವು

ಗಳ ಪಯಣವಿತ್ತು. ನಾಗರಾಜನನ್ನು ಕಾಣಲು ಚಾವಡಿಗೆ ಹೋದರು: "ಏನು ಮಾಡುತ್ತೀರಿ ಮಹಾರಾಯರೇ-ನಿಮ್ಮೂರಿಗೆ ಬಂದು,ಉಪವಾಸ ಬೀಳಬೇಕೆ ನಾವು?" ಎಂದು ಆತನ ಮುಂದೆ ತಿರುಗಿ ನಮ್ರರಾದರು.

"ನಿಮ್ಮ ಬೋರ್ಡಿಗೆ ಹೇಳಿ-ಏನು ಮಾಡಬೇಕೆಂದು. ನಾವೀಗ ಹಾರಿಗೆ ಹದಿನೆಂಟು ರೂಪಾಯಿ ಕೊಟ್ಟು ಕೊಂಡುಕೊಳ್ಳಲಿಲ್ಲವೇ; ಚಿಮಣಿ ಎಣ್ಣೆ ಡಬ್ಬಿಗೆ ಹದಿನೆಂಟು ರೂಪಾಯಿ ಕೊಟ್ಟು ಕೊಂಡು ಕೊಳ್ಳುವುದಿಲ್ಲವೇ? ನಾವು ಯಾರ ಹತ್ತಿರ ಕೇಳಬೇಕು ಹೇಳಿ?"

"ನಿಮ್ಮ ದಮ್ಮಯ್ಯ, ನನಗೆ ಒಂದೇ ಒಂದು ಮುಡಿ ಅಕ್ಕಿಯನ್ನು ಕೊಡಿ" ಎಂದರು ಹೆಡ್‌ಮಾಸ್ತರರು.

"ಏನು! ಗಾಡಿಯಲ್ಲಿದೆಯೆಂದು ನನ್ನನ್ನು ಕೇಳುತ್ತೀರಾ? ಹಳೆಯ ಕರಾರಿಗೆ ಅದನ್ನು ಕೊಡುತ್ತಿದ್ದೇನೆ. ಕರಾರನ್ನು ಭರ್ತಿಮಾಡಲು, ಅಕ್ಕಿ ನಾನೇ ಕೊಂಡುಕೊಳ್ಳಬೇಕಾಗಿದೆ ಇನ್ನು"-ಎಂದು, ವಿರಾಮವಿಲ್ಲದವ ರಂತೆ ಒಳಕ್ಕೆ ಹೋಗಿಬಿಟ್ಟನು.

"ಯಾರನ್ನೂನಾವು ದೂರಿ ಫಲವಿಲ್ಲ. ಎಲ್ಲರೂ ನೆರೆಕರೆಯವರನ್ನು ನುಂಗುವ ಪರಿಪಾಠದವರೇ" ಎಂದು ಮಾಲಿಂಗಯ್ಯ ತೀರ್ಮಾನಿಸಿ ಕೊಂಡು ಬಂದರು. ಅವರನ್ನು ಕೆರಳಿಸುವುದಕ್ಕೇನೆ ಜಾನ್‌ಸನರು "ಏನಾಯ್ತು, ಇತ್ತೇ, ಕೊಟ್ಟರೇ?" ಎಂದು ವಿಚಾರಿಸಿದರು. ಮಹಾ ಲಿಂಗಯ್ಯ ತಾವು ಕಂಡದ್ದನ್ನೆಲ್ಲಾ ಬಣ್ಣಿಸಿದರು. ಆ ದಿನ ಅವರ ಕುರುಡು ಕೋಪ ಅಷ್ಟಿಷ್ಟಲ್ಲ. ಅದಕ್ಕೆ ಜಾನ್‌ಸನರೆಂದರು-"ಅದಕ್ಕೆ ದೊಣ್ಣೆಯ ಮದ್ದು ಬಿದ್ದ ಹೊರತು ನಿಲ್ಲುವುದಿಲ್ಲ. ಬಂಗಾಲದವರ ಹಾಗೆ, ಹುಳದ ಹಾಗೆ, ಜನರು ಹಸಿದು ಸತ್ತರೆ ಯಾರಿಗೆ ಕರುಣೆ ಬರುತ್ತದಂತೆ! ಹಾಗೆ ನನಗೆ ಸಾಯುವ ಕಾಲ ಬಂದರೆ, ಇಂಥವರಿಗೆಲ್ಲ ಅನ್ನ ದಕ್ಕದ ಹಾಗೆ ಮಾಡಿ, ನಾನು ಸತ್ತೇನೆಯೇ ವಿನಾ, ಹೀಗೆಯೇ ಸಾಯಲಾರೆ" ಎಂದು ವೀರಾವೇಶದಿಂದ ನುಡಿದರು.

ಮಾತುಗಳಿಂದ ಮಹಾಲಿಂಗಯ್ಯನವರಿಗೆ ಸಮಾಧಾನವಾದೀತೆ? ಆದರೆ ತಮ್ಮ ಸಿಟ್ಟನ್ನು ಯಾರ ಮೇಲೆಯೂ ತೋರಿಸಲಾರದೆ "ಛೀ, ಇನ್ನು ಅವನ ಮುಖ ನೋಡಲಿಕ್ಕಿಲ್ಲ" ಎಂದು ಶಪಿಸಿದರು. ಅದಕ್ಕೆ ಜಾನ್‌ಸನರು "ಹೌದಯ್ಯ! ಇಂಥ ಶಾಪಗಳನ್ನು ಕೇಳಿಯೇ ದೊಡ್ಡ

ವರು ಮತ್ತೂ ಶ್ರೀಮಂತರಾಗುವುದು. ಎದೆಯನ್ನು ಅಷ್ಟು ಗಟ್ಟಿಮಾಡಿಕೊಂಡು, ಕನಿಕರವನ್ನು ಕೊಂದುಕೊಂಡರೇನೆ ಶ್ರೀಮಂತಿಕೆ! ಇಲ್ಲವಾದರೆ ನಮ್ಮಂತೆ ಅಲ್ಲವೇ-ಅವರೂ. ಇಂದಿದ್ದರೆ, ನಾಳೆಗಿಲ್ಲ! ಇದಕ್ಕೆಲ್ಲಾ ರಸ್ಯ ಬರಬೇಕು-ಸರಿಯಾಗಿ ಅವರ ತಲೆ ಒಡೆದು, ಹುಟ್ಟುವಳಿಯನ್ನು ಊರವರಲ್ಲಿ ಹಂಚಿಹಾಕಬೇಕು" ಎಂದರು.

"ಅದು ಹಾಕುತ್ತಾರೆ. ಆ ಸ್ಥಿತಿ ಬಾರದೆ ಇರುತ್ತದೆಯೇ ಇಲ್ಲಿಗೂ ಒಂದು ದಿನ. ಈ ಸೋಜರು, ಈ ಸೆಟ್ಟರು, ಈ ಕಮ್ತಿಯರು, ಈ ನಾಗರಾಜ ಇವರೆಲ್ಲ ಮಣ್ಣುಗೂಡಲು ರಸ್ಯವೇ ಬರಬೇಕು" ಎಂಬುದನ್ನು ಅವರು ಒಪ್ಪಿದರು. "ಮಾಸ್ತರರೇ, ಬಾಯಿ ಸಿಟ್ಟು ಕೈಗೆಬರುವುದಿದ್ದರೆ ಹೇಳಿ! ಆಗ ನಾನಿದ್ದೇನೆ....... ಈ ಬರಿ ಬಡಾಯಿ ಬೇಡ! ನನಗೂ ಒಂದು ಸಾರಿ, ಈ ಕಳ್ಳನಿಗೆ ಬುದ್ಧಿ ಕಲಿಸಬೇಕೆಂದಿದೆ......" ಎಂದರು. ಜಾನ್‌ಸನರ ಮೋಹನಾಸ್ತ್ರಕ್ಕೆ ಇದುವರೆಗೆ ದೂರವಾಗಿದ್ದ ಮಹಾಲಿಂಗಯ್ಯ ಈಗ ತಲೆದೂಗಿದರು. ಏನಿಲ್ಲ, 'ನೀರು ಸೆಗಣಿ' ಎಂದು, ಊರವರ ಬಿರುದಿಗೆ ಗುರಿಯಾದ ಐತುಮೂಲ್ಯರಿಗೂ ಇವರ ಮಾತು ಕೇಳಿ ಕಿವಿ ನಿಮಿರಿತು: "ಅದಕ್ಕಾದರೆ ನಾನಿದ್ದೇನೆ" ಎಂದುಬಿಟ್ಟರು.

ಆ ರಾತ್ರಿಯೇ --ಅವರು ಮೂವರ ಹಟದ ಕಾರ್ಯರೂಪವು ಚಿಗುರಿತು! ನಾಗರಾಜನ ಗಾಡಿಗಳು ಕತ್ತಲಾಗುತ್ತಲೇ ಸ್ಥಳ ಬಿಟ್ಟುವು. ಅವು ಕಡಬವನ್ನು ಸೇರಲು, ಇನ್ನೂ ಎರಡು ಮೈಲಿನ ಪಯಣವಿದೆ. ಕಾಡಿನ ಮರೆಯಿಂದ ಪೇಟೆಯನ್ನು ತಪ್ಪಿಸಿ, ಅವು ಹೊಸಮಠಕ್ಕೆ ಹೋಗಬೇಕು. ಆ ಗಾಡಿಯವರು ಹೋ-ಹೋ-ಎಂದು ರಾಗ ಮಾಡಿ ಹೋಗುತಿದ್ದರು! ಒಂದೇ ಬಾರಿಗೆ ಅವರ ಎತ್ತುಗಳು ನಿಂತವು. ಗಾಡಿಯವರನ್ನು ಯಾರೋ ಉರುಳಿಸಿಯೂ ಬಿಟ್ಟರು. ನಾಲ್ಕಾರು ಮಂದಿ ಬಂದು, ಅವರ ಬಾಯನ್ನು ಅದುಮಿ, ಈಚೆ ರಸ್ತೆ ಮಗ್ಗುಲಿನ ಮರಗಳಿಗೆ ಬಿಗಿದು, ಹೊರಟುಹೋದರು. ಬಲು ಹೊತ್ತಿನ ತನಕ ಅವರಿಗೆ ಅಲ್ಲೇ ಶಿಕ್ಷೆಯಾಯಿತು. ಹಿಂದಿನಿಂದ ಬೇರೆ ಗಾಡಿಯವರು ಬಂದ ಮೇಲೆಯೇ ಅವರಿಗೆ ಬಿಡುಗಡೆಯಾದುದು. ಆ ಕತ್ತಲಲ್ಲಿ ಮೂರೇ ಮೂರು ಮುಡಿ, ಅಕ್ಕಿಗಳನ್ನು ಅವರ ಗಾಡಿಯಿಂದ ಒಯ್ದು, ಒಬ್ಬ ಗಾಡಿಯವನ ಕಿಸೆಯಲ್ಲಿ—ಮೂವತ್ತು ರೂಪಾಯಿಗಳನ್ನು ತುರುಕಿ,

ಸುಲಿಗೆಕಾರರು ಹೋಗಿದ್ದರು.

ಹೀಗಾಗಿ ನಡುರಾತ್ರೆಗೆ ನಾಗರಾಜನ ಎರಡು ಗಾಡಿಗಳು ಮನೆಗೇನೆ ಹಿಂತುರುಗಿದವು. ನಾಗರಾಜನು ಈ ದರೋಡೆಯ ಸುದ್ದಿಯನ್ನು ಕೇಳಿ ಕುಪಿತನಾದ. ರಾತ್ರೇನೆ ಮನೆಯಿಂದ ಕಡಬಕ್ಕೆ ಹೋಗಿ, ಪೋಲೀಸು ಠಾಣೆಗೆದೂರುಕೊಟ್ಟನು. ಮರುದಿನ, ಈ ದರೋಡೆಯ ಸುದ್ದಿ ವಿಚಿತ್ರವಾದ ರಂಗುಗಳನ್ನು ಪಡೆದು ಪ್ರಚಾರವಾಯಿತು. ರೂಪಾಯಿ ಮೂವತ್ತನ್ನು ಇರಿಸಿ, ಅಕ್ಕಿ ಸಾಗಿಸಿದರೆಂಬ ಸಂಗತಿಯನ್ನು ನಾಗರಾಜ ಅಡಗಿಸಿಟ್ಟ. ಅವನಿಗೆ 'ಯಾರ ಮೇಲೆ ತಾನು ಈ ವಿಷಯವಾಗಿ ಅನುಮಾನ ಹೊರಿಸಲೀ, ಎಂದು ತೋಚದಾಯಿತು. ಹಿಂದಲ ಸಂಜೆ, ಯಾರು ತಮ್ಮಲ್ಲಿಗೆ ಬಂದಿದ್ದರು-ಎಂದು ಯೋಚನೆಮಾಡಿದ. ಮಹಾಲಿಂಗಯ್ಯನವರ ನೆನಪಾಯಿತು. "ಛೀ, ಅದೊಂದು ಹೆಣ, ಅದರಿಂದ ಈ ಕೆಲಸವಾಗದು" ಎಂದು ತೋರಿತು. ಹಾಗಿರಲು ಅವನು ಒಂದೊಂದಾಗಿ, ತನಗೆ ಆಗದವರ ನೆನಹನ್ನು ತರಲು ಯತ್ನಿಸಿದ. ನಂಜಪ್ಪ, ಜಾನ್‌ಸನರ ತನಕವೂ ಬಂದನು. ಆದರೆ ಯಾವುದೂ ಮನಸ್ಸಿಗೆ ಖಚಿತವಾಗಲಿಲ್ಲ.

ಅಂದಿನಿಂದ ಅವನ ಗಾಡಿಗಳು, ಬಹುದೂರದ ತನಕ ಆಳುಗಳ ಬೆಂಬಲವಿಲ್ಲದೆ, ಎಲ್ಲಿಗೂ ಹೋಗದಾದುವು. ಅದರಿಂದ ಮುಂಚಿನ ದುರ್ಘಟನೆಗಳು ನಡೆಯಲಿಲ್ಲ. ಆದರೆ ಒಮ್ಮೆ ನಿವೃತ್ತಿಯಾದ ಪ್ರಶ್ನೆ, ಕೊಂಡ ಅಕ್ಕಿ ಮಾಯವಾಗುತ್ತಲೇ ತಿರುಗಿ, ಉದ್ಭವಿಸದೆ ಇರುತ್ತದೆಯೇ! ಜಾನ್‌ಸನರು ತಿರುಗಿ ಕುಪಿತವಾದರು. "ಹೋ! ಇವನು ಗಾಡಿಗಳಿಗೆ ಕಾವಲಿರಿಸಿ, ಊರಿನವರನ್ನು ಉಪವಾಸ ಕೆಡೆಯುತ್ತಾನೆಯೇ"-ಎಂದು ಅವರು ತಿರುಗಿ ಹಟತೊಟ್ಟರು. ಈ ಬಾರಿ ತಮಗೆ ಲಾಭವಾಗದೆ ಹೋದರೂ, ನಾಗರಾಜನಿಗೆ ನಷ್ಟ ಮಾಡಲು ನಿಶ್ಚಯಿಸಿದರು.

ಇನ್ನೊಂದು ದಿನ, ಕಡಬದಿಂದ ನಾಗರಾಜನ ಗಾಡಿಗಳು, ಆರು ಮೈಲು ಮುಂದಕ್ಕೆ ಹೋದ ಬಳಿಕ, ಅವು ಇದ್ದಕ್ಕಿಂದ್ದಂತೆ ಹೊತ್ತಿ ಉರಿಯ ತೊಡಗಿದುವಂತೆ! ಯಾರೋ ಅವುಗಳ ಮೇಲೆ ಚಿಮಣಿ ಎಣ್ಣೆ ಸುರಿದು, ಬೆಂಕಿಯಿತ್ತು ಓಡಿದ್ದರು—ಎಂದು ಆತನ ಗಾಡಿಯವನು ತಿರುಗಿ ಅವನಲ್ಲಿಗೆ ದೂರು ತಂದರು.

ಅಂದಿನಿಂದ ಮುಂದೆ ನಾಗರಾಜ, ಹಗಲಲ್ಲೇ ಮೋಟಾರು ಲೋರಿಗಳಲ್ಲಿ ಅಕ್ಕಿಯನ್ನು ಒಂದೆರಡು ಬಾರಿ ಸಾಗಿಸಿದ. ಮಳೆಗಾಲ ದಲ್ಲಿ ಹೆಚ್ಚು ಬೆಲೆ ಬಂದೀತೆಂಬ ಆಸೆಗೆ, ಮನೆಯಲ್ಲಿ ಏನನ್ನೂ ಇರಿಸಿ ಕೊಳ್ಳಲಿಲ್ಲ, ಈಗ ಬಂದುದೇ ಲಾಭವೆಂದು ತಿಳಿದನು.

ನಾಗರಾಜನಂಥವರೂ, ನಾಗೇಶ ಕಮ್ತಿಯರೂ-ದಿನಪತ್ರಿಕೆಗಳ ನ್ನೋದುತ್ತ ತುಂಬ ನಿರಾಶರಾಗುತ್ತ ಬಂದ ಕಾಲವದು. ಇಂಗ್ಲಿಷರ ಕೈಗೆ ತಿರುಗಿ ಆಫ್ರಿಕ ಬಂದುದ್ದು, ರಷ್ಯನರು ಜರ್ಮನಿಯ ಮೇಲೆ ವಿಜಯಶಾಲಿಗಳಾಗುತ್ತಿರುವುದು, ಅವರಿಗೆ ಒಪ್ಪದ ಸಂಗತಿ. ಅಂದರೆ, ಜರ್ಮನರು ಈ ನಾಡಿಗೆ ಬರಬೇಕೆಂದು ಅವರು ಹಂಬಲಿಸುತ್ತಲಿಲ್ಲ. ಹಾಗೆ ಕೇಳಹೋದರೆ, ನಾಗರಾಜನು ಯುದ್ಧಮುಖಕ್ಕೆ ಮಾಡಿದಷ್ಟು ಸಹಾಯ, ಇನ್ನಾರೂ ಆ ಊರಲ್ಲಿ ಮಾಡಿರಲಿಲ್ಲ. ಆತ "ಪೀಪಲ್ಸ ಕ್ಲಬ್ಬಿ ನಲ್ಲಿ" ಒಂದು ಮಹಾ ಯಗ್ನಗಾನ ಕೂಟವನ್ನು ಜರಗಿಸಿ, ಅದರ ಒಟ್ಟು ಉತ್ಪನ್ನವನ್ನೇ ಸರಕಾರಕ್ಕೆ ಕೊಟ್ಟಿದ್ದನು. ಆ ಊರಿಗೆ ಅಕ್ಕಿಯ ರೇಶ ನಿಂಗ್ ಬರಬೇಕು, ಚಿಮಿಣಿ ಎಣ್ಣೆ, ಸಕ್ಕರೆ ಮೊದಲಾದುವು ಬರಬೇಕು, ಕಬ್ಬಿಣ, ಹಿಂಡಿಗಳು ಹಾಗೇ ಸಿಗಬೇಕು; ಬಡವರಿಗೆ ಅನುಕೂಲವಾಗು ವುದಾದರೆ, ಅವೆಲ್ಲವುಗಳ ಹಂಚುಗೆ ನಿರ್ವಹಿಸಲು ಸಿದ್ಧನಾಗಿದ್ದಾನೆ. ಚಿಲ್ಲರೆ ವ್ಯಾಪಾರಕ್ಕಿಂತ ಈ ರೀತಿಯ ಪರೋಪಕಾರ ತುಂಬ ಲಾಭಕರ ವಾದುದು ಎಂದು ಅವನು ತಿಳಿದುಕೊಂಡಿದ್ದಾನೆ.

ಇತ್ತ ನಾಗೇಶ ಕಮ್ತಿಯರು, ದೂಜೆ ಸೋಜರುಗಳಿಗೆ ಬೇರೊಂದೇ ಚಿಂತೆ! "ಊರಲ್ಲಿ ಅಕ್ಕಿಯನ್ನು ಹತ್ತು ರೂಪಾಯಿಗೆ ಕೊಂಡು, ಮಳೆ ಗಾಲದಲ್ಲಿ ಹದಿನೈದು ಹದಿನಾರಕ್ಕೆ ಮಾರಾಟಮಾಡಿ, ಏನೋ ತಮ್ಮಿಂ ದಾದ ಉಪಕಾರ ಜನರಿಗೆ ಮಾಡಬಹುದಿತ್ತು; ಆದರೂ ಆ ಕಾಗದದ ನೋಟುಗಳನ್ನು ಏನು ಮಾಡಬೇಕು" ಎಂಬ ಚಿಂತೆ. ಅವರು ಎಷ್ಟೋ ಬಾರಿ ಚಿಲ್ಲರೆ ಗಿರಾಕಿಗಳು ಅಂಗಡಿಗೆ ಬಂದರೆ "ನಿಮ್ಮ ಕಾಗದ ಚೂರಿಗೆ (ಒಂದು ರೂಪಾಯಿ ನೋಟಿಗೆ) ನಾನು ಈ ಕೆಲಸ ಬಿಟ್ಟು ಅಲ್ಲಿಗೆ ಬರು ತ್ತೇನೆಯೇ" ಎಂದು ಬಂದವರನ್ನು ಹಂಗಿಸುವುದೂ ಉಂಟು. ಅಂಥ ಮಾತನ್ನು ಐತುಮೂಲ್ಯರಿಗೆ ಒಮ್ಮೆ ಅಂದಿದ್ದರು! ಪಾಪ-ಅಂಥ ಇಪ್ಪತ್ತು ಕಾಗದಗಳ ಚೂರುಗಳಿಗಾಗಿ ಮೂಲ್ಯರು ತಿಂಗಳ ಕಾಲ ದುಡಿದಿದ್ದರು.

ಅರೆಹೊಟ್ಟೆಯಲ್ಲಿ ದಿನಗಳನ್ನು ತಳ್ಳಿದ್ದರು. ಆದರೆ ನಾಗೇಶ ಕವ್ವಿತ್ತಿಯು ರಿಗೆ ಅವುಗಳ ಮೇಲೆ ಆದರಹುಟ್ಟೀತೆ! ಅವರಲ್ಲಿ ಕಟ್ಟುಗಟ್ಟಲೆ ಕಾಗದ ಗಳಿವೆ! ಅವನ್ನೆಲ್ಲ ಏನು ಮಾಡಲಿ, ಯಾರು ಆಸ್ತಿಮಾರುವವರಿದ್ದಾರೆ -ಎಂದು ಅವರು ಹೊಂಚುಹಾಕಿ ಕುಳಿತಿದ್ದಾರೆ!

ಇಂಥ ಗಲಭೆಗಳ ಕಾಲದಲ್ಲಿಯೇ, ಯಾರೊ ಅಂಜಿಯೋ, ಅರಿತೋ-"ನಾಗರಾಜಯ್ಯ, ನಿಮ್ಮ ಅಕ್ಕಿಯ ಲೂಟಿಗೂ, ಗಾಡಿ ಸುಡಲಿಕ್ಕೂ ಜಾನ್ಸನರೇ ಕಾರಣರು" ಎಂದು ಅವನ ಕಿವಿಯನ್ನು ಊದಿದರು. ಆ ವಿಷಯದಲ್ಲಿ ಅವರಿವರಲ್ಲಿ ಬಹಿರಂಗ ಮಾತುಕತೆಗಳಾದವು. ಜಾನ್ ಸನರು ಪರಾಕ್ರಮಕ್ಕೆ "ನಾಳೆ ನಿನ್ನ ಲಾರಿಯೂ ಸುಟ್ಟುಹೋದೀತು" ಎಂದರು. ಜಾನ್‌ಸನರು ಮಾತಾಡಿದರೆ, ಯಾರಿದ್ದಾರೆ ಯಾರಿಲ್ಲ, ಎಂಬ ಪರವೆಯಿಲ್ಲದೆ ಆಡುವ ಸ್ವಭಾವ. ಅವರ ಮಾತನ್ನು ಕೇಳಿದ ನಾಗರಾಜ, ಇನ್ನೊಮ್ಮೆ ಪೋಲೀಸಿಗೆ ದೂರು ಕೊಟ್ಟನು. ಹಿಂದಲ ಘಟನೆಗಳಾಗಿ ಬಹಳ ದಿನ ಸಂದಿದ್ದುವು. ಯಾರೂ ಆ ವಿಷಯದಲ್ಲಿ ಮುಂದುವರಿದಿರಲಿಲ್ಲ. ಕೆಲವರಿಗೆ ಹಾಗಾದುದೇ ಸಮನೆಂದು ಕಾಣಿಸಿತ್ತು. ನಾಗರಾಜನು ಜಾನ್‌ಸನರ ಮೇಲೆ ಅವನ ಇಲಾಖೆಯವರಲ್ಲೂ ದೂರು ಕೊಟ್ಟನು. ಅವೆಲ್ಲ ತನಿಖೆಗೆ ಬರುವ ಸ್ಥಿತಿಯೂ ಬಂದಿತು. ಶಾಲೆಗೆ ಇನ್ಸ್ಪೆಕ್ಟರರು ಬಂದ ಕಾಲದಲ್ಲಿ, ಬೆಪ್ಪು ಮಹಾಲಿಂಗಯ್ಯ, ಆಫೀಸರರ ಬೆದರಿಕೆಗೆ ನಿಜದ ಸಂಗತಿಯನ್ನು ಬಾಯಿಬಿಟ್ಟರು. ಆಗ್ಗೆ, ವಿಷಯವನ್ನು ಮರೆಯಿಸಲು ದಾರಿಯುಲ್ಲವೆಂದು, ಜಾನ್‌ಸನರು ನೇರಾಗಿ, ಬಂದ ಇನ್ಸ್ಪೆಕ್ಟರರೊಡನೆ "ನನಗೆ ವಾರ್ ಸರ್ವಿಸಿಗೆ ರಿಕಮೆಂಡ್ ಮಾಡಿಸಿಬಿಡಿ" ಎನ್ನುವಂತಾಯಿತು. 'ರಿಕ್ರೂಟಮೆಂಟ್ ನೆಗಳಕ್ಕೆ ಯಾರು ಬಲಿಯಾಗುತ್ತಾರೆ'-ಎಂದು ಅವರೂ ಹೊಂಚುಹಾಕಿದ್ದರು, ಅವರಿಗೂ ತುಂಬ ಸಂತೋಷವಾಯಿತು. "ಇನ್ನು ನಿಮ್ಮ ಸಂಸಾರ ಪೋಷಣೆಯ ಭಾರ ಸರಕಾರಕ್ಕೆ" ಅಂದರು ಅವರು.

ಒಂದು ತಿಂಗಳೊಳಗಾಗಿ ಜಾನ್‌ಸನರು-ಊರುಬಿಟ್ಟರು. ಮನೆಯಲ್ಲಿ ನಿರ್ಮಲೆ,ಮೂವರು ಮಕ್ಕಳನ್ನು ಬಿಟ್ಟುಹೋದರು. ಹೋಗುತ್ತ ನೆಟ್ಟಗೆ ನಾಗರಾಜಯ್ಯನ ಮನೆಗೆ ಹೋಗಿ"ನಾಗರಾಜ,ನಾನು ಯುದ್ಧಕ್ಕೆ ಸೇರಿದ್ದೇನೆ. ದೇವರ ದಯೆಯಿಂದ ಗುರಿಯಿಟ್ಟು ಗುಂಡುಹೊಡೆಯಲು

ಕಲಿತು ಬರುತ್ತೇನೆ. ನಿನಗೆ ಪ್ರತಿ ತಿಂಗಳಿಗೆ ಹತ್ತತ್ತು ರೂಪಾಯಿ ಕಳಿಸುತ್ತೇನೆ. ನೀನು ಒಂದೊಂದು ಮುಡಿ ಅಕ್ಕಿಯನ್ನು ನಮ್ಮ ಮನೆಗೆ ಮುಟ್ಟಿಸಬೇಕು; ತಪ್ಪಿದರೆ ಏನಾದೀತೆಂದು ತಿಳಿದೀತು" ಎಂದು ನಗುತ್ತ ಊರನ್ನು ಬಿಟ್ಟರು.

ಹೊರಡುವಾಗ ಮಹಾಲಿಂಗಯ್ಯ ಮಾಸ್ತರರನ್ನು ಕಂಡರು, ಐತು ಮೂಲ್ಯನವರಿಗೂ ಹೇಳಿದರು. "ಹೋಗಿ, ನಾಗರಾಜನಿಗೆ ತಿಳಿಸಿದ್ದೇನೆ! ಅವನೂ ಒಪ್ಪಿದಂತೆಯೇ!— ಯುದ್ಧ ಮುಗಿಯುವ ತನಕ, ಮುಡಿಗೆ ಹತ್ತು ರೂಪಾಯಿಗಳಂತೆ ಅವನಿಂದ ಅಕ್ಕಿ ಕೊಂಡುಕೊಳ್ಳಿ" ಎಂದು ತಿಳಿಸಿದರು. "ನೀವು ಹೇಳುವವರೇ ಮಹಾರಾಯರೆ. ನಮಗೆ ಮಾತ್ರ ಅವನ ಹತ್ತಿರ ಹೋಗಲು ಧೈರ್ಯ ಬರಬೇಕಲ್ಲ" ಎಂದರು ಅವರು. ಅದಕ್ಕೆ ಜಾನ್‌ಸನರು "ಹಾಗಾದರೆ ನಿಮಗೆ ನಾನು ಒಂದೊಂದು ಕಾಗದ ಕೊಡುತ್ತೇನೆ. ಅವನಿಗೆ ಆ ಕಾಗದವನ್ನು ರೂಪಾಯಿಯೊಂದಿಗೆ ಕಳುಹಿಸಿ ಕೊಡಿ. ಅಕ್ಕಿ ಕೊಡುತ್ತಾನೋ ಇಲ್ಲವೋ ನೋಡುವ" ಎಂದು ಉಪದೇಶಿಸಿ ಹೋದರು. ಊರನ್ನು ಬಿಡುವಾಗ ಅವರ ಮುಖ ನಗುತ್ತಿತ್ತಾದರೂ, ಮನಸ್ಸು ಮರುಗುತ್ತಿತ್ತು! "ಸಂಸಾರವನ್ನು ಕಾಣಲು ತಾನು ತಿರುಗಿ ಬರುತ್ತೇನೋ ಇಲ್ಲವೋ? ಊರಲ್ಲಿದ್ದು ಇವರನ್ನೆಲ್ಲ ಹೇಗೆ ಸಾಕಲಿ" ಎಂಬ ಹೆಚ್ಚಿನ ವ್ಯಥೆ ಅವರಿಗಿತ್ತು. ಆ ಕಷ್ಟದಿಂದ ವಿಮೋಚನೆಗೊಳ್ಳಲು ಅವರು ತಮ್ಮ ಮಾಸ್ತರಿಕೆಗೇನೆ ಶರಣು ಹೊಡೆದರು.

ಅಚ್ಚುತರಾಯ ಮೇ ರಜೆಯಲ್ಲಿ ಕುರ್ಚಿಪಳ್ಳದಲ್ಲಿರುವಾಗಲೇ ಜಾನ್‌ಸನರ ಕಾಗದವೊಂದು ಬಹುಕಾಲದ ಬಳಿಕ, ಆತನಿಗೆ ಬಂದಿತು. ಅದರಲ್ಲಿ "ಅಚ್ಚುತ ನೀನು ತಿರುಗಿ ಕಡಬಕ್ಕೆ ವರ್ಗಮಾಡಿಕೊಂಡರೆ, ನಾನು ನಿನಗೆ ರಿಯಾಯತಿ ದರದಲ್ಲಿ ಅಕ್ಕಿ ಕೊಡಿಸುತ್ತಿದ್ದೆ! ಈಗ ನಾಗರಾಜ ನಾನು ಹೇಳಿದಂತೆ ಇದ್ದಾನೆ" ಎಂದು ಪರಾಕ್ರಮಪೂರ್ಣವಾದ ನುಡಿಗಳನ್ನು ಬರೆದಿದ್ದರು. ಅದರ ಅರ್ಥ ಅಚ್ಚುತ ಊರಿಗೆ ಬಂದು, ಕಡಬಕ್ಕೆ ಹೋಗಿ ತಿಳಿಯುವ ತನಕ ಅವನಿಗೆ ಆಗಲಿಲ್ಲ. ಜಾನ್‌ಸನರ ಮದ್ದು, ನಾಗರಾಜನಿಗೆ ನಾಟದೆ ಹೋಗಲಿಲ್ಲ. ಮಹಾಲಿಂಗಯ್ಯನವರು ಪರೀಕ್ಷಾರ್ಥವಾಗಿ, ಅದೇ ತಿಂಗಳಲ್ಲಿ ಹತ್ತು ರೂಪಾಯಿಗಳನ್ನು

ಕೊಟ್ರು, ಜಾನ್‌ಸನರ ಚೀಟಿಯೊಡನೆ ನಾಗರಾಜಯ್ಯನ ಮನೆಗೆ ಜನ ಕಳುಹಿಸಿದರು! ಅಕ್ಕಿ ಸಿಕ್ಕಿತು-"ಹೋಗಲಿ; ಶಾಲೆ ಮಾಸ್ತರರಲ್ಲವೇ?" -ಎಂದು ಕೊಟ್ಟನಂತೆ! ಆ ಕನಿಕರವು, ಹಿಂದೆ ಮಾಲಿಂಗಯ್ಯನವರೇ, ಬೇಡಿದಾಗ ಎಲ್ಲಿಗೆ ಹೋಗಿತ್ತೋ.

* * * * *

ಅಚ್ಯುತನಿಗೆ ಈಗ ಬಂಡಾಡಿಗೆ ವರ್ಗವಾಗಿದೆ. ತನ್ನಂತೆ ಆದುದಲ್ಲ; ಅವನು ಪ್ರಯತ್ನಪೂರ್ವಕವಾಗಿ ಆಗುವಂತೆ, ಮಾಡಿಸಿಕೊಂಡದ್ದು. ಅನಂತರ ಆತ ಕಡಬಕ್ಕೆ ಹೋದಾಗ ಮೇಲಿನ ಎಲ್ಲ ಕತೆಗಳನ್ನು ಕೇಳಿ "ಅಯ್ಯೋ. ಜಾನ್‌ಸನರ ತಾವಿಗೇನೆ ನಾನು ಬರಬಹುದಿತ್ತು. ನಾನೇ ಬೇಡವೆಂದುಬಿಟ್ಟೆ; ನಾಗರಾಜನಿಂದ ಅಕ್ಕಿಯೂ ಸಿಗುತ್ತಿತ್ತು." ಎಂದು ತೋರಿತು. ಆದರೂ ಕಡಬವೆಂದರೆ ಅವನಿಗೆ ಭೀತಿ ಹಿಡಿದಿತ್ತು. ಮರುಗಳಿಗೆ 'ಅದೇ ಸುಖ. ಬಂಡಾಡಿಗೇ ಹೋಗುವುದೊಳಿತು'— ಎಂದುಕೊಂಡ.

ಆ ಮೇರಜೆಯಲ್ಲಿ ಅವನಿಗಾಗಲೀ,ನಾರಾಯಣರಾಯರಿಗಾಗಲೀ ವಿಶ್ರಾಂತಿ ದೊರೆಯಲಿಲ್ಲ. ಅದು ಶರೀರಕ್ಕೆ ದೊರೆತರೂ ಮನಸ್ಸಿಗೆ ಸಿಗುವಂತೆಯೇ ಇರಲಿಲ್ಲವಷ್ಟೆ. ಅವರು, ನಿತ್ಯವೂ ಸಾವನ್ನು ನೆನೆಯುತ್ತ ಕುಳಿತಿರಲಾರದೆ, ಆ ಊರನ್ನು ಬಿಟ್ಟರು. ಅದೇ ಊರಲ್ಲಿರುವುದರಿಂದ ಮನಸ್ಸು ಕೆಟ್ಟೀತೆಂದು, ವರ್ಗವನ್ನು ಅಪೇಕ್ಷಿಸಿಕೊಂಡು, ಬೋರ್ಡಿಗೆ ಪತ್ರ ಬರೆದರು. ಅಚ್ಯುತರಾಯನೂ ಅವರೂ ಜತೆಯಲ್ಲಿ ತಮ್ಮ ಅಧ್ಯಕ್ಷರನ್ನು ಕಾಣಹೋದರು. ಇವರಿಗಾದ ಕೊರಗನ್ನು ಕೇಳಿದ ಮೇಲೆ, ಅವರ ಅಪೇಕ್ಷೆಯನ್ನು ನಿರಾಕರಿಸಲಾರದೆ,'ಎಲ್ಲಿಗೆ ನಿಮಗೆ ವರ್ಗವಾಗಬೇಕು mutual transfer ಆಗುವಂತೆ, ಯಾರನ್ನಾದರೂ ಮಾತನಾಡಿಸಿದರೆ ಸುಲಭವಿತ್ತು" ಎಂದರು ಅಧ್ಯಕ್ಷರು. "ಹಾಗಾಗದರೆ ವಿಟ್ಲ ಶಾಲೆಯಲ್ಲಿ ಕುರ್ಚಿಪಳ್ಳದವರು ಒಬ್ಬರಿದ್ದಾರೆ. ಅವರನ್ನು ನನ್ನನ್ನು ಬದಲಿಸಿದರೆ ಆಗಬಹುದಿತ್ತು" ಎಂದರು ನಾರಾಯಣರಾಯರು. "ಆಗಲಿ" ಎಂದು ಅವರಿಗೆ ಅಪ್ಪಣೆ ದೊರೆಯಿತು.

ಅಚ್ಯುತ "ನನಗೆ ಊರಿಗೆ ಸಮೀಪವಾಗಿ ಎಲ್ಲಾದರೂ ಸರಿಯೇ, ಊರೇ ಬೇಕೆಂದಿಲ್ಲ. ಮನೆಯಲ್ಲಿ ಕಾಯಿಲೆಯಾದಾಗ,ಯಾರೂ ಹತ್ತಿರ

ಬರಲಾರದ ಊರಲ್ಲಿ ಹೇಗಿರಲಿ" ಎಂದು ಬೇಡಿದನು. "ಕಡಬ ಆಗ ದೇನು......ಅಲ್ಲೊಂದು ಸ್ಥಾನ ಖಾಲಿಯಾಗಿದೆ" ಎಂದು ತಿಳಿಸಿದರು. ಕಡಬ ಇದ್ದು ನೋಡಿದ ಊರು"....ಎಂದನು ಅಚ್ಯುತ. ಆಗ ಕಡಬ ದಲ್ಲಿ ಜಾನ್‌ಸನರು ತೋರಿದ ಪ್ರತಾಪ ಅವನಿಗೇ ತಿಳಿದಿರಲಿಲ್ಲ. ಆತ "ನನಗೆ ಎಲಿಮೆಂಟರಿ ಶಾಲೆಯೂ ಆದೀತು" ಎಂದು ಕೇಳಲು, ಅವರು ಅದಕ್ಕೆ ಒಡಂಬಟ್ಟರು. "ಆಗಲಿ ನೋಡುವ" ಎಂದು ಅಭಯ ದೊರೆ ತಾದ ಬಳಿಕ, ಅವರಿಬ್ಬರೂ ಅಲ್ಲಿಂದ ಹೊರಟರು. ನಾಲ್ಕಾರು ದಿನ ದೊಳಗಾಗಿ ನಾರಾಯಣರಾಯರಿಗೆ ವಿಟ್ಲಕ್ಕೆ ವರ್ಗವಾಯಿತು! ಅದು ಅವರ ಸ್ವಂತ ಊರಿಗೆ ಸಮೀಪವಾಗಿತ್ತು. ಆದರೆ ಅವರಿಂದ ತಾನು ತಿರುಗಿ ದೂರವಾಗುವ ಸಂಧಿಯು ಅಚ್ಯುತನಿಗೆ ಹಿತವೆನಿಸಲಿಲ್ಲ. ಮಾಡ ಬೇಕೇನು? ಅವನು ಅದೇ ಸಮಯದೊಳಗಾಗಿ, ಬಂಡಾಡಿ ಶಾಲೆಯ ಮುಖ್ಯ ಅಧ್ಯಾಪಕನಾಗಿ ವರ್ಗವಾದ. ಕುರ್ಚಿಪಳ್ಳದ ನೀರಿನ ಋಣ ಅವರಿಬ್ಬರಿಗೂ ಹರಿಯಿತು.

ಬಂಡಾಡಿ 'ಎಲ್ಲಿ' 'ಏನು' ಎಂದು ಯೋಚಿಸಿ, ನಕ್ಷೆ ನೋಡಿ ತಿಳಿಯಬೇಕಾಯಿತು. ಉಪ್ಪಿನಂಗಡಿಗೆ ಎಲ್ಲೋ ಸಮೀಪವಾಗಿರ ಬೇಕೆಂದು ತಿಳಿಯಿತು. ತುಸು ಸಂತೋಷವೇ ಆಯಿತು. "ಆಗಲಿ ಸಮೀಪ ಒಬ್ಬ ಗುರುತಿನವನಿದ್ದಾನೆ." ಎಂದು ಆಸೆಯಿಂದ ಆತ ಹೊರ ಟನು. ಇಬ್ಬರು ಗೆಳೆಯರು ಸೇರಿ ಒಂದು ರಾತ್ರಿ ಎತ್ತಿನ ಗಾಡಿಯಲ್ಲಿ ತಮ್ಮ ತಮ್ಮ ಸಾಮಾಗ್ರಿಗಳನ್ನು ತುಂಬಿಸಿದರು. ಅದೇ ಗಾಡಿಯಲ್ಲಿ ನಾರಾಯಣರಾಯರ ಮಕ್ಕಳನ್ನು ಕುಳ್ಳಿರಿಸಿ, ದೊಡ್ಡವರು ಕಾಲುನಡೆ ಯಿಂದ ಸಾಗಿದರು.

ತನ್ನ ಗುರುವನ್ನೂ, ಆತ್ಮೀಯ ಗೆಳೆಯರನ್ನೂ ವಿಟ್ಲದಲ್ಲಿ ಬಿಟ್ಟು ಅಚ್ಯುತ ಪುತ್ತೂರಿಗೆ ಸಾಗಬೇಕು. ವಿಟ್ಲಕ್ಕೆ ಗಾಡಿ ಬರುತ್ತಲೇ ಮನೆಯ ಸಾಮಾನುಗಳನ್ನಿಳಿಸಿ, ಆತ ಯೋಚಿಸತೊಡಗಿದನು. ಮೇ ತಿಂಗಳ ಕೊನೆಗೆ ಎರಡು ಮೂರು ದಿನ ಉಳಿದಿತ್ತು."ಪಂಜಕ್ಕೆ ಹೇಗೆ ಹೋಗಲಿ?" ಎಂದು ಅಧೀರನಾಗಿ ಸಾಮಗ್ರಿಗಳನ್ನು ನಾರಾಯಣರಾಯರಲ್ಲಿ ಬಿಟ್ಟು, ತಾನೊಬ್ಬನೇ ಬಂಡಾಡಿಗೆ ಹೋದನು.ಉಪ್ಪಿನಂಗಡಿಗೆಹೋಗಿ,ಅಲ್ಲಿಂದ ಹೋಗಬೇಕಾಯಿತು. ಈತ ಹೋದಾಗ, ಅವನ ಹಳೆಯ ಗೆಳೆಯ

ಊರಲ್ಲಿರಲಿಲ್ಲ. ಆದರೂ ಶಾಲೆಗೇನೋ ಹೋಗಿ, ಅದರ ಅಧಿಕಾರ ವನ್ನು ವಹಿಸಿದ. ಒಟ್ಟು ಇಬ್ಬರು ಉಪಾಧ್ಯಾಯರು, ಮೂವತ್ತು ಮಕ್ಕಳ ಮಹಾ ಶಾಲೆಯದು. "ಅಲ್ಲಿ ತಿಂಗಳ ಕಾಲ ದುಡಿದರೆ, ಮಳೆ ಗಾಲದ ರಜೆ ಬರುತ್ತದೆ" ಎಂದುಕೊಂಡು, ಉಪ್ಪಿನಂಗಡಿಯಲ್ಲಿ ವಾಸ. ನಿತ್ಯ ನಾಲ್ಕು ಮೈಲಿನ ಪ್ರವಾಸವಾಡಿ ಆ ತಿಂಗಳನ್ನು ಕಳೆದುದಾಯಿತು. ಮಳೆಗಾಲದ ರಜೆಯು ಕಳೆದ ಬಳಿಕ, ತನ್ನ ಸಂಸಾರವನ್ನು ಬಂಡಾಡಿಗೆ ತರಬೇಕೆಂದು ನಿರ್ಧಾರವಾಡಿದ; ಉಪ್ಪಿನಂಗಡಿ ಬಂಡಾಡಿಗಳಲ್ಲಿ ಆತ ವಾಸಿಸಿದ ಒಂದು ತಿಂಗಳ ಕಾಲ ಅವನಿಗೆ ವಾಮುಂಜಿಯ ದರ್ಶನ ವಾಗಲಿಲ್ಲ. ಅವನು ಬಂದಾನೆಂದು ಹಂಬಲಿಸಿ ನಿರಾಶನಾಗಿ, ರಜೆ ಬರು ತ್ತಲೇ ತನ್ನ ಊರಿಗೆ ಹೊರಟುಹೋದನು.



## ೨೦ನೆಯ ಅಧ್ಯಾಯ

ಅಚ್ಯುತ ರಜೆ ದೊರೆತೊಡನೆಯೇ ಪಂಜಕ್ಕೆ ಹೋದುದಾಯಿತು. ತಿರುಗಿ ಒಂದು ತಿಂಗಳ ಕಾಲ ಅವನಿಗೆ ತನ್ನವರೊಡನೆ ವಾಸಿಸುವ ಅವ ಕಾಶ ದೊರೆಯಿತಾದರೂ, ಮನಸ್ಸು ಏನೂ ನೆಮ್ಮದಿಯನ್ನು ತಾಳಿರ ಲಿಲ್ಲ. ನಾರಾಯಣರಾಯರ ಮಕ್ಕಳ ಮರಣದ ಬರೆಯು, ಅವನ ಅಂತಃಕರಣದ ಮೇಲೆ ತುಂಬ ನೋವನ್ನು ಉಂಟುಮಾಡಿತ್ತು. ಮೇಲೆ ತನ್ನ ಜೀವನದ ಸಮಸ್ಯೆಗಳು—ಅವನನ್ನು ಎಂದಿನಿಂದಲೂ ಚಂಚಲ ನನ್ನಾಗಿ ಮಾಡಿದ್ದುವು. ಅವು ಎಲ್ಲವುಗಳನ್ನು ಹೊತ್ತು ಅಲೆಯುವಾಗ 'ತಾನು ಮುಂದೆ ಬಂಡಾಡಿಗೆ ಹೋಗಬೇಕು, ತಿರುಗಿ ಅಲ್ಲಿ ಹೇಗೆ ಜೀವನ ಸಾಗಿಸಬೇಕು'—ಎಂಬ ವಿಚಾರವು, ಹಲವು ಭೀಕರ ತರಂಗಗಳನ್ನು ಅವನ ಮನಸ್ಸಿನ ಕಡಲಲ್ಲಿ ಎಬ್ಬಿಸಿದುವು. ಆತ ತನ್ನ ಹಳೆಯ ನೆನಪು ಗಳನ್ನು ತಂದುಕೊಳ್ಳುತ್ತಾನೆ; ಶಾಲಾ ವಿದ್ಯಾರ್ಥಿಯಾಗಿರುವ ಆ ದಿವಸ ಗಳು, ಎಷ್ಟು ಸೊಗಸಿನವು, ಎಂಥ ಎಳೆ ಹಸುರಿನ ಚೆಲುವಿಕೆ ಅವಕ್ಕೆ! ಅವುಗಳಿಂದ ಜೀವನದಲ್ಲಿ ಎಷ್ಟು ಹುರುಪು ಉಂಟಾಗಿತ್ತು; ನಾಳಿನ ಸವಿಗನಸುಗಳು ಎಷ್ಟು ಲಘುವಾಗಿ, ಲಲಿತವಾಗಿ, ಆ ರಾಜ್ಯದಲ್ಲಿ ಕುಣಿ

ದಾಡಿದುವು. ಅನಂತರ ತೊಡಗಿದ ತನ್ನ ಜೀವನಯಾತ್ರೆ ಬರಿಯೊಂದು ಅರಣ್ಯವಾಸದಂತಾಗಲಿಲ್ಲವೇ? ರಾಮನಿಗೆ ಬಳಲಿಕೆ ಬಂದರೆ, ಅದನ್ನು ಹೋಗಲಾಡಿಸಲು ಲಕ್ಷ್ಮಣನಿದ್ದನಂತೆ. ಇವನ ಪಾಲಿಗೆ ಇದ್ದೊಬ್ಬಳು ರುಕ್ಮಿಣಿಯು, ಲಕ್ಷ್ಮಣನ ಸ್ಥಾನಕ್ಕೆ ಈಗ ಬರಲಾರಳು. ಅವಳೇ ತನ್ನ ಶರೀರದ ಬೇನೆಗಳಿಗೆ ತುಂಬ ಬಲಿಯಾದವಳು. ಜತೆಗೆ ಕಿರಿಗೂಸುಗಳ ಪರಿವಾರವಿದೆ. ಅವುಗಳನ್ನೆಲ್ಲ ಕಂಡಾಗಲೆಲ್ಲ 'ಈ ಮೊಗ್ಗುಗಳು ಚಿಗುರಿನಲ್ಲೇ ಉರಿಬಿಸಿಲಿಗೆ ಹಿಡಿದಂತಾಗಿವೆ; ನಾಳೆ ಇವು ಚೆನ್ನಾಗಿ ಬೆಳೆದು ಅರಳುವುದುಂಟೆ? ಮುಂದೆ ಅವು ಹೇಗೆ ಚೆಲುವುಗೊಂಡಾವು' ಎಂಬ ಅನೇಕ ವಿಚಾರ ವೈಪರೀತ್ಯಗಳು ಉಂಟಾಗುತ್ತವೆ. ಇತ್ತೀಚೆಗೆ "ಈ ಸಂಸಾರದ ಯುದ್ಧಕ್ಕೆ ತಾನೊಬ್ಬನೇ ಸನ್ನದ್ಧನಾಗಬೇಕು? ಇದರಲ್ಲಿ ಏನು ಪುರುಷಾರ್ಥವಿದೆ?" ಎಂದು ತೋರುತ್ತದೆ.

ಅವನು ಮಂಗಳೂರಲ್ಲಿ ಓದುತ್ತಿದ್ದಾಗ, ಕಂಡ ಭವಿಷ್ಯದ ನೂರಾರು ಕನಸುಗಳು, ಜನಸೇವೆಯ ಕನಸುಗಳು, ಸಾಹಿತ್ಯದ ಕನಸುಗಳು ಈಗೆಲ್ಲಿ? ಅವನ್ನು ಬಾಳುವೆಯಲ್ಲಿ ತಂದು ನಟ್ಟು, ಚಿಗುರಿಸಿ, ಸುಖ ಕಂಡುಕೊಳ್ಳುವೆನೆಂದಿದ್ದ ಅವನ ಆಸೆಗಳೇನಾದುವು? ಜೀವನ ಬೆಳೆಯುತ್ತ ಬಂದು, ಹೂಬಿಡುವ ಉದ್ಯಾನವಾಗುವ ಬದಲು, ಈಗ ನೂರಾರು ಮಿಡತೆಗಳಿಗೆ ಆಹಾರವಾಗಿದೆ. ಇದರಿಂದ ಮನಸ್ಸಿನಲ್ಲಿ-'ಬಾಳುವುದೇ ಏಕೆ? ಏನಿದೆ ಬಾಳ್ವೆಯಲ್ಲಿ! ಬರಿಯ ಅಸ್ಥಿ ಮಾಂಸಗಳನ್ನು ಕಾಪಾಡಲು, ಒಂದು ತುತ್ತಿನ ಚೀಲವನ್ನು ತುಂಬಲು, ಇಷ್ಟೆಲ್ಲ ಹೋರಾಟ ಬೇಕೇ-ಎಂಬ ಭೀಕರ ಯೋಚನೆಗಳನ್ನು ತಳೆಯುತ್ತಾನೆ. ತನ್ನ ಜೀವನವೊಂದೇ ಅವನಿಗೆ ಕಣ್ಣುಕತ್ತಲು ತರುವ ಯೋಚನೆಗಳನ್ನು ಬರಮಾಡುತ್ತವೆ. ಇನ್ನು ತನ್ನ ಬಳಿಕ, ಆ ನಾಲ್ಕು ಕೂಸುಗಳು ಹೇಗಿರಬೇಡ? ತನ್ನಿಂದಾಗದ ಹೋರಾಟ, ಆ ಒಣಕಲು ಜೀವಿಗಳು ಬೆಳೆದ ಮೇಲೆ, ಮಾಡುವಂತಿದೆಯೇ? ಅವನ ಮನಸ್ಸು ಎಲ್ಲೆಲ್ಲೋ ಓಡುವುದು. ಅದನ್ನೆಲ್ಲ ನೆನೆದು ಬಾಳ್ವೆಗಿಂತ ಸಾವು ಸವಿಯಾದುದು-ಎಂದು ಮನಸ್ಸು ಹೇಳತೊಡಗುತ್ತದೆ. "ಜೀವ--ಜೀವಕ್ಕೆ ನೆರವಾಗದ ಬೆಂಗಾಡಿನಲ್ಲಿ ಸಾವೇ ಸೊಗಸಲ್ಲವೆ" ಎಂಬ ತೀರ್ಮಾನಕ್ಕೆ ಆತ ಬರುತ್ತಾನೆ.

ಪಂಜದ ಮನೆಯಲ್ಲಿ ಅತ್ತಿತ್ತ ಅಡ್ಡಾಡುವಾಗ, ಅವನ ಹಿಂದಿನ

ಕಾಲದ ಮಾನದನ್ನೆಯಾದ, ಸುಬ್ಬಿಯು ಬಳಿಯಲ್ಲಿರಬೇಕೆಂದು ಕಾಣಿಸಿ ಕೊಂಡುದೂ ಉಂಟು. ಇವನನ್ನು ಆಕರ್ಷಿಸಲು, ತಿರುಗಿ ಒಲಿಸಲು ಅವಳು ಯತ್ನಿಸಿದ್ದುಂಟು. ಆದರೆ ಅವಳ ಸ್ಥಾನ ಅವನಿಗೆ ಬರಿಯ ನೆರ ಳಿನಂತಿತ್ತು. ಹಿಡಿತದಲ್ಲಿಲ್ಲದ ಛಾಯೆಯಾಗಿತ್ತು. ಯಾವುದೂ ಅವನ ಬದುಕನ್ನು ಇನ್ನು ಬೆಳಗಿಸಲಾರದು; ಗಳಿಗೆಯ ಸುಳ್ಳು ಸಂತೋಷ ವನ್ನೂ ಹುಟ್ಟಿಸಲಾರದು.

ಒಂದು ದಿನ,ಮನಸ್ಸು ಶಾಂತವಾಗಿದ್ದಿರಬೇಕು-ಮನೆಯ ಅಂಗಳ ದಲ್ಲಿ ಅಡ್ಡಾಡುವಾಗ ಸುಬ್ಬಿಯು ನೆನಪಾಯಿತು. ನೆಟ್ಟಗೆ ತಾಯಿ ಬಳಿಗೆ ಹೋಗಿ, "ಅಮ್ಮ, ಸುಬ್ಬಿ ಕೆಲವು ದಿನಗಳಿಂದ ಕಾಣಿಸುವುದಿಲ್ಲವಲ್ಲ" ಎಂದ ಆತ.

"ಮಾಣಿ-ಅವಳು ಓಡಿಹೋಗಿ ಒಂದು ವಾರವಾಯಿತು. ಅವಳು ಯಾಕೆ ಬಂದಳೋ, ಯಾಕೆ ಹೋದಳೋ, ಅವಳಿಗೇನೆ ಗೊತ್ತು ಯಾರ ಬೆನ್ನ ಹಿಂದೆ ಹೋದಳೋ!"

"ಯಾರ ಬೆನ್ನ ಹಿಂದೆ ಹೋದಳೋ?"

"ಹೌದು ಮಾಣಿ; ಅವಳು ಇಲ್ಲಿಗೆ ಬಂದಿದ್ದಾಳೆಂದು ಕೇಳಿ, ಕೊಂಬಾರಿಂದ ಅವಳ ಗಂಡ ಒಂದು ದಿನ ಬಂದಿದ್ದ. ಅವನಿಗೆ ಇವ ಳೆಂದರೆ ಜೀವ. ಇವಳಿಗೆ ಗಂಡನೂ ಬೇಡ; ಯಾರೂ ಬೇಡ. ಏನಾ ಯಿತೋ ಅವನು ಬಂದ: 'ಅಮ್ಮ ನೀವಾದರೂ ಅವಳಿಗೆ ಬುದ್ಧಿ ಹೇಳಿ. ಯಾಕೆ ಅವಳು ಹೀಗೆ ಮಾಡುತ್ತಾಳೆ' ಎಂದು ಬೊಬ್ಬಿಟ್ಟ."

"ಅವನು ಬೇರೆ ಮದುವೆಯಾಗಿದ್ದಾನಲ್ಲವೇ?"

"ಮದುವೆಯಾಗಿದ್ದ; ಆದರೆ ಅವಳೂ ಸತ್ತು ಹೋದಳಂತೆ. ಅವನ ಆ ಎರಡನೆಯ ಹೆಂಡತಿಯೂ."

ಸರಿ, ಅಚ್ಯುತನ ಕುತೂಹಲ ಅಲ್ಲಿಗೇನೆ ನಿಂತಿತು. ಬರಿಯ ಹತ್ತು ದಿನಗಳ ಕೆಳಗೆ, ಅವನೇ ಯಜಮಾನನಾಗಿ ಕುಳಿತು. ಮೂಕಾಂಬಿಕೆಯ ಮದುವೆಯಲ್ಲಿ ಅಡ್ಡಾಡುತ್ತಿದ್ದನು. ಅವನ ತಾಯಿಯೂ ಅಕ್ಕಂದಿರೂ ಪ್ರಯಾಸಪಟ್ಟು ಹೂಡಿದ ಆ ನೆಂಟಸ್ತಿಕೆಗೆ ಇವನು ಬರಿಯ ಸಾಕ್ಷಿ ಯಾಗಿದ್ದ! ಅವರೆಂದರೆ ಮಾಡುತ್ತಿದ್ದನಲ್ಲದೆ-ತನಗೇ ಕೆಲಸದ ಪರಿವೆ ಯಿದ್ದು ಮಾಡುತ್ತಿರಲಿಲ್ಲ. ಲಕ್ಷ್ಮಮ್ಮನೇ "ಮಗು ಏನನ್ನು ಜಾನಿಸುತ್ತೀ?

ಹೀಗೆ ನೀನು ಯೋಚನೆಮಾಡುತ್ತ, ತಲೆತಗ್ಗಿಸಿ ಕುಳಿತರೆ. ಹುಚ್ಚು ಹಿಡಿದೀತಲ್ಲ" ಎನ್ನುವಳು. ಅವಳಿಗೂ ಮಗನ ದುರ್ದಸೆ ಕಂಡು, ಮರುಕ ಉಂಟಾಗುತ್ತದೆ. ಸೀತೆಗೂ ಆಶ್ಚರ್ಯವೇ—ಅಚ್ಯುತ ಹೀಗೆ ಹೇಗಾದನೆಂದು! ಅದನ್ನೇ ಅವಳು ರುಕ್ಮಿಣಿಯೊಡನೆ ಚರ್ಚಿಸುವುದುಂಟು! ಆದರೆ ಸೀತೆಯಾಗಲೀ, ರುಕ್ಮಿಣಿಯಾಗಲೀ, ಲಕ್ಷ್ಮಮ್ಮನಾಗಲೀ ಏನು ಬಲ್ಲರು-ಅವನ ಅಂತರಂಗದಲ್ಲಿ ಏಳುತ್ತಿದ್ದ ಬಿರುಗಾಳಿಗಳನ್ನು

ಮುಂಕು ಮುಂಕಾಗಿ ಅವನ ರಜೆಯು ದಿನಗಳು ಸಾಗಿದುವು. ಕೊನೆಗೊಂದು ದಿನ, "ಅಮ್ಮ, ಇನ್ನು ನಾನು ಹೊರಡುತ್ತೇನೆ. ಶಾಲೆ ನಾಡಿದ್ದೋ, ಆಚೆನಾಡಿದ್ದೋ ಶುರು ಎಂದು ಕಾಣುತ್ತದೆ. ಬರುವಾಗಲೇ ಒಂದು ಮನೆ ಗೊತ್ತುಮಾಡಿ ಬಂದಿದ್ದೇನೆ; ಹೇಗಾದರೂ ಒಂದು ಸಾರಿ ಹೋಗಿ ಅಲ್ಲಿಗೆ ಬೀಳುತ್ತೇನೆ" ಎಂದ.

ಮಗು, ಯಾರನ್ನೆಲ್ಲ ಕರೆದುಕೊಂಡು ಹೋಗುತ್ತೀ" ಎಂದಳು ತಾಯಿ.

"ಎಲ್ಲರನ್ನು; ನೀನು ಬಂದರೆ ನೀನು; ಮಕ್ಕಳು. ರುಕ್ಮಿಣಿ-"

"ನಾನಿರುತ್ತೇನೆ ಮಗು, ಮಕ್ಕಳೂ ಇಲ್ಲಿಯೇ ಇರಲಿ. ರುಕ್ಮಿಣಿಯೂ ನೀನೂ ಇಬ್ಬರೇ ಹೋಗಿ. ನಿಮಗೆ ಅಲ್ಲಿ ಕಷ್ಟವಾದೀತು-"

"ಅಮ್ಮ, ಇರುವಷ್ಟು ದಿನ ಮಕ್ಕಳನ್ನು ಕೂಡಿರುತ್ತೇನೆ! ಅವನ್ನು ಕಂಡಾದರೂ ಒಂದು ಸಂತೋಷವಾಗುವುದಿದೆಯಲ್ಲ."

"ಯಾಕೆ? ಎರಡು ತಿಂಗಳ ನಂತರ ಕರೆದುಕೊಂಡು ಹೋದರೆ ಸಾಲದೇ"

"ಅಮ್ಮ ಹಾಗೆ ಬಂದು ಹೋಗಲು ಮೋಟರೂ ಇಲ್ಲ. ಕಾಸೂ ಇಲ್ಲ. ಹೀಗಿದ್ದ ಕಾಲದಲ್ಲಿ ಎರಡು ಎರಡು ತಿಂಗಳಿಗೆ ಯಾರು ಬಂದು ಹೋಗಬೇಕು. ಅಮ್ಮ. ನೀನೂ ಬಂದುಬಿಡು."

"ಮಾಣಿ, ಮೂಕಿಯ ಗಂಡ ಇನ್ನೂ ಸಣ್ಣವ. ಅವನು ಇಲ್ಲಿಗೆ ಬಂದು ಸೇರಿಕೊಳ್ಳಬೇಕು. ಅಲ್ಲಿಯ ವರೆಗೆ ನಾನಿಲ್ಲಿ ಇರಬೇಡವೇ!"

"ಹೂಂ" ಎಂದನು ಅಚ್ಯುತ.

ಮೂಕಾಂಬಿಕೆಯ ಸಲುವಾಗಿ ಮನೆ ಅಳಿಯನನ್ನು ಹುಡುಕಿದ್ದರು ಅವರು. ಸೀತೆಯ ತೀರ ಕಿರಿಯ ಕೂಸು, ಪುಟ್ಟ, ದೊಡ್ಡದಾ

ಗುವ ತನಕ "ಮನೆಗೊಂದು ಗಂಡು ಜೀವ ಧೈರ್ಯಕ್ಕಾದರೂ ಬೇಡವೆ" ಎಂದು. ಅವೆಲ್ಲ ವಿಚಾರಗಳನ್ನು ತಿಳಿದವನೇ ಅಚ್ಯುತ. ಅವರೆ ಅವನಿಗಿಷ್ಟೇ ಅನಿಸುತ್ತದೆ: "ಯಾರು ಎಲ್ಲೇ ಇರಲಿ, ಬದುಕಿನಲ್ಲಿ ಸಿಗುವ ಸುಖ ಅಷ್ಟೇನೆ" ಎಂದು. ಆ ತೀರ್ಮಾನಕ್ಕೆ ಯಾರು ಸಮಾಧಾನ ಹೇಳಬಲ್ಲರು!

ಮಳೆಗಾಲವು ಅಬ್ಬರದಿಂದ ಗುಡ್ಡ, ಬಯಲು, ಹಳ್ಳ, ಕೊಳ್ಳಗಳನ್ನು ಮುದ್ದಿಕ್ಕುತ್ತಿರುವಾಗಲೇ ತೊಯ್ದು, ನೆನೆದು, ಅಚ್ಯುತ ಪರಿವಾರ ಸಮೇತನಾಗಿ ಬಂಡಾಡಿಯನ್ನು ಸೇರಿದ. ಈ ಬಾರಿ ಉಪ್ಪಿನಂಗಡಿಯಲ್ಲಿ ಮಾಮುಂಜಿಯು ದೊರಕಿದುದರಿಂದ, ಅವನ ಗುರುತು ಪರಿಚಯಗಳಿಂದ ತನ್ನ ಬಿಡಾರ ಸ್ಥಾಪನೆ ಮಾಡುವುದು ಕಷ್ಟವಾಗಲಿಲ್ಲ.

ಬಂಡಾಡಿಯು ಅವರ ಮನೆ—ಶಾಲೆಗೆ ಸಮೀಪವಾಗಿ, ಒಂದು ಬಯಲಿನ ಅಂಚಿನಲ್ಲಿತ್ತು. ಒಂದು ಸಾಮಾನ್ಯ ಮನೆಯನ್ನು ಎರಡು ಪಾಲು ಮಾಡಿದ್ದರು. ಒಂದು ಭಾಗ ಹೆಡ್‌ಮಾಸ್ತರರಾದ ಅವನಿಗೆ; ಇನ್ನೊಂದು ಪಾಲು, ಮನೆಯ ಯಜಮಾನರೂ ಅವನ ಸಹಾಯಕ ಉಪಾಧ್ಯಾಯರೂ ಆದವರದು. ಇವನ ಪಾಲಿನ ಮೂರು ಕೋಣೆಗಳಲ್ಲಿ—ಗಂಡ ಹೆಂಡಿರು, ನಾಲ್ವರು ಮಕ್ಕಳು ಬಿಡಾರ ಹೂಡಿದರು. ಆ ಮನೆಯ ಉಳಿದ ಇನ್ನೆರಡು ಕೋಣೆಗಳಲ್ಲಿ, ಅವರ ಉಪಾಧ್ಯಾಯ ಮಿತ್ರರಾದ ನಾಗಪ್ಪಯ್ಯನವರು, ಹೆಂಡತಿ,ಐವರು ಮಕ್ಕಳು ಸೇರಿದ್ದರು. ದಿನನಿತ್ಯ, ಮಳೆಯ ಅಬ್ಬರ, ಗಾಳಿಯ ಬೊಬ್ಬಾಟ ಎಷ್ಟೇ ಇರಲಿ—ಅವನ್ನು ಮರೆಯಿಸುವಷ್ಟು ಮಕ್ಕಳ ಕೂಗು ಕೋಲಾಹಲಗಳು ಅಲ್ಲಿ ಕೇಳುವಂತಿತ್ತು. ಕೂಗು, ಬೊಬ್ಬೆ, ನಗು, ಅಳುಗಳ ನಿತ್ಯಸಂತೆಯಾಗಿದ್ದುವು ಆ ಬಿಡಾರಗಳು.

ನಾಗಪ್ಪಯ್ಯನವರು, ಅಚ್ಯುತನಿಗಿಂತ ನಾಲ್ಕೈದು ವರ್ಷಕ್ಕೆ ಹಿರಿಯರು; ಅವರದು ಕುಳ್ಳಾದ ತೆಳ್ಳಗಿನ ಶರೀರ. ಬರಿ ಎಲುಬಿನ ಗೂಡಿನಂತಿರುವ ದೇಹ. ತಲೆ ಕೂದಲು ಮದುವೆಯ ಕಾಲಕ್ಕೇನೆ ನೆರೆತಿರಬೇಕು. ಅವರು ಓದಿದ್ದೂ ಕಡಿಮೆ. ಅವರ ಇಪ್ಪತ್ತು ರೂಪಾಯಿ ವೇತನದಿಂದ ಅಷ್ಟೆಲ್ಲ ಜೀವಿಗಳ ಪೋಷಣೆ ಸಾಗಬೇಕಿತ್ತು. ಅವರನ್ನು ಕಂಡು ಅಚ್ಯುತ ಎಷ್ಟೋ ಬಾರಿ ರುಕ್ಮಿಣಿಯೊಡನೆ—"ರುಕ್ಮಿಣಿ, ಅವರಿಗಿಂತ ನಾವೇ

ವಾಸಿ" ಎನ್ನುವುದುಂಟು. ಅವರಿಗೆ ಮೂರು ನುಣ್ಣಗಿನ ಊಟ ಬೇಯಿಸಿ ಹಾಕುವ ತ್ರಾಣವಿಲ್ಲ. ಮಧ್ಯಾಹ್ನ ಇಷ್ಟು ಅನ್ನಮಾಡುತ್ತಾರೆ. ಅದೇ ರಾತ್ರಿಯೂ ಬೆಳಗಿಗೂ ಬರುವಂತಿರಬೇಕು. ಈಚೆ ರುಕ್ಮಿಣಿ ಗಂಜಿಯನ್ನು ಬೇಯಿಸಿ ಮಕ್ಕಳಿಗೆ ಎರೆಯುತ್ತಿರುವಾಗಲೆಲ್ಲ, ಅವರ ಮನೆಯ ಒಂದಲ್ಲ ಒಂದು ಕೂಸು, ಕೃಷ್ಣನೊಡನೋ, ಬಾಲಕೃಷ್ಣನೊಡನೋ ಆಡುವ ನೆಪದಿಂದ ಬರುತ್ತದೆ. ಬಾಗಿಲ ಬಳಿಯಲ್ಲಿ ನಿಂತು, ದೀನವಾದ ಕಣ್ಣಾಲಿಗಳನ್ನು, ಇವರ ಮನೆಯ ಬಟ್ಟಲಿಗೆ ಬಿದ್ದ ತಿಳಿಗಂಜಿಯ ಕಡೆಗೆ ಹೊರಳಿಸುತ್ತದೆ. ಹಾಗೆಂದು ರುಕ್ಮಿಣಿಗೆ ಗಂಜಿಗೆ ಹೆಚ್ಚಿನ ಅಕ್ಕಿ ಸೇರಿಸಿ, ಬೇಯಿಸುವ ತ್ರಾಣವಿರಲಿಲ್ಲ; ಅದರಿಂದ ಈಗೀಗ, ನಿತ್ಯ ಎರಡೆರಡು ಸೌಟು ನೀರನ್ನು ಮಾಡಿದ ಗಂಜಿಗೇನೆ ಹೆಚ್ಚಿಗೆ ಸೇರಿಸುತ್ತಾಳೆ--"ಬಾ ಸುಬ್ಬು, ಬಾ ಲಕ್ಷ್ಮಣ" ಎಂದು ಅವರನ್ನು ಕರೆದು ತನ್ನ ಮಕ್ಕಳ ಜತೆಯಲ್ಲಿ ಬಡಿಸುತ್ತಾಳೆ. ಅವಳ ಎದೆ, ತನ್ನ ಮಕ್ಕಳಿಗಿಂತ ಹೆಚ್ಚಾಗಿ ಅವುಗಳನ್ನು ಕಂಡು ಕರಗುತ್ತದೆ. ಯಾರಲ್ಲಿ ಕೇಳಿದರೂ ಅಕ್ಕಿ ಇಲ್ಲ ಎಂಬವರೇ. ಮುಚ್ಚುಮರೆಯಿಂದ ಮುಮ್ಮಡಿ ಬೆಲೆಕೊಟ್ಟು ತರಬೇಕು ಅದನ್ನು.

ಇರುವ ಕಾಲದಲ್ಲಿ ನಾಗಪ್ಪಯ್ಯ ಮಾಸ್ತರರು ಏನೂ ಮಾಡುವವರು! ಈಗ "ಹೋಗಲಿ; ಒಂದು ಹೊತ್ತಿಗಿಷ್ಟಾದರೂ ಬೇಯಿಸಲು ಬಂದಿತಲ್ಲ!" ಅನ್ನುತ್ತಾರೆ. ಕೆಲವು ದಿನ ಅದೂ ಇರದ ರಾತ್ರಿಗಳುಂಟು. ನಾಗಪ್ಪಯ್ಯನವರ ಮನೆಯಲ್ಲಿ ಹೊಗೆ ಹೊರಡದ ದಿವಸ ರುಕ್ಮಿಣಿಗೆ ತಿಳಿಯದೆ ಇರುವುದಿಲ್ಲ. ಅವಳು ತನ್ನ ಮನೆಯಲ್ಲಿ ಬೇಯಿಸುವ ಗಂಜಿಯನ್ನು ಇನ್ನಷ್ಟು ಉದ್ದವಾಗಿ ಮಾಡುತ್ತಾಳೆ. ಆ ರಾತ್ರಿಗಳಲ್ಲಿ ರುಕ್ಮಿಣಿಗೂ ಅಚ್ಯುತನಿಗೂ ತಣ್ಣೀರೇ ಗತಿ! ಆದರೆ ನಾಗಪ್ಪಯ್ಯನವರಹೆಂಡತಿ, ಈಚೆ ಬರುವುದಕ್ಕೆ ನಾಚುತ್ತಾಳೆ! "ಅಯ್ಯೋ-ಅವರ ಮಕ್ಕಳ ತುತ್ತನ್ನು ನಮ್ಮಮಕ್ಕಳು ಕಸಿಯುವ ಕಾಲ ಬಂದಿತೇ" ಎಂದು ಅವಳಿಗೂ ಬೇಸರ. ನಾಗಪ್ಪಯ್ಯನವರ ಹೆಂಡತಿ ಭಾಗೀರಥಿ, ಈಗಾಗಲೇ ಮುದುಕಿ. ಅವಳ ರೂಪ ಯೌವನವೆಲ್ಲ ಎಂದೋ ಮಾಯವಾಗಿದೆ; ಮುಖ ಸುಕ್ಕುಗಟ್ಟಿದೆ. ಆಕೆ ತುಂಬ ಗುಣವಂತೆ. ಮಕ್ಕಳಿಗಾಗಲೀ ಇತರರಿಗಾಗಲೀ ಒಂದೇ ಒಂದು ನಿಷ್ಠುರ ನುಡಿ ಆಡಿದವಳಲ್ಲ. ಅವು ತೀರ ಅಸಾಧ್ಯ ಗದ್ದಲ ಮಾಡಿದರೆ, ನಾಗಪ್ಪಯ್ಯನವರು ರೇಗಿ, "ಬಾಗಿ, ನೀನು ಮಕ್ಕಳನ್ನು

ಹಾಗೆಯೇ ಬಿಟ್ಟು, ಸೊಕ್ಕಿಸಿ ಇಟ್ಟಿದ್ದೀ. ನೋಡು ಆ ಮಗು ಗದಿಗೆ ಒಡೆದರೂ ಮಾತನಾಡುವುದಿಲ್ಲ. ನೋಡುತ್ತಿದ್ದೀಯ— ಒಂದು ಪೆಟ್ಟು ಬಿಗಿಯಬಾರದೇ?" ಅನ್ನುತ್ತಾರೆ. ಅವರೇ ಹಾಗೆ ಪೆಟ್ಟು ಬಿಗಿಯಲು ಬಂದರೂ, ಇವಳು ತಡೆಯುತ್ತಾಳೆ.... "ಯಾಕೆ ಹೊಡೆಯುತ್ತೀರಿ! ನಾವು ಅವಕ್ಕೆ ಏನು ಸುಖ ಕೊಡುತ್ತಿದ್ದೇವೆ ಎಂದು ಹೊಡೆಯುವುದು. ಉಡಲಿಕ್ಕೆ ಅರಿವೆಯೇ; ಉಣಲಿಕ್ಕೆ ಅನ್ನವೇ! ದೇವರು ಕೊಟ್ಟ ಕೂಸುಗಳನ್ನು ಸಾಕಲು ಬಾರದವರು ನಾವು. ಮೇಲೆ ಹೊಡೆದು ಪಾಪ ಕಟ್ಟಿಕೊಳ್ಳಬೇಕೇ" ಅನ್ನುತ್ತಾಳೆ.

ಈ ವೇದಾಂತದ ಮಾತು, ಆಚೆ ಕೊಟಡಿಯಲ್ಲಿರುವ ರುಕ್ಮಿಣಿಯ ಕಿವಿಗೂ, ಮುಟ್ಟುತ್ತದೆ. ಅಲ್ಲಿಂದ ಗಂಡನಿಗೂ ಹೋಗುತ್ತದೆ. ರುಕ್ಮಿಣಿಯು ಅಶಕ್ತಳು. ಕೇವಲ ನರಗಳ ದೌರ್ಬಲ್ಯಕ್ಕೆ ಒಳಗಾದವಳು. ಬಹು ಬೇಗ ತಾಳ್ಮೆಗೆಟ್ಟು, ತೊಂದರೆ ಕೊಟ್ಟರೆ, ಮಕ್ಕಳನ್ನು ಚಿವುಟುತ್ತಾಳೆ! ಆದರೆ ಈ ಮನೆಗೆ ಬಂದ ದಿನದಿಂದ ಅವಳಿಗೆ ತನ್ನ ತಪ್ಪು ತಿಳಿದಿದೆ. ಭಾಗೀರಥಿಯು ನಡತೆಯು ವರ್ಚಸ್ಸು ಅವಳ ಮೇಲೆ ತುಂಬ ಬಿದ್ದಿದೆ. 'ಯಾಕೆ, ಮಕ್ಕಳೇ ನನಗೆ ಸಿಟ್ಟು ಬರಿಸುತ್ತೀರಿ' ಎಂದು ಅಳುವಿನ ಮೋರೆ ಮಾಡಿ, ಅವಳು ಕೂಗುತ್ತಾಳೆ. ಅವಳ ಹಿರಿಯ ಹುಡುಗರು ಅವಳ ಈ ಬೇಡಿಕೆಗೆ ಒಲಿಯುತ್ತವೆ. ತೀರ ಸಣ್ಣ ಮಗು, ಯಾವುದಕ್ಕೂ ಬಗ್ಗದಿರುವುದುಂಟು. "ಏನೋ ನಿಮ್ಮ ಹಣೆಯ ಮೇಲೆ ಏನೇನು ಬರೆದಿದೆಯೋ, ನಾನೇಕೆ ಹೊಡೆದು ಪಾಪ ಕಟ್ಟಿಕೊಳ್ಳಬೇಕು" ಎನ್ನುತ್ತಾಳೆ ಅವಳು ಸಹ, ಭಾಗೀರಥಿಯಂತೆ.

ಅಚ್ಯುತರಾಯ ನಿತ್ಯ ಶಾಲೆ ಮುಗಿಸಿಕೊಂಡು ಮನೆಗೆ ಬರುತ್ತಾನೆ. ನಾಗಪ್ಪಯ್ಯನವರೊಡನೆ ಸೇರಿ, ಮನೆಯ ಹಿಂಗಡೆಯಲ್ಲಿ ತರಕಾರಿ ಬೆಳೆಸುತ್ತಾನೆ. ಆದರೆ ಅದು ಅರಣ್ಯರೋದನವಾಗಿತ್ತು! ಹಾಗೆ ನಟ್ಟು ದಣಿದ ಆರು ತಿಂಗಳ ದಿವಸವೂ ನಟ್ಟುದು ಚೆನ್ನಾಗಿ ಫಲಿಸಲಿಲ್ಲ. ಕೆಲವನ್ನು ಹುಳ ತಿಂದಿತು; ಕೆಲವನ್ನು ಆಡು ಮೆದ್ದಿತು; ದನ ಬೇಲಿ ಮುರಿಯಿತು; ಮತ್ತೊಂದಾಯಿತು-ಹೀಗೆ ಹತ್ತರ ಮುಡಿತಕ್ಕೆ ಒಂಪರ ಫಲ. "ಆದರೂ ಮಾಡದೆ ಗತಿಯುಂಟೇ" ಎಂದು ಇಬ್ಬರೂ ಸೇರಿ ದುಡಿಯುತ್ತಾರೆ. ಅಚ್ಯುತನ ವೇಳೆ ಇಂಥ ಶ್ರಮಗಳಲ್ಲಿ ಸರಿಯುತ್ತಿದ್ದು, ಅವನು

ಉಪ್ಪಿನಂಗಡಿಗೂ ಹೋಗದೆ ಕೆಲವು ತಿಂಗಳಾದುವು.

"ಇದೇನು-ಅಚ್ಯುತ ಬರಲಿಲ್ಲ" ಎಂದು ಮಾಮುಂಜಿಗೆ ನೆನಪಾಗಿ ಅವನೇ ಒಮ್ಮೆ ಬಂದಿದ್ದನು. ಆ ದಿನ ಅಚ್ಯುತನ ಹಿಗ್ಗು, ಕುಗ್ಗುಗಳು ಹೇಳಿ ತೀರವು. ಮಾಮುಂಜಿ ಬಂದ ಬಗ್ಗೆ ಹಿಗ್ಗು. ಆದರೆ ಆ ವಾರ ವೆಲ್ಲ ಅಚ್ಯುತನೂ ನಾಗಪ್ಪಯ್ಯನವರೂ ರೂಪಾಯಿ ಹಿಡಿದು ಊರೆಲ್ಲ ಸುತ್ತಿದರೂ ಅವರಿಗೆ ಒಂದು ಕಳಸೆ ಅಕ್ಕಿ ಸಿಗಲಿಲ್ಲವಂತೆ. 'ಬಂದವನಿಗೆ ಒಂದು ಊಟ ಹಾಕುವಾ' ಎಂದರೆ ತನಗೆ ಸಾಧ್ಯವಿಲ್ಲವೇ ಎಂದು ಆತಗೆ ಕುಗ್ಗು. ಮಾಮುಂಜಿ ಅನೇಕ ವಿಷಯಗಳ ಕಡೆಗೆ ಮಾತು ಹರಿಸಿದ. ತನ್ನ ವಿಷಯವಾಗಿಯೂ ಅವನಿಗೆ ಹೇಳಿದ. "ನಾನೀಗ ಆಚೀಚೆ ನಾವನಾನು ಸಾಗಿಸುವ, ಕೊಂಡು ಮಾರುವ ಹತ್ತೆಂಟು ಕೆಲಸಗಳಿಂದ ಹೇಗೂ ಸುಖವಾಗಿ ದಿನ ಸಾಗಿಸುತ್ತಿದ್ದೇನೆ" ಎಂದ. ಬಳಿಕ "ಅಚ್ಯುತ, ನೀವಿಲ್ಲಿ ಅಕ್ಕಿಗೆ ಏನು ಮಾಡುತ್ತೀರಿ? ಈ ಹಳ್ಳಿಯಲ್ಲಿ ಸಿಗುತ್ತದೆಯೇ? ಉಪ್ಪಿನಂಗಡಿಯಲ್ಲಿ ಇಲ್ಲವೇ ಇಲ್ಲ ಎನ್ನುತ್ತಾರೆ" — ಎಂದನು.

ನಕ್ಕನು ಅಚ್ಯುತ. "ಇಷ್ಟರ ತನಕ ಸ್ವಲ್ಪ ಸ್ವಲ್ಪ ಸಿಗುತಿತ್ತು. ಈ ವಾರ ಪೂರ್ಣ ಮುಗಿದಿದೆ. ಯಾರ ಕಾಲು ಹಿಡಿದರೂ ಏನೂ ಸಿಗುವ ಹಾಗಿಲ್ಲ. ಎಲ್ಲರೂ 'ಇಲ್ಲ' ಅನ್ನುವವರೇ. ಇಪ್ಪತ್ತೈದು, ಮೂವತ್ತು ರೂಪಾಯಿ ಬರಬೇಕು ಕೈಗೆ ಎಂದು ಕಾದಿದ್ದಾರೆ ಅವರು. ನಾವು ಹದಿನೆಂಟು ಅಲ್ಲ ಇಪ್ಪತ್ತು ಕೊಟ್ಟರೂ, ಯಾರೂ ಕೊಡುವವರಿಲ್ಲ?" ಎಂದನು.

"ನಿನಗೆ ಬೇಕಾದರೆ, ನಾಳೆಯಿಂದ ನಾನು ಕೊಡಿಸುವ ಏರ್ಪಾಡು ಮಾಡುತ್ತೇನೆ. ನಾನು ಹದಿನೈದಕ್ಕೆ ಕೊಂಡು, ಮಾರಲು ಇರಿಸಿದ ಸ್ವಲ್ಪ ಅಕ್ಕಿಯಿದೆ. ಕಳುಹಿಸುತ್ತೇನೆ. ಒಂದು ಮುಡಿ ಕಳುಹಿಸಲೇ, ಎರಡು ಮುಡಿಯೇ....." ಎಂದನು.

ಕ್ರಯಕ್ಕೆ ಕೊಡುವುದಾದರೆ ಸ್ವಲ್ಪ ಹೆಚ್ಚಿಗಿದ್ದರೆ ಬೇಕಿತ್ತು."

"ನಿನಗೆಷ್ಟು ಬೇಕು?........"

"ನನಗಂತಲೇ ಅಲ್ಲ. ನಮ್ಮ ನಾಗಪ್ಪ ಮಾಸ್ತರರಿಗೂ ಬೇಕು. ಸನ್ನರ್ಧ ಸಂಬಳ ಅವರಿಗೆ. ಖರ್ಚು ಮಾತ್ರ ಡಬ್ಬಲ್! ಪಾಪ! ನನಗೊಂದು ಮುಡಿ ಅವರಿಗೊಂದು ಮುಡಿ, ಎರಡು ಮುಡಿ ಕಳುಹಿಸುತ್ತೀಯಾ?" ಎಂದನು. ಆಗಲೇ ಕೂಗಿ "ನಾಗಪ್ಪಯ್ಯ, ನಿಮಗೆ ಒಂದು

ಮುಡಿ ಅಕ್ಕಿ ತತ್ಕಾಲಕ್ಕೆ ಸಾಲದೇ?" ಎಂದೂ ವಿಚಾರಿಸಿದ. ಅವಲ್ಲಿರಲಿಲ್ಲ. ಹಾಗಾಗಿ ರುಕ್ಮಿಣಿ ಆಚೆ ಹೋಗಿ, ಭಾಗೀರಥಿಯನ್ನು ಮಾತನಾಡಿಸಿ ಬಂದಳು- "ರೂಪಾಯಿ ಬೇಡವೇ? ಅಕ್ಕಿ ಇದ್ದರೆ ಆಗುತ್ತಿತ್ತು ನಿಜ. ಈಗ ಒಂದು ಕಳಸೆ ಕೊಟ್ಟರೆ ಹದಿನೈದು ದಿನ ಹೋದೀತಲ್ಲ. ಮುಂದಿನ ತಿಂಗಳ ಸಂಬಳ ಬಂದರೆ, ಒಂದು ಮುಡಿ ತೆಗೆದಿರಿಸಬಹುದು" ಎಂದಳು ಆಕೆ.

ಮಾಮುಂಜಿ "ಎಷ್ಟು ಜನ ಇದ್ದಾರೆ ಅವರಲ್ಲಿ?" ಎಂದು ಕೇಳಿದ.

"ಜನಗಳಿದ್ದಾರೆ. ಇಬ್ಬರು ಮೂವರು ದೊಡ್ಡವರು, ನಾಲ್ವರು ಸಣ್ಣವರು!"

ಮಾಮುಂಜಿಗೆ ಕನಿಕರವಾಯಿತು. "ಆರೆಂಟು ಜೀವಗಳಿಗೆ ಹದಿನೈದು ದಿನಕ್ಕೆ ಹದಿನಾಲ್ಕು ಸೇರು ಅಕ್ಕಿಯೇ? ಅದನ್ನು ಕೊಳ್ಳಲು ಇಷ್ಟೊಂದು ಗೋಳೇ" ಎಂದೂ ತೋರಿತು. 'ಆಗಲಿ" ಎಂದು ಹೇಳಿ ಆತ ಹೊರಟುಹೋದ. ಅಚ್ಚುತ ಬಲವಂತ ಪಡಿಸಿದರೂ ಊಟಕ್ಕೆ ನಿಲ್ಲಲಿಲ್ಲ. ಊರಮನೆಯ ಹಿಂದೂಗಳಲ್ಲಿ ಅವನು ಉಣ್ಣಲು ಧೈರ್ಯ ಪಡಲೂ ಇಲ್ಲ.

ಆದರೆ, ಮರುದಿನ ಕತ್ತಲೆಗೆ ಇಬ್ಬರು ಆಳುಗಳೊಡನೆ — ಎರಡು ಮುಡಿ ಅಕ್ಕಿಯನ್ನೇನೊ ಕಳುಹಿಸಿದನು. ಬೆಲೆ ಹದಿನೈದು ರೂಪಾಯಿ. ಅದು ಸುತ್ತಲ ಬೆಲೆಗಿಂತ, ಐದು ರೂಪಾಯಿ ಸುಲಭವೆಂದು ಹಿಗ್ಗಿದರು. ನಾಗಪ್ಪಯ್ಯನವರು 'ಮುಡಿ ಅಕ್ಕಿ ಒಂದೂವರೆ ತಿಂಗಳಿಗೆ ಬಂದೀತೆ'ಂದರು. ಅಳುವಿನಲ್ಲೇ ಹಿಗ್ಗೂ ಉಂಟಾಯಿತು ಅವರಿಗೆ. ಆದರೆ ಹದಿನೈದು ರೂಪಾಯಿಗಳನ್ನು ಬರುವ ತಿಂಗಳ ಸಂಬಳದಲ್ಲೇ ಕೊಡಬೇಕಲ್ಲ! ಹಿಂದೆ ಅಕ್ಕಿ ಕೊಟ್ಟವರ ಹಣಕ್ಕೇನು ಗತಿ? ಅವರು ಸಿಟ್ಟಾದರೆ! ಎಂಬೆಲ್ಲ ಯೋಚನೆಗಳು ಮೂಡಿ ಅವರು ಖಿನ್ನರಾದರು. ಇತ್ತ- ಅಚ್ಚುತನಿಗೆ ತುಸು ಧೈರ್ಯವಾಯಿತು. "ಏನೂ ಇರಲಿ ರುಕ್ಮಿಣಿ, ಮಾಮುಂಜಿ ಮರ್ಯಾದೆ ಉಳಿಸಿದ. ಮಕ್ಕಳಿಗಾದರೂ ಮೂರು ಹೊತ್ತು ಗಂಜಿ ಹಾಕುವ" ಎಂದು ಆತ ನುಡಿದ. ನಾಗಪ್ಪಯ್ಯ ಮಾಸ್ತರರು ಆ ದಿನ ಮಾಮುಂಜಿಯನ್ನು 'ದೇವರೇ' ಎಂದು ತಿಳಿದರು.

ಅಚ್ಚುತರಾಯನಿಗಾಗಲಿ, ನಾಗಪ್ಪಯ್ಯನವರಿಗಾಗಲಿ ಅಕ್ಕಿಯೊಂ

ದರ ಪ್ರಶ್ನೆ ತೀರಿದರೆ ಸಾಕಿತ್ತೇ? ಉಳಿದ ಒಡವೆಗಳಿಗೆ ಬೆಲೆ ಹೇಗಿಲ್ಲ! 'ಬಡಬಗ್ಗರು ಬದುಕುವುದುಂಟೇ?' ಎಂದು ಯೋಚಿಸುತ್ತಲೇ ಇದ್ದರು. ಹಾಲಿಲ್ಲದೆ-ಹಗಲೂ ರಾತ್ರಿಯೂ ಕಜ್ಜಿಯಿಂದ ಮೈಕೆರಿಸಿಕೊಳ್ಳುತ್ತಿದ್ದ ಮಕ್ಕಳನ್ನು ಕಂಡು, ಅಚ್ಯುತನಿಗೆ ಜಿಗುಪ್ಸೆ ಬರುತ್ತಿತ್ತು. "ಅಯ್ಯೋ, ಇವೆಲ್ಲ ತನ್ನ ಕಣ್ಣೆದುರೇ ಸತ್ತಿದ್ದರೆ, ಒಳಿತಿತ್ತು. ನಾಳೆ ನಾನು ಸತ್ತ ಮೇಲೆ ಇದಕ್ಕೂ ಹೆಚ್ಚಿನ ನರಕ ತಪ್ಪುತಿತ್ತೋ ಏನೋ!" ಅನ್ನುತ್ತಿದ್ದ. ಹಲವು ಬಾರಿ ಅವನ ಮನಸ್ಸು, ಈ ಬದುಕನ್ನು ಮುಗಿಸುವ ಸುಲಭ ದಾರಿಯನ್ನು, ಹುಡುಕುತ್ತಿತ್ತು. ಮಕ್ಕಳನ್ನು ನೆನೆಯುತ್ತಾನೆ! ಹೆಂಡತಿಯನ್ನು ನೆನೆಯುತ್ತಾನೆ! ಅವರಿಗಾಗಿ ಬದುಕಬೇಕು ಎಂದು ಕೊನೆಗೆ ತೀರ್ಮಾನಿಸುತ್ತಾನೆ. ಆದರೆ ಒಮ್ಮೊಮ್ಮೆ-ಒಂದು ದಿನ ನಮ್ಮ ಮನೆ ಬಳಿಯ ತೋಡು ಉಕ್ಕಿ, ನಮ್ಮೆಲ್ಲರನ್ನು ಒಂದೇ ಸಾರಿ ಕತ್ತಲಲ್ಲಿ ಕೊಚ್ಚಿಕೊಂಡು ಹೋದರೂ ಆಗುತಿತ್ತು-ಎಂದು ಕೊಳ್ಳುತ್ತಾನೆ. ತಮ್ಮ ಮನೆ ಮುಂದಿನ ಬಾನಿನ ಯಾವ ಮೂಲೆಯಲ್ಲಿಯೇ ಆಗಲಿ ಒಂದು ಕರಿ ಮೋಡ ಹಾಸಿದರೆ, ಮಿಂಚನ್ನೂ ಸಿಡಿಲನ್ನೂ ನೆನೆಯುತ್ತಾನೆ! "ನೀರಲ್ಲಿ ಮುಳುಗಿ ಸಾಯುವುದು ಕಷ್ಟ! ಒಂದು ಸಿಡಿಲು ಬಡಿದರೆ, ಸತ್ತುದೂ ತಿಳಿಯುದು ಅಲ್ಲವೇ" ಎಂದು ತನ್ನ ಹುಚ್ಚು ಆಸೆಗಾಗಿ ನಗುತ್ತಾನೆ! ಆದರೆ ಎಣಿಸಿದಂತೆ ಸಾವು ಬಂದೀತೇ? ಆದರೆ ತೀರ ಕೃಶ ಶರೀರಿಗಳಾಗಿ ಅರಿವೆಯಿಲ್ಲದೆ, ಅಲೆಯುತ್ತಿರುವ ಮಕ್ಕಳು, ಅವುಗಳ ಕಜ್ಜಿ, ಕಾಯಿಲೆ, ತನ್ನ ಹೆಂಡತಿಯ ಕಳೆಗೆಟ್ಟ ಶರೀರ, ತನ್ನ ಕುಂದಿದ ಬಾಳು ಇವೆಲ್ಲ ಬೇರೆ ಯಾವ ಬಯಕೆಗಳನ್ನೂ ಪ್ರೇರಿಸುವಂತಿರಲಿಲ್ಲ.

ಈ ದಿನಗಳಲ್ಲೇ ಒಂದು ದಿನ, ಅವರ ಶಾಲೆಯ ಸಂದರ್ಶಣೆ ನಡೆಯಿತು. ಮೇಲಧಿಕಾರಿಗಳು ಬಂದರು. ಅಚ್ಯುತ ತನ್ನ ತರಗತಿಯಲ್ಲಿ ಕುಳಿತಿದ್ದ. ಅವನ ಕಾಲುಗಳಿದ್ದುವು ಮೇಜಿನ ಮೇಲೆ; ಕಣ್ಣುಗಳು ತೆರೆದೇ ಇದ್ದುವು--ಮಾಡಿನ ಹಂಚುಗಳನ್ನು ಎಣಿಸುತ್ತಲಿದ್ದುವಂತೆ! ಸುತ್ತಲು ಆರೆಂಟು ಮಕ್ಕಳು ಕೂಗಿ, ಕಿರುಚಿ ಏನನ್ನೋ ಓದುತ್ತಿದ್ದುವು; ಏನನ್ನೋ ಬರೆಯುತ್ತಿದ್ದುವು. ಈ ಸ್ಥಿತಿಯಲ್ಲಿ ಇನ್ಸ್‌ಪೆಕ್ಟರರು ಕಾಲಿರಿಸಿದರು. ಅವರೆದುರಿಗೂ ಅವನು ಕದಲದೆ ಹಾಗೇ ಕುಳಿತಿದ್ದನು. ಅವರೂ ತುಂಬ ಉರಿಮುಖದಿಂದ ಇವನನ್ನು ನೋಡುತ್ತಾ ನಿಂತಿದ್ದರು!

ಕಣ್ದೆರೆದು ನಡೆಸುತ್ತಿರುವ ನಿದ್ರೆಯನ್ನು ಅವರು ಕಂಡುದು ಇದೇ ಮೊದಲು. ಅಷ್ಟರಲ್ಲಿ ಯಾವುದೋ ಒಂದು ಮಗು "ಇಲ್ಲಿ ಚಿವುಟಿದ ಸರ್" ಎಂದು ಕಿರುಚಿತು. ಅಚ್ಯುತರಾಯನ ಧ್ಯಾನ ಭಂಗವಾಯಿತು. ಮಗ್ಗುಲಿನ ಕೊಟಡಿಯಲ್ಲಿ ಪಾಠ ಮಾಡುತ್ತಿದ್ದ ನಾಗಪ್ಪಯ್ಯನಿಗೂ ಈ ವಿಷಯ ತಿಳಿಯದು.

ಅಚ್ಯುತ ಎಚ್ಚೆತ್ತ. ಮಗ್ಗುಲಲ್ಲಿ ತನ್ನ ಅಧಿಕಾರಿಗಳು ನಿಂತಿದ್ದರು. ಅವನ ಬಾಯಿ ಭೀತಿಯಿಂದ ತೆರೆಯಿತು. ಒಂದು ಕ್ಷಣಕ್ಕೆ ಆತ ಸ್ಥಂಭೀಭೂತನಾಗಿಬಿಟ್ಟ! ಬಳಿಕ ನಮಸ್ಕರಿಸಿ, ಅವರಿಗೆ ತನ್ನ ಕುರ್ಚಿಯನ್ನು ಕೊಟ್ಟನು. ಅವರು ಕುಳಿತುಕೊಳ್ಳಲಿಲ್ಲ. ಅಚ್ಯುತನ ಅಂಗಾಂಗಗಳನ್ನು ತಲೆಯಿಂದ ಬುಡಕ್ಕೆ, ಬುಡದಿಂದ ತಲೆಗೆ ನೋಡುತ್ತಲೇ ಇದ್ದರು. ಅವರಿಗೆ ಏನು ತೋಚಿತೋ ಏನೋ—ಅಲ್ಲಿಂದೆದ್ದು ಈಚೆ ಕೊಟಡಿಗೆ ಬಂದರು. ಅಚ್ಯುತ ಅಲ್ಲೇನೆ ನಿಂತನು; ಕಣ್ಣೀರು ಸುರಿಸುತ್ತ ನಿಂತನು. ತಮ್ಮ ಉಪಾಧ್ಯಾಯರು ಹೀಗೆಂದೂ ಮಾಡಿದುದನ್ನು ಆ ಮಕ್ಕಳು ಕಂಡಿರಲಿಲ್ಲ.

ಈಚೆಗೆ ಬಂದು, ಇನ್ನೊಂದು ತರಗತಿಗೆ ಅವರು ಕಾಲಿಟ್ಟರು. ಅಲ್ಲಿ ಪಾಠ ನಡೆಯುತಿತ್ತು. ನಾಗಪ್ಪಯ್ಯನವರು ಪಾಠ ನಿಲ್ಲಿಸಿ ಆಫೀಸರರಿಗೆ ವಂದಿಸಿದರು. ಅವರ ಪಾಲಿಗೂ ಅದು ಆಕಸ್ಮಿಕ ಸಂದರ್ಶಣೆಯಾಗಿತ್ತು. ಅವರ ಪಾಠವನ್ನು ನೋಡಿಕೊಂಡು, ಅವರನ್ನು ಈಚೆ ಬರಮಾಡಿಕೊಂಡು, "ಮಾಸ್ತರರೇ ನಿಮ್ಮ ಹೆಡ್ ಮಾಸ್ತರರಿಗೆ ಏನಾಗಿದೆ?" ಎಂದು ಅವರೆದುರಿಗೆ ತಾವು ಕಂಡದ್ದನ್ನು ಬಣ್ಣಿಸಿದರು. "ಅವರು ಹೀಗೆ ಮಾಡಿದರೆ, ಕೆಲಸ ಎಷ್ಟು ದಿವಸ ಉಳಿದೀತು?" ಎಂದು ಗಂಭೀರವಾಗಿ ಕೇಳಿದರು. ನಾಗಪ್ಪಯ್ಯನವರಿಗೂ ಅದನ್ನು ಕೇಳಿ ವ್ಯಥೆಯಾಯಿತು. "ಆಚೆಯಿಂದ Inspection ಪುಸ್ತಕ ತನ್ನಿ" ಎಂದು ಹೇಳಿ, ಆಫೀಸರರು ಅಲ್ಲಿಯೇ ಕುಳಿತರು; ಅಚ್ಯುತರಾಯನನ್ನು ಬಳಿಗೆ ಬರಮಾಡಿಕೊಂಡರು.

"ಮಾಸ್ತರರೇ! ನಿಮಗೇನು ಹುಚ್ಚು ಹಿಡಿದಿದೆಯೋ? ಇದೇನು ಶಾಲೆಯೆ? ಮನೆಯೇ? ಏನೆಂದು ತಿಳಿದಿರಿ?" ಎಂದು ಗದರಿಸಿದರು. ಅಚ್ಯುತ ಮಾತನಾಡಲಿಲ್ಲ.

"ನೀವು ನಿಮ್ಮ ಕೆಲಸವನ್ನು ಇಟ್ಟುಕೊಳ್ಳುವ ರೀತಿ ಕಾಣುವುದಿಲ್ಲ" ಎಂದರು.

ಅಚ್ಚುತ "ಬದುಕೇ ಬೇಡವಾಗಿದೆ; ಕೆಲಸ ಹೋದರೆ ಬೇಗ ಸಾಯ ಬಹುದು. ನಾನು ಮಾಡಿದ್ದೇನೋ ತಪ್ಪು ನಿಜ. ಆದರೆ ಹಾಗೇಕೆ ಮಾಡಿದೆ ಎಂದು ನನಗೇ ಗೊತ್ತಿಲ್ಲ" ಎಂದು ಹೇಳಿ ಅಳುತ್ತ ಈಚೆಗೇ ಬಂದ. ಬಲು ಹೊತ್ತು, ನಾಗಪ್ಪಯ್ಯನವರು, ತಮ್ಮ ಸಹ ಉಪಾಧ್ಯಾಯರ ಕಷ್ಟಗಳನ್ನು ಕುರಿತು ಅಧಿಕಾರಿಗಳಿಗೆ ಹೇಳಿದರು; "ಪ್ರತಿ ಗಳಿಗೆಗೂ ಯಾತಕ್ಕಾಗಿ ಬದುಕಬೇಕು.......ಇನ್ನೊಬ್ಬರನ್ನು ಉಪವಾಸ ಕೆಡೆಯುವ, ತಾವು ಉಪವಾಸ ಬೀಳುವ ಈ ಬದುಕು ಏಕೆ ಎನ್ನುತ್ತಾರೆ" ಎಂದರು. ಅಚ್ಚುತನ ನೊಂದ ಮನಸ್ಸನ್ನು, ರುಕ್ಮಿಣಿಯ ಔದಾರ್ಯ, ನಡತೆಗಳ ದೊಡ್ಡಸ್ತಿಕೆಗಳನ್ನು, ಬಲ್ಲವರಾದ ಅವರು, ತಮ್ಮ ಹಿರಿಯನಿಗೆ ಬರಬಹುದಾದ ಆಪತ್ತನ್ನು,ನೆನೆದೇ ಕಂಪಿಸತೊಡಗಿದರು."ಏನೋ ಸ್ವಾಮಿ, ಅವರ ಗುಣ . . . . ಪರಿಸ್ಥಿತಿ ನೋಡಿ. . . . ಅವರಿಗೆ ದಿನೇ ದಿನ ಬುದ್ಧಿ ಸ್ವಾಸ್ಥ್ಯ ಕೆಡುತ್ತಾ ಇದೆ. ಅವರು ನಿತ್ಯವೂ ನರಕ ಅನುಭವಿಸುತಿದ್ದಾರೆ. ಬಲ್ಲವರು ನೀವು" ಎಂದು ಅಚ್ಚುತನ ಪರವಾಗಿ ಅವರು ವಾದಿಸಿದರು.

ಆಫೀಸರರ ಮುಖಚರ್ಯೆಯು ಬದಲಿಸಿತು, ತರಿಸಿದ ಪುಸ್ತಕವನ್ನು ಮಡಚಿದರು. ಈಚೆ ಕೊಠಡಿಗೆ ತಿರುಗಿ ಬಂದರು. ಅಚ್ಚುತ ತುದಿ ಕಾಲ ಮೇಲೆ, ಗಲ್ಲಕ್ಕೆ ಕೈ ಕೊಟ್ಟು ಕುಳಿತಿದ್ದ. ಅವನ ದೃಷ್ಟಿ ಮತ್ತೂ ಶೂನ್ಯವಾಗಿತ್ತು. ಆಫೀಸರರು "ಮಾಸ್ತರರೇ" ಎಂದು ಮೃದುವಾಗಿ ಅವನನ್ನು ಮಾತನಾಡಿಸಿದರು.

"ಏನು ಸ್ವಾಮಿ?"

"ನಾನು ಈಗ ನಿಮ್ಮ ವಿಷಯ ಏನನ್ನೂ ಬರೆಯುವುದಿಲ್ಲ! ಆದರೆ ಶಾಲೆಯ ವಿಷಯ ನೀವು ಮುಂದೆ ಎಚ್ಚರವಾಗಿರಬೇಕು. ಇದು ಕಷ್ಟಕಾಲ ನಿಜ. ಆದರೆ, ಅದರಿಂದ ತಲೆಕೆಡಿಸಿಕೊಂಡರೆ, ಏನು ಫಲವಂತೆ! ಹೆಂಡತಿ ಮಕ್ಕಳಿರುವವರು ನೀವು. ದೇವರು ಕೊಟ್ಟದ್ದನ್ನು ಧೈರ್ಯವಾಗಿ ಅನುಭವಿಸಬೇಕು. ಮನುಷ್ಯರು ಮನುಷ್ಯರಿಗೆ ಸಹಾಯಮಾಡುವ ಕಾಲವಲ್ಲ ಇದು. ಬೇಕಾದರೆ ಸಿಕ್ ಲೀವ್ ಬರೆದುಕೊಳ್ಳಿ; ನಾಲ್ಕು ದಿನ

ಮಲಗಿ ವಿಶ್ರಾಂತಿ ತೆಗೆದುಕೊಳ್ಳಿ. . . .ಬಹಳ ಯೋಚನೆಮಾಡಿದರೆ, ಬುದ್ಧಿ ಕೆಟ್ಟೀತು." ಎಂದು ಉಪದೇಶ ಮಾಡಿದರು.

"ನನಗೂ ಅದೇ ಹೆದರಿಕೆ" ಎಂದರು ನಾಗಪ್ಪಯ್ಯ.

ಅಧಿಕಾರಿಗಳು ಅಚ್ಯುತನ ಬೆನ್ನನ್ನು ತಟ್ಟಿ "ಹೋಗಿ, ಅಳಬೇಡಿ. ನಾನು ನಿಮ್ಮಂತೆ ಮನುಷ್ಯ. ನನಗೂ ನಿಮ್ಮಂತೆಯೇ ಸಂಸಾರವೆಂಬುದಿದೆ" ಎಂದು ನುಡಿದು ಹೋದರು. ಅವರ ಎದೆಯೂ ತುಂಬ ಭಾರವಾಗಿತ್ತು.

ಅದನ್ನು ಕಂಡ ನಾಗಪ್ಪಯ್ಯನವರು,"ಇನ್ನೊಬ್ಬರಾಗಿದ್ದರೆ,ಅವರ ಬಾಯಿಗೆ ತಕ್ಷಣವೇ ಮಣ್ಣು ಹಾಕುತ್ತಿದ್ದರು. ಇಲ್ಲ, ಈ ಮನುಷ್ಯನಿಗೆ ಎದೆಯಲ್ಲಿ ಕರುಣೆಯಿದೆ" ಎಂದರು. ಆ ಮಧ್ಯಾಹ್ನ ಮಂಕು ಬಡಿದ ಅಚ್ಚುತರಾಯನನ್ನು; ಮನೆಗೆ ನಾಗಪ್ಪಯ್ಯನವರೇ ಕರೆದು ಕೊಂಡು ಹೋಗಬೇಕಾಯಿತು. ಬಲವಂತವಾಗಿ ಅವನಿಂದ ಎಂಟು ದಿನಕ್ಕೆ ರಜೆ ಅರ್ಜಿಯನ್ನು ಬರೆಯಿಸಿ, ಅವನು ಸ್ವಸ್ಥ ಮಲಗಿರುವಂತೆ ಒತ್ತಾಯಿಸಿದರು. ತಾನೊಬ್ಬನೇ ಶಾಲೆಯ ಕೆಲಸಗಳನ್ನು ನಿರ್ವಹಿಸಿದರು. ವಿರಾಮವಿದ್ದಾಗ, ಅಚ್ಯುತನೊಡನೆ ಯಾವಾವ ಊರಿನ ಮಾತುಗಳನ್ನಾಡಿ ಅವನ ಮನರಂಜನೆ ಮಾಡಲು ಯತ್ನಿಸಿದರು.

ರಾತ್ರಿ ಅಚ್ಯುತರಾಯನಿಗೆ ನಿದ್ರೆ ಬಂದ ಬಳಿಕವೇ ಬೆಳುದಿಂಗಳಲ್ಲಿ, ಹಿತ್ತಿಲಿಗಿಳಿದು ಗಿಡಗಳಿಗೆ ನೀರು ಮೊಗೆಯುತ್ತಿದ್ದರು. ಆ ತಿಂಗಳೆಲ್ಲ, ತಮ್ಮೆರಡು ತರಕಾರಿ ತೋಟಗಳಿಗೆ, ಅವರೇ ದಣಿದು ನೀರೆರೆದರು. ಹಿಂತಿರುಗಿ ಬಂದು, "ರುಕ್ಮಿಣಿಯಮ್ಮ, ಅಚ್ಯುತರಾಯರಿಗೆ ನಿದ್ರೆ ಬಂದಿದೆಯೇ ಸಮನಾಗಿ" ಎಂದು ಕೂಗಿ, ವಿಚಾರಿಸಿ, ಆಕೆ 'ಅಹುದೆಂದ' ಮೇಲೆಯೇ ತಾವು ನಿದ್ರೆ ಹೋಗುತ್ತಿದ್ದರು.

ಅಚ್ಯುತರಾಯ ಒಂದು ವಾರಗಳ ದಿವಸ ಬಲವಂತದ ರಜೆಯನ್ನು ಕೊಂಡನಾದರೂ ಅದರಿಂದೇನೂ ನೆಮ್ಮದಿ ಬರಲಿಲ್ಲ. ಅವನ ಮನಸ್ಸು ಕೆಟ್ಟುದರ ಕಾರಣವೇ ಬೇರೆಯಾಗಿತ್ತು. ಯಾರೊಡನೆಯೂ ಅದನ್ನು ಕುರಿತು, ಅವನು ಹೇಳುವಂತಿರಲಿಲ್ಲ. ಅವನ ಪ್ರೀತಿಯ ರುಕ್ಮಿಣಿಯು ಹಲವು ಬಾರಿ "ಏನಿದು, ಸುಮ್ಮನೆ ಮಂಕರಂತೆ ಕುಳಿತು ಯೋಚನೆಮಾಡುತ್ತೀರಿ? ಅದರಿಂದೇನು ಲಾಭ? ನಿಮಗೇನಾಗಿದೆ? ಏನು

ಯೋಚಿಸುವುದು ನೀವು? ನೀವು ತಲೆ ಕರಡು ಮಾಡಿಕೊಂಡುದರಿಂದ, ಹೆಚ್ಚಿನ ಪ್ರಯೋಜನವಾದೀತೇ"-ಎನ್ನುತ್ತಿದ್ದಳು. ಅವನ ಗೆಳೆಯರಾದ ನಾಗಪ್ಪಮಾಸ್ತರರೂ ಉಪದೇಶಿಸಿ ದಣಿದರು. ಹಾಗೆಂದು ಅಚ್ಯುತ ರಾಯ ವಾದವೆಸಗಿದರಲ್ಲವೇ, ಅವನನ್ನು ತರ್ಕಗಳಿಂದ ಸಮಾಧಾನ ಗೊಳಿಸುವುದು. ಅವನ ಎದೆಯಲ್ಲಿ ಮೌನವೇ ಬಾಣವಾಗಿತ್ತು- ಅದ ರಿಂದ ಅವರೆಲ್ಲರ ಉಪದೇಶ ಬಾಣಗಳು ಕತ್ತರಿಸಿ, ವ್ಯರ್ಥವಾಗುತ್ತಿ ದ್ದುವು.

ಅಚ್ಯುತನಿಗೆ ಏನಾಗಿದೆಯೆಂದು ಅವನೇ ಬಲ್ಲ. ಅವನಿಗೆ ಯಾ ಕೋ ಒಂದೊಂದು ಗಳಿಗೆ ತಾನು ಬಹುಕಾಲ, ಬದುಕಲಾರೆನೆಂಬ, ಇಲ್ಲದ ಒಂದು ಅನುಮಾನವು ಉಂಟಾಗಿದೆ. ಅದರ ಹಿನ್ನಲೆಯಲ್ಲಿ ಬೇ ರೊಂದು ಭೀತಿ ಕಾಲೂರಿದೆ. ತನ್ನಿಂದಾಗಿ ರುಕ್ಮಿಣಿ ಬೇಗನೇ ಸಾಯು ವಳೆಂದು. "ನಾನಷ್ಟು ಪ್ರೀತಿಸಿಯೂ, ಪ್ರೀತಿಯಿಲ್ಲದ ವೈರಿಗಳಂತೆ ವರ್ತಿಸಿದೆನಲ್ಲಾ"ಎಂದು ತನ್ನಷ್ಟಕ್ಕೆ ಗೊಣಗುತ್ತಿದ್ದನು-ಅವನು. ಜೀವ ಬರಿದೆ ಬದುಕೀತೇ? ಅದಕ್ಕೆ ಅನ್ನದ ಹಸಿವೆಯಿರುವಂತೆ, ಕಾಮದ ಹಸಿವೆ ಇಲ್ಲವೇನು? ಅದರಿಂದ ತಾನು ಎಷ್ಟು ದಿನ ಜಡನಾಗಿರಬಲ್ಲೆ! ಹೀಗೆಂದು ಬಹು ದಿನಗಳಿಂದ ವ್ಯತಸ್ಥನಾದ ಆತನ ಪಾಲಿಗೆ, ಸುಬ್ಬಿ ಯೊಬ್ಬಳೇ ಅವನನ್ನು ಈ ಉಭಯ ಸಂಕಟದಿಂದ ಪಾರಾಗಿಸಲು ಶಕ್ತ ಳೆನಿಸಿದ್ದಳು. ಆದರೆ ಅವಳು ತನ್ನ ಮುಂದೆ ನಲಿಯುತ್ತಿದ್ದ ಆ ಕಾಲ ದಲ್ಲಿ, ಮಿತ್ರನ ಮನೆಯ ಸಾವುನೋವುಗಳೂ, ತನ್ನಲ್ಲೇ ಬದುಕನ್ನು ಕುರಿತು ತೊಡಗಿದ ವಿಚಾರ ಜ್ವಾಲೆಗಳೂ ಬೃಹದಾಕಾರ ತಾಳಿದ್ದುವು. ಅದರಿಂದ ಸುಬ್ಬಿಯು ಕರೆಗೆ, ಕಣ್ಣಿದ್ದೂ ಆತನು ಕುರುಡನಾಗಿದ್ದನು. ಅವನ ಉದಾಸೀನತೆಗೆ ನಿರಾಶೆಗೊಂಡೇನೆ ಆಕೆ ಆ ಮನೆಯಲ್ಲಿ ಬಹು ದಿನ ಕಳೆಯಲಾರದೆ ಮಾಯವಾಗಿರಬೇಕು. ಅವಳು ಇರುತ್ತಿದ್ದರೆ, ಅವ ಳನ್ನು ಕೆಲಸಕ್ಕೆಂದು ಜತೆಗೆ ಈತ ಕರೆದು ತರುತ್ತಿದ್ದ. ರುಕ್ಮಿಣಿಗೆ ತನ್ನ ಬದುಕಿನ ತೊಡಕನ್ನು ಒಪ್ಪಿಸಿಯಾದರೂ ಈ ಇಮ್ಮೈ ಧೋರಣೆಗೆ ಒಂದು ಶಾಂತಿಯನ್ನು ತರಿಸಿಕೊಂಡು ಬಾಳುತಿದ್ದೆ-ಅಂದುಕೊಂಡಿದ್ದ. ಅವನ ಜೀವನದ ಈ ವಿಚಾರವಾದ ಕೋಲಾಹಲವನ್ನು ರುಕ್ಮಿಣಿ ಬಲ್ಲಳೇನು?

ಸರಿ, ಸುಬ್ಬಿಯು ಮಾಯವಾದಳು. ಈತ ಸಂಸಾರದಿಂದ ದೂರ

ವಾಗಿರಲಾರದೆ ಎಲ್ಲರನ್ನು ಕೂಡಿಕೊಂಡು,ಹೊಸ ಮನೆಯನ್ನು ಬಂಡಾಡಿಯಲ್ಲಿ ಹೂಡಿದುದಾಯಿತು. ಆದರೆ ಅದೊಂದು ಕೆಟ್ಟ ರಾತ್ರಿ, ಹಾಗೆಂದು ಆ ರಾತ್ರಿಯನ್ನು ಆತ ಹಳಿಯುವಂತಾಯಿತು. ಆತ ರುಕ್ಮಿಣಿಯೊಡನೆ ಹಿಂದಣ ವರ್ಷಗಳ ಬೇನೆಯ ಕಾರಣವನ್ನು ಮರೆತು ವರ್ತಿಸಿದ್ದನು. ಈ ನಡತೆಯನ್ನು ಗಂಡನ ಒಲುಮೆಯವಳಾದ, ತೀರ ವಿಧೇಯಳಾದ, ವಿಶೇಷ ವೈದ್ಯಕೀಯ ಬೆದರಿಕೆಯನ್ನು ಅರಿಯದ ರುಕ್ಮಿಣಿ, ಇದಿರಿಸುವ ಪ್ರಯತ್ನ ಮಾಡಲಿಲ್ಲ! ಅಲ್ಲದೆ ಅವಳ ಮನಸ್ಸಿನಲ್ಲಿ ಅದು ಒಂದು ಹಿರಿಯ ವಿಷಯವಾಗಿ ತೋರಿಯೂ ಇದ್ದಿಲ್ಲ. ಅದು ಘೋರ ರೂಪ ತಾಳಿದುದು ಅಚ್ಯುತನ ಮನಸ್ಸಿನಲ್ಲಿ ಮಾತ್ರ. ಈ ಘಟನೆ ನಡೆದ ಮರುದಿನವೇ ಅವನ ಆ ಶಾಲೆಯ ಸಂದರ್ಶಣೆಯಾಗಿ ಅಷ್ಟೆಲ್ಲ ಅನಾಹುತಕ್ಕೆ ಕಾರಣವಾದುದು. ಆದರೂ ತನ್ನ ಮನದ ಅಳಲು, ಸಂಕೋಚ, ಭೀತಿಗಳನ್ನು ಅವನು ತನ್ನಲ್ಲೇ ಇರಿಸಿಕೊಂಡಿದ್ದಾನೆ! ಯಾರೊಡನೆ ಅದನ್ನು ಹೇಳಬೇಕು? ತನ್ನಿಂದ ಗರ್ಭತಾಳಿ, ಮೃತ್ಯುವಿನ ಮುಖಕ್ಕೆ ಓಡಬಹುದಾದ ರುಕ್ಮಿಣಿಯೊಡನೆ ಅದನ್ನು ಹೇಳಲೇ?ದಿನವೆಲ್ಲ ತನ್ನನ್ನೇ ದೂರಿಕೊಳ್ಳುತ್ತಾನೆ. “ಅಯ್ಯೋ ಈ ಮನುಷ್ಯ ಪ್ರಾಣಿ ಎಷ್ಟು ಅಲ್ಪ! ಕೇವಲಹೊತ್ತಿನ,ಕ್ಷಣದತೃಪ್ತಿಗಾಗಿ ತನ್ನತೀರ ಪ್ರಿಯವಾದ ವಸ್ತುವನ್ನು ಯಾತನೆಗೆ, ಮೃತ್ಯು ಮುಖಕ್ಕೆ ಒಡ್ಡಲು ಅವನು ಹಿಂಜರಿಯುವುದಿಲ್ಲ” — ಎಂದುಕೊಂಡೇ ಭ್ರಾಂತನಾಗಿದ್ದಾನೆ. ಅವನ ಕಣ್ಮುಂದೆ — ಈಗಾಗಲೇ ರುಕ್ಮಿಣಿ ಹಾಸುಗೆ ಹಿಡಿದಾಯಿತು; ಅವಳ ಶಕ್ತಿ ಕುಗ್ಗುತ್ತಿದೆ, ಅವಳು ನರಳ ತೊಡಗಿಯಾಯಿತು. ಗರ್ಭಿಣಿಗೆ ಏಳೆಂಟು ತಿಂಗಳು ಸರಿದು, ಅವಳು ಬರಿಯ ಎಲುಬಿನ ಹಂದರವಾಗಿದ್ದಾಳೆ. ಮಾಮುಂಜಿ ಅವರ ಕತೆಯನ್ನು ಕೇಳಿ, ದೂರದ ವೈದ್ಯರೊಬ್ಬರನ್ನು ಕರೆಸಿದ್ದಾನೆ. ಅವರೇ? ಪರಿಚಿತ ಡಾ. ಗಂಗಾಧರರಾಯರು. ಇಲ್ಲಿ ಬಂದೊಡನೆ “ಚಿಕಿತ್ಸೆ ನನ್ನಿಂದ ಆಗದು. ತಿಳಿದೂ ತಿಳಿದೂ ನೀವು ಹೆಂಡತಿಯ ಕೊಲೆಗೆ ಮುಂದಾದಿರಿ. ನಿಮ್ಮ ಮುಖ ನಾನು ಕಾಣಲಾರೆ” ಎಂದು ತನ್ನನ್ನು ಹಳಿದಂತೆ, ತಾನು ನಾಚಿ, ಆತ್ಮಹತ್ಯೆಗೆ ಮುಂದಾದಂತೆ, ಅವರು ತಡೆದು ಹಿಡಿದಂತೆ, “ಆಕೆಗೆ, ಸಾವಿನ ಮುಂಚೆ ವೈಧವ್ಯದ ಹೊರೆಯನ್ನು ಹೊರಿಸಬೇಡಿ”-ಎಂದಂತೆ,ಎಲ್ಲಾ ಭ್ರಾಂತಿಯ ಚಿತ್ರಗಳು ಕಾಣಿಸಿದುವು. ಅವನು

ನಲಿಯುವ ನರಕವಾಗಿದ್ದಾನೆ! ಮನದೆದುರಲ್ಲಿ ಕೃಷ್ಣನು ಕಂಡಾಗ ಲೆಲ್ಲ "ಮಗು, ನಿನ್ನ ತಾಯಿಯನ್ನು ನಾನು ಕೊಂದೆ. ಪ್ರತಿಯಾಗಿ ನನ್ನ ಪ್ರಾಣವನ್ನು ಕೊಲ್ಲುವ ಶಕ್ತಿ ನಿನಗಿಲ್ಲವೇ?" ಎಂದು ಹುಚ್ಚು ಮಾತನ್ನು ಆಡಬೇಕೆಂದು ನೆನೆಯುತ್ತಾನೆ. ಈ ಮನೋವಿಕಾರಗಳಿಂದಾಗಿ ಅಚ್ಚುತನಿಗೆ ಬಾಳ್ವೆಯೆಂಬುದು ಅರ್ಥವಿಲ್ಲದಾಗಿದೆ.

ವಾರ ಸಂದಿತು; ಹದಿನೈದು ದಿನಗಳಾದುವು; ತಿಂಗಳಿಗೆ ಸಮೀಪವಾಯಿತು. ಅಚ್ಚುತನಿಗೆ ಅನ್ನ ನೀರುಗಳು ಬೇಡ; ವಸ್ತ್ರ ಒಡವೆಗಳು ಬೇಡ. ಮಾತಿಲ್ಲದೆ,ಕೇವಲ ಯೋಚಿಸುತ್ತಲೇ ಇರುತ್ತಾನೆ. ಯಾರದೋ ಸಾವು ಬಂದು ಅವನ ಕಣ್ಮುಂದೆ ನಲಿಯುತ್ತಿರಲು, ಅವನ ನಾಲಗೆಗೇನು ಅನ್ನ ಒಗ್ಗೀತು? ಕಣ್ಣಿಗೇಕೆ ನಿದ್ದೆ ಹಿಡಿದೀತು! ಎಲ್ಲಾದರೊಮ್ಮೆ,ರುಕ್ಮಿಣಿಯನ್ನು ಕರೆದು, ಅಪರಾಧಿಯಂತೆ "ರುಕ್ಮಿಣಿ ಇವತ್ತು ಯಾವ ವಾರ! ಯಾವ ತಿಥಿ?" ಎಂದು ಕೇಳುವುದುಂಟು. "ಯಾಕೆ"ಎಂದು ಕೇಳಿದರೆ ಉತ್ತರವಿಲ್ಲ. ಆಗ ಆಕೆ"ಶನಿವಾರವಲ್ಲವೇ? ಮೊನ್ನೆ ಏಕಾದಶಿ, ಇವತ್ತು ತ್ರಯೋದಶಿ" ಎಂದು ಎಣಿಸಿ ಉತ್ತರಕೊಡುತ್ತಾಳೆ.

ನಾಗಪ್ಪಯ್ಯನವರು, ಕಲ್ಲಾಗಿ ಕುಳಿತಿರುವ ಅವನ ಮುಂದೆ, ಭಗವದ್ಗೀತೆಯನ್ನು ಓದುವುದುಂಟು. ದಿನ ಬೆಳಿಗ್ಗೆ ಅವನನ್ನು ಕರೆದುಕೊಂಡು, ಬಾವಿಯ ಬಳಿ ಕುಳ್ಳಿರಿಸಿ, ಕೊಡಗಟ್ಟಲೆ ನೀರನ್ನು ತಲೆಯ ಮೇಲೆ ಸುರಿಯುತ್ತಾರೆ. "ಹ್ಯಾಗೆ? ನಿನ್ನೆ ರಾತ್ರಿ ನಿದ್ದೆ ಬಂದಿತಲ್ಲ; ಇವತ್ತು ಅದಕ್ಕಿಂತ ಹೆಚ್ಚಿಗೆ ನಿದ್ದೆ ಬಂದೀತು" ಎನ್ನುತ್ತಾರೆ.

ಈ ಧಾರೆ ನೀರಿನಿಂದ ಅವನಿಗೆ ಶೀತವಾಗಿ, ನಿಮೋನಿಯಾ ಬೇನೆ ಬಾರದಿದ್ದುದೇ ಆಶ್ಚರ್ಯ. ಆದರೆ ಅಗಪ್ಪೆ ಸೆಕೆಗಾಲ ತಲೆದೋರಿತ್ತು; ಈ ಶೀತ ಸ್ನಾನವು ದಿನಕ್ಕೆ ನಾಲ್ಕು ಬಾರಿ ನಡೆದರೂ ಸಂತೋಷವಾಗಿಯೇ ಪರಿಣಮಿಸುತ್ತಿತ್ತು.

ಹೀಗೆ ಎರಡು ಮೂರು ವಾರಗಳ ಉಪಚಾರ ನಡೆಯಿತು. ಒಂದು ದಿನ ಅಚ್ಚುತ ಮನೆಯ ಕಂಬಕ್ಕೆ ಒರಗಿ ಕುಳಿತಿದ್ದ. ಅವನ ತೊಡೆಯ ಮೇಲೆ ಅನಂತಕೃಷ್ಣನು ಕುಳಿತು, ಅಪ್ಪನೊಡನೆ "ನೀನು ಮಾತನಾಡುವುದಿಲ್ಲವೇಕೆ? ನಿನಗೆ ಬೇಸರವೋ, ನಿನಗೆ ಗೇರು ಹಣ್ಣು ಬೇಕೋ, ನಾನೂ ಅಣ್ಣನೂ ಹೋಗಿ ತರುತ್ತೇವೆ" ಎಂದು ತನ್ನ ಎಳೆ ಮನಸ್ಸನ್ನು

ಬಿಚ್ಚಿ ಹೇಳುತ್ತಿದ್ದ. ಅಚ್ಯುತನ ಮುಂದೆ ರುಕ್ಮಿಣಿ ಹಾದು ಹೋದಳು. ಅವಳು ನಿಂತು—“ಆ ಮಗುವಿನ ಹತ್ತಿರವೂ ಮಾತಾಡಬಾರದೇ?” ಎಂದಳು.

“ಆಡಬೇಕು, ನಿಜ” ಎಂದು ತಿರುಗಿ ಆತ ಮೌನವಾದ. ಅಲ್ಲಿಂದ ರುಕ್ಮಿಣಿ ಈಚೆ ಬಂದು “ಭಾಗೀರಥಮ್ಮ, ಈಚೆ ಬನ್ನಿ” ಎಂದಳು. ಅವಳು ಬಂದೊಡನೆಯೇ “ನೋಡಿ, ನಾನು ಇವತ್ತು ಹೊರಗೆ. ಮಕ್ಕಳ ಗಂಜಿಗೆ ಇಷ್ಟು ಅಕ್ಕಿ ತೆಗೆದುಕೊಂಡು ಹೋಗುತ್ತೀರಾ ಒಳಗಿಂದ” ಎಂದಳು. ಅಚ್ಯುತ ಕುಳಿತಲ್ಲಿಂದಲೇ ಚಕಿತನಾದ! ಐದು ನಿಮಿಷ, ಕುಳಿತಂತೆಯೇ ಇದ್ದು, ಮುಂದೆ “ಹೂಂ-ದೇವರು ಪಾರುಮಾಡಿದ.” ಎಂದು ಹಿಗ್ಗಿದ. ಅನಂತಕೃಷ್ಣನನ್ನು ಮುದ್ದಿಟ್ಟ. ಅದನ್ನು ಕಂಡ ಅನಂತ “ಅಪ್ಪಾ, ಗೇರುಮರದ ಬುಡಕ್ಕೆ ಹೋಗುವ” ಎಂದನು. ಅಲ್ಲಿಂದ ಮಗುವನ್ನು ಎತ್ತಿಕೊಂಡು, ಹೊರಕ್ಕೆ ಗುಡ್ಡದ ಬುಡಕ್ಕೆ ಬಂದು, ಮಗುವಿಗೆ ತುಂಬ ಗೇರು ಹಣ್ಣುಗಳನ್ನು ಕೊಯ್ದು ಕೊಟ್ಟ. ತಾನೂ ಒಂದೆರಡನ್ನು ತಿಂದ. ಆ ಮೇಲೂ, ಅಚ್ಯುತ ಇನ್ನೂ ಇನ್ನೂ ಹಣ್ಣು ಉದುರಿಸುತ್ತಲೇ ಇದ್ದಾನೆ. ಕೊನೆಗೆ—-“ಮರುಳನಂತೆ ನಾನು ಇಷ್ಟೆಲ್ಲ ಹಣ್ಣುಗಳನ್ನು ಉದುರಿಸಿದೆನೇಕೆ?” ಎಂದು, ಬೇರೆಯೇ ಯೋಚನೆ ಉದಯಿಸಲು ಮನೆಗೆ ಹಿಂತಿರುಗಿದನು. “ಕೃಷ್ಣ” ಎಂದು ಕರೆದನು. ಆಗ ಅಪ್ಪನ ಧನಿಯೇ ಬೇರೆಯಾಗಿತ್ತು. ಕೃಷ್ಣ ಓಡಿ ಬಂದನು. “ಮಗು, ಅಲ್ಲಿ ಮರದ ಕೆಳಗೆ, ಹಣ್ಣು ತುಂಬ ಉದುರಿಸಿ ಬಂದಿದ್ದೇನೆ. ಬೇಕಾದರೆ ಹೋಗಿ ತಿನ್ನಿ. ಗೋಪು, ಬಾಲ, ಎಲ್ಲರೂ ಹೋಗಿ ತಿಂದುಬನ್ನಿ. ಬೀಜವನ್ನು ಮನೆಗೆ ತನ್ನಿ. ಈಗ ಒಳ್ಳೇ ದರವಿದೆ ಗೇರುಬೀಜಕ್ಕೆ. ಬಿಸಾಡಿ ಹಾಳು ಮಾಡಬೇಡಿ” ಎಂದನು. ಆಗ ತಾನೇ ಮಂಕು ಕಳೆದು, ಅವನಲ್ಲಿ ವ್ಯವಹಾರ ದೃಷ್ಟಿ ಮೂಡಿತ್ತು.

ಆ ಬೆಳಗ್ಗೆ, ವೇಳೆಗೆ ಸರಿಯಾಗಿ ಅಚ್ಯುತ ಶಾಲೆಗೆ ಹೋಗಿದ್ದನು. ಮಕ್ಕಳೆಲ್ಲ “ಮಾಸ್ತರರಿಗೆ ಹುಷಾರಾಯಿತು” ಎಂದು ತಮ್ಮ ಹೊಳಪುಗಣ್ಣಿನ ನೋಟಗಳಿಂದ ಸಂಜ್ಞೆ ಮಾಡುತಿದ್ದರು. ನಾಗಪ್ಪಯ್ಯನವರೂ ತಮ್ಮ ಕ್ಲಾಸನ್ನು ಬಿಟ್ಟು, ಅವರೊಡನೆ ನಾಲ್ಕು ಸರಸದ ಮಾತುಗಳನ್ನು ಆಡಲು ಬಂದರು. ಮಾತು ತೊಡಗಿದಾಗ, ಅಚ್ಯುತರಾಯ “ಬೇಡ;

ಕ್ಲಾಸಿಗೆ ಹೋಗಿ; ಗ್ರಹಚಾರ ಕೆಟ್ಟು ಇನ್ಸ್‌ಪೆಕ್ಟರರು ವಿಸಿಟಿಗೆ ಬಂದರೆ, ಮೊನ್ನೆಯ ಹಾಗಾದೀತು. ನನಗೆ ಅವರು ಬಂದದ್ದೆಲ್ಲ ಗೊತ್ತಿಲ್ಲವೆಂದು ತಿಳಿಯುತ್ತೀರಾ? ನನಗೆ ತುಂಬ ನೆನಪಿದೆ! ಆದರೆ ನಾನು ಹಾಗೆಲ್ಲ ಯಾಕೆ ಮಾಡಿದೆನೆಂದು ನನಗೇ ತಿಳಿಯದು" ಎಂದನು.

"ಹೇಗೂ ದೇವರು ಉಳಿಸಿದರು" ಎಂದು ನಾಗಪ್ಪಯ್ಯನವರು, ಅಚ್ಯುತಗೆ ನೆಮ್ಮದಿಯಾದುದಕ್ಕೆ ದೇವರನ್ನು ಕೊಂಡಾಡಿದರು.

ರುಕ್ಮಿಣಿಯು ನಿಜವಾಗಿಯೂ ಗಂಡನಿಗೆ ಹುಚ್ಚು ಹಿಡಿಯುತ್ತಿದೆಯೆಂದು ಪಂಜದಲ್ಲೇನೆ ಭೀತಿ ತಾಳಿದ್ದಳು. ಇಲ್ಲಿಗೆ ಬಂದ ಮೇಲೆ, ಆ ಚಿಂತೆ ಮರವೆಯಾಗಿತ್ತು. ಆದರೆ ಈ ತಿಂಗಳಲ್ಲಿ ಮಾತ್ರ "ಅವರಿಗೆ ನಿಜವಾಗಿ ಹುಚ್ಚು ಹಿಡಿದಿದೆ" ಎಂದು ಎಣಿಸಿಕೊಂಡು ಅಳುವಂತಾಯಿತು. ಈಶ್ವರನಿಗೆ ತಿಂಗಳ ದಿನ ಎಳ್ಳೆಣ್ಣೆ ದೀಪ ಉರಿಸುತ್ತೇನೆ" ಎಂದು ಅವಳು ಹರಕೆಯನ್ನೂ ಹೊತ್ತಿದ್ದಳು.

ಆಕೆ ತಿಂಗಳ ಸ್ನಾನವನ್ನು ಮುಗಿಸಿದ್ದಾಯಿತು. ರಾತ್ರಿ ಊಟ ಮುಗಿದು, ಗಂಡನ ಮುಂದೆ ಎಲೆ ಅಡಕೆಯ ಹರಿವಾಣ ಇರಿಸಿದಳು. ಕೃಷ್ಣ ಹಣತೆಯ ಬೆಳಕಿನಲ್ಲಿ ಓದುತ್ತಿದ್ದನು. ಅವರ ಉಳಿದ ಎಳೆಯ ಕೂಸುಗಳು ಮಲಗಿದ್ದುವು. ಎಣ್ಣೆಯೇ ಇಲ್ಲದ ನೆರೆಮನೆಯಲ್ಲಿ, ಆಗಲೇ ಎಲ್ಲರೂ ಮಲಗಿ ನಿದ್ರೆಹೋಗಿದ್ದರು. ಇವರು ಮಾತ್ರ ಕುರುಡು ಹಣತೆ ದೀಪದ ಮುಂದೆ ಕುಳಿತಿದ್ದರು. ಅಚ್ಯುತರಾಯನು "ಕೃಷ್ಣ, ಮಲಗು ಮಗು! ಎಷ್ಟು ಓದುವುದು, ತಲೆ ಕುಂಬಾದೀತು!" ಎಂದನು. ಆ ಹುಡುಗ ನಕ್ಕನು; ಕೂಡಲೆ ಹೋಗಿ ಮಲಗಿಕೊಂಡನು. ಅಚ್ಯುತನು ದೀಪ ಆರಿಸಿಯೂ ಆಯಿತು. ಎಲೆ ಅಡಕೆಯನ್ನು ತಿಂದಿರಲಿಲ್ಲ, ಹೋಗಿ ಮಲಗಿರಲಿಲ್ಲ. ಇವನ ಮಗ್ಗುಲಲ್ಲೇ ರುಕ್ಮಿಣಿ ಕುಳಿತಿದ್ದಳು. ದೀಪ ಆರಿಸಿದ್ದನ್ನು ಕಂಡು, ಹೋಗಿ ಮಲಗಿಕೊಳ್ಳುವೆನೆಂದು ಎದ್ದಳು. ಅಚ್ಯುತ ಅವಳ ಕೈಹಿಡಿದು........ಕುಳ್ಳಿರಿಸಿದ. "ರುಕ್ಮಿಣಿ, ಇನ್ನು ನನಗೆ ಜೀವ ಬಂದಿತು" ಎಂದನು.

"ಜೀವ ನನಗೂ ಬಂತು."

"ಯಾಕೆ ಹಾಗೆನ್ನುತ್ತೀ?"

"ನಿಮಗೆ ಗುಣವಾದದ್ದು ನೋಡಿ"

"ನನಗೇನು ಗುಣವಾಗಲು-ಕಾಯಿಲೆಯೇ?"

"ಇಲ್ಲ ಬಿಡಿ; ಬೇರೇನಾದರೂ ಮಾತಾಡುವ"

ತಿರುಗಿ ಅಚ್ಯುತನಿಗೆ ಏಕೋ ಕೊನೆಯ ಮಾತುಗಳನ್ನು ಕೇಳಿ, ಅನುಮಾನವಾಯಿತು. ರುಕ್ಮಿಣಿ ತನ್ನ ಅತ್ಯಾಚಾರಕ್ಕಾಗಿ ಅಂತರಂಗದಲ್ಲಿ ಶಪಿಸುತ್ತಿರಬಹುದೇ ಎಂಬ ಭೀತಿಯಾಯಿತು. ಆದ್ದರಿಂದ "ರುಕ್ಮಿಣಿ! ಸಿಟ್ಟಾದೆಯಾ ನನ್ನ ಮೇಲೆ?"

"ನಾನು ಯಾಕೆ ಸಿಟ್ಟಾಗಬೇಕು? ನೀವೇನು ಮಾಡಿದ್ದೀರಿ ನನಗೆ?"

ಅಚ್ಯುತ ಬಲು ಹೊತ್ತು ಮಾತನಾಡಲಿಲ್ಲ. ಕೊನೆಗೆ ಮಾತು ಉಕ್ಕಿ ಬಂದು, "ರುಕ್ಮಿಣಿ ಈ ಸಾರಿ ಬಚಾವಾದೆ; ನೀನು ಹೊರಗಾದುದನ್ನು ಕಂಡು ಧೈರ್ಯವಾಯಿತು ನನಗೆ" ಎಂದ.

ರುಕ್ಮಿಣಿಯು ಸ್ತಬ್ಧಳಾದಳು. ಕೊನೆಗೆ "ಅಯ್ಯೋ-ಅದನ್ನೇ ಮನಸ್ಸಿಗೆ ಹಚ್ಚಿಕೊಂಡು ನೀವು ಮಂಕರಾದುದೇ? ನಾನು ಬಸಿರಿಯಾಗಿ ಸಾಯುವ ಯೋಗವಿದ್ದರೆ, ಯಾರೂ ತಪ್ಪಿಸಲಾರರು! ಮತ್ತೇನು ಮಾಡುತ್ತೀರಿ ನೀವು? ಮನುಷ್ಯ ರಕ್ತವಲ್ಲವೆ ನಮ್ಮದು! ಸಾಯುವ ಕಾಲ ಬಂದರೆ, ಸಾಯುವುದಂತೆ"

"ಅಲ್ಲ ರುಕ್ಮಿಣಿ, ನಾನು ಬಹಳ ಸಮಯ ದೂರ ಮಲಗಿದ್ದೆನಲ್ಲ. ಆದರೆ ಮನುಷ್ಯನ ಮನಸ್ಸು ದುರ್ಬಲ; ನನ್ನಿಂದ ನೀನು ಸಾಯಬಹುದೆಂದು ತಿಳಿದರೂ ನಾನು ಸಮೀಪ ಬಂದೆ"

"ಹಾಗೆಲ್ಲ ನೀವು ಮಾತನಾಡಬೇಡಿ! ಸಾಯುವುದಾದರೆ ಸಾಯಬೇಕು. ಅದು ಬ್ರಹ್ಮನ ಕೈಯಲ್ಲಿದೆ. ಗರ್ಭಿಣಿಯಾಗಿ ಸಾಯುವ ಯೋಗ ನನ್ನ ಹಣೆಯಲ್ಲಿ ಬರೆದಿದ್ದರೆ, ಯಾರು ಏನು ಮಾಡಿದರೂ ತಪ್ಪಿಸಲಾರರು. ನೀವು ಮನಸ್ಸಿಗೆ ಇಲ್ಲದ್ದನ್ನು ಹಚ್ಚಿಕೊಳ್ಳಬೇಡಿ" ಎಂದಳು.

"ರುಕ್ಮಿಣಿ" ಎಂದ ಅಚ್ಯುತರಾಯ.

"ಏನು?"

"ಎಷ್ಟೋ ವರ್ಷಗಳಿಂದ ನಿನ್ನೊಡನೆ ಒಂದು ಸಂಗತಿ ಹೇಳಬೇಕೆಂದಿತ್ತು. ಹೇಳಲೇ? ನೀನು ಬೇಸರ ಮಾಡುವುದಿಲ್ಲವಷ್ಟೆ."

"ನಾನು ಯಾಕೆ ನಿಮ್ಮ ಮೇಲೆ ಬೇಸರಪಡಬೇಕು? ನಿಮ್ಮಿಂದ

ನನಗೆ ಏನು ಅನ್ಯಾಯವಾಗಿದೆ! ನಾನಲ್ಲವೇ ನಿಮ್ಮನ್ನು ಬಯಸಿ ಬಂದ ವಳು. ನಿಮ್ಮ ಕಷ್ಟ, ನನ್ನ ಕಷ್ಟ-ಎಂದು ನಾನು ತಿಳಿಯುವುದು ತಪ್ಪೇ"

"ನಿನ್ನ ವಿಷಯ ಹೇಳುತ್ತಲಿಲ್ಲ ರುಕ್ಮಿಣಿ. ನನ್ನ ವಿಷಯ ಹೇಳು ತ್ತಿದ್ದೇನೆ-ಯಾಕೋ ಅವನ್ನು ಮನಸ್ಸಿನಲ್ಲಿ ತುಂಬಿಸಿಕೊಂಡೇ, ನಾನು ಸಂಕಟಪಡುತ್ತಿದ್ದೇನೆ. ಹೇಳಿಬಿಡುವ ಎಂದು ಕಾಣುತ್ತದೆ. ಮತ್ತೇ ಕಲ್ಲ, ಮನಸ್ಸು ಹಗುರಾಗಲು" ಎಂದು ದನಿಯನ್ನು ತಗ್ಗಿಸಿದ. ತನ್ನ ಮತ್ತು ಸುಬ್ಬಿಯ ಯಾವತ್ತು ಪ್ರಣಯ ವಾರ್ತೆಯನ್ನು ಆಕೆಯೊಡನೆ ಬಿಡಿಸಿ ಹೇಳಿದನು. ಆತನಿಗೆ ಈಗ ಧೈರ್ಯವಾಯಿತು. ಎದುರಿ ಗೇನೆ ಕುಳಿತ ರುಕ್ಮಿಣಿಯ ಮುಖ ಕಾಣಿಸುತ್ತಿರಲಿಲ್ಲ. ಅವಳ ಮುಖ ಭಾವಗಳು ಎಂಥದಿರಬಹುದೆಂಬ ಊಹೆಯೂ ಆಗುವಂತಿರಲಿಲ್ಲ. ಇವನೇ ಅಪರಾಧಿಯಂತೆ, ಅವಳ ಕೈಗಳನ್ನು ಬಿಟ್ಟು ಕುಳಿತ. ತಿರುಗಿ ಮೆಲ್ಲಗೆ ಕೆನ್ನೆಯ ತನಕ ಅವಳ ಹಸ್ತಗಳನ್ನು ಎಳೆದು ತಂದು, ತನ್ನವು ಗಳಲ್ಲಿ ಇರಿಸಿಕೊಂಡು, ಹೂ ಮೊಗ್ಗುಗಳನ್ನು ಮೃದುವಾಗಿ ಒತ್ತಿ ಹಿಡಿ ವಂತೆ, ಹಿಡಿದಿದ್ದ.

ಮಾತುಗಳನ್ನು ಮುಗಿಸಿದ ಅಚ್ಯುತರಾಯನು "ರುಕ್ಮಿಣಿ-ನಿನಗೆ ನನ್ನಿಂದ ಎಷ್ಟು ಅನ್ಯಾಯವಾಯಿತೋ? ಇನ್ನೇನೆಲ್ಲ ಆಗಲಿಕ್ಕಿದೆಯೋ; ಅದೇ ಹೆದರಿಕೆ ನನಗೆ. ನನಗೆ ಒಂದೊಂದು ಸಾರಿ, ಯಾಕೆ ಮನುಷ್ಯ ಬದುಕಬೇಕು ಅನಿಸುತ್ತದೆ" ಎಂದ.

ರುಕ್ಮಿಣಿಯು ಹಿರಿಯಳಂತೆ, ತಾಯಿಯಂತೆ, ತನ್ನ ಎದೆಯಲ್ಲಿ ಕರುಣೆಗೆ ಎಡೆ ಮಾಡಿಕೊಂಡಳು—"ನೀವು ಯಾವಾವ ನೆನಪುಗಳನ್ನು ತಂದು, ಇದ್ದ ಸುಖ ಕೆಡಿಸಿಕೊಳ್ಳಬೇಡಿ! ಯಾವ ರೀತಿಯಲ್ಲೂ ನೀವು ನನ್ನ ಪೂಜ್ಯತೆಗೆ ಕಡಮೆಯಾಗಲಾರಿರಿ. ಇನ್ನೊಬ್ಬರು ತಮ್ಮ ತಪ್ಪನ್ನು ಹೇಳುವುದಿಲ್ಲವಿತ್ತು-ಅದೂ ಹೆಂಡತಿಯಲ್ಲಿ. ಎಲ್ಲರ ಬದುಕಿನಲ್ಲೂ ತಪ್ಪು ಒಪ್ಪು ಸೇರಿರುತ್ತದೆ. ಅಂಥ ಧರ್ಮರಾಯನೇ ಯುದ್ಧದಲ್ಲಿ ಸುಳ್ಳು ಹೇಳಿದನಂತೆ!....ಆದರೆ ಒಂದು ಹೇಳುತ್ತೇನೆ. ನನ್ನ ವಿಷಯವಾಗಲೀ, ನಿಮ್ಮ ವಿಷಯವಾಗಲೀ-ನೀವು ಯಾವ ಯೋಚನೆಯನ್ನೂ ಕಟ್ಟಿಕೊಳ್ಳ ಬಾರದು. ದಿನ ಹೇಗೆ ಬಂತೋ ಹಾಗೆ ಕಳೆಯುವ! ಬಡತನ, ಉಪ ವಾಸ, ನಮಗೆ ಮಾತ್ರವೇನು? ನಿತ್ಯ ಮನೆಗೆ ಎಷ್ಟು ಜನರು ಬಂದು,

ಮುಖ ಸಣ್ಣಗೆ ಮಾಡಿ, "ಅರಿವೆ ಇದೆಯೇ--ಅಕ್ಕಿ ಇದೆಯೇ" ಎಂದು ಬೇಡುತ್ತಾರೆ. ಊರಲ್ಲಿ, ಸುಖದಲ್ಲಿ ಉಂಡು ತಿನ್ನುವವರು ನೂರಕ್ಕೊಬ್ಬರು ಇರಬಹುದು. ಉಳಿದವರು ನಮ್ಮಂತೆಯೆ; ನಮ್ಮಂತೆಯೂ ಅಲ್ಲ; ಅದಕ್ಕೂ ಕಡಿಮೆಯಾದವರೇ ಹೆಚ್ಚು! ನನಗೂ ಸುಖದ ಆಸೆ ಹೋಗಿದೆ; ಯಾವ ಭ್ರಮೆಯೂ ಇಲ್ಲ-ಬದುಕಿನ ವಿಷಯದಲ್ಲಿ. ದೇವರು ಆಯುಷ್ಯ ಕೊಟ್ಟರೆ, ಕೊಟ್ಟಷ್ಟು ದಿನ ಬದುಕುವುದಷ್ಟು!

"ನಾವೇ ಮುಖ ಸಣ್ಣಗೆ ಮಾಡಿ ನರಳುತ್ತಿದ್ದರೆ, ಪಾಪ, ಆ ಮಕ್ಕಳು ಏನು ಮಾಡಬೇಕು, ಹೇಳಿ. ಅವೂ ಆಟ, ನಗು ಎಲ್ಲವನ್ನು ನಿಲ್ಲಿಸಿಬಿಡುತ್ತವೆ! ಸಣ್ಣದರಲ್ಲಿ ನಾವು ನಕ್ಕಿಲ್ಲವೇ? ಈಗ ಅಳುವ ಕಾಲ ಬಂದಿದೆ. ಆದರೆ ನಾವು ಅವುಗಳ ಎದುರಿಗೆ ಮಂಕಾಗಿ ಅತ್ತು, ಅವುಗಳ ಸುಖ ಕೆಡಿಸಬಾರದಲ್ಲ. ನನಗೆ ಆ ಭಾಗೀರಥಮ್ಮನನ್ನು ಕಂಡರೆ, ದೇವರೇ ಅವರು, ಎನಿಸುತ್ತದೆ. ಪಾಪ! ನಮಗಿಂತ ಎರಡು ಪಾಲು ಕಷ್ಟ ಅವರಿಗೆ! ಆದರೆ ಒಂದು ಗಳಿಗೆಯೂ ಮಕ್ಕಳ ಮುಂದೆ ತಮ್ಮ ಕಷ್ಟ, ದುಃಖ ತೋಡಿಕೊಂಡವರಲ್ಲ. ದೇವರು ಆ ಧೈರ್ಯ ನಮಗೂ ಕೊಟ್ಟರೆ, ಇದರ ಅಪ್ಪನಂಥ ಕಷ್ಟದಿಂದ ಪಾರಾಗಬಹುದು. ಯುದ್ಧ ಜಗತ್ತಿಗೇ ಇದೆ. ನನಗೂ ನಿಮಗೂ ನಮ್ಮ ಮಕ್ಕಳಿಗೂ ಮಾತ್ರವಲ್ಲ; ಮುಖ್ಯ ನೀವು ಧೈರ್ಯ ಕಳಕೊಳ್ಳಬಾರದು" ಎಂದು ತನ್ನ ಹೃದಯವನ್ನು ಬಿಚ್ಚಿಹೇಳಿದಳು. ಆ ರಾತ್ರೆ ಅವರಲ್ಲಿ ಬಲುಹೊತ್ತು ಮಾತು ನಡೆಯಿತು. ಕೊನೆಗೆ ರುಕ್ಮಿಣಿ "ಇತ್ತಲಾಗಿ, ನೀವು ಪೇಪರು ಓದಿಲ್ಲ-ಎಂದು ಕಾಣುತ್ತದೆ! ಯುದ್ಧ ಎಲ್ಲಿಯ ವರೆಗೆ ಬಂದಿತೋ ಏನೋ" ಎಂದು ವಿಚಾರಿಸಿದಳು.

"ನಾಳೆ ಉಪ್ಪಿನಂಗಡಿಗೆ ಹೋಗುವುದು ಉಂಟು. ಪೇಪರು ಓದಿಕೊಂಡು ಬರುತ್ತೇನೆ" ಎಂದ ಆತ.



## ೨೧ನೆಯ ಅಧ್ಯಾಯ

ಬಂಡಾಡಿ ಊರಲ್ಲಿ ವೆಂಕಟರಮಣಯ್ಯನವರೆಂದರೆ, ಮಾತು ಭಾರರು. ಅವರಿಗೆ ಭೂಮಿಯಿಂದ ಬರುವ ಉತ್ಪನ್ನ ತುಂಬ; ತೋಟಗಳ ಉತ್ಪನ್ನವೂ ತುಂಬ. ಎಲ್ಲಿ ಭೂಮಿಯಿದ್ದರೂ ತಾನು ಮುಂದೆ ಎಂದು ಓಡಿ, ಅವರು ಸ್ಪರ್ಧೆಗೆ ನಿಲ್ಲುವವರು. ನಿತ್ಯ ಜೀವನದಲ್ಲಿ ಅವರೇನು ದುಂದುಗಾರರಲ್ಲ. ಹಾಗೆಂದು ಊರವರನ್ನು ಕೇಳಿದರೆ, 'ಅವರಿಗೆ ದಾನಮಾಡಿ ಗೊತ್ತಿಲ್ಲ, ಧರ್ಮ ಮಾಡಿಯೂ ತಿಳಿಯದು' ಅನ್ನುತ್ತಾರೆ. ಆದರೂ ಈ ವರ್ಷ ಅವರು ತಮ್ಮ ಎರಡನೆಯ ಮಗಳ ಲಗ್ನಕ್ಕೆ, 'ನಾಲ್ಕಲ್ಲ ಆರು ಸಾವಿರ ರೂಪಾಯಿಗಳಷ್ಟು ವ್ಯಯವಾದರೂ ನೋಡಿಬಿಡುವ' ಎಂದಿದ್ದಾರೆ. ಹಿಂದೆ, ಅವರ ಹಿರಿಯ ಮಗಳಿಗೆ ಲಗ್ನವಾಗಿ ಆರು ವರ್ಷಗಳು ಮೇಲ್ಪಟ್ಟು ಸಂದಿರಬೇಕು. ಹಣ ಹೀಗೆ ನೀರಂತೆ ಹರಿಯುತ್ತಿದ್ದ ಕಾಲವಾಗಿರಲಿಲ್ಲ-ಅದು. ಈಗ ಹಣ ಬರಿಯ ಕಾಗದಗಳ ಚೂರೆನಿಸಿದೆ. ಅಲ್ಲದೆ ಈ ಬಾರಿ, ಅವರು ಹೂಡಿರುವ ನಂಟುತನವೂ ಭಾರಿಯದೇ. ಬೆಳ್ತಂಗಡಿಯಿಂದ ಹುಡುಗ ಬರಬೇಕು. ಹುಡುಗನ ತಂದೆ ಜಗನ್ನಾಥಯ್ಯ ದರ್ಬಾರಿಗಳು. ತುಂಬ ಶ್ರೀಮಂತರಂತೆ ಅವರ ಶ್ರೀಮಂತಿಕೆಗೆ ತಮ್ಮದು ಕಡಮೆಯಲ್ಲವೆಂದು ತೋರಿಸುವ ಹುಮ್ಮಸವು ಈ ಬಾರಿ ವೆಂಕಟರಮಣಯ್ಯನವರಲ್ಲಿ ಉಂಟಾಗಿದೆ. ಬಂಡಾಡಿಯ ಸುತ್ತಲಿನ ಇಪ್ಪತ್ತು ಗ್ರಾಮಗಳ, ಮುಂಡಾಸಿನ ಮಾತುಭಾರರೆಲ್ಲರೂ, ಮದುವೆಗೆ ಜಮಾಯಿಸುವುದು ನಿಶ್ಚಯ. ಹೀಗಿರಲು ಮದುವೆಯ ಚಪ್ಪರ, ಓಲಗ, ದಿಬ್ಬಣ, ಔತಣ-ಎಲ್ಲವೂ ದೊಡ್ಡ ಅಳತೆಯಲ್ಲೇ ನಡೆಯಬೇಕೆಂದು ನಿಶ್ಚಯ ಮಾಡಿದರು. ಊರಲ್ಲಿ ಚಿಮಣಿ ಎಣ್ಣೆಯ ಅಭಾವವಿದ್ದರೂ, ಮದುವೆಯ ದಿನ, ಹತ್ತು ಮೂಲೆಗಳಲ್ಲೂ ಗ್ಯಾಸ್‌ದೀಪ ಉರಿಸಿಯೇ ಬಿಡುವ ನಿಶ್ಚಯ ಅವರದ್ದು. ಸಾಮಾನ್ಯರಿಗೆ, ಸಕ್ಕರೆ ಮದ್ದಿಗೂ ಸಿಗಲು ಕಷ್ಟವಾಗಿರುವಾಗ, ನಾಲ್ಕು ದಿನವೂ ಎರಡೆರಡು ಬಗೆ ಸಕ್ಕರೆ, ತುಪ್ಪದ ಭಕ್ಷ್ಯಗಳನ್ನು ಮಾಡಬೇಕೆಂದು ಅವರ ಮನಸ್ಸು. ಇಂಥೊಂದು ಲಗ್ನ ಸಮಾರಂಭ, ಅನ್ನಕ್ಕೆ ಕಂಗಾಲಾದ ಆ ದಿನಗಳಲ್ಲಿ, ಊರಲ್ಲಿ ನಡೆಯುವುದಾದರೆ, ಅದು ಊರಿಗೇನೆ ಒಂದು

ಮಹಾ ಉತ್ಸವವಾಗುವುದರಲ್ಲಿ ಸಂದೇಹವೇ?

ಲಗ್ನಕ್ಕೆ ಇನ್ನಾರು ದಿನಗಳಿವೆಯೆನ್ನುವಾಗಲೇ, ವೆಂಕಟರಮಣಯ್ಯನವರ ಮನೆಗೆ ಅವರ ಒಕ್ಕಲುಗಳು, ನದರು ಕಾಣಿಕೆಗಳನ್ನು ತರಲು ತೊಡಗಿದ್ದಾರೆ. ದಿನನಿತ್ಯವೂ ತರಕಾರಿ, ಅಕ್ಕಿ, ತೆಂಗಿನಕಾಯಿ, ಬಾಳೆಯ ಗೊನೆಗಳು-ಸಾಲುಸಾಲಾಗಿ ಬರುತ್ತಿವೆ. ಮದುವೆಯ ಬೆಳಗ್ಗೆ ಒಬ್ಬ ನೂರು ಹೊರೆಗಳನ್ನು ವಾದ್ಯ ಸಹಿತವಾಗಿ ಕಳುಹಿಸಬೇಕಾದರೆ, ಊರಲ್ಲಿ ವೆಂಕಟರಮಣಯ್ಯನವರ ಸಿರಿವಂತಿಕೆಯ ವರ್ಚಸ್ಸು ಎಷ್ಟಿರಬೇಡ! ಈ ಎಲ್ಲ ಹೊರೆ, ನದರುಕಾಣಿಕೆಗಳು ಬಂಡಾಡಿ ಬಯಲಿಗೆ ಇಳಿದು, ಆಚೆ ತುದಿಯಲ್ಲಿರುವ, ವೆಂಕಟರಮಣಯ್ಯನವರ ಮನೆಗೆ ಹೋಗಬೇಕು. ಇಳಿಯುವುದು ಅಚ್ಯುತಮಾಸ್ತರರ ಮನೆಯ ಮುಂದಿಂದಲೇ! ಅಚ್ಯುತರಾಯನ ಮಕ್ಕಳಿಗೆ ವೆಂಕಟರಮಣಯ್ಯನವರ ಮನೆಗೆ ಸಾಗುತ್ತಿರುವ ಕಾಣಿಕೆ ಹೊರೆಗಳನ್ನು ಎಣಿಸುವ ಕೆಲಸ. "ಅಮ್ಮ, ಇವತ್ತು ಇಷ್ಟು ಹೊರೆ ಹೋಯಿತು. ನಿನ್ನೆ ಬೆಳಗ್ಗೆ ಇಷ್ಟು ಹೋಯಿತು" ಎಂದು ಅವು ಹೇಳುವಾಗ, ಭಾಗೀರಥಿಯಂತು "ಏನೋ, ದೇವರು ಇರುವವನಿಗೆ ಬೇಡದಷ್ಟು ಹೊರಿಸುತ್ತಾನೆ. ಇಲ್ಲದವರಿಗೆ ಇಲ್ಲವೇ ಇಲ್ಲ" ಎನ್ನುತ್ತಾಳೆ. ರುಕ್ಮಿಣಿ "ಭಾಗೀರಥಮ್ಮ, ಎಲ್ಲ ಅವರವರ ಹಣೆ ಮೇಲೆ ಬರೆದ ಹಾಗಲ್ಲವೇ! ಹಿಂದಿನ ಜನ್ಮದಲ್ಲಿ ಎಷ್ಟು ಪುಣ್ಯಮಾಡಿದ್ದಾರೋ" ಎನ್ನುತ್ತಾಳೆ. ಅಚ್ಯುತನ ಕಿವಿಗೆ ಈ ಮಾತುಗಳು ಕೇಳಿಸಿದರೆ, "ಹೂಂ, ಹಲವರ ತಲೆ ಹೊಡೆದು, ದುಡ್ಡು ಮಾಡಲು, ಒಂದು ಪುಣ್ಯ ಬೇಕಪ್ಪ!" ಎಂದುಬಿಡುತ್ತಾನೆ. ರುಕ್ಮಿಣಿ ಆಗ "ನಮಗೆ ಇಲ್ಲವೆಂದು, ಇದ್ದವರ ಮೇಲೆ ನಾವೇಕೆ ರೇಗಬೇಕು ಹೇಳಿ?" ಎನ್ನುತ್ತಾಳೆ.

ಇದರ ನಡುವೆ, ಮದುವೆಗೆ ಮೂರು ದಿವಸಗಳಿರುವಾಗ, "ಅಮ್ಮ, ಮದುವೆಗೆ ಕರೆದುಕೊಂಡು ಹೋಗುತ್ತೀಯಲ್ಲ" ಎಂದು ಮಕ್ಕಳಿಂದ ಆ ತಾಯಿ ತಂದೆಯರಿಗೆ ಪೀಡೆ ಬೇರೆ. ಅಚ್ಯುತನನ್ನು ಮಕ್ಕಳು ಕೇಳಿದರೆ "ಹೇಳಿಕೆ ಬರಬೇಡವೇ? ನಾವೇನು ದೊಡ್ಡವರೇ? ನಾವೇನು ಅವರ ನಂಟರೇ" ಎನ್ನುತ್ತಾನೆ. ಕೃಷ್ಣನಂತು "ಅಪ್ಪಯ್ಯ, ನಂಟರಲ್ಲದಿದ್ದರೇನಾಯಿತು? ಮದುವೆಯ ಚಪ್ಪರವನ್ನಾದರೂ ನೋಡಿಕೊಂಡು ಬರಬಾರದೇ" ಎನ್ನುತ್ತಾನೆ. ಕೊನೆಗೆ ಎರಡೂ ಮನೆಯ ಕಿರಿಗೂಸು

ಗಳು ವರಾತ ಹಿಡಿದು, ಮದುವೆಯ ಮುಂಚಿನ ದಿನ, ಚಪ್ಪರ ನೋಡಿ ಕೊಂಡು ಬಂದುವು. ಬೇಗಡೆ ತಗಡುಗಳ ಪಂಚವರ್ಣ ರಂಜಿತ ಚಪ್ಪರ, ಮಂಟಪಗಳಂತೆ! ಎಲ್ಲೆಲ್ಲೂ ಅರಿವೆಯಿಂದ ಮುಚ್ಚಿದ ಮೇಲುಗಟ್ಟು! ಈಗಾಗಲೇ ಕೆಂದಾಳಿಗೊನೆ, ಬಾಳೆಗೊನೆ, ಅಡಿಕೆಗೊನೆಗಳಿಂದ, ಚೆಲುವಾಗಿ ಶೃಂಗರಿಸಿದ ಅಲ್ಲಿನ ಕಂಬಗಳನ್ನು ನೋಡಿಕೊಂಡು ಬಂದರು. ಮನೆಗೆ ಬಂದ ಮಕ್ಕಳು "ಅಮ್ಮ, ಒಂದು ಮರಸಣಿಗೆ ಗಡ್ಡೆ ಕಂಬಕ್ಕೆ ಬಿಗಿದಿದ್ದರು, ಮೂರು ಕೋಲು ಉದ್ದವಿದೆ! ಇನ್ನು ಚಪ್ಪರಕ್ಕೆ ತೂಗಿದ ಅಡಿಕೆ, ಬಾಳೆಗೊನೆಗಳಿಗೆ ಲೆಕ್ಕವೇ ಇಲ್ಲ" ಎನ್ನುತಿದ್ದುವು. ಆದರೇನು, ವೆಂಕಟರಮಣಯ್ಯನವರಿಂದ ಆಮಂತ್ರಣ ಅವರಿಗೆ ಬರಬೇಡವೇ!

ಮದುವೆ ಮುಂಚಿನ ದಿನ ರಾತ್ರಿ ಎರಡು ಮನೆಯುವರೂ ಮಲಗಿದ್ದರು. ವೆಂಕಟರಮಣಯ್ಯನವರ ಶ್ಯಾನುಭಾಗರಿಗೆ ನಾಗಪ್ಪಯ್ಯನವರು ಚೆನ್ನಾಗಿ ಗೊತ್ತು. ಅವರು ಊರಿಗೆ ಹಳಬರಷ್ಟೆ. ಅಚ್ಚುತನ ಪರಿಚಿತಿ ಕಡಮೆ. ಅವರು ಆ ಮನೆಯ ಹೊರಗೆ ನಿಂತು, "ಮಾಸ್ತರರೇ" ಎಂದು ಕೂಗಿದರು. ನಾಗಪ್ಪಯ್ಯ ಬಾಗಿಲು ತೆರೆದರು. "ಹೋ-ನೀವೋ! ಬನ್ನಿ" ಎಂದರು. "ನನಗೆ ಪುರುಸೊತ್ತಿಲ್ಲ. ಇನ್ನು ಐವತ್ತು ಮನೆಗಳಿಗೆ ಹೇಳಿಕೆಯನ್ನು ನಾಳೆ ಮಧ್ಯಾಹ್ನದೊಳಗೆ ಮುಗಿಸಬೇಕು. ನಾಳೆ ಊರವರ ತಕರಾರು ಬರಬಾರದಲ್ಲ" ಎಂದರು.

"ಹೇಳಿಕೆಗೆ ಹೊರಟದ್ದೋ ಈಗ"

"ಹೌದು-ಎಲ್ಲ ಬಂದುಬಿಡಿ ನಾಲ್ಕುದಿನ" ಎಂದರು.

ಅನಂತರ ಅಲ್ಲಿಂದಲೇ "ಅಚ್ಚುತ ಮಾಸ್ತರರೇ" ಎಂದು ಕರೆದರು. ಅಚ್ಚುತ ಅರೆನಿದ್ದೆಯಿಂದ ಎದ್ದು ಬಂದ. "ಮಾಸ್ತರೇ, ನಮ್ಮ ಧನಿಗಳಲ್ಲಿ ಲಗ್ನ; ಬರಬೇಕು ನೀವು. ಮದುವೆಯ ನಾಲ್ಕು ದಿನಗಳಿಗೂ ಬನ್ನಿ ಎಂದು ತಿಳಿಸಿದ್ದಾರೆ" ಎಂದು ಹೊರಟುಹೋದರು. ಅವರು ಹೋದೊಡನೆಯೇ ಅರೆನಿದ್ದೆಯಲ್ಲಿ, ಆ ಹೇಳಿಕೆಯನ್ನು ಕೇಳಿದ ಇಬ್ಬರು ಮಕ್ಕಳು "ಅಪ್ಪಾ, ಬಂತಲ್ಲ ಮದುವೆ ಹೇಳಿಕೆ. ನಾವು ಬೆಳಗ್ಗೆ ಹೋಗುತ್ತೇವೆ; ಮತ್ತೆ ಬರುವುದು ನಾಲ್ಕು ದಿನವಾದ ಮೇಲೆ" ಎಂದುವು. ಅವರ ಶಾಲೆಯ ಗೆಳೆಯರಿಂದ ಲಗ್ನದ ಕತೆ ಅವರಿಗೆ ತಿಳಿದು ಬರುವುದಿಲ್ಲವೇ? ಅಲ್ಲದೆ ತೀರ ನೆರೆಮನೆಯಲ್ಲಿ ನಡೆಯುತ್ತಿರುವ ಕೋಲಾಹಲವದು.

ಅಚ್ಯುತ ಮಲಗಿದ್ದಾಗಲೇ, ಈಚೆಯ ಮನೆಗೆ ಸಲಿಸಿದ ಹೇಳಿಕೆ ಕೇಳಿಸಿತ್ತು. ಅದರಲ್ಲಿ "ನೀವೆಲ್ಲ ಬನ್ನಿ" ಅಂದುದೂ, ತನಗೆ ಮಾತ್ರ ಹೇಳುವಾಗ "ಮಾಸ್ತರರೇ ಬನ್ನಿ ನಾಲ್ಕು ದಿನ" ಅಂದುದೂ. ಆವನಿಗೆ ಕೇಳಿಸಿತ್ತು. ಅಲ್ಲಿಂದಲೇ ಆತನ ಮನಸ್ಸು ಯೋಚನೆಗಳಲ್ಲಿ ತಲ್ಲೀನ ವಾಯಿತು. 'ಹೇಳಿಕೆ ತನ್ನೊಬ್ಬನಿಗೆ, ಕುಟುಂಬಕ್ಕಿಲ್ಲವಲ್ಲ' ಎಂದು.

ಮರುದಿನ, ರಾತ್ರಿ ದಿಬ್ಬಣ ಬರುವಲ್ಲಾಯಿತು. ದೂರದಿಂದಲೇ ದೀವಿಗೆ, ಗರ್ನಾಲು, ಬಾಣ ಬಿರುಸುಗಳ ಗದ್ದಲ ಕೇಳಿಸಿತು. ನಾಗ ಪ್ಪಯ್ಯ ಮಾಸ್ತರರ ಪರಿವಾರವೆಲ್ಲ ಲಗ್ನಕ್ಕೆ ಹೊರಟಿತು. ಅಚ್ಯುತಮಾಸ್ತ ರರ ಮಕ್ಕಳು "ಅಪ್ಪಯ್ಯ ನಾವೂ ಹೋಗುವ" ಎನ್ನುತ್ತಿದ್ದರು. ಅಚ್ಯುತ ನಿಗೂ ರುಕ್ಮಿಣಿಗೂ ಹೋಗುವ ಹುಮ್ಮಸವಿಲ್ಲ. "ನಾವೇನು ನಂಟರೇ, ಇಷ್ಟರೇ! ಯಾಕೆ ಹೋಗಬೇಕು? ಹೇಳಿದ್ದಕ್ಕೆ ಒಂದು ದಿವಸ ಮುಖ ತೋರಿಸಿ ಬಂದರಾಯಿತು" ಎಂದುಕೊಂಡಿದ್ದರು. ಆದರೆ ನಾಗಪ್ಪಯ್ಯ ಮಾಸ್ತರರು ಬಂದು ಒತ್ತಾಯಿಸಿದರು. "ಶ್ಯಾನುಭೋಗರ ಮೂಲಕ ಹೇಳಿಕೆ ಬಂದಿದೆ. ಅವರೇ ಬಂದು ತಿಳಿಸಿಲ್ಲ ಎಂಬ ಬೇಸರವೇ! ಅವರಿ ಗೆಷ್ಟಲ್ಲಾ ಕೆಲಸವಿರಬಹುದೋ; ನನ್ನ ಹತ್ತಿರ ನಿಮ್ಮನ್ನು ಬಿಟ್ಟುಬರ ಬಾರದು, ಎಂದಿದ್ದಾರೆ" ಎಂದರು. ನಾಗಪ್ಪಯ್ಯ ಗೆದ್ದರು; ಅವರ ಬಲ ವಂತಕ್ಕೆ ಈ ನಾಲ್ಕು ಮಕ್ಕಳನ್ನು ಕರೆದುಕೊಂಡು ಹೋಗಲು ಅಚ್ಯುತ ಒಪ್ಪಿದನು. ರುಕ್ಮಿಣಿಯು ಮನೆಯ ಕಾವಲಿಗಿರುವುದು ಎಂದಾಯಿತು. ಕೊನೆಗೆ ಯೋಚನೆ ಬದಲಿಸಿ; ''ನಾನು ಇನ್ನೊಂದು ದಿನ ಹೋಗಿ ಬರುತ್ತೇನೆ, ಇವತ್ತು ರುಕ್ಮಿಣಿ ಹೋಗಲಿ" ಎಂದು ಅಚ್ಯುತ ಹೇಳಿದ.

ದಿಬ್ಬಣ ಬರುವಾಗ ಈ ಎರಡೂ ಮನೆಯವರು ದಿಬ್ಬಣಿಗರ ಜತೆಗೆ ಸೇರಿಕೊಂಡರು. ಮದುವೆಯ ಚಪ್ಪರವನ್ನು ಸೇರಿ, ಸಂತೆಯ ಲ್ಲೊಂದು ಹುಳುವಿನಂತೆ, ತಮ್ಮ ಸಣ್ಣತನಕ್ಕೆ ಸಮನಾದ ಮೂಲೆಯಲ್ಲಿ ಕುಳಿತರು. ಅಲ್ಲಿ ದೊಡ್ಡವರಿಗೆ ಉಪಚಾರ ಸೇವೆಗಳಾಗುವಾಗ, ಆ ಕೋಲಾಹಲ, ಸಂಭ್ರಮಗಳನ್ನು ನೋಡಿ, ತೃಪ್ತಿಪಟ್ಟು ಮನೆಗೆ ಹಿಂದಿ ರುಗಿ ಬಂದರು. ಅಂತೂ ಮನೆ ಮಕ್ಕಳಿಗೆ ಬಹುಕಾಲದ ಬಳಿಕ ಒಂದು ಭಾರಿ ಉತ್ಸವವನ್ನು ನೋಡಿದ್ದಕ್ಕೆ ಸಂತೋಷವಾಯಿತು. ಅಚ್ಯುತನ ಮಕ್ಕಳು-ಮರುದಿನ, ಅದರ ಮರುದಿನ, ಮದುವೆ ಮನೆಗೆ ಹೋಗ

ಬೇಕೆಂದು ಹಟಹಿಡಿದುವು. ಆತ ಅವನ್ನು ಗದರಿಸಿ, ಸುಮ್ಮಗಿರಿಸ ಬೇಕಾಯಿತು. ಕಾರಣ, ಈ ಲಗ್ನದ ಆಮಂತ್ರಣ ಅವನ ಅಭಿಮಾನಕ್ಕೆ ತೃಪ್ತಿಕೊಟ್ಟಿರಲಿಲ್ಲ. ನಾಗಪ್ಪಯ್ಯನವರು ಸಕುಟುಂಬ ಸಪರಿವಾರ ಸಮೇತರಾಗಿ ಹೋಗಿದ್ದರು. ಒಲೆಯಲ್ಲಿ ಬೆಂಕಿ ಹೊತ್ತಿಸಲಿಲ್ಲ; ಗಂಜಿ ಊಟಕ್ಕೂ ಅಲ್ಲೇನೆ ಇದ್ದರು. ದೊಡ್ಡದೊಂದು ಸ್ವರ್ಗ ತೇಲಾಡಿದಂತೆ, ಅವರ ಮಕ್ಕಳಿಗೆ ಭಾವನೆಯಾಗಿತ್ತು. ಈ ಮೂರು ವರ್ಷಗಳ ಯುದ್ಧ ಕಾಲದ ವನವಾಸದಲ್ಲಿ, ಅದೊಂದು ಪರ್ವ ಕಾಲ ಉದಯಿಸಿದರೆ, ಆ ಎಳೆಯ ಎದೆಗಳಿಗೆ ಎಷ್ಟು ಹರ್ಷವಾಗಬೇಡ! ಅದರಂತೆ ಭಾಗೀರಥ ಮ್ಮನಿಗೂ ನಾಗಪ್ಪಯ್ಯಗೂ ಆ ಮದುವೆಯೆಂಬುದು ಬಲು ಸಂತೋ ಷದ ದಿನಗಳಾದುವು.

ಅಚ್ಚುತನ ಮನಸ್ಸು ಮಾತ್ರ ಏನೂ ಉತ್ಸಾಹ ತಾಳಲಿಲ್ಲ. ನಾಗ ಪ್ಪಯ್ಯನವರ ಒತ್ತಾಯಕ್ಕೂ, ಅವನು ತನ್ನ ಮನೆಯನ್ನು ಬಿಟ್ಟು ಕದಲು ವಂತಿರಲಿಲ್ಲ. ಆದರೆ ಕೊನೆಯ ದಿನ ನಾಗಪ್ಪಯ್ಯನವರು "ಏನು, ನಮ್ಮ ಮನೆಗೆ ಮಾಸ್ತರರು ಮುಖ ಹಾಕಲೇ ಇಲ್ಲ" ಎಂದು ವೆಂಕಟ ರಮಣಯ್ಯ ತಮ್ಮಲ್ಲಿ ತಿಳಿಸಿದ ವಿಚಾರವನ್ನು ಅವನಿಗೆ ಹೇಳಿದರು. ಅದರಿಂದ "ಊರ ಮುಖಂಡರಿಗಾದರೂ, ಮರ್ಯಾದೆ ಸಲಿಸುವೆ" ಎಂದು ಅಚ್ಚುತ ಹೋಗಬೇಕಾಯಿತು. ಆದರೆ ಹೋಗುವಾಗಲೆಲ್ಲ ಅವನಿಗೆ ತುಂಬ ವ್ಯಥೆ, ದಾರಿಯಲ್ಲಿ ಈ ಊಟಕ್ಕೆ ಹೋಗುವ ಜನ ಸಂದಣಿಯನ್ನು ಕಂಡು, ಬಾಯಿ ನೀರೂರಿ ನಿಂತಿದ್ದ ಬಡಪಾಯಿಗಳು ಹಲವರಿದ್ದರು. ಬರಗಾಲದಿಂದ ಬೆಲ್ಲದ ಚೂರನ್ನು ಕಾಣದೆ, ಅವರು ಎಷ್ಟು ದಿನ ಕಳೆದಿದ್ದರೋ! ಆದರೆ ವೆಂಕಟರಮಣಯ್ಯನವರಲ್ಲಿನ ಲಗ್ನಕ್ಕೆ, ಅವರ ಒಕ್ಕಲುಗಳಿಗೆ ಹೇಳಿಕೆಯಿತ್ತೇ ವಿನಾ ಊರಿನ ಇತರ ರಿಗೆ, ಅನ್ಯ ಜಾತಿಯವರಿಗೆ, ಊಟಕ್ಕೆ ಹೇಳಿರಲಿಲ್ಲ! ಹೇಳಿ ಕರೆಯಿಸಿದ ವರಿಗೂ, ಬ್ರಾಹ್ಮಣರ ಊಟ ಮುಗಿದು, ಎರಡನೇ ಪಂಕ್ತಿ, ಮೂರನೇ ಪಂಕ್ತಿಗಳು ಕಳೆದು, ತೀರ ಕತ್ತಲು ಹರಿಯುವಾಗ, ಉಳಿದ ಅನ್ನ ಸಾರು ಗಳನ್ನು 'ಉದ್ದವಮಾಡಿ' ಬಡಿಸಿದರೆ ಸಾಕೇ? ಅವರಿಗೆ ಪಾಯಸವನ್ನು ಧಾರಾಳವಾಗಿ ಬಡಿಸಬಹುದಲ್ಲದೆ, ಮಣಕ್ಕೆ ಹದಿನೆಂಟು ರೂಪಾಯಿ ಕೊಟ್ಟು ಕೊಂಡ ಸಕ್ಕರೆಯ ಭಕ್ಷಗಳನ್ನು ಬಡಿಸಿಯಾರೆ!

ಬ್ರಾಹ್ಮಣರಿಗೆ ಊಟ ಬಡಿಸುವಾಗಲೂ-ಮೇಲು ಚಾವಡಿಯಲ್ಲಿ ಕುಳಿತ ಮುಖಂಡರ, ಬೀಗರ ಮುಂದೆ ಲಾಡಿನ ಉಂಡೆ, ಹೋಳಿಗೆ ಗಳು ನಾಲ್ಕು ಸಾರಿ ಓಡಾಡಿದುವು; ಕೆಳಕ್ಕೆ ಬರುತ್ತ, ಚಾವಡಿಯಿಂದ ಅಂಗಳದಲ್ಲಿ ಕುಳಿತವರಿಗೆ ಬರಲು, ಒಂದೊಂದೇ ಲಾಡು ಬಡಿಸಿದರು. ಚತುರ್ಥಿ ಊಟಕ್ಕೆ, ನಾಗಪ್ಪ ಮಾಸ್ತರರ ಮಗ್ಗುಲಲ್ಲೇ ಅಚ್ಯುತರಾಯ ಕುಳಿತಿದ್ದನು. ಈಚೆಗೆ ನಾಗಪ್ಪಯ್ಯನವರ ಮಕ್ಕಳು ಸಾಲು ಹಿಡಿದು ಕುಳಿತಿದ್ದರು. ಭಕ್ಷ್ಯ ಬಡಿಸುವ ವೇಳೆ, ನಾಗಪ್ಪಯ್ಯನವರು ಅದನ್ನು ಕೈಯಲ್ಲಿ ಹಿಡಿದರು. ಮಕ್ಕಳೂ ಮನೆಗೊಯ್ಯಬಹುದೆಂದು ಹಾಗೆಯೇ ಮಾಡಿದುವು. ಅಚ್ಯುತರಾಯ ಕೈಯನ್ನು ಹಿಡಿಯಲೂ ಇಲ್ಲ; ಎಲೆಗೆ ಬಡಿಸಿದ್ದನ್ನು ಉಣ್ಣಲೂ ಇಲ್ಲ. "ಏನು ಮಾಸ್ತರರೇ ಮೈ ಚೆನ್ನಾಗಿ ಲ್ಲವೇ?" ಎಂದು ನಾಗಪ್ಪಯ್ಯ ವಿಚಾರಿಸಿದರು. ಅಚ್ಯುತ ಉತ್ತರಕೊಡ ಲಿಲ್ಲ. ಎಲೆಯ ಮೇಲೆ ಹದಿನಾಲ್ಕು ಪಲ್ಯ, ಎಂಟು ಚಟ್ನಿ, ಮೂರು ಹುಳಿ, ಎರಡು ಪಾಯಸ, ನಾಲ್ಕು ಭಕ್ಷ್ಯಗಳು ಒಂದರ ಮೇಲೊಂದು ಬೀಳುವಾಗ, ಅದನ್ನೆಲ್ಲ ಭೂತಗಳಿಗೆ ಬಲಿಯಿಕ್ಕಿದಂತೆ, ಮುಟ್ಟದೆ ಕುಳಿತಿದ್ದ. ಅಚ್ಯುತನ ಮನಸ್ಸು ತನ್ನ ದೀನತೆಯ ಕಡೆಗೆ ನಟ್ಟಿತ್ತು. "ಯಾಕಿದು? ಈ ಒಂದು ಗಳಿಗೆಯ ಸಂಭ್ರಮ? ವರ್ಷವೆಲ್ಲ ಬರಿಯ ಗಂಜಿಗಾಗಿ ಮೊರೆಯಿಡುವವರಿಗೆ" ಎಂದು ಚಿಂತಿಸುತ್ತಿದ್ದ. ಮೊದಲಿನ ತುತ್ತಿಗೇನೆ, ಅವನು ಬಾಯಿಗೆ ಇರಿಸಲೆತ್ನಿಸಿದ ಅನ್ನ, ಒಳಕ್ಕಿಳಿಯದಾ ಯಿತು. ಸವಿಯಾದ ಹುಳಿ, ಸಾರುಗಳನ್ನೂ ಮುಟ್ಟಲಿಲ್ಲ! ಮನೆಯಲ್ಲಿ ಉಳಿದಿದ್ದ ತನ್ನ ಮಕ್ಕಳ ನೆನಪು ಬಂದಿತು. ರುಕ್ಮಿಣಿಯನ್ನು ನೆನೆದ; ಊರಿನ ಹಸಿವನ್ನು ನೆನೆದ; ದಾರಿಯಲ್ಲಿ ಬರುವಾಗ ಹಲವು ಮುಖಗಳು ಮದುವೆ ಚಪ್ಪರ ನೋಡಿ, ಬಾಡಿದ ಕಣ್ಣುಗಳನ್ನು ಆ ಕಡೆ ಹೊರಳಿಸಿ ದ್ದುದನ್ನೂ ನೆನೆದುಕೊಂಡ. ಈ ಚಿತ್ರಗಳ ಮುಂದೆ ಔತಣ ಹಳಸಿತು, ಪಾಯಸ ಕಹಿಯಾಯಿತು; ಎಲ್ಲವೂ ವಿಷವಾಯಿತು! ಅಲ್ಲೇ ಕಣ್ಣಿಂದ ಹನಿಯುದುರಿ, ಯಾರಿಗೂ ಕಾಣದಂತೆ ಉಜ್ಜಿಕೊಂಡನು. ಊಟವಾ ದೊಡನೆ ನೇರಾಗಿ ಮನೆಗೆ ಬಂದು ಮಲಗಿಕೊಂಡ. ಬಂದಾಗಲೇ ಕೃಷ್ಣ, ಗೋಪಾಲ, ಬಾಲಕೃಷ್ಣರು "ಅಪ್ಪಯ್ಯ — ನೀನು ಜೋರು! ನಮ್ಮನ್ನು ಬಿಟ್ಟು ನೀನೊಬ್ಬನೇ ಉಣ್ಣಲಿಕ್ಕೆ ಹೋದೆಯಲ್ಲವೇ" ಅಂದರು. ಅಚ್ಯು

ತನ ಮುಖ ತೀರ ಸಪ್ಪಗಾಯಿತು. ತಾನೊಬ್ಬ ಅಪರಾಧಿಯೆನಿಸಿತು. ತಾನು ಊಟ ಮಾಡದಿದ್ದರೇನು, ಮಕ್ಕಳನ್ನು ಬಿಟ್ಟು ಹೋದುದು ತಪ್ಪಲ್ಲವೇ ಎಂದೆನಿಸಿತು. "ಹೌದು-ನಾನು ಜೋರು" ಎಂದು ಆತನಿಗೆ ಅನಿಸಿತು.

ಅವನ ಮನಸ್ಥಿತಿಯನ್ನು ಮಾತುಗಳಿಂದ ತಿಳಿದ ರುಕ್ಮಿಣಿ, ಕೃಷ್ಣನನ್ನು ಕುಳ್ಳಿರಿಸಿಕೊಂಡು, ಅವನಿಗೆ ತಿಳಿಯುದತತ್ವಜ್ಞಾನವನ್ನು ಬೋಧಿಸಿದಳು. ಕೃಷ್ಣನಂತು, ತಂದೆಯ ಬಳಿಗೆ ಹೋಗಿ "ಅಪ್ಪಯ್ಯನಿಗೆ ಬೇಜಾರಾಯಿತೆ? ಇನ್ನು ಹಾಗೆ ಕೇಳುವುದಿಲ್ಲ" ಎಂದನು. ನಾಗಪ್ಪಯ್ಯನವರ ಮಕ್ಕಳು ತಮ್ಮ ಮನೆಗೆ ಬಂದರೆ, ಅವರೊಡನೆ ಔತಣದ ವಿಚಾರವನ್ನು ಯಾರೂ ಮಾತನಾಡಲಿಲ್ಲ. ಅದರಲ್ಲೂ ನಾಗಪ್ಪಯ್ಯನ ಮಗ ಸುಬ್ಬರಾಯ ಅನಂತಕೃಷ್ಣನಿಗೆ ತಿಂಡಿಯ ಚೂರೊಂದನ್ನು ಕೊಡಲು ಬಂದಿದ್ದ. "ನನಗೆ ಬೇಡ" ಎಂದು ಆತ ಅದನ್ನು ನಿರಾಕರಿಸಿಬಿಟ್ಟ.

ಅಚ್ಯುತನ ಮನಸ್ಸಿನಲ್ಲಿ, ಜಗತ್ತಿನ ಬಡತನ ಶ್ರೀಮಂತಿಕೆಗಳ ತೀಕ್ಷ್ಣ ವ್ಯತ್ಯಾಸವು ತುಂಬ ಕೊರೆಯುತ್ತಿದೆ. ಜಾನ್‌ಸನರು ಯಾವಾಗಲೂ 'ಇದಕ್ಕೆಲ್ಲ ರಷ್ಯ ಬರಬೇಕಯ್ಯ" ಎನ್ನುತ್ತಿರಲಿಲ್ಲವೇ? ಆ ಮಾತಿನ ನೆನಪು ಮರುಕಳಿಸಿ "ಒಂದಿಷ್ಟು ಜನ, ಉಪ್ಪು ಮೆಣಸು ಕೊಳ್ಳಲು ಕಾಸಿಲ್ಲದೆ ಇರುವವರು; ಇನ್ನು ಕೆಲವರು-ಹನೆದಿಂಟು ರೂಪಾಯಿಯ ಸಕ್ಕರೆ ಕೊಂಡೂ ದಕ್ಕಿಸಬಲ್ಲರು! ಒಂದು ಮದುವೆಗೆ ಐದು ಸಾವಿರ ರೂಪಾಯಿ ಕರಗಿಸಲೂ ತಯಾರು— ದೇವರು ಇದ್ದಾನಂತಲ್ಲ! ಅವನು ಇದನ್ನೆಲ್ಲ ನೋಡುತ್ತಾನೆಯೆ?" ಎನ್ನುತ್ತಾನೆ.

ರುಕ್ಮಿಣಿ ಆಗ "ಇದೇನು ಹುಚ್ಚು!— ಅವರವರ ಕರ್ಮದ ಫಲ ಅಲ್ಲವೇ? ಹಿಂದೆ ಒಳ್ಳೆಯದನ್ನು ಮಾಡಿದವರಿಗೆ ಈಗ ಒಳ್ಳೆಯದು ಸಿಗುತ್ತದೆ. ಕೆಟ್ಟದು ಮಾಡಿದವರಿಗೆ ಈಗ ಕೆಟ್ಟದು" ಎಂದಳು.

"ಹೌದು ರುಕ್ಮಿಣಿ-ಈ ಯುದ್ಧದ ಸಮಯದಲ್ಲಿ, ಒಂದೇ ಸಾರಿಗೆ ಕೆಲವರ ಪುಣ್ಯ ಒಂದಕ್ಕೆ ಹತ್ತಾಯಿತು; ಉಳಿದವರ ಪಾಪ ಒಂದಕ್ಕೆ ನೂರಾಯಿತು-ಅನ್ನುತ್ತೀಯಾ? ಊರಿಂದೂರೇ ಇಂದು ಹೊಟ್ಟೆಗಿಲ್ಲದೆ ನರಳಬೇಕಾದರೆ, ಊರಿಂದೂರೇ ಹಿಂದಣ ಜನ್ಮದಲ್ಲಿ ಒಂದೇ ಸಾರಿಗೆ ಪಾಪ ಮಾಡಿತೇನು? ನಿನಗೆ ಭ್ರಾಂತಿ! ಪಾಪವೂ ಇಲ್ಲ, ಪುಣ್ಯವೂ ಇಲ್ಲ.

ಒಬ್ಬರನ್ನೊಬ್ಬರು ನುಂಗಿ ಬದುಕುವುದೇ ಬದುಕು! ಈಗ ನಾವು ಪಟ್ಟ ಕಷ್ಟಗಳನ್ನು ಲೆಕ್ಕಹಾಕಿದರೆ, ಹಿಟ್ಲರ್ ಮಾಡಿದ ಅನ್ಯಾಯಕ್ಕಿಂತಲೂ ಹೆಚ್ಚು ಅನ್ಯಾಯ ಮಾಡಿರಬೇಕಲ್ಲವೇ! ಅಷ್ಟು ಪಾಪ ನೀನೂ, ನಮ್ಮ ಮಕ್ಕಳೂ ಮಾಡಿರಬೇಕಲ್ಲವೇ? ಇದೆಲ್ಲ, ದುಃಖ ಕಳೆಯಲಾರದ್ದಕ್ಕೆ ತಂದುಕೊಳ್ಳುವ ಸಮಾಧಾನ.... ಏನಿಲ್ಲ. ಮನುಷ್ಯ ಇನ್ನೂ ಮೃಗ ವಾಗಿಯೇ ಇದ್ದಾನೆ. ಈ ಪ್ರಪಂಚದಲ್ಲಿ ಯಾವುದು ದೊಡ್ಡ ಹುಲಿಯೋ. ಅದಕ್ಕೆ ಊರಿನ ಹುಲ್ಲೆಗಳ ಮೇಲೆ ಅಧಿಕಾರ!" ಎಂದ.

ಮುಂದೆ ರುಕ್ಮಿಣಿ ಬಹಳವಾಗಿ ಮಾತನಾಡಿಸಿದರೂ, ಅವನು ಮೌನವಾಗಿದ್ದ; ಕೊನೆಗೆ ರುಕ್ಮಿಣಿಯೇ ಅಂಜಿ "ನೀವು ಇಲ್ಲದ್ದೆಲ್ಲ ಎಣಿಸಿ ಕೊಂಡು ತಲೆ ಕರಡುಮಾಡಿಕೊಳ್ಳಬೇಡಿ! ಪ್ರಪಂಚ ಹುಲಿಯೇ ಇರಲಿ, ಹುಲ್ಲೆಯೇ ಇರಲಿ, ನಮ್ಮಿಂದ ಅದನ್ನು ಸರಿಮಾಡಲು ಬಂದೀತೆ?" ಎಂದು ಉಪದೇಶ ಮಾಡಿದಳು.

ಆ ರಾತ್ರಿ ಮಲಗಿದರೆ, ಅಚ್ಯುತನಿಗೆ ನಿದ್ರೆಯೇ ಹತ್ತಲಿಲ್ಲ. ಅವನ ತಲೆಯಲ್ಲಿ ಊರನ್ನು ನುಂಗುತ್ತಿರುವ ಕ್ಷಾಮದೇವತೆಯ ಕನಸುಗಳ ಲ್ಲದೆ, ಬೇರೆ ಯಾವುದಿಲ್ಲ. ಆತ ತನ್ನನ್ನು ನೋಡುವ ಬದಲು, ನಾಗಪ್ಪ ಮಾಸ್ತರರು, ನಾರಾಯಣರಾಯರು, ಹೊಟ್ಟೆಪಾಡಿಗೆ ಯುದ್ಧಕ್ಕೆ ಸೇರಿದ ಜಾನ್‌ಸನರನ್ನೂ ನೆನೆಯುತ್ತಾನೆ. ಪರ್ಯಾಯವಾಗಿ ಅವನ ಕಣ್ಣಿಗೆ- ನಾಗೇಶಕಮ್ತಿ, ನಾಗರಾಜ, ವೆಂಕಟರಮಣಯ್ಯನಂಥವರು ಒಬ್ಬೊಬ್ಬ ರಾಗಿ ಗೋಚರಿಸುತ್ತಾರೆ! ಕ್ರೋಧ ಉಕ್ಕುತ್ತದೆ! ತಿರುಗಿ ಕ್ರೋಧ ದುಃಖದಲ್ಲಿ ಪರ್ಯವಸಾನವಾಗುತ್ತದೆ.

ಯಾಕೋ ಏನೋ, ಆತನ ಮನಸ್ಸಿನ ಮುಂದೆ ಬೇರೆಯೇ ಚಿತ್ರ ಗಳು ಕಟ್ಟತೊಡಗಿವೆ. "ಬಾಳು ಯಾಕೆ? ನಾವಾವುದಕ್ಕೆ ಬದುಕಬೇಕು?" ಎಂಬ ನಿರಾಶೆಯೇ ಮೂರ್ತಿಮತ್ತಾಗಿ ಕಣ್ಮುಂದೆ ಕಾಣತೊಡಗಿದೆ. ಇನ್ನೊಂದು ಗಳಿಗೆಗೆ, ತನ್ನನ್ನೇಕೋ ಸಾವು ಸಮೀಪ ಕರೆಯುವಂತೆ ಕಾಣಿಸಿತು. ಆದರೆ ಭೀತಿಯಾಗಲಿಲ್ಲ. ತನಗೆ ಮೋಕ್ಷಕಾಲ ಸಮೀಪಿಸಿ ತೆಂದೇ ಅನಿಸಿತು. ಈ ಹುಚ್ಚು ಕನಸಿಗಾಗಿ ನಕ್ಕುಬಿಟ್ಟನು. ಅಲ್ಲಿಂದ ಒಮ್ಮೆಗೇ ಹಣತೆಯುರಿಸಿ, ತನ್ನ ಮರದ ಪೆಟ್ಟಿಗೆಯೊಂದರಲ್ಲಿ ತುಂಬಿ ಸಿಟ್ಟ ಪುಸ್ತಕ, ಹಳೆಯ ವೃತ್ತಪತ್ರಿಕೆಗಳ ಚೂರು, ಮೊದಲಾದುವನ್ನು

ಆರಿಸಿ, ಇರಿಸತೊಡಗಿದನು. ರುಕ್ಮಿಣಿಯು ಎಚ್ಚರಗೊಂಡು, "ಯಾಕೆ ನಿದ್ರೆಯನ್ನು ಬಿಡುತ್ತಿದ್ದೀರಿ. ತಿರುಗಿ ಮೊನ್ನೆಯ ಹಾಗೇನೇ ಆದರೆ, ಯಾರು ಗತಿ ನಮಗೆ?" ಎಂದಳು.

"ನನಗೆ ಹುಚ್ಚು ಹಿಡಿದೀತು ಎಂದು ನಿನ್ನ ಹೆದರಿಕೆಯೇ! ಹುಚ್ಚು ಹಿಡಿಯುವುದು ಯೋಚನೆ ತುಂಬಿದವರಿಗೆ; ಆಸೆ ಬಹಳ ಇರುವವರಿಗೆ. ನನಗೆ ನೋಡು ರುಕ್ಮಿಣಿ, ಯಾವ ಆಸೆಯೂ ಇಲ್ಲ. ಈಗ ಬೇಕಾದರೆ ಸಾಯಲಿಕ್ಕೆ ನಾನು ಸಿದ್ಧ. ಒಂದೊಂದು ಸಾರಿ, ನಮ್ಮ ಊರನ್ನು ಉಪವಾಸ ಕೆಡೆಯುವವರು ಯಾರು ಎಂದು ತಿಳಿದರೆ, ಅವರನ್ನು ಕೊಂದಾದರೂ ಸಾಯಬೇಕು.... ಬರಿದೇ ಸಾಯುವ ಬದಲು--ಎಂದು ತೋರುತ್ತದೆ."

"ನೀವು ಹೀಗೆ ಇಲ್ಲದ ಕರಕರೆಗಳನ್ನು ತಲೆಗೆ ಹಚ್ಚಿಕೊಳ್ಳುವುದನ್ನು ಕಂಡರೆ ನನಗೆ ಹೆದರಿಕೆಯಾಗುತ್ತದೆ. ಈಗ ಸಾವಿನ ಸುದ್ದಿ ಏಕೆ! ಸಾವನ್ನು ಕರೆದರೆ, ಅದು ಬರುತ್ತದೇನು? ಮಲಗಿ ಸ್ವಸ್ಥ ನಿದ್ರೆ ಮಾಡಬಾರದೇ! ನಾಳೆ ಶಾಲೆಯುಂಟಲ್ಲ" ಎಂದಳು.

"ಹೂಂ, ಈಗ ಮಲಗಿಕೊಳ್ಳುತ್ತೇನೆ. ನಿದ್ದೆ ಯಾಕೋ ಬರುವುದಿಲ್ಲ—ಎಂದು ಇದನ್ನು ಸರಿಮಾಡಲು ಕುಳಿತೆ. ಇದನ್ನೆಲ್ಲಾ ಪೆಟ್ಟಿಗೆಗೆ ತುಂಬಿ ಮಲಗಿಕೊಳ್ಳುತ್ತೇನೆ" ಎಂದ. ಕಾಗದ, ವಹಿಗಳನ್ನೆಲ್ಲ ಒಂದೊಂದಾಗಿ ಪೆಟ್ಟಿಗೆಗೆ ತುಂಬಿಸತೊಡಗಿದ. ಆಗ ಕೈಗೆ, ತಾನು ತನ್ನ ಭೂಮಿ ಮನೆಗಳನ್ನು ಉಪ್ಪಿನಂಗಡಿಯ ಸಾಹುಕಾರರಿಗೆ ಭೋಗ್ಯಮಾಡಿದ ಪತ್ರದ ನಕಲು ಸಿಕ್ಕಿತು! ಮೈಜುಮ್ಮೆಂದಿತು! ಅದನ್ನು ಬಿಡಿಸದೆ ಇರುವೆನೆಂದಿದ್ದ. ಎಂದೋ ಒಂದು ದಿವಸ, ಮಾಮುಂಜಿ "ನೋಡುವ ಆ ಸಮಯಕ್ಕೆ ತಿಳಿಸು" ಎಂದುದರ ನೆನಪಾಯಿತು. ತನ್ನ ಭೂಮಿಯನ್ನು ಐದರಿಂದ ಎಂಟು ವರ್ಷದೊಳಗೆ ಬಿಡಿಸಿಕೊಳ್ಳುವ ಸಂದರ್ಭವಿದೆಯೆಂದು ಗೊತ್ತಿತ್ತು. ಆದರೆ ಎಂದೇ ಆ ಕೆಲಸವನ್ನು ಮಾಡಬಹುದಿತ್ತು. ಪ್ರಯೋಜನವಿದೆಯೆಂದಲ್ಲ. ಮನದಾಸೆ ತಣಿಸಲು. ಈಗ ಅದಕ್ಕೆ ವಾಯಿದೆ ಉಳಿದಿದೆಯೋ ಎಂದು ನೋಡಲು ಕುತೂಹಲ ತಾಳಿದನು! ಅದೇ ಫಾಲ್ಗುಣ ಬಹುಳ ಅಮಾವಾಸ್ಯೆಗೆ ಎಂಟು ವರ್ಷದ ಗಡು ನಿಂತಿದೆ. ತಾನು ದೇಶಭ್ರಷ್ಟನಾಗಿ ಊರೂರನ್ನು ಸುತ್ತಿ ಅಷ್ಟು ಸಮಯ ಸರಿದಿದೆ

ಯೆಂದು ಆಗ ತಾನೆ ಗೋಚರಿಸಿತು.

ಆದರೆ ತಿರುಗಿ ನಿರಾಶೆಯಾಯಿತು. ಸ್ವಂತ ಮನೆ ಹಾಳಾಗಿದೆ ಕರಾವಳಿಯಲ್ಲೂ ಆ ಊರಿನಲ್ಲೂ, ಭೂಮಿಗಳ ಬೆಲೆ ಏರಿದ್ದರೂ, ಕೊಂಬಾರಿನ ಕೊಂಪೆಯಲ್ಲಿ ಯಾರು ಭೂಮಿಗಾಗಿ ಸ್ಪರ್ಧಿಸಿ ಬರುವವರು? ಅಲ್ಲಿ ಬೆಲೆ ಏರಿದರೂ ಬಹಳ ಸ್ವಲ್ಪ ಏರೀತು. ಆದರೆ ಎರಡು ಸಾವಿರ ರೂಪಾಯಿ ಸಾಲ ತೀರಿಸಿ, ತಾನು ಅದನ್ನು ಮರಳಿ ಪಡೆಯುವ ಬಗೆಯೆಲ್ಲಿನದು! ಅದನ್ನು ಕೊಂಡು, ತಿರುಗಿ ಐನೂರು ರೂಪಾಯಿ ಹೆಚ್ಚಿನ ಬೆಲೆಗಾದರೂ ಮಾರಬಹುದು. ಅಷ್ಟರೊಳಗೇನೆ, ಕೊಳ್ಳಲು ಮಾಡಿದ ಸಾಲವೂ ಬಡ್ಡಿಯೂ ಕೂಡಿ, ಮೌಲ್ಯಕ್ಕೆ ಸಮನಾಗುತ್ತದೆ-- ಎಂದು ಅಂದುಕೊಂಡ. ಆ ಪತ್ರವನ್ನು ಕಾಣುತ್ತ --"ರುಕ್ಮಿಣಿ, ನಮ್ಮ ಜಾತಕ ನೋಡಿದೆಯಾ ಇಲ್ಲಿದೆ!" ಎಂದು ಕರೆದು ಹೇಳಿದ.

"ಜಾತಕ?"

"ಅಲ್ಲವೇ, ಅಡವಿನ ನಕಲು ಇದು; ಇನ್ನು ಹದಿನೈದು ದಿನಗಳಲ್ಲಿ ಫಾಲ್ಗುಣ ಬಹುಳ ಅಮಾವಾಸ್ಯೆ.....ಆ ದಿನ ನಮ್ಮ ಭೂಮಿಯನ್ನು ಬಿಡಿಸಲು ಒಂದು ಕಟ್ಟಕೊನೆಯ ಸಂದರ್ಭವಿದೆ. ಅನಂತರ ಆಸ್ತಿ ಅವರಿಗೇ."

"ನಿಜವೇ--ಏನಾದರೂ ಉಳಿದೀತು ಈಗ ಮಾರಿದರೆ; ಈಗೆಲ್ಲ ಭೂಮಿಗೆ ಚಿನ್ನದ ಹಾಗೆ ದರವುಂಟಂತಲ್ಲ."

"ಹೌದು. ಇಲ್ಲಿ; ಕರಾವಳಿಯಲ್ಲಿ; ಕೊಂಬಾರಿನಲ್ಲಲ್ಲ!"

"ಆದರೂ ನಾವು ಸಾಯುವ ಕಾಲಕ್ಕೆ, ಮಕ್ಕಳಿಗೆ ಒಂದು ಮನೆಯಡಿ ಉಳಿದಿದ್ದರೆ ಸಾಕಿತ್ತು!"

"ಮನೆಯಡಿ ಈಗಲೂ ಇದೆ! ಮನೆ ಮಾತ್ರ ಮಣ್ಣು ಮುಕ್ಕಿದೆ. ಸಾಯುವಾಗ, ಒಂದು ರಾತ್ರೆ ಹೋಗಿ ಅಲ್ಲಿನ ಹಲಸಿನ ಮರದ ಕೆಳಗೆ ಪ್ರಾಣ ಬಿಟ್ಟರೆ ಸರಿ"ಎಂದು ನಕ್ಕು ಹೇಳಿದ.

ಆ ರಾತ್ರೆಯ ಅವನ ಚಟುವಟಿಕೆ ಅಲ್ಲಿಗೆ ಮುಗಿಯಿತು. ಮರು ದಿನ ಬೆಳಗ್ಗೆ ರುಕ್ಮಿಣಿಗೆ ಹಿಂದಿನ ರಾತ್ರಿಯ ನೆನಪಾಯಿತು. ಆಸೆಯಿಂದ "ಅದರಲ್ಲಿ ಉಳಿಯುದಿದ್ದರೆ ಹೋಗಲಿ. ಮಾಮುಂಜಿ ಹಿಂದೆ ಉಪಾಯ ಹೇಳಿದ್ದಕ್ಕೆ, ಅವನನ್ನು ಕಂಡು, ಒಂದು ಮಾತು ಹೇಳಿ. ನಮ್ಮ ಅದೃಷ್ಟ

ದಿಂದಲ್ಲ, ನಮಗೆ ಅದರ ಋಣವಿಲ್ಲ ಎಂದು ತಿಳಿದಿದೆ--ಆದರೆ ಮಕ್ಕಳ ಅದೃಷ್ಟದಲ್ಲಿ ಇದ್ದರೆ, ಯಾಕೆ ಒಂದು ಗೇಣು ಜಾಗವಾದರೂ ಉಳಿಯ ಬಾರದು? ಅಲ್ಲಪ ನಾಳೆ ನಿಮಗೆ ಮಾಸ್ತರಿಕೆ ಮುಗಿದರೆ, ಪೆನ್‌ಶನೇ! ಮನೆಯೇ! ಇರಲಿ. ದಮ್ಮಯ್ಯ, ಅವನನ್ನು ಕಂಡಾದರೂ, ಅದೊಂದು ಕೆಲಸಮಾಡಿಸಿ" ಎಂದಳು. ಆಕೆಯ ಬಲವಂತಕ್ಕೆ, ಅವನು ಆದಿತ್ಯವಾರ ಬರಲು ಆ ಕಾಗದ ಹಿಡಿದು, ಮಾಮುಂಜಿಯನ್ನು ಹುಡುಕಿಕೊಂಡು ಹೊರಟ! ದಾರಿಯಲ್ಲಿ ಬೆಕ್ಕು ಅಡ್ಡವಾಯಿತು—ಎಂದು ಒಂದು ಮೈಲು ದೂರ ಹೋದವನು ಹಿಂದೆ ಬಂದುಬಿಟ್ಟ. ಆದರೆ ರುಕ್ಮಿಣಿ ಹಟ ಹಿಡಿದು ಪರಿಂದ ಮಧ್ಯಾಹ್ನದ ಊಟ ಮುಗಿಸಿಕೊಂಡು ಉಪ್ಪಿನಂಗಡಿಗೆ ತಿರುಗಿ ಹೋಗಲೇಬೇಕಾಯಿತು.

ಬೆಳಗ್ಗೆ ಬೆಕ್ಕು ಅಡ್ಡವಾದರೂ, ಮಾಮುಂಜಿಯ ದರ್ಶನವೇನೋ ಅವನಿಗೆ ಆ ದಿನ ಆಗಿಯೇ ಆಯಿತು. ಆತ ಅಚ್ಯುತ ತಂದ ಪತ್ರವನ್ನು ನೋಡಿದ. "ಛೀ! ನೀನು ಯಾವಾಗಲೇ ಈ ವಿಷಯ ಹೇಳಬೇಕಿತ್ತು; ಪುರುಸೊತ್ತಿನಿಂದ ಗಿರಾಕಿ ಹುಡುಕಿದರೆ, ಅರ್ಧಕ್ಕೆ ಅರ್ಧ ಆಸ್ತಿ ಉಳಿದೀತು. ಈಗಿನ ದಿನಗಳಲ್ಲಿ ಕೊಂಬಾರಲ್ಲ, ಅದರ ಆಚೆ, ಕುಮಾರ ಪರ್ವತದ ತುದಿಯಲ್ಲಿ, ಭೂಮಿ ಇದ್ದರೂ ಗಿರಾಕಿಯಿದೆ. ಕಾಗದದ ನೋಟು ಇರಿಸಿಕೊಳ್ಳುವುದಕ್ಕಿಂತ ಅಂಥ ಜಮೀನು ಒಳ್ಳೆಯದಲ್ಲವೇ-ಎಂದು ತಿಳಿದಿವೆ ಈ ದುಡ್ಡಿನ ಜನಗಳು. ನೋಡುವ; ಒಳ್ಳೆಯ ಗಿರಾಕಿ ಸಿಗಲಿಲ್ಲವೆಂದಾದರೆ, ನಾನಾದರೂ ಮಾಡಿಕೊಳ್ಳುತ್ತೇನೆ. ದುಡ್ಡಿರುವ ವರಿಗೇ ಅದು ಹೋಗಬೇಕಿಲ್ಲ."

"ನೀನು ಅದನ್ನು ಮಾಡಿಕೊಂಡರೆ ನನಗೆ ಸಂತೋಷವೇ. ಆಗ ನನಗೆ ಪ್ರಯೋಜನವಾಗದೆ ಹೋದರೂ ಚಿಂತೆಯಿಲ್ಲ" ಎಂದನು ಅಚ್ಯುತ.

ಮಾಮುಂಜಿಯು ಒಂದು ವಾರದ ಕಾಲ, ಅತ್ತಿತ್ತ ಅಲೆದಾಡಿದನು. ಅವನು, ಭೂಮಿಗೆ ಗಿರಾಕಿ ಹುಡುಕುತ್ತಿರುವನೆಂದು ತಿಳಿದೊಡನೆಯೇ, ಭೋಗ್ಯಮಾಡಿಸಿಕೊಂಡ ಸಾಹುಕಾರರು, ಅವನನ್ನು ಕರೆಯಿಸಿದರು. "ಮಾಮುಂಜಿ, ನೀನು ಆ ಕೆಲಸ ಬಿಡಬೇಕು. ನಿನಗೇನಾದರೂ ನೂರು ರೂಪಾಯಿಗಳ ಬದುಕನ್ನು ನಾನು ಕೊಡುತ್ತೇನೆ. ಸಮನಾದ

ಗಿರಾಕಿ ಸಿಗಲಿಲ್ಲವೆಂದು, ಹದಿನೈದು ದಿವಸ ಆಸೆ ತೋರಿಸಿ, ಕುಳಿತಿರು" ಎಂದು ಹೇಳಿದರು. ಮಾಮುಂಜಿ ಅದಕ್ಕೆ ದಿಗಿಲಾದ. ಅವನ ಊರಿನ ಸಾಹುಕಾರರು ಅವನಿಗೂ ಪ್ರಯೋಜನಕ್ಕೆ ಬೀಳುವವರು. ಅವರಿಗೆ ಆ ಆಸ್ತಿಯನ್ನು ನುಂಗುವ ಆಸೆ. ತನ್ನಿಂದಾಗಿ ಆ ಸಾಹಸಕ್ಕೆ ವಿಘ್ನ ಬಂದರೆ,- ಮುಂದೆ ಅವರು ತನಗೂ ವಿರೋಧಿಗಳಾದಾರು. ಇದರಿಂದ ತಾನೇನು ಮಾಡಲಿ-ಎಂಬ ಯೋಚನೆಗೆ ಆತ ಬೀಳುವಂತಾಯಿತು.

ತಾನು ಅದೇ ಊರಲ್ಲಿ ಗಿರಾಕಿಗಾಗಿ ಅಲೆದಾಡಿದರೆ, ಗದ್ದಲ ವಾದೀತೆಂದು ಹೆದರಿ, ಪುತ್ತೂರು ಪಂಜಗಳಲ್ಲಿ ಗಿರಾಕಿ ಹುಡುಕಲು ಪ್ರಯತ್ನಿಸಿದನು. ಆದರೆ ತಾವಾಗಿ ಮನೆ ಮನೆಗೆ ಹೋದರೆ, ಮಾಲಿಗೆ ಸಮನಾದ ಬೆಲೆ ದೊರಕೀತೇ? ಅವನ ಪ್ರಯತ್ನವು ತೀರ ಸಫಲ ವಾಗದೆ ಹೋದರೂ, ಎರಡು ಸಾವಿರದ ಭೂಮಿಯನ್ನು ಎರಡು ಸಾವಿರದ ಐನೂರರ ತನಕ ಜನ ಕೇಳಿದರು. ಅವನ ಅಂತರಂಗದಲ್ಲಿ ಅದು ಈ ದಿನದ ಬೆಲೆಯಲ್ಲವೆಂದಿತ್ತು. 'ಭೂಮಿ ಎಂಥದಾದರೂ, ನಾಲ್ಕು ಸಾವಿರವಾದರೂ ಅದಕ್ಕೆ ಈಗಿನ ದಿನಗಳಲ್ಲಿ ಸಿಗಬೇಡವೇ?' ಎಂದು ತೋರುತ್ತಿತ್ತು. ಅಷ್ಟಕ್ಕೆ ವಿಕ್ರಯಿಸಿದಲ್ಲಿ ಒಂದು ತುಣುಕು ಭೂಮಿ ಯಾದರೂ ತನ್ನ ಗೆಳೆಯನಿಗೆ ಉಳಿದೀತು – ಎಂದು ಊಹಿಸಿದ್ದನು. ಆದರೆ ಬೇಗನೆ ಕೆಲಸವಾಗುವಂತಿಲ್ಲ. ತಮಗೆ ಅವಸರವಿದೆಯೆಂದು ತೋರಿಸಿಕೊಂಡರೂ ಆಗಲಾರದು—ಎಂಬುದರಿಂದ ತುಸು ನಿರಾಶೆ ಯಿಂದ ಅಚ್ಯುತನ ಮನೆಗೆ ಹೋದ. ಇವನು ಹೋದ ದಿವಸ ಅಚ್ಯುತ ನೆಟ್ಟಗಿರಲಿಲ್ಲ. ನೆಗಡಿಯಿಂದ ಕೆಮ್ಮುತ್ತ ಮಲಗಿಕೊಂಡಿದ್ದ. ತಾನು ಬಂದ ಕೆಲಸವನ್ನು ಮುಗಿಸಲು ವಿರಾಮವಿಲ್ಲೆಂದು, "ಅಚ್ಯುತ, ಈಗ ಬಂದ ಗಿರಾಕಿಗಳ್ಯಾರೂ ಎರಡು ಸಾವಿರದ ಐನೂರರ ಮೇಲೆ ಕೊಡು ವವರಲ್ಲ. ನನಗೆ ಅದು ಸಮವೆಂದು ತೋರುವುದಿಲ್ಲ. ನನ್ನಲ್ಲೇ ಪೂರ್ಣ ಹಣವಿದ್ದರೆ, ನಾನೇ ಅದನ್ನು ಮೂರು ಸಾವಿರಕ್ಕೆ ಕೊಂಡೇನು. ಸಮೀಪ ಭೂಮಿ ಇರುವವರು ನಾಲ್ಕು ಸಾವಿರದ ತನಕವೂ ಕೊಟ್ಟಾರೆಂದು ನನ್ನ ನಂಬಿಕೆ. ಆದರೆ--ವಾಯಿದೆ ಮೀರಿದರೆ ಕೆಲಸ ಕೆಡುತ್ತದೆ. ಏನು ಮಾಡಲಿ" ಎಂದನು.

"ಸಲ್ಪ ಹೆಚ್ಚಿಗೆ ಸಿಕ್ಕಿದರೂ ಸಾಕು. ಅದನ್ನು ಕೊಟ್ಟು ಬಿಡುವ. ಐನೂ

ರೆಂದರೆ ಈಗಿನ ದಿನಗಳಲ್ಲಿ, ಒಂದೆರಡು ವರ್ಷದ ನರಕ ತಪ್ಪಿಸಿಕೊಳ್ಳಲು ಬರುವುದಿಲ್ಲವೇ" ಎಂದನು ಅಚ್ಯುತ.

"ಬೇಡ, ಹೋಗಲಿ. ನಾನು ಇನ್ನೆರಡು ದಿನಗಳ ತನಕ ನೋಡುತ್ತೇನೆ. ನನಗೇನೆ ಅಷ್ಟು ಹಣ ಕೂಡಿಸಲು ಸಾಧ್ಯವಾದರೆ ನಾನೇ ಮೂರು ಸಾವಿರಕ್ಕೆ ಕೊಳ್ಳುತ್ತೇನೆ. ನಿನಗೆ ಅದನ್ನು ನನ್ನ ಹೆಸರಿಗೆ ಮಾಡಲು, ಧೈರ್ಯವೇ? ನಾನು, ತಿರುಗಿ ಇನ್ಯಾರನ್ನಾದರೂ ವಿರಾಮದಲ್ಲಿ ಹುಡುಕಿ, ನಿನಗೆ ಪ್ರಯೋಜನ ಮಾಡಿಸಿ ಕೊಟ್ಟೇನು" ಎಂದು ಧೈರ್ಯಕೊಟ್ಟನು. ಅಚ್ಯುತನಿಗೆ ಆನಂದವಾಯಿತು. "ಹಾಗಾದರೆ, ನಾಳೆಯೇ ಸಾಹುಕಾರರಲ್ಲಿಗೆ ಹೋಗಿ, ವಾಯಿದೆಗೆ ಹಣ ಕಟ್ಟುತ್ತೇನೆ" ಎಂದು ತಿಳಿಸುವಂತೆ ಹೇಳಿ, ಮಾಮುಂಜಿ ತನ್ನೂರಿಗೆ ಹೋದನು. ಈ ಮಾತುಗಳನ್ನೆಲ್ಲ ಕೇಳಿದ ನಾಗಪ್ಪ ಮಾಸ್ತರರು "ಅಚ್ಯುತರಾಯರೇ, ನಿಮಗೆ ಮರುಳು. ಅವನು ಬ್ಯಾರಿ. ಅವನನ್ನು ನೀವು ನಂಬುತ್ತೀರಾ? ವಾಯಿದೆಯ ಗಳಿಗೆಯ ತನಕ ಏನೂ ಮಾಡದೆ ಅವನು ದಿನ ತೆಗೆದಾನು. ಕೊನೆಯ ಗಳಿಗೆಗೆ ದಗಾ ಹಾಕಿದರೆ, ನಿಮಗೆ ಐವತ್ತು ರೂಪಾಯಿಯೂ ಸಿಗಲಾರದು" ಎಂದು ಬಲವಾಗಿ ಬೋಧಿಸಿದರು. ರುಕ್ಮಿಣಿಯೂ ಅದರಿಂದ ಅನುಮಾನಕ್ಕೆ ಗುರಿಯಾದಳು. ಆದರೆ ಅಚ್ಯುತ ಗಟ್ಟಿಯಾಗಿಯೇ ಉಳಿದನು. "ನಾನು ಮಾಮುಂಜಿಯನ್ನು ಬಲ್ಲೆ" ಎಂದು ನಂಬಿ ಕುಳಿತನು.

ಸರಿ, ಸಾಹುಕಾರರ ಬಳಿಗೆ ಅಚ್ಯುತ ಹೋದರೆ, ಸಾಹುಕಾರರು "ನೋಡುವ, ನೀವು ಹಣ, ತಂದಾಗಲಲ್ಲವೇ ನಗದು ಈಗಿಲ್ಲವಲ್ಲ" ಎಂದರು. ಕೊನೆಗೆ ವಾಯಿದೆಯ ದಿನವೇ ಬಂದಿತು. ಮಾಮುಂಜಿಯೂ ಇಲ್ಲ; ಯಾರೂ ಇಲ್ಲ. ಆಗ ಅಚ್ಯುತರಾಯ ಮನೆಯಲ್ಲಿ ಕೆಮ್ಮು, ಉಬ್ಬಸಗಳಿಂದ ದೀರ್ಘ ಉಸಿರು ತೆಗೆಯುತ್ತಿದ್ದನು. ರುಕ್ಮಿಣಿ "ನಾವು ಕೆಟ್ಟುದೇ ಯಾರ್‍ಯಾರನ್ನು ನಂಬಿ. ಮಾಮುಂಜಿಯೇನು ಒಬ್ಬ ಧರ್ಮರಾಯನೇ? ಅವನು ಬ್ಯಾರಿ. ಹಿಂದೆ ಒಳ್ಳೆಯವನಾಗಿದ್ದಿರಬಹುದು. ಹಿಂದೆ ನಿಮ್ಮ ದೋಸ್ತಿ ನಾಗರಾಜನೂ ಚೆನ್ನಾಗಿರಲಿಲ್ಲವೇ? ಪ್ರಪಂಚವೆಲ್ಲ ಇದ್ದ ಹಾಗೆ ಇರುತ್ತದೆಯೇ?" ಎಂದಳು. ಅಚ್ಯುತನಿಗೆ ಕೇಳಿ ಬಲು ವ್ಯಥೆಯಾಯಿತು. "ರುಕ್ಮಿಣಿ, ಆತ ಉದ್ದೇಶಪಟ್ಟು ಮೋಸ ಮಾಡುವವನಲ್ಲ; ಈ ತನಕ ಅವನು ನನ್ನೊಡನೆ ಸುಳ್ಳೆಂದವನಲ್ಲ. ಅವನು ಬ್ಯಾರಿಯಾದರೇನು?

ಮಾಪಿಳ್ಳೆ ಎಂದು ಬಿಟ್ಟರೆ ಸತ್ಯವಂತನಾಗಿರಬಾರದೇ? ನಮ್ಮವರು ಎಷ್ಟು ಸತ್ಯವಂತರೆಂಬುದು ನಮಗೆ ತಿಳಿಯದೇನು!" ಎಂದನು. ಅದರಿಂದ ರುಕ್ಮಿಣಿಯ ಕಳವಳವೇನೂ ನಾಶವಾಗಲಿಲ್ಲ. ತನ್ನ ಕೂಸುಗಳ ಪಾಲಿಗೆ ಒಂದು ಚೂರು ಭೂಮಿ ಉಳಿದೀತು–ಎಂದು ಈ ತನಕ ತಿಳಿದ ಅವಳು, ಈಗ ಆ ಆಸೆಯನ್ನು ತೊರೆಯುವಂತಾಯಿತು.

ಅವಳು ಈ ನಿರಾಶೆ ವ್ಯಕ್ತಪಡಿಸಿ ಒಳಕ್ಕೆ ಕಾಲಿರಿಸುವಷ್ಟರಲ್ಲಿಯೇ ಮಾಮುಂಜಿ ಮನೆಯ ಮುಂದಕ್ಕೆ ಬಂದು "ಅಚ್ಚುತ್ತ" ಎಂದು ಕರೆದ. ಒಳಗೂ ಬಂದ. "ಹೇಗಿದೆ ನಿನ್ನ ಆರೋಗ್ಯ? ಉಪ್ಪಿನಂಗಡಿಯಲ್ಲಿ ಟೇಕ್ಸಿ ಕಾಯುವಂತೆ ಹೇಳಿ ಬಂದಿದ್ದೇನೆ. ಸಾಹುಕಾರರನ್ನು ಕರೆದುಕೊಂಡು ಮೊದಲು ಹೋಗುವ ಪುತ್ತೂರಿಗೆ. ಅವರ ಹಣವನ್ನು ಮೊದಲು ಕಟ್ಟಿ ಬಿಡುವ. ನನ್ನ ಹೆಸರಿಗೆ ಅದು ರಿಜಿಸ್ಟ್ರಿಯಾಗಲು ಎರಡು ದಿನ ಹೋಗಲಿ. ಯಾರೂ ಗಿರಾಕಿಗಳು ಸಿಗದೆ ಹೋದರೆ ನಾನು ನೂರು ಸಾವಿರಕ್ಕೆ ಕೊಳ್ಳುತ್ತೇನೆ. ಅಲ್ಲಿಯ ವರೆಗೆ ಅದು ಹಾಗೇ ಇರಲಿ!" ಎಂದನು.

"ಹಣ?"

"ಹಣ ನಾಲ್ಕು ಜನರಲ್ಲಿ ಬೇಡಿ ತಂದಿದ್ದೇನೆ. ಇವತ್ತು ಹದಿನೈದು ದಿವಸಕ್ಕಾದರೂ, ಅಷ್ಟು ಸಾಲ ದೊರಕಿಸುವ ಧೈರ್ಯ ನನಗಿದೆ" ಎಂದನು.

ಆಗಲೇ ಅವರಿಬ್ಬರೂ ಹೊರಟರು; ಆ ಸಂಜೆ ಕತ್ತಲು ಹರಿಯುವುದರೊಳಗೆ ಇಬ್ಬರೂ ಊರಿಗೆ ಮರಳಿ ಬಂದೂ ಆಯಿತು. ಮುಂದೆ ಮಾಮುಂಜಿ "ನಾನು ನಾಳೆಗೇನೆ ಹಾಸನಕ್ಕೆ ಹೊರಡಬೇಕು....ಇನ್ನು ತಿಂಗಳು ಬಿಟ್ಟು ಸಿಗುತ್ತೇನೆ, ಅಲ್ಲಿಯ ವರೆಗೆ ಯಾವ ಸಂಗತಿಯೂ ಬೇಡ" ಎಂದು ಹೊರಟುಹೋದ. ನಾಗಪ್ಪ ಮಾಸ್ತರರು ಓಡೋಡಿ ಬಂದು, "ಏನಾಯಿತು?" ಎಂದರು. "ಈಗ ಸಾಹುಕಾರರಿಂದ ಆಸ್ತಿಯನ್ನು ಬಿಡಿಸಿದಂತಾಯಿತು. ಹಣ ಮಾಮುಂಜಿಯೇ ನನಗಾಗಿ ಕಟ್ಟಿದ್ದಾನೆ" ಎಂದ.

"ಅವನ ಹೆಸರಿಗೆ ಬರೆದಿರಾ ಅದನ್ನು?" ಎಂದು ಹೌಹಾರಿದರು ನಾಗಪ್ಪಯ್ಯ.

"ನಾನು ಹಾಗೆ ಮಾಡುತ್ತೇನೆ ಎಂದೆ. ಆದರೆ ಅವನೇ ಬೇಡ

ವೆಂದ. ನೋಡಿ, ನಾವು ಅವನನ್ನು ನಂಬಲಿಲ್ಲ; ಅವನು ಯಾರನ್ನು ನಂಬಿ ನನ್ನ ಕೈಮೇಲೆ ಎರಡು ಸಾವಿರ ರೂಪಾಯಿ ಸಾಲಮಾಡಿ ತಂದಿರಿಸಿದ-ಹೇಳಿ. ಎಲ್ಲರೂ ಒಂದೇ ತೆರನಾಗಿರುತ್ತಾರೆಯೇ?"

ರುಕ್ಮಿಣಿಗೆ ಆ ಕತೆ ಕೇಳಿ ವ್ಯಥೆಯಾಯಿತು. ಮಾಮುಂಜಿಯಂಥವನ ಮೇಲೆ, ತಾನು ನಂಬುಗೆ ಇರಿಸದಿದ್ದುದಕ್ಕೆ ಬೇಸರವಾಯಿತು. "ನಿಮ್ಮನ್ನು ಅವನು ಎರಡು ಸಾವಿರಕ್ಕೆ ಕಾಗದ ಪತ್ರವಿಲ್ಲದೆ ನಂಬಿದನಲ್ಲವೇ?" ಎಂದಳು ರುಕ್ಮಿಣಿ.

"ನಂಬಲಿಲ್ಲವೇ ರುಕ್ಮಿಣಿ?"

"ಮನುಷ್ಯನಿಗೆ ಮನುಷ್ಯನ ಮೇಲೆ ಪ್ರೀತಿ ಇದ್ದರೆ, ಹಣ ಒಂದು ದೊಡ್ಡದೆನಿಸುವುದಿಲ್ಲ. ಅದಿಲ್ಲವಾದರೆ ಎಲ್ಲವೂ ಒಂದೇ; ಸಾವಿರ ಜನರು ಸತ್ತರೂ ತಾನು ಬದುಕಿದರೆ ಸಾಕು ಎಂದು ಮನುಷ್ಯ ತಿಳಿಯುತ್ತಾನೆ" ಎಂದನು ಅಚ್ಯುತ.



## ೨೨ನೆಯ ಅಧ್ಯಾಯ

ಅಚ್ಯುತನಿರುವ ಶಾಲೆ ಹಳ್ಳಿ ಶಾಲೆಯಾದ್ದರಿಂದ ಬೇಸಗೆಗೆ ರಜೆ ಇರಲಿಲ್ಲ. ಹೀಗಾಗಿ ಎಪ್ರಿಲು, ಮೇ ತಿಂಗಳ ಉರಿಬಿಸಿಲಿನಲ್ಲಿ ಆತ ಶಾಲೆಗೆ ಹೋಗಿ ಬರುತ್ತ ದಿನ ಕಳೆಯತೊಡಗಿದನು. ಆದರೆ ಆ ಸೆಕೆಯನ್ನು ಸಹಿಸುವುದು ಅವನಿಂದ ಅಸಾಧ್ಯನಾಗಿತ್ತು. ಆಗಿನ ಆ ಬಿಸಿಲಿಗಿಂತ ಹೆಚ್ಚಾಗಿ, ಬಡವರ ಬೇಗುದಿ ಊರಲ್ಲಿ ಕಾಣಿಸಿತ್ತು. ಸ್ವತಃ ರೈತರಲ್ಲದ ಜನರು, ತುಂಬ ದಿಗಿಲುಗೊಂಡಿದ್ದರು. ಯುದ್ಧ ಎಂದು ಮುಗಿದೀತು — ಎಂದು ಅವರು ಹಾರೈಸುತ್ತಿದ್ದರು. ಆದರೆ ಇವರನ್ನು ಕೇಳದೆ ತೊಡಗಿದ ಯುದ್ಧ — ಅವರನ್ನು ಕೇಳಿ ಮುಗಿಯಲಿಕ್ಕುಂಟೇ? ಇನ್ನೂ ಅದರ ಭರ, ಭೀಕರತೆ ದಿನೇ ದಿನೇ ಹೆಚ್ಚುತ್ತಿತ್ತೇ ವಿನಾ ತಗ್ಗುತ್ತಿರಲಿಲ್ಲ.

ಯುರೋಪಿನಲ್ಲಿ ವಿಮಾನ ಧಾಳಿಗಳು, ನೆಲ ಯುದ್ಧಗಳು ಹೇಗೆ ನಡೆದರೇನು? ಸಾವಿರ ಸೇನೆಗಳು ಹೋದರೂ, ಸಾವಿರ ವಿಮಾನಗಳು ಉರುಳಿದರೂ, ನಗರಕ್ಕೆ ನಗರಗಳೇ ಧ್ವಂಸವಾದರೂ — ಇಲ್ಲಿನವರಿಗೆ

ಅದರ ಭೀಕರತೆ ಕಾಣಿಸಲಾರದು. ಈ ಊರಿಗೆ ಯುದ್ಧದ ಉರಿಯು ಚೆನ್ನಾಗಿ ನಾಟಿದುದು—ಬೆಲೆಗಳ ಏರಿಕೆಯಿಂದ. ಮಳೆಗಾಲ ಬಂದಿದೆ ಯಷ್ಟೆ-ಊರಲ್ಲಿ ಅಕ್ಕಿಯು ಮುಡಿಗೆ ಇಪ್ಪತ್ತೈದು ರೂಪಾಯಿ ಕೊಟ್ಟರೂ ಸಿಗದಾಯಿತು. ವ್ಯಾಮುಂಜಿ ಪ್ರಯತ್ನಿಸಿದರೂ ಮೊದಲಿನಂತೆ ಎಷ್ಟು ಬೆಲೆಕೊಟ್ಟರೂ ಅಕ್ಕಿ ಸಿಗುವಂತಿರಲಿಲ್ಲ. ಇತರ ದವಸ ಧಾನ್ಯಗಳಂತು ಮುಟ್ಟಲಸಾಧ್ಯವಾಗಿದೆ. ಆ ವರ್ಷ ಮಳೆಗಾಲ ಮುಗಿಯುವಾಗ, ಅಕ್ಕಿಗೆ ಮೂವತ್ತೋ ನಲವತ್ತೋ ಅದಕ್ಕಿಂತ ಹೆಚ್ಚೋ ಬೆಲೆಯಾದೀತು—ಎಂದು ಬಡವರು ಕಂಗಾಲುಗೊಳ್ಳುವಂತಾಯಿತು.

ಅಚ್ಯುತ ಮನೆಯವರೊಂದಿಗೆ ಒಮ್ಮೆ ತಾಯನ್ನು ಸಂದರ್ಶಿಸಿ ಬರುವೆನೆಂದುಕೊಂಡಿದ್ದ. ಆದರೆ ರೂಪಾಯಿ, ಆಣೆಗಳ ಎಣಿಕೆ ಹಾಕಿಕೊಂಡು ಮೌನತಾಳಿದ. ಅವನ ನೆರೆಮನೆಯವರ ಗೋಳು ಅತಿರೇಕವಾಯಿತು. ಅವರ ಊಟ ಇನ್ನರ್ಧಕ್ಕೆ ಇಳಿಯಿತು. ಕೊನೆಗೆ ಮಳೆಗಾಲ ಬರಲು—ಏನೇನೋ ಗೆಣಸು, ಗಡ್ಡೆಗಳನ್ನು, ಅರಸಿ, ಬೇಯಿಸಿ, ತಿಂದುದರಿಂದ, ಒಮ್ಮೆಗೇ ನಾಗಪ್ಪ ಮಾಸ್ತರರ ಮನೆಯ ಮಕ್ಕಳಿಗೆ 'ಆಮಶಂಕೆ' ತಲೆದೋರಿತು. ಅದು ಸಾಂಕ್ರಾಮಿಕ ರೋಗವಾದುದರಿಂದ ನೆರೆಮನೆಗೂ ಬಂದಿತು. ಹೀಗೆ ಮಕ್ಕಳ ಸಂಕಟ ನೋಡಲಾರದೆ, ಅಚ್ಯುತನೂ ನಾಗಪ್ಪಯ್ಯನವರೂ ಔಷಧಿಗಾಗಿ ಸರದಿಯಿಂದ ವೈದ್ಯರಲ್ಲಿಗೆ ಓಡಾಡಬೇಕಾಯಿತು. ಮಳೆಗಾಲದ ರಜೆಗೆ ಸಮನಾದ ಕೆಲಸವೇನೋ ದೊರೆಯಿತು. ಆ ಔಷಧೋಪಚಾರದ ದೆಸೆಯಿಂದ, ಅವರ ಊಟಕ್ಕೆ ಮತ್ತಷ್ಟು ಕೊರತೆಯುಂಟಾಯಿತು. ಕೊನೆಗೆ ಈ ತೊಡಕನ್ನು ಸಹಿಸಲಾರದೆ, ಒಂದು ತಿಂಗಳ ರಜೆ ಪಡೆದು, ನಾಗಪ್ಪಯ್ಯ ಮಾಸ್ತರರು ತಮ್ಮ ಅತ್ತೆಯ ಮನೆಗೆ ಹೋದರು. ಅತ್ತೆ ಮನೆಯವರು ಇವರಿಗಿಂತ ಹೆಚ್ಚಿನ ಅನುಕೂಲವಂತರೆಂಬುದರಿಂದ ಹಾಗೆ ಮಾಡಿದರು.

ಶಾಲೆ ತೆರೆಯುತ್ತಲೇ ಅಚ್ಯುತರಾಯನೊಬ್ಬನೇ ಕೆಲಸಮಾಡುವಂತಾಯಿತು. ಐದು ತರಗತಿಗಳನ್ನು ಕುಳ್ಳಿರಿಸಿಕೊಂಡು, ಮೊದಲೇ ಕ್ಷೀಣದೇಹಿಯಾದ ಅವನು, ಕೆಮ್ಮುತ್ತ ಕೆಮ್ಮುತ್ತ ಪಾಠ ಹೇಳತೊಡಗಿದ. ಎಂದೋ ತೊಡಗಿದ್ದ ಅವನ ನೆಗಡಿಯು, ದಿನಂದಿನ ಬಲವಾಯಿತು. ರುಕ್ಮಿಣಿಗೆ ಬಲು ವ್ಯಥೆಯಾಗತೊಡಗಿತು. ಅವಳಿಗೆ ತನ್ನ ಆರೋಗ್ಯದ

ಕುರಿತು ಚಿಂತೆ ಎಂದೂ ಉಂಟಾಗಿರಲಿಲ್ಲ. ವೈದ್ಯರು ಬೆದರಿಸಿದ್ದರೂ ಅವಳ ಮನಸ್ಸಿನಲ್ಲಿ ತಾನಿನ್ನು ತಾಯಾಗುವಂತಿಲ್ಲ ಎಂಬ ವಿಶ್ವಾಸವೇ ಮೂಡಿತ್ತು. ಆದರೆ, ಅಚ್ಯುತನ ಶರೀರವು ಕೃಶವಾಗಿ ಬರುತ್ತಿದ್ದುದನ್ನು ಕಂಡು, ಆಕೆ ಗಂಡನೊಡನೆ "ಒಮ್ಮೆ ಪಂಡಿತರಿಗೋ ಡಾಕ್ಟರರಿಗೋ ಮೈ ತೋರಿಸಿ ಬನ್ನಿ" ಎಂದು ಬೋಧಿಸತೊಡಗಿದಳು.

"ನಿನಗೆ ಮರುಳು-ರುಕ್ಮಿಣಿ. ಶರೀರ ಕ್ಷೀಣವಾದರೇನು, ದಪ್ಪ ವಾದರೇನು?" ಎಂದುಬಿಡುವ ಆತ. "ಹೀಗೆಯೇ ಕೆಮ್ಮುತ್ತ ಕುಳಿತರೆ?" ಎಂದರೆ, "ಏನು ಒಂದು ಕೆಮ್ಮು ಮಹಾ! ಜ್ವರವೇನು ಅಂಥಾ ಜೋರಿನದಲ್ಲ........ಹೋಗುತ್ತದೆ ತನ್ನಂತೆ" ಎನ್ನುತ್ತಾನೆ ಅಚ್ಯುತ.

ಒಂದು ದಿವಸ ಅಚ್ಯುತ ಮನೆಯಲ್ಲಿ ಇಲ್ಲದ ವೇಳೆ, ಮಾಮುಂಜಿ ಬಂದಿದ್ದ. ರುಕ್ಮಿಣಿಯು ಮಾಮುಂಜಿಯೊಡನೆ ಅವನ ಉಪಕಾರವನ್ನು ತುಂಬ ಕೊಂಡಾಡಿದಳು. ಕೊನೆಗೆ "ಆಸ್ತಿ ಬೇಗನೆ ಮಾರಾಟವಾದರೆ ಒಂದು ಚೂರು ತುಕ್ಕಳಿಗೆ ಉಳಿಯುಬಹುದಲ್ಲ; ಹಾಗೆ ಮಾರಾಟವಾಗದೆ ಹೋದರೆ ನಿನಗೂ ತೊಂದರೆ; ಹಣ ಹಾಗೇ ನಮ್ಮ ಮೇಲೆ ನಿಲ್ಲಿಸಲಿಕ್ಕೆ ಬಂದೀತೇ! ಅಲ್ಲದೆ ನಾವಾದರೂ ಸಾಲ ಮಾಡಿ ಈ ತನಕ ಕಂಡ ಸುಖವೇ ಸಾಕು. ಇನ್ನು ಸಾಲ ಬೇಡ ಎಂದೇ ಇದೆ" ಎಂದಳು.

ಮಾಮುಂಜಿಯು "ಅದು ನನ್ನ ಹಣ, ಹೊರಗೆ ಸಾಲ ಕೊಟ್ಟಿದ್ದನ್ನು ತಂದುಕೊಟ್ಟೆ. ಈಗ ನನಗೇನು ಅಂಥ ಗರ್ಜು ಇಲ್ಲ. ಪುರುಸೊತ್ತಿನಲ್ಲಿ ಸಿಗಲಿ. ಆದರೆ ಆಸ್ತಿಯ ಮಾರಾಟ ಮಾತ್ರ ಯುದ್ಧ ಮುಗಿಯುವುದರೊಳಗಾಗಿ ಆಗಬೇಕು; ಮುಗಿದ ಮೇಲೆ ಭೂಮಿಗೆ ಅಕ್ಕಿಗೆ ಈ ಬೆಲೆ ಸಿಗಲಾರದು. ಅದರ ಮೊದಲೇ ಒಂದು ಗಿರಾಕಿ ಹುಡುಕುವ. ನನಗೇನಾಗಿದೆಯೆಂದರೆ ನನ್ನ ತಿರುಗಾಟದಿಂದ ಅದನ್ನೇ ಹಿಡಿದುಕೊಂಡು ಪ್ರಯತ್ನಮಾಡಲು ವೇಳೆಯಿಲ್ಲ-ಅಷ್ಟೆ" ಎಂದು ವಿವರಿಸಿದನು.

ರುಕ್ಮಿಣಿ ಒಮ್ಮೆಗೇ "ನಿನಗೆ ಅವರಲ್ಲಿ ವಿಶ್ವಾಸವಿದೆ. ಅವರಿಗೆ ನಿನ್ನಲ್ಲಿದೆ. ನೀನೊಂದು ಮಾತನ್ನು ಹೇಳಿದರೆ, ತೆಗೆದುಹಾಕಲಾರರು. ಒಂದು ಸಂಗತಿ ಅವರಿಗೆ ನೀನು ಹಟಹಿಡಿದು ಹೇಳಿದ್ದರಾಗುತ್ತಿತ್ತು. ನನ್ನ ಮಾತನ್ನು ಅವರು ಕೇಳುವುದಿಲ್ಲ"

"ಏನಮ್ಮ ಅದು?"

"ನಾನು ಹೇಳಿ ಹೇಳಿ ಬೇಸತ್ತೆ... ಅವರು ಕಿವಿ ಮೇಲೆ ಹಾಕಿಕೊಳ್ಳು ವುದಿಲ್ಲ. ಅವರ ಆರೋಗ್ಯ ಈಗ ತೀರ ಕೆಟ್ಟಿದೆ. ಮೊದಲು ಹೇಗಿದ್ದರು —ಈಗ ಹೇಗಿದ್ದಾರೆ— ನೋಡಿದ್ದೀಯಾ? ಬಂಡಾಡಿಗೆ ಬಂದಾಗ ಇದ್ದ ಕಾಲಂಶವೂ ಈಗಿಲ್ಲ. ಯಾರಾದರೂ ಒಳ್ಳೆಯ ಡಾಕ್ಟರರಿಗೆ ಅವರನ್ನು ತೋರಿಸಿ ತಂದಿದ್ದರೆ ಆಗುತ್ತಿತ್ತು" ಎಂದಳು.

"ಅಷ್ಟೇ ಅಲ್ಲವೇ" ಎಂದ. ಅಲ್ಲಿಂದ ಆತನ ಸವಾರಿಯು ಶಾಲೆಯ ಬಳಿಗೆ ಹೋಯಿತು. ಅಚ್ಯುತನೊಡನೆ ಏನೇನೋ ಹರಟೆ ಮುಗಿಸಿ ಕೊಂಡು, "ಅಚ್ಯುತ ನೀನು ಈ ಆದಿತ್ಯವಾರ ಉಪ್ಪಿನಂಗಡಿಗೆ ಬರುತ್ತೀ ಯಲ್ಲ. ನನಗೆ ಪುತ್ತೂರಿಗೆ ಹೋಗುವ ಕೆಲಸವಿದೆ; ಆಸ್ತಿಗೆ ಅಲ್ಲೊಬ್ಬರು ಗಿರಾಕಿ ಇದ್ದಾರೆ, ನೋಡಿ ಬರುವ" ಎಂದು ತಿಳಿಸಿಹೋದನು.

ಮಾಮುಂಜಿಗೂ ಗೆಳೆಯನ ಶರೀರವನ್ನು ಕಂಡು ತುಂಬ ದಿಗಿ ಲಾಯಿತು. ಆತ ಸಿಂತು ಏಳುವುದಕ್ಕೇನೆ ಶ್ರಮಿಸುತ್ತಿದ್ದ. ಆದರೆ ಅವನು ಅನುಮಾನದಿಂದ ಮಾತನಾಡಲಿಲ್ಲ. ಮುಂದಿನ ಆದಿತ್ಯವಾರ ಬಂದವ, ಅಚ್ಯುತನನ್ನು ಪುತ್ತೂರಿಗೆ ಕರೆದೊಯ್ದನು. ಆಸ್ತಿಗೆ ಗಿರಾಕಿಯೆಂದು ಅಲ್ಲಿನ ವೈದ್ಯರೊಬ್ಬರಲ್ಲಿಗೆ ಹೋಗಿ, "ಡಾಕ್ಟರರೇ, ನಮ್ಮ ಈ ಮಾಸ್ತರ ರಿಗೆ ತುಂಬ ಅಶಕ್ತಿ, ಕೆಮ್ಮು, ಕಫ-ಇಷ್ಟೆಲ್ಲ ಇದೆ ನೋಡಿ. ಒಂದೇನಾದರೂ ಟಾನಿಕ್ ಕೊಡ್ತೀರಿ" ಎಂದು ಕೇಳಿದನು. ಡಾಕ್ಟರರು ಅಚ್ಯುತನನ್ನು ಪರೀಕ್ಷಿಸಿದರು. ಅಚ್ಯುತ "ನನಗೇನಾಗಲಿಲ್ಲ. ಏನೋ ಸ್ವಲ್ಪ ಕೆಮ್ಮು, ಕಫ ಇರಬಹುದು. ಜ್ವರವೂ ವಿಪರೀತವಿಲ್ಲ..........ಸ್ವಲ್ಪ ಮೈ ಬೆಚ್ಚ ಗಾಗುತ್ತದೆ. ಅಷ್ಟೇನೆ" ಎಂದನು. ಡಾಕ್ಟರರು ಆತನ ಶರೀರ ಪರೀಕ್ಷಿಸಿ ದರು. ಮಾಮುಂಜಿಯ ಕಿವಿಯಲ್ಲಿ ಮೆಲ್ಲಗೆ ಅದೆಂಥ ಕಾಯಿಲೆಯೆಂದೂ ತಿಳಿಸಿದರು.

ಮನೆಗೆ ಹಿಂತಿರುಗುವಾಗ ಮಾಮುಂಜಿಯು ಅಚ್ಯುತನೊಡನೆ "ಅಚ್ಯುತ ನನ್ನ ಮಾತನ್ನು ಕೇಳಬೇಕು ನೀನು. ನೀನು ಒಂದು ಆರು ತಿಂಗಳು ರಜೆ ಪಡೆದು, ಕೆಲಸ ಬಿಟ್ಟು— ಚಿಕಿತ್ಸೆಮಾಡಿಕೊಳ್ಳಬೇಕು. ತುಂಬ ವಿಶ್ರಾಂತಿ ಬೇಕೆಂದು ಡಾಕ್ಟರರು ಹೇಳಿದ್ದಾರೆ" ಎಂದ. "ಹೂಂ ಕೆಲಸಬಿಟ್ಟರೆ, ಊಟಕ್ಕೆ ಗಂಜಿಮಠಕ್ಕೆ ಹೋಗಬೇಕು. ಆರು ಹೊಟ್ಟೆ ಗಳು ತುಂಬಬೇಡವೆ ನನ್ನೊಬ್ಬನಿಂದ" ಎಂದುಬಿಟ್ಟನು. ಆದರೆ ಮಾ

ಮುಂಜಿ ಮಾತ್ರ "ಅಚ್ಯುತ, ನಾನು ನಿನಗೆ ಬೇಕಾಗಿದ್ದರೆ, ನಾನೆಂದ ಹಾಗೆ ಈ ವಿಷಯದಲ್ಲಿ ನೀನು ಮಾಡಲೇ ಬೇಕು. ಕಷ್ಟವಾದರೆ ಆಗುತ್ತದೆ. ದೇವರು ಸಹಾಯ ಮಾಡುತ್ತಾನೆ" ಎಂದ.

ಅಚ್ಯುತನಿಗೆ ನಗು ಬಂದಿತು. "ಮಾಮುಂಜಿ-ದೇವರ ಸಹಾಯ ದಿಂದಲೇ ಅಲ್ಲವೇ ಈ ವರೆಗೆ ಬದುಕಿ ಇದ್ದದ್ದು, ಸತ್ತಂತೆ! ಇನ್ನು ಸಾಲದೇ? ಮನುಷ್ಯ ಅತಿಯಾಗಿ ಬದುಕಿ ಮಾಡುವುದೇನು?" ಎಂದು ಪರಿಹಾಸ್ಯಮಾಡಿದ. ದಾರುಣವಾದ ಬಡತನವನ್ನು ಅನುಭವಿಸಿ, ಜೀವನವೇ ಅವನಿಗೆ ವಿಕಟಹಾಸ್ಯ ಎನಿಸಿತ್ತು. ಮಾಮುಂಜಿ ಅವನ ಮನೆಯ ತನಕ ಹೋಗಿ ಬಂದನು. ಹೊರಡುತ್ತ "ಅಚ್ಯುತ, ನಾನು ನಿನಗೆ ಬೇಕಾದರೆ, ಹೇಳಿದ ಹಾಗೆ ಮಾಡಬೇಕು" ಎಂದುಬಿಟ್ಟ. ಮಾಮುಂಜಿ ನೊಂದುಕೊಂಡಿರುವನೆಂದು ಆತಗೆ ತಿಳಿಯಿತು. ಅದಕ್ಕಾಗಿ "ಆಗಲಿ, ನಾಗಪ್ಪ ಮಾಸ್ತರರು ಇನ್ನು ಒಂದು ವಾರದಲ್ಲಿ ಬಂದಾರು. ಅವರು ಒಂದು ತಿಂಗಳ ರಜೆ ಎಂದು ಹೇಳಿ, ಮೂರು ತಿಂಗಳು ಮಾಡಿದ್ದಾರೆ; ಇನ್ನು ಮುಂದುವರಿಸಲಾರರು" ಎಂದು ಗೆಳೆಯನಿಗೆ ಸಮಾಧಾನವಾಗು ವಂತೆ ಮಾತನಾಡಿದ. ಮಾಮುಂಜಿಗೆ ತೃಪ್ತಿಯಾಯಿತು.

ಮಾಮುಂಜಿಗೆ ನಿಜ ಸಂಗತಿ ತಿಳಿದಿದೆ. ಅಚ್ಯುತನ ಈ ದುರ್ಬಲ ಶರೀರವು ಇಂದು ಕ್ಷಯರೋಗಕ್ಕೆ ತುತ್ತಾಗಿದೆಯೆಂದು. ವೈದ್ಯರು "ಬೆಂಗಳೂರಿಗೆ ಹೋಗಲಿ, ಮದನಪಲ್ಲಿಗೆ ಹೋಗಲಿ, ಏನಾಗದಿದ್ದರೆ ಮಂಗಳೂರಿಗೆ ಹೋಗಲಿ" ಎಂದಿದ್ದಾರೆ. ತಿಂಗಳಿಗೆ ನೂರು ಇನ್ನೂರು ರೂಪಾಯಿಗಳನ್ನು ಖರ್ಚುಮಾಡುವ ರೀತಿಯ ಚಿಕಿತ್ಸೆ! ತಾವ್ಯಾರೂ ಏನೂ ಮಾಡುವಂತಿರಲಿಲ್ಲ. ಅದರ ಮೇಲೂ ಡಾಕ್ಟರರೂ ಧೈರ್ಯ ಹೇಳಲಿಲ್ಲ. ಇತ್ತ ಅಚ್ಯುತನನ್ನು X-Ray ಮಾಡಿಸುವುದಕ್ಕೆ ಅವನಿಗೆ ಧೈರ್ಯ ಸಾಲಲಿಲ್ಲ. ಆ ಬೇನೆಯ ಹೆಸರನ್ನೂ ತಿಳಿಸದೆ, ಬಾಹ್ಯೋಪ ಚಾರ ಮಾಡಬಹುದು-ಎಂದು ಅವನ ಹೆಡ್ಡು ಬುದ್ಧಿಗೆ ತೋರಿತು. ಅಂತು ರುಕ್ಮಿಣಿಯೊಡನೆಯೂ "ಅಮ್ಮ ಬಹಳ ಎಚ್ಚರಿರಬೇಕಂತೆ! ಟಾನಿಕ್, ಹಣ್ಣು, ಮದ್ದು ಎಲ್ಲ ಬೇಕಂತೆ. ಒಂದು ಆರು ತಿಂಗಳಷ್ಟು ವಿಶ್ರಾಂತಿಯಾದರೂ ಬೇಕು" ಎಂದಿದ್ದಾರೆ ಎಂದ. ಅದು ಇಂಥ ಬೇನೆ ಯೆಂದು ರುಕ್ಮಿಣಿಗೆ ತಿಳಿಸಲು ಅವನಿಗೂ ಸಾಹಸವಾಗಲಿಲ್ಲ.

ನಾಗಪ್ಪ ಮಾಸ್ತರರು ಬಂದು ಕೆಲಸಕ್ಕೆ ಸೇರುತ್ತಲೇ, ಅಚ್ಯುತ ರಜೆ ಅರ್ಜಿ ಬರೆದುಕೊಂಡ. ಅದು ಮೇಲಿನ ಆಫೀಸರರಿಗೆ ಹೋಯಿತು. ರಜೆ ಮಂಜೂರಾಗಿ ಬರುವ ಮುಂಚೆಯೇ ಅಚ್ಯುತ ಮನೆಯಲ್ಲಿ ಹಾಸುಗೆ ಹಿಡಿದೂ ಆಗಿತ್ತು. ಮಾಮುಂಜಿ ತನಗೆ ಅಲ್ಲಿಗೆ ಆಗಾಗ ಬರುವುದಕ್ಕೆ ಸಮನಾಗದೆಂದು, ಉಪ್ಪಿನಂಗಡಿಯಲ್ಲವರಿಗೆ ಒಂದು ಬಿಡಾರ ಗೊತ್ತು ಮಾಡಿ, ಅವನನ್ನೂ ಅವನ ಮನೆಯವರನ್ನೂ ಅಲ್ಲಿಗೆ ಸಾಗಿಸಿದನು. ಮದ್ದು, ಊಟಗಳ ವೆಚ್ಚವನ್ನು ಅವನೇ ನೋಡಿಕೊಂಡನು. "ಅಚ್ಯುತ ನಿಗೆ ತುಸು ಶಕ್ತಿ ಬಂದ ಬಳಿಕ ಮಂಗಳೂರಿಗೆ ಸಾಗಿಸಿ, ಚಿಕಿತ್ಸೆ ಏರ್ಪಡಿಸುವ. ಕೊನೆಗೆ ಅವನ ಭೂಮಿಯಲ್ಲಿ ಮಿಗುವ ಹಣವಾದರೂ ಈ ಆಪತ್ತಿಗೆ ನೆರವಾದೀತಲ್ಲ" ಎಂದು ಯೋಚಿಸಿದ್ದನು ಅವನು. ಅಚ್ಯುತ ಮಲಗಿದ್ದಲ್ಲಿಂದಲೇ ತನಗಾಗಿ ಇರಿಸಿದಂಥ ಕಿತ್ತಳೆ ಹಣ್ಣು, ಔಷಧಗಳನ್ನು ಕಂಡು, ಬೇಸರಗೊಂಡ. "ರುಕ್ಮಿಣಿ, ನಾಳೆ ಬದುಕುವವರಿಗೆ ಏನೂ ಉಳಿಯಬಾರದೆಂದು ನನಗಾಗಿ ಈ ಎಲ್ಲ ಸಂಭ್ರಮ ಮಾಡುತ್ತೀರಾ? ಆ ಮಕ್ಕಳನ್ನು ಉಪವಾಸವಿರಿಸಿ ನಾನು ಹಣ್ಣುಹಂಪಲು ತಿನ್ನಬೇಕೇ" ಎಂದ. ಅವನ ಕಣ್ಣಲ್ಲಿ ನೀರು ಬಂದಿತು.

"ಹಾಗೇಕನ್ನುತ್ತೀರಿ? ನೀವು ಉಳಿದರೆ ಅಲ್ಲವೇ, ನಾವು ಉಪವಾಸ ಬೀಳದಿರುವುದು! ಇಲ್ಲದಿದ್ದರೆ?" ಎಂದಳು ರುಕ್ಮಿಣಿ.

ಆ ರಾತ್ರಿ ಎಲ್ಲರೂ ಮಲಗಿದಾಗ, "ರುಕ್ಮಿಣಿ" ಎಂದು ಮೆಲುದನಿಯಿಂದ ಅವಳನ್ನು ಕರೆದ. "ರುಕ್ಮಿಣಿ, ನೀನು ಧೈರ್ಯವಾಗಿರಬೇಕು. ಬದುಕಿನಲ್ಲಿ ಬರಿಯ ಕನಸುಗಳನ್ನು ಕಟ್ಟಿಕೊಂಡು ಉಪಯೋಗವಿಲ್ಲ! ನನಗೊಂದು ಯೋಚನೆ ಕಾಣುತ್ತದೆ."

"ಏನೆನ್ನುತ್ತೀರಿ?"

"ನೋಡು-ಮಾಮುಂಜಿ ನನ್ನ ಸುತ್ತಲೂ ತಿರುಗಾಡುವ ಬದಲು, ನಾಲ್ಕುದಿನ ಹಟಮಾಡಿ ತಿರುಗಾಡಿ, ಆ ಆಸ್ತಿಯನ್ನು ಮಾರಿಸಲಿ! ಉಳಿದುದು ಮಕ್ಕಳಿಗೆ ಆದೀತು! ಈಗಿನ ದಿನದಲ್ಲಿ, ಬರಿಯ ಇಪ್ಪತ್ತು ಮುಡಿ ಹುಟ್ಟುವಳಿ ಉಳಿದರೂ ಮಸ್ತಾಯಿತು! ಅವನು ಹೀಗೆ ನನಗಾಗಿ ಹಣ ಖರ್ಚು ಮಾಡಿದರೆ, ನಾಳೆ ಆಸ್ತಿಯ ಬೆಲೆ ಇಳಿದೀತು! ಅಲ್ಲದೆ ರುಕ್ಮಿಣಿ-ನೀನೇನೂ ಅನ್ನು, ನನಗೆ ಯಾವ ಮದ್ದೂ ಬೇಡ. ನಾನು ಯಾಕೆ ಅನ್ನು

ತ್ತಿದ್ದೇನೆ-ಎಂದು ನನಗೆ ಗೊತ್ತಿದೆ" ಎಂದನು.

ರುಕ್ಮಿಣಿಯು ಮೂಕಿಯಾದಳು. ರಾತ್ರಿ ಹಾಸುಗೆಯಲ್ಲಿ ಕಣ್ಣೀರಿನ ಮಹಾಪೂರವನ್ನೇ ಪೂರೈಸಿದಳು. ಅವಳಿಗೆ ಯಾವುದೂ ತಿಳಿಯದಾಯಿತು. ಮರುದಿನ ಮಾಮುಂಜಿಗೆ ಈ ಮಾತನ್ನು ತಿಳಿಸಿದಳು. ಮುಂದಲ ಮೂರು ನಾಲ್ಕು ದಿವಸಕಾಲ ಅಚ್ಯುತನಿಗೆ ತುಂಬ ನಿಶ್ಯಕ್ತಿ ಕೆಮ್ಮುಗಳಿದ್ದುದರಿಂದ, ಮಾಮುಂಜಿ ಪುತ್ತೂರಿಂದ ವೈದ್ಯರನ್ನು ಕರೆಯಿಸಿದನು. ಅವರು ಏನೋ ಇಂಜೆಕ್ಷನ್ ಕೊಟ್ಟು ಹೋದರು. ಅಚ್ಯುತ ರೇಗಿಬಿಟ್ಟ. "ಮಾಮುಂಜಿ! ಸಾಯುವವನಿಗೆ ಏನೆಲ್ಲ ಉಪಚಾರ ಮಾಡುತ್ತೀರಿ! ನಿನ್ನಿಂದ ಆದರೆ, ಬದುಕುವ ನನ್ನ ಮಕ್ಕಳಿಗೆ ದಾರಿ ಮಾಡಿಕೊಡು. ಆಸ್ತಿಯೊಂದನ್ನು ಬೇಗ ಮಾರಿಸಿ ಕೊಡು" ಎಂದುಬಿಟ್ಟ. ಮಾಮುಂಜಿಯ ಮುಖ ಸಪ್ಪಗೆ ಆಯಿತು.

ಮರುದಿವಸದಿಂದ ಅಚ್ಯುತರಾಯ ಕೊಂಡದ್ದೇ ಮದ್ದಾಯಿತು. ಮಾಮುಂಜಿಯ ಕಿವಿಯಲ್ಲಿ ವೈದ್ಯರು "ಇದಕ್ಕೆ, ಮೈಸೂರಿನಂಥ ಸ್ಥಳದಲ್ಲಿ ಆಸ್ಪತ್ರೆ ಸೇರಿಕೊಂಡರೆ ಏನಾದರೂ ಪರಿಹಾರ ಸಿಕ್ಕೀತು, ಹೊರತು ..... ಈ ಊರಲ್ಲಿ ಏನೂ ಆಗುವಂತಿಲ್ಲ. ಇಲ್ಲಿನ ಚಿಕಿತ್ಸೆ—ಭ್ರಮೆ ತೀರಿಸಲು. ಅಷ್ಟು ಮಾಡಿರಿ. ಮಾಡಬಾರದೆಂದಲ್ಲ. ಅಲ್ಲಿಗೆ ಹೋದರೂ ಧೈರ್ಯವಲ್ಲ. ತುಂಬ ಮೀರಿದ ಸ್ಥಿತಿಯಿದು" ಎಂದು ಹೋದರು.

* * * * *

ಮೂರು ದಿವಸಗಳ ಬಳಿಕ ಅಚ್ಯುತ ಕೆಮ್ಮಿ, ತುಂಬ ದಣಿದು, ಮಲಗಿಕೊಂಡಿದ್ದಾನೆ. ಕಫವನ್ನು ಕಕ್ಕುವುದು, ಕೆಮ್ಮುವುದು ಅವನ ಪ್ರತಿಕ್ಷಣದ ಕೆಲಸವಾಗಿದೆ. ಬಳಿಯಲ್ಲಿ ಕೃಷ್ಣ ಸಪ್ಪಗಿನ ನೋರೆ ಮಾಡಿ ಕುಳಿತಿದ್ದಾನೆ. ರುಕ್ಮಿಣಿ ಒಳಗೆ ಕೆಲಸಮಾಡುತ್ತಿದ್ದಾಳೆ. ಮಕ್ಕಳು ಜಗುಲಿಯಲ್ಲಿ ಆಡುತ್ತಿವೆ. ಆ ಮಗುವಿಗೆ, ಏನು ತಿಳಿಯುತ್ತದೆಯೋ ಇಲ್ಲವೋ, ಆದರೂ ಅಚ್ಯುತ ಅದರೊಡನೆ "ಮಗು, ನಿನ್ನಜ್ಜ ಹಾಗೆ, ಹೀಗೆ" ಎಂದು ತನ್ನ ತಂದೆಯ ವಿಷಯದಲ್ಲಿ ತುಂಬ ಕತೆ ಹೇಳುತ್ತಿದ್ದನು. ಅದನ್ನು ಕೇಳಿ ರುಕ್ಮಿಣಿ ಬಂದಳು. "ಎಷ್ಟು ಮಾತನಾಡುತ್ತೀರಿ; ವಿಶ್ರಾಂತಿಯೂ ಬೇಡವೇ"-ಎಂದಳು.

ಅಚ್ಯುತ ನಕ್ಕ; "ಇನ್ನು ನನಗೆ ವಿಶ್ರಾಂತಿಯೇ! ಯಾಕೆ ಅಡ್ಡ

ಬರುತ್ತೀ ರುಕ್ಮಿಣಿ. ನೀನು ಬಲ್ಲವಳು! ಕಷ್ಟ ಪಟ್ಟಿದ್ದೀ. ಮನುಷ್ಯನಿಗೆ ನೂರು ವರ್ಷ ಆಯುಷ್ಯವಿದೆಯೆಂದು ನಂಬಿದ್ದೀಯಾ?" ಎಂದುಬಿಟ್ಟ. ಆ ಮಾತಿನ ಮರ್ಮವು ಅವಳ ಎದೆಗೆ ನಾಟಿತು. ಪಾಪ! ಮಗುವಿನಂತೆ ಅತ್ತಳು. "ಯಾಕೆ ಹೀಗೆ ಮಾತಾಡುತ್ತೀರಿ; ಏನು ಮಾತಿದು? ದೇವರು ನಿಮಗೆ ಆಯುಷ್ಯ ಕೊಟ್ಟಿದ್ದಾನೆ. ಜಾತಕದಲ್ಲಿ ಹೇಳಿದೆ" ಎಂದಳು.

"ರುಕ್ಮಿಣಿ, ಜಾತಕವನ್ನು ಒಲೆಗೆ ಹಾಕು . . . . . . ನನಗೆ ನಾನು ಯಾವ ಗಳಿಗೆಗೆ ಸತ್ತೇನು ಎಂದು ಗೊತ್ತಿದೆ! ಬದುಕಿರುವಾಗ ತುಂಬ ನರಳಿಯಾಯಿತು ನಾನು. ಇನ್ನು ಸಾಯುವಾಗ ಯೋಚನೆಯಿಲ್ಲದೆ ಸಾಯುಬೇಕೆಂಬ ಆಸೆ ಇದೆ! ಅವನು ಆ ಆಸ್ತಿ ಒಂದನ್ನು ಮಾರಿಸಿ ಕೊಟ್ಟರೆ, ನೀನು ಕಣ್ಣೀರು ಬಿಡದೆ ನನ್ನ ಬಳಿಯಲ್ಲಿ ಕುಳಿತರೆ, ಒಂದು ಗಳಿಗೆಗೆ ಅಮ್ಮನನ್ನೂ, ಅಕ್ಕನನ್ನೂ, ನಾರಾಯಣರಾಯರನ್ನೂ ಕಂಡರೆ -ಆ ಮೇಲೆ ನನಗೆ ಏನೂ ಬೇಡ.... ಮತ್ತೆ ನನಗೆ ಏನೂ ಬೇಡ. ಸ್ವರ್ಗ ಸಹ ಬೇಡ!" ಎಂದುಬಿಟ್ಟ. ರುಕ್ಮಿಣಿಯ ಎದೆ ನಡುಗಿತು. ತುಟಿ ಅಸ್ಥಿರ ವಾಯಿತು. ಗಂಟಲು ಗದ್ಗದಿತವಾಗಿ "ದೇವರೇ ನನಗೆ ಧೈರ್ಯವನ್ನು ಕೊಡು" ಎಂದು ಬೇಡುತ್ತ ಕುಳಿತಳು.

ಅಚ್ಯುತನು "ರುಕ್ಮಿಣಿ, ಮಾಮುಂಜಿ ಯಾಕೆ ಕಾಣಿಸಲಿಲ್ಲ..... ನಿನ್ನೆಯಿಂದಿಲ್ಲ, ಅಲ್ಲ, ಮೊನ್ನೆಯಿಂದಿಲ್ಲ" ಎಂದನು. ಆಗಷ್ಟೆ ಅವನು ಕಣ್ಣು ಬಾಡಿಸಿದ್ದ. ಮನೆಯೆದುರೊಂದು ಗಾಡಿ ಬಂದು ನಿಂತಿತು. ಗಾಡಿ ಯಿಂದ ನೇರಾಗಿ ಲಕ್ಷ್ಮಮ್ಮ, ಸೀತೆಯರು ಬಂದಿಳಿದರು. ಇಬ್ಬರೂ ಹೋಗಿ ಮಗನ ಮುಂದೆ ನಿಂತರು. ಅವನ ಮುಖ ಅಷ್ಟು ಪ್ರಶಾಂತವಾಗಿತ್ತು. ಅವರಿಬ್ಬರೂ ಮಾತನಾಡಲಾರದಾದರು. ಹಿಂದಕ್ಕೆ ಮಾಮುಂಜಿ ಇದ್ದ. ಅವನು "ಅಚ್ಯುತ" ಎಂದ. ಅವನ ಸ್ವರ ಕೇಳಿ "ಮಾಮುಂಜಿಯೇ?" ಎಂದು ಕಣ್ದೆರೆದ. ಮಾಮುಂಜಿ ಎದುರಿಗೆ ಕಾಣಿಸಲು "ಅಚ್ಯುತ— ಯಾರು ಬಂದಿದ್ದಾರೆ ನೋಡಿದ್ದೀಯಾ?" ಎಂದು ಕೇಳಿದ. ಅಚ್ಯುತ ಕತ್ತು ತಿರುಗಿಸಿದ "ತಾಯಿ, ಅಕ್ಕ!"

"ನನಗೆ ಕನಸೇ" ಎಂದು ಕೂಗಿದ ಅಚ್ಯುತ; "ರುಕ್ಮಿಣಿ, ನಾನು ಅಮ್ಮನ ಸುದ್ದಿ ನಿನ್ನ ಹತ್ತಿರ ಈಗಷ್ಟೆ ಹೇಳಿದೆನಲ್ಲ" ಎಂದ.

"ಇಲ್ಲ, ನನಗೆ ಏನೋ ತೋಚಿ, ಅವರನ್ನು ಕರೆದು ತಂದೆ. .

ಹಾಗೆಯೇ ನಿನ್ನ ಭೂಮಿಗೂ ಒಂದು ವ್ಯವಸ್ಥೆ ಮಾಡತ್ತೇನೆ.... ಸಂಜೆ ನಾರಾಯಣಮಾಸ್ತರರೂ ಬಂದಾರು ಸೈಕಲಿನಲ್ಲಿ — ಹೇಳಿ ಕಳುಹಿಸಿದ್ದೇನೆ" ಎಂದನು. ಅಷ್ಟು ಹೇಳಿ "ಮದ್ದು ತಕ್ಕೊಳ್ಳುತ್ತೀಯಲ್ಲ" ಎಂದು ಅವನನ್ನು ಒತ್ತಾಯಿಸಿದ.

"ಆಗಲಿ" ಎಂದ. ತಾಯಿ ಮಗನ ಹಾಸುಗೆಯ ಬಳಿ ಕುಳಿತಳು. ಸೀತೆ ಈಚೆ ಮಗ್ಗುಲಲ್ಲಿ ಕುಳಿತಳು. ಲಕ್ಷ್ಮಿ ಅವನ ಮುಖವನ್ನೊಮ್ಮೆ, ಸೊಸೆಯ ಮುಖವನ್ನೊಮ್ಮೆ ನೆನೆಯತೊಡಗಿದಳು. ಅಚ್ಯುತ ಮಿಗುವ ನಗೆಯಿಂದಲೇ ಇದ್ದ. "ಅಮ್ಮ-ಎಲ್ಲರೂ ಚೆನ್ನಾಗಿದ್ದಾರೋ....... ಅಕ್ಕ, ಹೊಸ ಅಳಿಯ ಹೇಗಿದ್ದಾನೆ" ಎಂದು ಕ್ಷೀಣ ನುಡಿಯಿಂದ ಕೇಳಿದ.

"ಎಲ್ಲ ಚೆನ್ನಾಗಿದ್ದಾರೆ ಮಗು" ಎಂದರು.

ಆದರೆ ಮಾತಿನ ಗಳಿಗೆಗಳು ಅವಲ್ಲ. ಅವನನ್ನು ಕಂಡಷ್ಟು ತಮ್ಮ ಎದೆ ಅಧೀರವಾಗುವುದೆಂದು, ಇಬ್ಬರೂ ಹೆಂಗುಸರು ಅಡುಗೆ ಮನೆಗೆ ಹೋದರು. ಅತ್ತೆ, ಸೊಸೆಯ ಬಳಿಗೆ ಬಂದು "ಇಷ್ಟು ತಡವಾಗಿ ನಮಗೆ ತಿಳಿಸುವುದೇ?"-ಎಂದಳು. "ನನಗೇನು ಗೊತ್ತು ಅತ್ತೆ. ಹಾಗೆ ಅವರು ಮಲಗಿ ಎಷ್ಟು ದಿವಸವಾಯಿತು? ಅದೂ ಒತ್ತಾಯಕ್ಕೆ ಮಲಗಿದ್ದು" ಎಂದಳು.

ಆ ಮಧ್ಯಾಹ್ನ ತಿರುಗಿ ಮಾಮುಂಜಿಯು ಮನೆಗೆ ಬಂದನು. ಲಕ್ಷ್ಮಮ್ಮನನ್ನು ಹೊರಗೆ ಕರೆಯಿಸಿದನು. ಅವನ ಜತೆಗೆ ರಿಜಿಸ್ಟ್ರಿ ಆಫೀಸರರೂ ಬಂದಿದ್ದರು. ಅಚ್ಯುತನ ಭೂಮಿಯನ್ನು ಅರೆವಾಸಿ ವಿಕ್ರಯಿಸಿ, ಅದರಿಂದ ಋಣಪರಿಹರಿಸಿ, ಉಳಿದರ್ಧವನ್ನು, ಉಳಿಸಿಕೊಡುವ ಬರಹದ ಏರ್ಪಾಟು ಅಲ್ಲಿ ನಡೆಯಿತು. ಅಚ್ಯುತ ಆಗೊಮ್ಮೆ ನಕ್ಕ; ಆ ನಗುವಂತು ಅಮರವಾಗಿತ್ತು! ಎಲ್ಲರೂ ತೆರಳಿದ ಬಳಿಕ, ತಾಯೊಡನೆ ಆತ "ಅಮ್ಮ, ನಮ್ಮ ಮಾಮುಂಜಿಯೊಬ್ಬ ದೇವತೆ! ಅವನಿಂದ ನನಗೆ ಸಾವಿನ ಗಳಿಗೆಗಾದರೂ ಸುಖವಾಯಿತು. ನೀವೂ ಬಂದಿರಿ. ಇನ್ನು ನಾರಾಯಣ ಮಾಸ್ತರರನ್ನು ನಾನು ಕಂಡರೆ ನನ್ನ ಎಲ್ಲ ಆಸೆಗಳು ಮುಗಿದ ಹಾಗೇನೆ" ಎಂದ.

ಲಕ್ಷ್ಮಮ್ಮ, "ಮಗು ಯಾಕೆ ಮರುಳನ ಹಾಗೆ ಮಾತಾಡುತ್ತೀ! ನಿನಗೇನು ವಯಸ್ಸು! ದೇವರು ನಡೆಯಿಸುತ್ತಾನೆ. ಸಾವನ್ನು ನೆನೆಯ

ಬಾರದು. ಮನಸ್ಸಿನಲ್ಲಿ ಧೈರ್ಯಮಾಡಿಕೊಳ್ಳಬೇಕು" ಎಂದಳು.

"ಅಮ್ಮ, ನನಗೇನೂ ಅಧೈರ್ಯವಿಲ್ಲ. ಸಾಯಲು ಹೆದರಿಕೆ ಇದ್ದವರಿಗೆ ಅದು! ಪ್ರಪಂಚ ಕಾಣಲು ಬಂದೆ, ಕಾಣುವುದನ್ನೆಲ್ಲ ಕಂಡೆ! ಯಾಕೆ ಹೆದರಬೇಕು? ಆದರೆ ಅಮ್ಮ, ನಾನು ಹೋದ ಮೇಲೆ ನೀನು, ರುಕ್ಮಿಣಿ, ಮಕ್ಕಳು-ನಮ್ಮ ಕೊಂಬಾರಲ್ಲೇ ಹೋಗಿ ಇರಬೇಕು. ಒಂದು ಚಪ್ಪರದ ಕೆಳಗಾದರೂ ಇರಿ. ನಾಲ್ಕು ದಿನವಾದರೂ ಅಲ್ಲಿಗೆ ಹೋಗಿ ಬಿಡಾಗ ಮಾಡಿಕೊಂಡಿರಿ" ಎಂದನು.

ಅವನ ಒಂದೊಂದು ಮಾತೂ, ಸುತ್ತಲಿನ ಜೀವಗಳನ್ನು ವಿದ್ಯುತ್ತಿನಂತೆ ನಡುಗಿಸುತ್ತಿತ್ತು!

ಸಂಜೆಯ ಹೊತ್ತಿಗೆ, ತಮ್ಮೂರಿಂದ ಧಾವಿಸಿಕೊಂಡು ನಾರಾಯಣರಾಯ ಮಾಸ್ತರರೂ ಬಂದರು. ಅವರು ಬರುವಾಗ ಅಚ್ಯುತ ತುಂಬ ಪ್ರಸನ್ನವದನನಾಗಿದ್ದ. "ಬನ್ನಿ, ಹ್ಯಾಗಿದ್ದಾರೆ ನಿಮ್ಮ ಮಕ್ಕಳುಮರಿ? ಸ್ಥಿತಿಗತಿ ಹೇಗೆ?" ಎಂದು ಅವರನ್ನು ಸ್ವಾಗತಿಸಿದ. "ಯುದ್ಧ ಕಳೆದದ್ದಾಯಿತಲ್ಲ ...ಇನ್ನು ಬಚಾವಾದೇವು. ರೇಡಿಯೋದಲ್ಲಿ ಸುದ್ದಿ ಬಂದಿದೆ...ಪುತ್ತೂರಲ್ಲಿ ಕೇಳಿದೆ.....ಇಟೆಲಿಯಲ್ಲಿ ಯುದ್ಧ ಮುಗಿಯಿತಂತೆ. ಉಳಿದುದು ಬೇಗ ಮುಗಿದೀತು" ಎಂದರು ಅವರು.

"ಪಾಪ, ಸಾಹುಕಾರರಿಗೆಲ್ಲ, ಎಷ್ಟು ಬೇಸರ ಉಂಟಾಗುತ್ತದೋ- ಯುದ್ಧ ಬೇಗನೆ ಮುಗಿದರೆ" ಎಂದ ಅಚ್ಯುತ.

ಆ ರಾತ್ರಿಯೂ ಆತ ಬಾಯಿ ತುಂಬ ಮಾತನಾಡಿದ. ತಾಯಿ, ಸೀತೆ, ಮಾಮುಂಜಿ, ಮಾಸ್ತರರು, ಎಲ್ಲರೂ ಸುತ್ತಲಿದ್ದರು. ಮಾತನಾಡಬೇಡವೆಂದರೂ ಆತ ಕೇಳಲಾರ. "ಅಮ್ಮ, ಉಸಿರಿರುವಾಗ ಮಾತನಾಡುವ" ಎಂದುಬಿಟ್ಟ. ಮಾಮುಂಜಿಯು ಅವನನ್ನು ಗದರಿಸಿದ—"ಅಚ್ಯುತ, ಯಾರ ಮಾತನ್ನೂ ಕೇಳಬಾರದಲ್ಲವೇ?" ಎಂದ. ಅವನ ಸ್ಥಿತಿಯನ್ನು ಕಂಡ ನಾರಾಯಣರಾಯರು ತಾವೂ ಬೋಧಿಸಿ ನೋಡಿದರು.

"ನಿನ್ನ ಮಾತು ಕೇಳುತ್ತೇನೆ ಅಂದಿದ್ದೆ. ಇಷ್ಟೆಲ್ಲ-ತೊಂದರೆಕೊಟ್ಟೆ. ನನ್ನ ಆಸೆಗಳನ್ನು ತೀರಿಸಿದ್ದೀ.....ಕೇಳುತ್ತೇನೆ.....ಕತ್ತಲಾಯಿತು. ಹೋಗಿ ಮಲಗಿ ನೀವೆಲ್ಲ, ನಿದ್ರೆಗೆಡಬೇಡಿರಿ......." ಎಂದು ಅವರನ್ನು ಕಳುಹಿಸಿಕೊಟ್ಟನು. ನಡುರಾತ್ರಿಯಲ್ಲಿ, ಮಗ್ಗುಲ ಬಳಿ ಕುಳಿತೇ, ನಿದ್ದೆ ತೂಗು

ತಿದ್ದ ರುಕ್ಮಿಣಿಯನ್ನು ಕರೆದನು. ಆಕೆ ಅವನ ಸನಿಯ... ರಾತ್ರಿ ಎಣ್ಣೆಯ ಕೊರತೆಯಿಂದ ದೀಪವನ್ನು ಉರಿಸಿರಲಿಲ್ಲ.

"ಏನು ಬೇಕು, ಬಾಯಾರಿಕೆಯೇ?" ಎಂದಳು ಮೆಲುದ...

"ಇಲ್ಲಿ ಬಾ-ರುಕ್ಮಿಣಿ ಸಮೀಪ ಕೈ ತಾ" ಎಂದ.

ರುಕ್ಮಿಣಿಯು ಸಮೀಪ ಕುಳಿತಳು. ತನ್ನ ಕೈಗಳಿಂದ ಅವನ ಕೈಯನ್ನು ಹಿಡಿದಳು.

"ರುಕ್ಮಿಣಿ, ಮಾಸ್ತರರೆಂದರು 'ಯುದ್ಧ ಮುಗಿಯುತ್ತೆ' ಎಂದು; ಬೇಗ ಮುಗಿದರೆ ಜನರಿಗೆ ಈ ನರಕಯಾತನೆ ತಪ್ಪುತಿತ್ತು."

"ಆಗಲಪ್ಪ. ದೇವರು ಕೊನೆಗಾದರೂ ಕಣ್ಣು ತೆರೆದನಲ್ಲ!" —

ಅಚ್ಯುತ ಮಾತನಾಡಲಿಲ್ಲ. ತುಸು ಹೊತ್ತಿನ ಬಳಿಕ, "ರುಕ್ಮಿಣಿ ಬದುಕುವ ಪ್ರಾಣಿಗೆ ಧೈರ್ಯವೇ ಮುಖ್ಯ! ಬದುಕಿನಲ್ಲಿ ಒಣ ಆಸೆ ಇಲ್ಲದಿರುವುದು ಮುಖ್ಯ!"

"ಯಾಕೆ ಮಾತನಾಡಿ ಆಯಾಸಪಡುತ್ತೀರಿ!"

"ಇಲ್ಲ. ನೀನು ಧೈರ್ಯವಾಗಿರುತ್ತೀಯೆಂದರೆ ನಾನು ಮಾತನಾಡುವುದಿಲ್ಲ."

"ಆಯಿತು."

"ಹಾಗಿದ್ದರೆ, ಮಾತು ಸಾಕು! ಮಾತಿಂದೇನಾಗುತ್ತದೆ ಅಲ್ಲವೇ?"

ಅದೇ ಅಚ್ಯುತನ ಕೊನೆಯ ಮಾತಾಯಿತು. ರುಕ್ಮಿಣಿಯು ಬೆಚ್ಚಗಿನ ಕೈಯೊಳಗಿರಿಸಿದ ಅವಳ ಪತಿಯ ಕೈಗಳು, ಕ್ರಮೇಣ ಶೀತಳವಾಗುತ್ತ ಬಂದುದು, ಆಕೆಗೆ ತಿಳಿದುದು ಮರದಿನ ಬೆಳಗ್ಗೆ. ಅವಳು ಅಲ್ಲೇ ಮಗ್ಗುಲನ್ನು ತಿರುಗಿಸಿ, ಮಲಗಿಕೊಂಡಿದ್ದಳು. ಮಲಗಿದ ಆ ಎರಡು ಬಡಜೀವಗಳಲ್ಲಿ ಒಂದು ಜೀವಕ್ಕೆ ಮಾತ್ರ ಬೆಳಗಾಯಿತು! ಇನ್ನೊಂದು ಬಾಳಿನ ಯುದ್ಧವನ್ನು ಮುಗಿಸಿ, ಮುಂದಿನ ಬೆಳಗಿಗೆ ಸಾಕ್ಷಿಯಾಗದೆ ಮಾಯವಾಯಿತು!



